ಶಿವಾನುಭವ ಗ್ರಂಥಮಾಲಾ ನಂ ೫೧

# ವಚನಶಾಸ್ತ್ರಸಾರ.

## ಭಾಗ ೩.

(ವೀರಶೈವಾಚಾರಗಳು)

ಪೂರ್ವಾರ್ಧ.

ರಾ॥ ಸಾ॥ ಫ. ಗು. ಹಳಕಟ್ಟಿ,
ಬಿ ಎ ಎಲ್ ಎಲ್ ಬಿ

ವಿಜಾಪುರ.
೧೯೪೬.

ಬೆಲೆ ೨। ರೂ.

# ಪ್ರಸ್ತಾವನೆ.

ಈ ಗ್ರಂಥವು ವಚನಶಾಸ್ತ್ರಸಾರದ ೩ನೆಯ ಭಾಗವಿರುತ್ತದೆ ಇದರ ಮೊದಲನೆಯ ಭಾಗದಲ್ಲಿ ಶಿವಶರಣರ ಧಾರ್ಮಿಕ ಮತ್ತು ಸಾಮಾಜಿಕ ಅಭಿಪ್ರಾಯಗಳು ಸಾಮಾನ್ಯವಾಗಿ ವಿವೇಚಿಸಲ್ಪಟ್ಟಿರುತ್ತವೆ ಈ ಗ್ರಂಥದ ಎರಡನೆಯ ಭಾಗದಲ್ಲಿ ವೀರಶೈವ ಸಿದ್ಧಾಂತ ವಿಷಯವು ನಿರೂಪಿಸಲ್ಪಟ್ಟಿದ್ದು ಇದರಲ್ಲಿ ಷಟ್‌ಸ್ಥಲ ಮತ್ತು ಏಕೋತ್ತರಶತಸ್ಥಲಗಳ ವಿವರಣೆಗಳು ಮುಖ್ಯವಾಗಿ ಬಂದಿರುತ್ತವೆ ಈಗಿನ ಗ್ರಂಥವು ೩ನೆಯ ಭಾಗವಾಗಿದ್ದು ಇದರಲ್ಲಿ ವೀರಶೈವಾಚಾರಗಳು ನಿರೂಪಿಸಲ್ಪಟ್ಟಿರುತ್ತವೆ

ಈಗಿನ ಗ್ರಂಥದಲ್ಲಿ ೪ ಮುಖ್ಯ ವಿಭಾಗಗಳು ಮಾಡಲ್ಪಟ್ಟಿರುತ್ತವೆ. ೧ನೆಯ ವಿಭಾಗದಲ್ಲಿ ಕ್ರಿಯೆಗಳ ಬಗ್ಗೆ ವಚನಕಾರರು ಯಾವ ಅಭಿಪ್ರಾಯಗಳುಳ್ಳವರಿದ್ದವರೆಂಬುದು ಹೇಳಲ್ಪಟ್ಟಿದೆ. ಇದರಲ್ಲಿ ಕ್ರಿಯೆಗಳನ್ನು ಹೇಗೆ ಮಾಡತಕ್ಕದ್ದು, ಕ್ರಿಯಾಜ್ಞಾನಗಳ ಸಂಬಂಧವೇನು, ಕ್ರಿಯೆಗಳ ಮೂಲಕ ಮನುಷ್ಯನಲ್ಲಿ ಯಾವ ರೀತಿಯಿಂದ ಪ್ರಗತಿಯುಂಟಾಗುತ್ತದೆ, ಇವೇ ಮೊದಲಾದ ವಿಷಯಗಳು ನಿರೂಪಿಸಲ್ಪಟ್ಟಿರುತ್ತವೆ.

೨ನೆಯ ವಿಭಾಗದಲ್ಲಿ ವೀರಶೈವಾಚಾರಗಳ ಭೇದಗಳು ವಿವರಿಸಲ್ಪಟ್ಟಿರುತ್ತವೆ ವೀರಶೈವರು ಇತರ ಮತಸ್ಥರಂತೆ ತಮ್ಮ ಕ್ರಿಯೆಗಳಲ್ಲಿ ಅನೇಕ ದೃಷ್ಟಿಯಿಂದ ವರ್ಗೀಕರಣಗಳನ್ನು ಮಾಡಿರುತ್ತಾರೆ ಇವುಗಳ ಮೂಲಕ ವೀರಶೈವಮತದ ಸಾರವು ಸಂಕ್ಷಿಪ್ತವಾಗಿ ವ್ಯಕ್ತಮಾಡಲ್ಪಡುವದುಂಟು

೩ನೆಯ ವಿಭಾಗದಲ್ಲಿ ಅಷ್ಟಾವರಣಗಳ ವಿವೇಚನೆಯು ಇರುತ್ತದೆ ವೀರಶೈವಾಚಾರಗಳಲ್ಲಿ ಇವು ಅತ್ಯಂತ ಮಹತ್ವವಾದವುಗಳು ಇವುಗಳ ಬಗ್ಗೆ ವೀರಶೈವ ಗ್ರಂಥಗಳಲ್ಲಿ ಒಂದು ಬಗೆಯ ವಾಙ್ಮಯವೇ ಉಂಟಾಗಿರುತ್ತದೆಂದು ಹೇಳಬಹುದು ಎಲ್ಲ ಧರ್ಮಗಳಲ್ಲಿ ಅನೇಕ ವಿಧದ ಆಚಾರಗಳು ಇದ್ದು, ಅವುಗಳನ್ನು ಪರಿಪಾಲಿಸುವ ಕಾರ್ಯದಲ್ಲಿ ಆವುಗಳ ಧರ್ಮಾಧಿಕಾರಿಗಳು ಬಹು ದಕ್ಷತೆಯಿಂದ ವರ್ತಿಸುವುದುಂಟು. ಇವು

ಉಪಾಸನಾಕಾರ್ಯಗಳೇ ಇರುತ್ತವೆ ವೀರಶೈವರಲ್ಲಿಯೂ ಕೂಡ ಇಂಥ ಉಪಾಸನೆಗಳುಂಟು ಆದರೆ ಅವುಗಳನ್ನು ಅವರು ಅಷ್ಟಾವರಣಗಳಿಗೆ ಸಂಬಂಧಿಸಿಕೊಂಡು ಆಚಾರಿಸುವದುಂಟು ವೀರಶೈವರಲ್ಲಿ ಯಜ್ಞಾದಿ ಕರ್ಮಗಳೂ ಸಂಧ್ಯಾ ಮೊದಲಾದ ಉಪಾಸನೆಗಳೂ ಇರುವದಿಲ್ಲ ಇವುಗಳ ಬದಲು ಅವರಲ್ಲಿ ಅಷ್ಟಾವರಣಗಳಿರುತ್ತವೆ ಇವುಗಳ ಮೂಲಕ ವಾಗಿಯೇ ಅವರು ಷಟ್‌ಸ್ಥಲಾಚರಣೆಗಳನ್ನು ಪರಿಪಾಲಿಸುತ್ತ ಲಿಂಗಾಂಗ ಸಾಮರಸ್ಯ ಅಥವಾ ಮೋಕ್ಷವನ್ನು ಹೊಂದತಕ್ಕದ್ದು ಈ ವಿಚಾರ ಗಳಿರುವದರಿಂದ ವೀರಶೈವರಲ್ಲಿ ಕ್ರಿಯಾಕರ್ಮಗಳ ಸಂಖ್ಯೆಯು ಅತ್ಯ ಲ್ಪವಾಗಿರುತ್ತವೆ ಆದರೂ ಅವುಗಳು ಬಹು ಭಾವಗರ್ಭಿತವೂ ಸಾರ ಯುಕ್ತವೂ, ಮನುಷ್ಯನ ಗುಣಗಳನ್ನು ವಿಕಾಸಗೊಳಿಸುವ ಉದ್ದೇಶವು ಳ್ಳವೂ ಇರುತ್ತವೆಂಬುದು ಅವುಗಳ ವಿವರಣೆಗಳಿಂದ ಕಂಡುಬರುತ್ತದೆ

ಈ ಅಷ್ಟಾವರಣಗಳು ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ರುದ್ರಾಕ್ಷಿ, ವಿಭೂತಿ, ಮಂತ್ರ, ಇವುಗಳೇ ಇರುತ್ತವೆ

ಈಗಿನ ಗ್ರಂಥದಲ್ಲಿ ಗುರು ಲಿಂಗ ಜಂಗಮ ಇವುಗಳ ವಿವೇಚನೆಯು ಮಾತ್ರ ಬಂದಿರುತ್ತದ ಅಷ್ಟಾವರಣಗಳಲ್ಲಿ ಇವುಗಳೇ ಮುಖ್ಯವಾದವು ಗಳು ಇವುಗಳ ಮೂಲಕ ಮನುಷ್ಯನು ತನ್ನ ಬಾಹ್ಯ ಕ್ರಿಯೆಗಳನ್ನೂ ಅಂತರಿಂದ್ರಿಯಗಳನ್ನೂ ಹಾಗೆಯೇ ಜ್ಞಾನವನ್ನೂ ವಿಕಾಸಗೊಳಿಸತಕ್ಕದು ಈ ವಿಕಾಸವು ಹೇಗೆ ಜರಗುತ್ತದೆಂಬುದನ್ನು ಕುರಿತು ವಚನಕಾರರು ಬಹು ಸ್ವಾರಸ್ಯವಾಗಿ ತಮ್ಮ ವಚನಗಳಲ್ಲಿ ವಿವೇಚಿಸುವದುಂಟು ಅವುಗಳ ಮುಖ್ಯಾಂಶಗಳು ಮಾತ್ರ ಈ ಗ್ರಂಥದಲ್ಲಿ ವಿವೇಚಿಸಲ್ಪಟ್ಟಿರುತ್ತವೆ

ಉಳಿದ ಐದು ಆವರಣಗಳಲ್ಲಿ ಒಂದಾದ ಮಂತ್ರದ ಮುಖ್ಯ ಉದ್ದೇ ಶವು ಮನುಷ್ಯನ ಆಯಾ ಸ್ಥಾನಗಳಲ್ಲಿ ಲೈಂಗಿಕ ಶಕ್ತಿಯನ್ನು ಬೆಳಸು ವುದೇ ಇರುತ್ತದೆ ಭಕ್ತನು ಗುರುಲಿಂಗಜಂಗಮತ್ವವನ್ನೂ ಮಂತ್ರವನ್ನೂ ತನ್ನಲ್ಲಿ ಜಾಗ್ರತ ಮಾಡುವ ಕಾರ್ಯಗಳನ್ನು ಪಾದೋದಕ ಪ್ರಸಾದಗಳ ಮೂಲಕ ಜರಗಿಸತಕ್ಕದ್ದು. ವಿಭೂತಿ ರುದ್ರಾಕ್ಷಿಗಳು ಉಪಾಸನೆಗೆ ಮಹ ತ್ವದ ಸಾಧನೆಗಳಾಗಿರುತ್ತವೆ ಈ ಐದು ಆವರಣಗಳ ವಿವೇಚನೆಯು ಈ ಗ್ರಂಥದ ಉತ್ತರಾರ್ಧದಲ್ಲಿ ಬರುವುದು.

ಗುರು ಲಿಂಗ ಜಂಗಮದ ವಿವರಣೆಯ ತರುವಾಯ ಶಿವಯೋಗ ವಿಷಯವು ಈ ಗ್ರಂಥದಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಲ್ಪಟ್ಟಿರುತ್ತದೆ ಇದರ ಮೂಲಕ ಮನುಷ್ಯನಿಗೆ ಪೂರ್ಣ ವಿಕಾಸಾವಸ್ಥೆಯು ಪ್ರಾಪ್ತವಾಗುತ್ತದೆ ಇದರಿಂದ ಅವನಲ್ಲಿ ನಿಜಸಮಾಧಿಯೂ ತಲೆದೋರುತ್ತದೆ

ಈ ಪ್ರಕಾರ ಮನುಷ್ಯನು ಆಚರಿಸುತ್ತ ಹೋದಲ್ಲಿ ಅವನು ಕಡೆಗೆ ಪರಮಾತ್ಮನಲ್ಲಿ ಬೆರೆದು ಬಯಲಾಗುತ್ತಾನೆ ಇದೇ ಶೂನ್ಯ ಸ್ಥಿತಿಯು ಎಂದು ವಚನಕಾರರು ಹೇಳುತ್ತಾರೆ

ಈ ಮೇರೆಗೆ ನಾವು ೬ ವಿಭಾಗಗಳನ್ನು ಮಾಡಿ ವೀರಶೈವಾಚಾರ ವಿಷಯವನ್ನು ಈ ಗ್ರಂಥದಲ್ಲಿ ನಿರೂಪಿಸಿದ್ದೇವೆ ಇದರಲ್ಲಿಯ ವಿವೇಚನೆಗಳು ವಚನಕಾರರ ಉಕ್ತಿಗಳಿಂದಲೇ ಮಾಡಲ್ಪಟ್ಟಿರುತ್ತವೆ ಈ ಬಗೆಯ ನಿರೂಪಣಾ ಪದ್ಧತಿಯ ಮೂಲಕ ಒಂದು ವಿಷಯದ ವಿವೇಚನೆಯನ್ನು ಕ್ರಮಬದ್ಧವಾಗಿ ಮಾಡುವದು ಬಹಳ ದುಸ್ತರವಾಗುತ್ತದೆ. ಆದರೂ ಶಕ್ಯವಾದಷ್ಟರ ಮಟ್ಟಿಗೆ ವಚನಗಳನ್ನು ಕ್ರಮಗೊಳಿಸಲು ನಾವು ಇದರಲ್ಲಿ ಪ್ರಯತ್ನಿಸಿದ್ದೇವೆ

ವಚನಕಾರರ ವಿವೇಚನಾಪದ್ಧತಿಯೂ ತತ್ವವಿವೇಚನೆಯೂ ಜನಸಾಮಾನ್ಯರಲ್ಲಿ ಇನ್ನೂ ಅಪರಿಚಿತವಾಗಿರುತ್ತವೆ ಇದರಿಂದ ಈ ಗ್ರಂಥವು ಅನೇಕರಿಗೆ ಸುಬೋಧವಾಗಲಿಕ್ಕಿಲ್ಲ ಆದರೆ ವಚನಕಾರರ ನಿಜ ತತ್ವಗಳು ಹಿಂದೂ ಧರ್ಮದ ಜ್ಞಾನವಿದ್ದವರಿಗೆ ಹೊಸವಲ್ಲ ಆದ್ದರಿಂದ ಈ ಗ್ರಂಥವಾದರೂ ವಚನಕಾರರ ಇತರ ಗ್ರಂಥಗಳಂತೆಯೇ ವಾಚಕರ ಆದರಕ್ಕೆ ಪಾತ್ರವಾಗಬಹುದೆಂದು ನಾವು ಎಣಿಸಿದ್ದೇವೆ

ವಚನಗಳಲ್ಲಿಯ ಉಕ್ತಿಗಳು ಕೈಬರಹದ ಪ್ರತಿಗಳಿಂದ ಎತ್ತಿಬರೆದವುಗಳಾದ್ದರಿಂದ ಅವು ಬಹುಶಃ ಅಶುದ್ಧವಿರುತ್ತವೆ ಒಮ್ಮೊಮ್ಮೆ ಅವುಗಳ ಅರ್ಥಬೋಧವೂ ಸಹ ಆಗುವದಿಲ್ಲ ಅವುಗಳಲ್ಲಿ ಉದಹರಿಸಲ್ಪಟ್ಟ ಸಂಸ್ಕೃತ ಶ್ಲೋಕಗಳ ಸ್ಥಿತಿಯಾದರೂ ಹೀಗೆಯೇ ಇರುತ್ತದೆ ಸದ್ಯ ಸ್ಥಿತಿಯಲ್ಲಿ ಈ ದೋಷಗಳನ್ನು ದೂರಮಾಡುವದು ನಮಗೆ ಅಶಕ್ಯವಾಗಿರುವದರಿಂದ ನಾವು ಬಹಳ ವಿಷಾದಿಸುತ್ತೇವೆ ಆದರೂ ವಚನಗಳ ಒಟ್ಟಾರ್ಥವು ಬಹುಶಃ ಸ್ಪಷ್ಟವಿರುವದರಿಂದ ವಚನಕಾರರ ವಿಚಾರಗಳಾವವೆಂಬುದನ್ನು ಅವುಗಳಲ್ಲಿ ಸುಲಭವಾಗಿ ಕಂಡುಹಿಡಿಯಬಹುದಾಗಿದೆ ಈ ದೃಷ್ಟಿಯು

ನ್ನಿಟ್ಟುಕೊಂಡು ವಚನಕಾರರ ಉಕ್ತಿಗಳನ್ನು ವಾಚಕರು ಪರಿಶೀಲಿಸಬೇಕೆಂದು ನಮ್ಮ ನಮ್ರ ವಿಜ್ಞಾಪನೆ ಇದೆ

ವಚನಕಾರರ ಹೆಸರುಗಳನ್ನು ಅವರ ಮುದ್ರಿಕೆಗಳಿಂದ ಕಂಡುಹಿಡಿಯಲು ಶಕ್ಯವಿರುತ್ತದೆ ಒಬ್ಬ ವಚನಕಾರನು ಮತ್ತೊಬ್ಬ ವಚನಕಾರನ ಮುದ್ರಿಕೆಯನ್ನು ತನ್ನ ವಚನಗಳಲ್ಲಿ ಉಪಯೋಗಿಸುವದು ಕಂಡುಬರುವದಿಲ್ಲ ಈ ಮುದ್ರಿಕೆಗಳ ವಿವರಣೆಗಳು ವಚನಶಾಸ್ತ್ರಸಾರ ಭಾಗ ೧ ಈ ಗ್ರಂಥದ ಅಂತ್ಯದಲ್ಲಿ ಕೊಡಲ್ಪಟ್ಟಿರುತ್ತವೆ ಅವುಗಳನ್ನು ವಾಚಕರು ನೋಡಬೇಕೆಂದು ನಮ್ಮ ವಿನಂತಿ ಇದೆ

ಈ ಗ್ರಂಥದ ಅಚ್ಚು ಹಾಕುವ ಖರ್ಚನ್ನು ೨೦೦ ಪುಟಗಳ ಮಟ್ಟಿಗೆ ಮುಂಬಯಿ ಸರಕಾರದ ಕನ್ನಡ ಸಂಸ್ಕೃತಿ ಸಂಶೋಧನ ಸಮಿತಿಯವರು ನನಗೆ ಕೊಟ್ಟು ಬಹಳ ಸಹಾಯಮಾಡಿದ್ದಾರೆ ಇದಕ್ಕೋಸ್ಕರ ನಾನು ಅವರಿಗೆ ಬಹಳ ಋಣಿಯಾಗಿದೇನೆ

| ವಿಜಾಪುರ | ಫ ಗು. ಹಳಕಟ್ಟಿ |
|---|---|
| ತಾ೧-೧೦-೧೯೩೯ | ಸಂಪಾದಕ |

# ಅನುಕ್ರಮಣಿಕೆ.

## ಭಾಗ ೧.

## ಕ್ರಿಯೆ.

## ಭಾಗ ೨.

## ಆಚಾರ ಭೇದಗಳು.



## ಭಾಗ ೩.

## ಅಷ್ಟಾವರಣಗಳು.

## ಗುರು.

(ಳ) ವೇಧಾದೀಕ್ಷೆ



## ಲಿಂಗ.

## ಜಂಗಮ.

## ಭಾಗ ೪.

## ಶಿವಯೋಗ.





# ವಚನಶಾಸ್ತ್ರಸಾರ

## ಭಾಗ ೩.

### ಪೂರ್ವಾರ್ಧ.

## ಕ್ರಿಯೆ.

ವಚನಕಾರರು ಕ್ರಿಯೆ ಈ ಶಬ್ದಕ್ಕೆ ಪ್ರತಿಯಾಗಿ ಕರ್ಮ, ಆಚಾರ, ಕ್ರಿ, ಮಾಟ, ಈ ಮೊದಲಾದ ಶಬ್ದಗಳನ್ನು ಸಹ ಉಪಯೋಗಿಸುವದುಂಟು ಇವುಗಳಲ್ಲಿ ಪರಸ್ಪರ ಭಿನ್ನಾರ್ಥಗಳಿರುವದಿಲ್ಲ ಕೆಳಗಿನ ವಚನಗಳಲ್ಲಿ ವಚನಕಾರರು ಕ್ರಿಯೆ ಇದರ ವಿಷಯವಾಗಿರುವ ತಮ್ಮ ಅಭಿಪ್ರಾಯಗಳನ್ನು ಅನೇಕ ರೀತಿಯಿಂದ ನಿರೂಪಿಸಿದ್ದಾರೆ

### ಕ್ರಿಯೆಯ ಸಾಮಾನ್ಯ ಸ್ವರೂಪ.

**ವಿವರಣೆ:** – ಮನುಷ್ಯನಿಗೆ ಕ್ರಿಯೆಗಳು ಎಂದೂ ತಪ್ಪಲಾರವು ಅವುಗಳ ಫಲವನ್ನು ಅವನು ಭೋಗಿಸಿಯೇ ತೀರಬೇಕು. ಅವನು ಸರಿಯಾಗಿ ಕ್ರಿಯೆಗಳನ್ನು ಮಾಡಿದ್ದಾದರೆ ಅವನಿಗೆ ಸಾಮರಸ್ಯವು ಅಥವಾ ಮೋಕ್ಷವು ಲಭಿಸುವದು ಇಲ್ಲದಿದ್ದರೆ ಅವನು ಅನೇಕ ಜನ್ಮಗಳಲ್ಲಿ ತೊಳಲಾಡುತ್ತ ಹೋಗುವನು ಮನುಷ್ಯನು ಕ್ರಿಯೆಗಳನ್ನು ಮಾಡಲಿಕ್ಕೆ ಸ್ವತಂತ್ರನಿದ್ದಾನೆ ಆದರೆ ಅವನು ತನ್ನ ಈ ಸ್ವಾತಂತ್ರ್ಯವನ್ನು ಕೆಲವು ನಿಯಮಗಳಿಗನುಸರಿಸಿಯೇ ಉಪಯೋಗಿಸತಕ್ಕದ್ದು ಪ್ರತಿಯೊಂದಕ್ಕೂ ಸೀಮೆ ಇದೆ ಹೀಗೆ ವಚನಕಾರರ ಅಭಿಪ್ರಾಯಗಳು ಇವೆ ( ವಚನಗಳು ೨, ೪, ೬ ) ವೀರಶೈವರು ಜಗತ್ತು ಮಾಯೆಯೆಂದು ಭಾವಿಸುವದಿಲ್ಲ ಅದು ನಿಜವೆಂತಲೇ ಭಾವಿಸುತ್ತಾರೆ ಇಂಥ ಜಗತ್ತನ್ನು ಮನುಷ್ಯನು ಅತಿಗಳೆಯಬೇಕು ಇದಕ್ಕೋಸ್ಕರ ಅದರ ಪರಿ

ಕಾಮುಗಳು ತನಗೆ ತಾಕದಂತೆ ಅವನು ಕ್ರಿಯೆಗಳನ್ನು ಮಾಡತಕ್ಕದ್ದು. ಷಟ್‌ಸ್ಥಲ ಶಾಸ್ತ್ರದ ತತ್ವಗಳಿಗೆ ಅನುಸಾರವಾಗಿ ಅವನು ವರ್ತಿಸಿದಲ್ಲಿ ಈ ಕ್ರಿಯೆಗಳ ಪರಿಣಾಮಗಳು ಅವನಿಗೆ ಅಂಟುವದಿಲ್ಲ ಪ್ರತಿಯೊಬ್ಬನು ಮಾಡುವ ಕ್ರಿಯೆಗಳ ರೀತಿಗಳು ಬೇರೆ ಬೇರೆಯಾಗಿರುವದರಿಂದ ಮನುಷ್ಯನಲ್ಲಿ ವಿವಿಧತೆಯು ಉತ್ಪನ್ನವಾಗಿದೆ ಆದರೆ ಅವರೆಲ್ಲರೂ ತಮ್ಮ ಅಂಗಕ್ರಿಗಳನ್ನು ಲಿಂಗಕ್ರಿಗಳನ್ನಾಗಿ ಮಾಡಿ ಷಟ್‌ಸ್ಥಲ, ಅಷ್ಟಾವರಣಗಳ ಪ್ರಕಾರ ವರ್ತಿಸಿ ಲಿಂಗಾಂಗ ಸಾಮರಸ್ಯವನ್ನು ಹೊಂದಬೇಕು ಈ ವಿಚಾರಗಳನ್ನು ವಚನಕಾರರು ತಮ್ಮ ವಚನಗಳಲ್ಲಿ ಅನೇಕ ವಿಧವಾಗಿ ವಿವರಿಸಿರುತ್ತಾರೆ

## ವಚನಗಳು

೧ ಮಾಡದೆ ಮೋಕ್ಷವ ಹಡೆದು ಹೋದರೆಂಬ ವಾರ್ತೆಯ ಕೇಳಿ ಹಿರೇನಯ್ಯಾ? ಇಲ್ಲ ಇಲ್ಲವು ಮಾಡಿದರೆ ಅದು ತಪ್ಪದು ಮಾಡಲೊಲ್ಲದೆ ಹೋದರೆ ಬರುವದದು ದೂರಾಗದು ನೋಡಾ ಕಪಿಲಸಿದ್ಧ ಮಲ್ಲಿಕಾಜು ನಾ

೨ ಕಾಣದುದನೆಲ್ಲವ ಕಾಣಲಾರೆನಯ್ಯ! ಕೇಳದುದನೆಲ್ಲವ ಕೇಳಲಾರೆನಯ್ಯಾ! ದ್ರೋಹವಿಲ್ಲ ನಮ್ಮ ಶಿವನಲ್ಲಿ ಸೀಮೆಯುಯ್ಯಾ! ಒಲಿಯು ಮುಂದಿದ್ದು ಮಾಡದ ಕನಸ ಕಾಂಬುವರನೊಲ್ಲನಯ್ಯ ಕೂಡಲಸಂಗಮದೇವಾ

೩ ಆನೇನು ಮಾಡುವದೆಲ್ಲವನು ನೀನೇ ಅಲ್ಲವೆಂದರೆ ಆದು ಮಾಣಲಿ, ನಿಮ್ಮಾಣತೆ ಕಾಣಬಾರದ ಘನವ ಕಾಯದಲ್ಲಿ ಧರಿಸಿ, ಹೇಳಬಾರದ ನಿಜವ ಮನದಲ್ಲಿ ನೆಲೆಗೊಳಿಸಿ, ತೋರಬಾರದ ಘನವ ಅರಿವಿನಲ್ಲಿ ಇರಿಸಿ, ಇನ್ನು ನಿಮ್ಮ ಕಾಂಬಂತೆ ಮಾಡಾ ಕಪಿಲಸಿದ್ಧನಾಥಯ್ಯ.

೪ ಸುಖ ಬಂದರೆ ಪುಣ್ಯದ ಫಲವೆನ್ನೆನು ದುಃಖ ಬಂದರೆ ಪಾಪದ ಫಲವೆನ್ನೆನು. ನೀ ಮಾಡಿದೊಡಾಯಿತ್ತೆಂದೆನ್ನೆನು ಕರ್ಮಕ್ಕೆ ಕರ್ತೃವೇ ಕಡೆ ಎಂದೆನ್ನೆನು ಉದಾಸೀನವಿಡಿದು ಶರಣೆನ್ನೆನು ಕೂಡಲಸಂಗಮದೇವ ನೀ ಮಾಡಿದುಪದೇಶವು ಎನಗೀ ಪರಿಯಲಿ ಸಂಸಾರದ ಸವಿಯ ಬಳಸುವೆನು

೫ ಮಾಡುವುದಯ್ಯ ಮರುಳುಗೊಂಡಂತೆ ಮರ್ಮವನರಿಯದೆ ಮಾಡುವ ಮಾಟ ಕರ್ಮದ ಬೆಳಸು, ಸುಯಿಧಾನದ ಕೇಡು ಕೂಡಲ ಚನ್ನಸಂಗಯ್ಯ, ನಿಮ್ಮ ಶರಣರ ಅನುವನರಿದು ಮಾಡುವ ಮಾಟ ಭವಭಂಗದೂಟ

೬ ಮರ್ಮವಿಡಿದು ಮಾಡುವಂಗೆ ಕರ್ಮವಿಲ್ಲ, ಕವಲು ಇಲ್ಲ. ಒಬ್ಬರ ಕಂಡೊಬ್ಬರು ಹೆಮ್ಮೆಯ ಖ್ಯಾತಿಯ ಬಿಮ್ಮಲಿ ಮಾಡುವವನ ವಿಧಿಯ ನೋಡಾ! ಸಜ್ಜನ ಸದಾಚಾರ ಸತ್ಕ್ರಿಯವಿಡಿದು ಮಾಡುವ ಭಕ್ತಿಯ ನಿಮಗ ಗೈಯ್ಯುವದನರಿದು, ಈ ಪರಿಯಲ್ಲಿ ಮಾಡುವನು ಕೂಡಲ ಚನ್ನಸಂಗಯ್ಯ ನಿಮ್ಮ ಶರಣ ಸಂಗನಬಸವಣ್ಣನು

೭ ಸಂಚಿತಾದಿ ಕರ್ಮತ್ರಯಂಗಳು ಜೀವಂಗಲ್ಲದೆ ಶಿವಸ್ವರೂಪನಿಗೆಲ್ಲಿಯದೊ? ಆಡುವ ಗೊಂಬೆಯನು ಆಡಿಸುವಾತಂಗಲ್ಲದ ಆಡುವ ಗೊಂಬೆಯಂಗೆಲ್ಲಿಯದೋ ಸ್ವತಂತ್ರತೆಯು? ಕಪಿಲಸಿದ್ಧಮಲ್ಲಯ್ಯ ಇವರಿರವ ಸ್ವತಂತ್ರನಿಗಲ್ಲದ ಅಸ್ವತಂತ್ರನಿಗೆಲ್ಲಿಯದೋ?

೮ ಮನೋ ಶಬ್ದ ನಪುಂಸಕ' ಎಂಬ ನ್ಯಾಯಜ್ಞನ ಮಾತು ಪುಸಿಯಲ್ಲ ನೋಡಯ್ಯ ಶಬ್ದ ನಪುಂಸಕವಾಗಿ ಕಾರ್ಯ ಪುಲ್ಲಿಂಗವಾದರೆ ಆ ಶಬ್ದ ಮಣಿಗೆ ತಿಳಿಯದೇ ಹೋಯಿತ್ತಯ್ಯ ಕಪಿಲಸಿದ್ಧಮಲ್ಲಯ್ಯಾ

೯ ಮೃತ್ತಿಕೆಯೊಂದರಲ್ಲಿ ಮಡಿಕೆಗಳು ನೂರಾರು ಮನ ಒಂದರಲ್ಲಿ ಕ್ರಿಯಾದಿಗಳು ನೂರಾರು ಜನಕ ಒಬ್ಬನಲ್ಲಿ ಸಂತತಿಗಳು ನೂರಾರು. ಘನಕ್ಕೆ ಘನವಾದ ಚಿನ್ಮಯ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಜಗತ್ತುಗಳು ನೂರಾರು

೧೦ ಕರ್ಮಸಾಕ್ಷಿ ತಾನಾವಲ್ಲಿ ಅಸ್ತಮಾನೋದಯಕ್ಕೆ ಒಳಗಾದನಯ್ಯ ಸೂರ್ಯನು ಕರ್ಮಸಾಕ್ಷಿ ತಾನಾಗಿ ಆಚರಿಸಿದಲ್ಲಿ ಜನನ ಮರಣಕ್ಕೆ ಒಳಗಾದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೧೧ ಮನ ಬುದ್ಧಿ ಚಿತ್ತ ಅಹಂಕಾರ ಜ್ಞಾನವೆಂಬ ಪಂಚಕರಣಗಳಿರವ ಹೇಳಿಹೆ ಕೇಳಿರಯ್ಯ ಮನವೆಂಬುದು ಸಂಕಲ್ಪ, ವಿಕಲ್ಪಕ್ಕೊಳಗಾಯಿತ್ತು ಇಲ್ಲದುದ ಕಲ್ಪಿಸುವದೇ ಸಂಕಲ್ಪ ಇದ್ದುದ ಅರಿಯದುದೇ ವಿಕಲ್ಪ ಕಲ್ಪಿಸಿ ರಚಿಸುವದೇ ಬುದ್ಧಿಯಯ್ಯಾ ಕಲ್ಪಿಸಿ ಮಾಡು

ವುದದು ಚಿತ್ತವಯ್ಯಾ ಮಾಡಿದುದಕ್ಕೆ ನಾನೆಂಬುವುದು ಅಹಂಕಾರವಯ್ಯಾ. ಮಾಡುವ ನೀಡುವ ಭಾವ ಶಿವಕೃತ್ಯವೆಂದರೆ ಜ್ಞಾನ ವೈರಾಗ್ಯವಯ್ಯಾ ಅರಿಯದ ಅರಿವು ಮಹಾಜ್ಞಾನ ಮೋಕ್ಷದ ಇರವು ನೋಡಾ. ಕಪಿಲ ಸಿದ್ಧಮಲ್ಲಿಕಾರ್ಜುನನ ಕೂಡುವುದಕ್ಕೆ ಯೋಗ ನೋಡಾ ಯೋಗಿನಾಥಾ

೧೨ ಬ್ರಹ್ಮೋಪದೇಶವಾಯಿತ್ತೆಂದು ಬ್ರಹ್ಮದೊಡನೆ ಧಿಕ್ಕರಿಸಬೇಡ ಕಾಲಜ್ಞಾನವಾಯಿತ್ತೆಂದು ಕರ್ಮವ ಹಳಿಯಬೇಡ. ಶಿವಜ್ಞಾನ ದೀಪ್ತಿ ತಲೆದೋರಿತ್ತೆಂದು, ಶಿವಶರಣರೊಡನೆ ಧಿಕ್ಕರಿಸಬೇಡ ಈ ತ್ರಿವಿಧದುತ್ಪತ್ತಿ ಸಲ್ಲದು ಈ ವೇಶಿಯ ಮಕ್ಕಳಿಗೆ ನಾನೇನೆಂಬೆನಯ್ಯಾ ಕೂಡಲಚನ್ನಸಂಗಮದೇವಾ ?

೧೩ ಯೋಗಿಯ ಹೊಲಬು ಯೋಗಿಯಾದವಂಗಲ್ಲದೆ ಇತರ ನರಂಗೆ ಸಾಧಿಸಬಾರದು ಕೇಳಯ್ಯಾ! ಧಾತುವಾದವದು ರಸವಾದಿಯಾದವಂಗಲ್ಲದೆ ಇತರ ನರಂಗದು ಸಾಧಿಸಬಾರದು ಕೇಳಯ್ಯಾ! ನೋಡಿ ಮಾಡುವುದಾದಡೆ ಭವವೆಲ್ಲಿಹುದು, ದಾರಿದ್ರ್ಯವೆಲ್ಲಿಹುದು ಹೇಳಯ್ಯಾ ಕಪಿಲಸಿದ್ಧಯ್ಯಾ ?

೧೪ ಮಾಟವಿಲ್ಲದ ಕೂಟವದೇಕೋ ? ಕೂಟವಿಲ್ಲದ ಮಾಟವದೇಕೋ ? ಮಾಟ ಕೂಟವೆರಡರನುವನರಿಯಬೇಕು ಸಟೆಯಿಲ್ಲದೆ ದಿಟವ ರೂಢಿಸಿ ಸಯವಾಗಬೇಕು ಮಾಟ ಕೂಟವೆರಡರನುಮತದಿಂದವೇ ಭಕ್ತಿರತಿಯಯ್ಯಾ ಕೂಡಲಚನ್ನಸಂಗಮದೇವಾ

೧೫ ಮನದಲ್ಲಿದ್ದು ಕಾಯದಲಿಲ್ಲದವ ಶತ ಜನ್ಮಕ್ಕೆ ಮೋಕ್ಷ ಕಾಯದಲ್ಲಿದ್ದು ಮನದಲಿಲ್ಲದವ ಮೂರು ಜನ್ಮಕ್ಕೆ ಮೋಕ್ಷ ಕಾಯ ಮನೋಯುಗದಲಿಲ್ಲದವ ಮೋಕ್ಷರೂಪು ನೋಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ

೧೬ ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ, ತಪ್ಪದು ನೋಡಯ್ಯಾ ಎನಗಿನ್ನೆಂತೋ, ಎನಗಿನ್ನೆಂತೋ ಎಂದೆನ್ನಬೇಡ "ನಾ ಭುಕ್ತಂ ಕ್ಷೀಯತೆ ಕರ್ಮ" ಎಂಬ ಶೃತಿ ತಪ್ಪದು ಕೂಡಲಸಂಗಮದೇವ

೧೭. ಅಂಜಿದರಾಗದು. ಅಳುಕಿತರಾಗದು ವಜ್ರ ಪಂಜರದೊಳಗಿದ್ದರೆ ಆಗದು ತಪ್ಪದೆಲವೋ ಲಲಾಟ ಲಿಖಿತ ಕಕ್ಕುಲತೆಬಟ್ಟರೆ

ಆಗದು ನೋಡಾ. ಧೃತಿಗೆಟ್ಟು ಮನ ಧಾತುಗೆಟ್ಟರೆ, ಬಪ್ಪುದು ತಪ್ಪದು ಕೂಡಲಸಂಗಮದೇವಾ

೧೮ ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದು ಬಪ್ಪುದು ನಮಗೀಗಲೇ ಬರಲಿ ಇದಕಾರಂಜುವರು? ಇದಕಾರಳಕುವರು? "ಜಾತಸ್ಯ ಮರಣಂ ಧ್ರುವಂ" ಎಂದುದಾಗಿ ನಮ್ಮ ಕೂಡಲಸಂಗಮ ದೇವ ಬರೆದ ಬರಹ ತಪ್ಪಿಸುವರೆ, ಹರಿಬ್ರಹ್ಮಾದಿಗಳವಲ್ಲ

೧೯ ಕಾಯದ ಕಳವಳಕಂಜಿ ಕಾಯಯ್ಯ ಎನ್ನೆನು. ಜೀವ ನೋಪಾಯಕ್ಕಂಜಿ ಈಯಯ್ಯ ಎನ್ನೆನು ಯದ್ಭಾವಂ ತದ್ಭವತಿ. ಉರಿ ಬರಲಿ, ಸಿರಿ ಬರಲಿ, ಬೇಕು ಬೇಡೆನ್ನೆನು ಆನು ನಿಮ್ಮ ಹಾರೆನು. ಮಾನವರ ಬೇಡೆನು. ಆಣೆ ನಿಮ್ಮಾಣೆ ಕೂಡಲಸಂಗಮದೇವ

೨೦ ಆಯುಷ್ಯ ತೀರದಲ್ಲದೆ, ಮರಣವಿಲ್ಲ ಭಾಷೆ ತೀರದಲ್ಲದೆ, ದಾರಿದ್ರ್ಯವಿಲ್ಲ ಅಂಜಲೇಕೋ ಲೋಕವಿಗರ್ಭಣೆಗೆ? ಅಂಜಲೇಕೋ ಕೂಡಲಸಂಗಮದೇವ, ನಿಮ್ಮಾಳಾಗಿ?

೨೧ ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬಾಲವ ಬಡಿ ವಂತೆ, ತಾವು ನಂಬರು ನಂಬುವರನು ನಂಬಲೀಯರು ತಾವು ಮಾಡರು ಮಾಡುವರನು ಮಾಡಲೀಯರು ಮಾಡುವ ಭಕ್ತರ ಕಂಡು ಸೈರಿಸಲಾರದವರ ಕೂಗಿಡೆ ಕೂಗಿಡೆ ನರಕದಲಿಕ್ಕುವ ಕೂಡಲ ಸಂಗಮದೇವ

೨೨ ನುಡಿದಿಹೆನೆಂಬೆ. ಉಲುಹಿನ ಗಲಭೆಯ ತೋಟಿ ಬಿಡದು ಉತ್ತಮ ಮಧ್ಯಮ ಕನಿಷ್ಠ ಶಿರುಗಿ ಕಂಡಿಹೆನೆಂಬ ಕಾಲನ ಎಡೆಯಾಟ ಬಿಡದು. ಎನಗೆ ಗರ್ವ ಮೊದಲಾದಲ್ಲಿ ಕರ್ಮ ವೆಗ್ಗಳವಾಯಿತ್ತು ಉಭ ಯದ ತೋಟಿಯನಿನ್ನಾರಿಗೆ ಹೇಳುವೆ ಕಪಿಲಸಿದ್ಧಮಲ್ಲಿಕಾರ್ಜುನಾ?

೨೩ ಕಾಯ ನಾನೆಂದರೆ ಕರ್ಮಕಾಂಡ ಸಕಲ ಕ್ರಿಯೆ ಈಶಾ ರ್ಪಣವೆಂದರೆ ಭಕ್ತಿಕಾಂಡ. ಸಕಲ ಕರ್ಮ ಸಾಕ್ಷಿ ಎಂದರೆ ಜ್ಞಾನ ಕಾಂಡ ಕಾಂಡತ್ರಯವಿಲ್ಲದಖಂಡನ ತೋರಾ ಕಪಿಲಸಿದ್ಧಮಲ್ಲಿಕಾ ರ್ಜುನಾ.

# ಪುಣ್ಯ ಪಾಪ.

೩೪ ಪುಣ್ಯ ಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರೇ ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ ದೇವಭಕ್ತ ಜಯ ಜೀಯ ಎಂಬ ನುಡಿಯೊಳಗೆ ಕೈಲಾಸವೈದದೇ ಕೂಡಲ ಸಂಗಮದೇವಾ?

೩೫ ಪುಣ್ಯ ಪಾಪವೆಂಬುಭಯ ಕರ್ಮವನಾರು ಒಲ್ಲರಯ್ಯಾ? ಇವನಾರುಂಬರು? ಕಾಯ ತಾನುಂಬರೆ, ಕಾಯ ಮಣ್ಣು ಜೀವ ತಾನುಂಬರೆ, ಜೀವ ಬಯಲು ಈಯುಭಯ ನಿರ್ಣಯವ ಕೂಡಲ ಸಂಗಮದೇವ ನಿಮ್ಮ ಶರಣ ಬಲ್ಲ

೩೬ ಮನದಲ್ಲಿ ಸಂಕಲ್ಪ ವಿಕಲ್ಪಂಗಳು ನೋಡಯ್ಯ! ಮನಸಿನ ಕಾರ್ಯವೆ ಪುಣ್ಯ ಪಾಪ ನೋಡಯ್ಯಾ! 'ಮನೋ ಕಾರ್ಯಂ ಜಗದ್ಭೇದಂ' ಎಂಬುದು ಹುಸಿಯಲ್ಲ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ

೩೭ ಮಣ್ಣ ಕೊಟ್ಟು ಪುಣ್ಯವ ಪಡೆವೆನೆಂಬವನ ಭಾಷ ಹೊಲ್ಲ ಹೊಲ್ಲ ಮಣ್ಣಿನ ಪುಣ್ಯ ಮುಕ್ಕಣ್ಣನ ಮುಖಕ್ಕೆ ಬಂದಿತ್ತು ನೀರನೆರೆದು ಪುಣ್ಯವ ಪಡೆವೆನೆಂಬುವರ ಭಾಷೆ ಹೊಲ್ಲ ಹೊಲ್ಲ ನೀರಿನ ಪುಣ್ಯ ನಿರಂಜನ ಮುಖಕ್ಕೆ ನಿಮಿರಿತ್ತು ಜ್ಯೋತಿಯ ಬೆಳಗಿ ಪಾಪವ ಕಳೆವೆನೆಂಬುವರ ಭಾಷೆ ಹೊಲ್ಲ ಹೊಲ್ಲ ದೇವಾಲಯ ಕಟ್ಟಿ ದೇವತ್ವ ಪಡೆವೆನೆಂಬುವರ ಭಾಷೆ ಹೊಲ್ಲ ಹೊಲ್ಲ ದೇವಾಲಯದ ಪುಣ್ಯ ಅಧೋಮುಖಂಗೆ ಸೇರಿತ್ತು ಕೊಟ್ಟ ಭಕ್ತರನಾರನು ಕಾಣೆ ಕೈಕೊಂಡ ಜಂಗಮರನಾರನು ಕಾಣೆ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೩೮ ಪುಣ್ಯ ಪಾಪಗಳೆಂಬುವವಾರಿಗರಿಕೆಯುಂಟಯ್ಯ? ಪುಣ್ಯವಂತಿರಲಿ, ಪಾಪವಂತಿರಲಿ ಪೂಜಿಸಿ ಪಡೆವುದದು ಹುಸಿಯಲ್ಲ ಇದು ಕಾಕು ಭಾಷೆ ಎಂದು ಪೂಜಿಸಿದವಗೆ ಸಂಪದಾದಿಶಕ್ತಿ ಮುಕ್ತಿ ಒರುವದೇನಿಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

# ಸ್ವರ್ಗ ನರಕ.

೨೯. ಸ್ವರ್ಗವೆಂದರೆ ಸುಖಕ್ಕೆ ನಾಮ, ನರಕವೆಂದರೆ ಬಾಧೆಗೆ ನಾಮ ಸುಖವೆಂದರೆ ಪುಣ್ಯ, ನೋವೆಂದರೆ ದುಃಖ ಸುಖವಿಯೋಗವಾದಲ್ಲಿ ದುಃಖವೆನಿಸಿತ್ತು ದುಃಖವಿಯೋಗವಾದಲ್ಲಿ ಸುಖವೆನಿಸಿತ್ತು ಸುಖಾಸುಖವೆಂದರಿಯಬಾರದು ಮೊದಲು ಹಿಡಿದ ಸಂಗತಿಯಿಂದ ಸುಖ ಸಂಗದಿಂದ ದುಃಖ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೩೦ ಸುಖಕ್ಕೆ ದೈವವೆಂದು, ದುಃಖಕ್ಕೆ ವಿಧಿಲಿಪಿಯೆಂದು, ಸುಖಕ್ಕೆ ಪುಣ್ಯವೆಂದು, ಸುಖಕ್ಕೆ ಪ್ರಾರಬ್ಧವೆಂದು, ನುಡಿವರಯ್ಯಾ ಸಿದ್ಧಾಂತಿಗಳು ಸುಖವೇ ದೈವವೆನಲಾಗಿ ಮಾಡುವ ಕ್ರಿಯೆಯಲ್ಲರಿಯ ಬಂದಿತು ಸುಖವು ದೈವವಲ್ಲಿ ದೈವವದು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವ ಕೂಟ.

೩೧ ಜಡ, ಅಸತ್ಯ, ದುಃಖ, ಅನಿತ್ಯ, ಖಂಡಿತವೆಂಬೈದು ಲಕ್ಷಣ ಮಾಯಾತ್ಮಕವಯ್ಯ ಮೃಗದಲಿಲ್ಲದ ಶಶ ವಿಷಾಣಾದಿಕವೇ ಅಸತ್ಯವಯ್ಯ ಮೂಢಮಯ ಕಲ್ಲು ಮೊದಲಾದವೇ ಜಡದೃಶ್ಯ ನೋಡಯ್ಯ. ರಜೋ ಗುಣಿಯುಸಪ್ಪ ವೃತ್ತಿ ದುಃಖ ಕಂಡಯ್ಯ ತೋರಿ ಕೆಡುವ ದೇಹಾದಿಕವೆ ಅನಿತ್ಯ ಕಂಡಯ್ಯ ಕಾಲ ಪರಿಚ್ಛೇದಾಧಿಕವೇ ಖಂಡಿತ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೩೨ ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ ಕೇಳಿರಯ್ಯಾ ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳು ಬೆಟ್ಟ. ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ ಇದರಾಡಂಬರವೇಕಯ್ಯ? ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ ಲಿಂಗಾಂಗ ಸಾಮರಸ್ಯವ ತಿಳಿದು ನಿಮ್ಮ ಪಾದಪದ್ಮದೊಳು ಬಯಲಾದ ಪದವಿಯೇ ಕೈಲಾಸವಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೩೩ ತಪವ ಮಾಡಿ ಸ್ವರ್ಗವ ಪಡೆದಿಹೆನೆಂಬವನ ಮುಖವನೋಡಲಾಗದು ಮಾದಿಗ ಡೋಹರ ಶ್ವಪಚನೀಚಗುಣವುಳ್ಳರು ಹೋಹುದೆಲ್ಲಿ ಸ್ವರ್ಗವೇನಯ್ಯ? ಲಿಂಗದ ಕುರುಹ ತಿಳಿದು ಲಿಂಗ ಗುಣ ನೇತಿಗಳೆದು ಲಿಂಗವಾದುದೇ ಸ್ವರ್ಗ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

# ಕರ್ಮಚ್ಛೇದನ.

**ವಿವರಣೆಃ**— ಕರ್ಮಗಳು ಬೆನ್ನು ಬಿಡುವುದಿಲ್ಲ ಆದರೆ ಮನುಷ್ಯನಿಗೆ ತನ್ನ ವಿಷಯಗಳನ್ನು ಬಿಡಲು ಶಕ್ಯವಿದೆ ಅವನು ನಿರ್ಮಲಜ್ಞಾನಿಯಾಗಿರಬೇಕು. ಶಿವನಿಗರ್ಪಿಸಿ ಭೋಗಿಸಬೇಕು ಆತ್ಮನೈವೇದ್ಯ ಮಾಡಿ ವರ್ತಿಸಬೇಕು ಷಟ್‌ಸ್ಥಲವಿಡಿದು ಆಚರಿಸಬೇಕು ಇಂಥ ಆಚರಣೆಗಳಿಂದ ಕರ್ಮಗಳು ಲಯ ಹೊಂದುವವು

## ವಚನಗಳು.

೩೪ ಮುನ್ನ ಉಳ್ಳ ಕರ್ಮ ಬೆನ್ನ ಬಿಡದು ನೋಡಾ ಜಾತಿ ವಿಜಾತಿಗಳಲ್ಲಿ ತೀವಿ ಭೋಗಕ್ಕೆ ಸಾಧನವಾದ ಪರಿಯ ನೋಡಾ ಅಲ್ಲಿಯೇ ಮತ್ತೆಮತ್ತೆ ಪಾಪವ ಮಾಡಿ ಸ್ವರ್ಗ ನರಕವನೆಯ್ದುವ ಕರ್ಮಿಗಳು ಕಣ್ಣುಗೆಟ್ಟು ಮುಂದುಗಾಣದೆ ಪುಣ್ಯಪಾಪವ ಬೆನ್ನಲ್ಲಿ ಕಟ್ಟಿ ರಾಟಳದಂತ ತನುವ ತೋರುತ್ತ ಬಿಡುತ್ತ ತಿರುಗುತ್ತಿಹರಲಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನನರಿಯದ ಕರ್ಮಿಗಳು ನೋಡಾ

೩೫ ಸಂಚಿತ ಪ್ರಾರಬ್ಧ ಆಗಾಮಿ ಕರ್ಮಂಗಳು ಬೆನ್ನ ಬಿಡವು ನೋಡಾ ಆರನಾದರೂ ಮೂಗರ ಮಾಡಿ ಕಾಡಿ ಕೊಲ್ಲುತ್ತಿಹವು ನೋಡಾ ಹಿಂದೆ ಮಾಡಿದ ಕರ್ಮ ಬಿಡೆಂದರೆ ಬಿಡುವುದೆ ? ಮುಂದ ಉಂಡಲ್ಲದ ತೀರದು ನಿಜ ಗುರು ಸ್ವತಂತ್ರಸಿದ್ಧಲಿಂಗೇಶ್ವರನು ಕಡೆಗಣ್ಣಿಲಿ ನೋಡುವನ್ನಕ್ಕ ಉಂಡು ತೀರದು ಕರ್ಮ

೩೬ ಮನೋವಾಕ್ಕಾಯದಿಂದ ಹುಟ್ಟಿದ ಕರ್ಮ ತೊಟ್ಟನೆ ತೊಳಲಿಸಿ ಬಳಲಿಸಿದಲ್ಲದೆ ಬಿಡದು ಕರ್ಮವ ಮೀರಿ ನಡೆವ ಬಲ್ಲಿದರನಾರನೂ ಕಾಣೆ ಬೊಮ್ಮಾದಿಗಳೆಲ್ಲ ಕರ್ಮಕ್ಕೀಡಾದರು ಕರ್ಮವಜಹರಿಗಳ ಬಾರದ ಭವದಲ್ಲಿ ಬರಿಸಿತ್ತು ಕಾಣದ ದುಃಖವ ಕಾಣಿಸಿತ್ತು ಇನ್ನುಳಿದವರ ಪೇಳಲೇನುಂಟು? ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಆಧೀನವಿಡಿದು ಕಾಣುವ ಕರ್ಮದ ಬಲುಹ ನೋಡಾ.

೩೭ ಪೂರ್ವ ಜನ್ಮದಲ್ಲಿ ಭೋಗಿಸಲ್ಕೆ ಈಡಾಯಿತ್ತು ಈಗ ಮಾಡಿದ ಕರ್ಮ ಮುಂದಕ್ಕೆ ಬಿತ್ತಿದ ಬೆಳೆಯನುಂಬಂತೆ ಬಪ್ಪುದ

ತಪ್ಪದು ಈ ಕರ್ಮ ಉಳ್ಳನ್ನಕ್ಕ ಆರಿಗಾದರೂ ಬಳಲಿಕೆ ಬಿಡದು ಕಾಣಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ

೩೮. ಶಿವಭಕ್ತಿ ತತ್ಪರನಾದ ಮಹಿಮನು ವಿಷಯಭ್ರಮೆ ಪುರುಷ ಪ್ರಯತ್ನವನ್ನು ಬಿಟ್ಟಾಗಳೇ ಆಗಾಮಿ ಕರ್ಮ ನಾಶವಾಯಿತ್ತು ಸಂಚಿತ ಕರ್ಮ ವಿಷಯಾಸಕ್ತಂಗೆ ಪ್ರಾರಬ್ಧವೆನಿಸುವುದು ಶಿವಧ್ಯಾನೈಕಚಿತ್ತಂಗೆ ಸಂಚಿತ ಕರ್ಮವಿಲ್ಲ ಅದೇನುಕಾರಣವೆಂದಡೆ, ಶಿವಜ್ಞಾನಾಗ್ನಿಯಿಂದ ಅದು ಬೆಂದುಹೋಹುದಾಗಿ ಇಚ್ಛಾ ಪ್ರಾರಬ್ಧವೆಂದು ಅನಿಚ್ಛಾ ಪ್ರಾರಬ್ಧವೆಂದು ಪ್ರಾರಬ್ಧವೆರಡಾಗಿಹುದು ಪ್ರಾರಬ್ಧ ಕರ್ಮವು ಭೋಗಾದಿಗಳಿಂದ ಕ್ಷಯ ಹೊಂದುವುದಾಗಿ ಅದು ಭೋಗಿಸದಲ್ಲದೆ ತೀರದು ಅನಿಚ್ಛಾ ಪ್ರಾರಬ್ಧದಿಂದ ಮುಂದ ಸುಖವಹುದು ಇಚ್ಛಾ ಪ್ರಾರಬ್ಧದಿಂದ ದುಃಖವಹುದಾಗಿ, ಆ ದುಃಖದಿಂದ ಸಂಸಾರವೃಕ್ಷ ಬೇರುವರಿವುದು ಸಂಸಾರ ವಿರಕ್ತಂಗೆ ಹುರಿದ ಬೀಜದಂತೆ ಅಂಕುರನಷ್ಟವಾಗಿಹುದು ಆ ಶಿವನೊಡನೆ ಕೂಡಿ ಭೋಗಿಸುವನಾಗಿ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನೆಂಬ ನಿಜವನೆಯ್ದುವನು

೩೯ ನಿಜವನರಿದು ನಿರ್ಮಲಜ್ಞಾನಿಯಾದ ಕರ್ಮರಹಿತ ಶಿವಯೋಗಿ ಕರ್ಮಕಾಯನಲ್ಲ, ಕರ್ಮಭೋಗಿಯಲ್ಲ, ಕರ್ಮಾಧೀನನು ತಾ ಮುನ್ನವೇ ಅಲ್ಲ ಅದಂತೆಂದೊಡೆ ಪರಿಪಕ್ವವಾದ ಹಣ್ಣು ರಸ ತುಂಬಿ ತೊಟ್ಟು ಕಳೆದ ಬಳಿಕ ಮರಳಿ ವೃಕ್ಷವನಡರಿ ತೊಟ್ಟು ಹತ್ತುವುದೇ ಹೇಳಾ? ಆಗಾಮಿ ಪರಪಕ್ವವಾಗಿ ಸಂಚಿತವಾಯಿತ್ತು ಸಂಚಿತ ಪರಿಪಕ್ವವಾಗಿ ಪ್ರಾರಬ್ಧವಾಯಿತ್ತು ಇನ್ನು ಕರ್ಮ ಉಂಟೇ? ಇಲ್ಲವಾಗಿ ನಿಜ ಗುರು ಸ್ವತಂತ್ರಸಿದ್ಧಲಿಂಗೇಶ್ವನ ಶರಣರು ಕರ್ಮರಹಿತರು

೪೦ ಕರ್ಮರಹಿತನಾದ ನಿರ್ಮಲನಿತ್ಯಂಗೆ ಮಾಯಾ ಭ್ರಮೆ ಇಲ್ಲ ಮಾಯಾಭ್ರಮೆ ಇಲ್ಲವಾಗಿ ಮನದ ಸಂಕಲ್ಪವಿಕಲ್ಪವಿಲ್ಲ ಮನದ ಸಂಕಲ್ಪ ವಿಕಲ್ಪವಿಲ್ಲವಾಗಿ ವಿಷಯಾಭಿಮಾನವಿಲ್ಲ ವಿಷಯಾಭಿಮಾನವಿಲ್ಲವಾಗಿ ಪಂಚೇಂದ್ರಿಯಂಗಳ ವ್ಯಾಪಾರವಿಲ್ಲ ಇವಿಲ್ಲವಾಗ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಶರಣ ನಿರ್ದೇಹಿ

೪೧. ಪುಣ್ಯ ಪಾಪಂಗಳನರಿಯದ ಮುನ್ನ, ಅನೇಕ ಭವಂಗಳಲ್ಲಿ ನಿಮ್ಮ ನಿಲವನರಿಯದೆ ಕೆಟ್ಟೆನಯ್ಯಾ. ಇನ್ನು ನಿಮ್ಮ ಶರಣುವೊಕ್ಕೆ

ನಾಗಿ, ನಾ ನಿಮ್ಮನೆಂದೂ ಅಗಲದಂತೆ ಮಾಡಾ ಅಯ್ಯ, ನಿಮ್ಮ ಧರ್ಮ, ನಿಮ್ಮ ಧರ್ಮ ನಿಮ್ಮಲ್ಲಿ ಒಂದು ಬೇಡುವೆ ಎನ್ನ ಕರ್ಮದ ಬಂಧನವ ಬಿಡುವಂತೆ ಮಾಡಾ ಅಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೪೨ ಗಿರಿ ತರು ಮಹಾ ವಿಪಿನ ಸರೋವರದಲ್ಲಿ ಹಿರಿದುಗ್ರ ತಪವ ಮಾಡುತ್ತ ಪವನಾಹಾರ ಪರ್ಣಾಹಾರ ಜಲಾಹಾರ ಫಲಾಹಾರ ನಿರಾಹಾರದಲ್ಲಿ ಇದ್ದರೇನು? ತನು ಮನ ರೂಪಾದ ಮಾಯೆ ಕಾಡದೆ ಬಿಡುವಳೇ? ತನುವಿನಲ್ಲಿ ವ್ಯಾಪಾರ ಮನದಲ್ಲಿ ವ್ಯಾಕುಳವಾಗಿ ಕಾಡದೇ ಬಿಡುವಳೇ? ಈ ಮಾಯೆಯು ಗೆಲವುದಕ್ಕೊಂದು ಉಪಾಯುವ ಕಾಂಬುದು ಅದೆಂತೆಂದೊಡೆ, ಕಂಗಳ ಕೊನೆಯಲ್ಲಿ ಲಿಂಗದ ನೋಟ, ಮನದ ಕೊನೆಯಲ್ಲಿ ಲಿಂಗದ ನೆನಹು, ಜಿಹ್ವೆಯ ಕೊನೆಯಲ್ಲಿ ಶಿವನ ಮಂತ್ರ, ಭಾವದ ಕೊನೆಯಲ್ಲಿ ಶಿವಾನುಭಾವ ನೆಲೆಗೊಂಡರೆ, ಅಂಗದ ಅವಯುವಂಗಳಾಗಿ ನಿಜ ಭ್ರಮರನಂತೆ ತಾನೇ ಶಿವನಹನು ಇಂತಪ್ಪ ಲಿಂಗಾನುಭಾವಿ ಲಿಂಗಸಂಗಗೆ ಅಂಗವಿಲ್ಲ ಅಂಗವಿಲ್ಲದ ನಿತ್ಯ ನಿರ್ಮಲಂಗೆ ಮಾಯಾಮಲಿನ ಮುನ್ನವೇ ಹೊದ್ದದಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ

೪೩ ಪಂಡಿತನಾಗಲಿ, ಮೂರ್ಖನಾಗಲಿ, ಸಂಚಿತ ಕರ್ಮ ಉಂಡಲ್ಲದೆ ಬಿಡದು ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದೆಂದು ಶೃತಿ ಸಾರುತ್ತಿದ್ದಾವೆ ನೋಡಾ ತಾನಾವಾವ ಲೋಕದೊಳಗಿದ್ದಡೆಯೂ ಬಿಡದು ಕರ್ಮ ಫಲಗೂಡಿ ಕೂಡಲ ಸಂಗಮದೇವಂಗೆ ಆತ್ಮನೈವೇದ್ಯವ ಮಾಡಿದವನೇ ಧನ್ಯನು

೪೪ ಲಿಂಗ ಗಂಭೀರ ನಿಸ್ಸಂಗಿಯು ಸಂಗವನೇನೆಂಬೆನಯ್ಯ' ಕೂಡಲಸಂಗನ ಶರಣರು ಕಾಯದ ನೆವದಿಂದ ಅರ್ಪಿಸುವ ಬೆಡಗ ನಾನೇನೆಂಬೆ?

೪೫ ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ ಇಂತೀ ತ್ರಿವಿಧವು ನಿಮ್ಮದೆಂದ ಬಳಿಕ ಎನಗೆ ಬೇರೆ ವಿಚಾರ ಉಂಟೇ ಕೂಡಲಸಂಗಮದೇವಾ?

೪೬. ತನುವ ಕೊಟ್ಟು ತನು ಬಯಲಾಯಿತ್ತು. ಮನವ ಕೊಟ್ಟು ಮನ ಬಯಲಾಯಿತ್ತು ಧನವ ಕೊಟ್ಟು ಧನ ಬಯಲಾಯಿತ್ತು ಇಂತೀ ತ್ರಿವಿಧವನ್ನು ಕೊಟ್ಟು ಕಾರಣ ಕೂಡಲಸಂಗಯ್ಯನಲ್ಲಿ ಬಸವಣ್ಣಂಗೆ ಬಯಲ ಸಮಾಧಿಯಾಯಿತ್ತು

## ಅಂಗಲಿಂಗ.

**ವಿವರಣೆ:**— ಕ್ರಿಯೆಯಲ್ಲಿ ಅಂಗಲಿಂಗಗಳೆರಡೂ ಬೇಕು ಒಂದನ್ನೊಂದು ಬಿಟ್ಟು ಅವು ವ್ಯವಹರಿಸಲಾರವು ಅಂಗವನ್ನು ಕುಂದಿಸಿ ಲಿಂಗವನ್ನನುಭವಿಸುವೆವೆಂದು ಅನೇಕರು ಭಾವಿಸುವದುಂಟು ಆದರೆ ಇದು ತಪ್ಪಾದದ್ದು ಅಂಗ ಭೋಗವು ಅರ್ಪಿತವಾಗಿ ಆಚರಿಸಿದ ಆಚರಣೆಯೇ ಯುಕ್ತವಾದುದು ಇದರಿಂದ ಅಂಗಲಿಂಗಗಳು ಪರಸ್ಪರ ಸಮರಸವಾಗುವವು ಅಂಗದಿಂದಲೇ ಲಿಂಗವನ್ನು ಹೊಂದಬೇಕು

### ವಚನಗಳು.

೪೭ ಅಂಗದಿಂದೆ ಲಿಂಗಸುಖ, ಲಿಂಗದಿಂದೆ ಅಂಗಸುಖ ಆ ಅಂಗಲಿಂಗ ಸಂಗ ಸುಖದಿಂದೆ ಪರಮ ಸುಖ ದೊರಕೊಂಬುವುದು ನೋಡಾ ಆ ಅಂಗ ಲಿಂಗ ಸಂಗ ಸಮರಸೈಕ್ಯವನು ಕೂಡಲಚನ್ನಸಂಗ ನಿಮ್ಮ ಶರಣನಾದ ಮಹಾಲಿಂಗೈಕ್ಯ ಬಲ್ಲನಲ್ಲದೆ ಉಳಿದವರೆತ್ತ ಬಲ್ಲರಯ್ಯಾ ?

೪೮ ರೂಹಿಲ್ಲದ ನಿರ್ಲಿಂಗೆ ಮಳಲ ಬೊಂಬೆಯ ಮಾಡಿ, ನಾದ ಬಿಂದುವಿನಲ್ಲಿ ಹುಟ್ಟಿಸಿ, ಆರಿಗೆಯು ಮೈದೋರದೆ ಇದ್ದಿತ್ತು ಶಿವನ ಮಾಯೆಯು ಕಾಯದ ಕಳವಳಕ್ಕೆ ಮುಂದೆ ರೂಪಾಗಿ ತೋರಿತ್ತಲ್ಲದೆ ಬೇರೆ ತೋರಲಿಲ್ಲ. ಅಂಗ ಭೋಗವನೆ ಕುಂದಿಸಿ ಪ್ರಸಾದವನೆ ರುಚಿಸಿಹೆನೆಂಬ ಲಿಂಗವಂತರುಗಳೆಲ್ಲ ಅರಿವೆಣಗಳಾಗಿ ಹೋದರು. ಅಂಗ ಭೋಗವೇ ಲಿಂಗಭೋಗ, ಅಂಗಭೋಗವೇ ಅರ್ಪಿತವಾಗಿ ಲಿಂಗಕ್ಕೆ

ಬಂದ ರುಚಿ ಜಂಗಮಕ್ಕೆ ಬಾರದೇ? ಜಂಗಮಕ್ಕೆ ಬಂದ ರುಚಿ ಲಿಂಗಕ್ಕೆ ಬಾರದೇ? ಇದು ಕಾರಣ ಕೂಡಲಚನ್ನಸಂಗಯ್ಯ ಪಾಕ ಸಂಬಂಧಿಗೆ ಪ್ರಸಾದ ದೂರ

೪೯ ಅಂಗಲಿಂಗ ಒಂದೆಂದ ಬಳಿಕ ಅಂಗ ಕೆಟ್ಟು ಲಿಂಗ ಉಳಿಯಿತ್ತು ನೋಡಾ ಅಂಗ ನಿರ್ವಯಲಾದಲ್ಲಿ ಲಿಂಗ ಭವಿಯಾದುದು ನೋಡಾ ಅಂಗ ಲಿಂಗ ನಿರ್ವಯಲಲ್ಲಡಗಿಸಬಲ್ಲಡೆ ಭಕ್ತನೆಂಬೆ ಮಹೇಶನೆಂಬೆ, ಕಪಿಲಸಿದ್ಧಮಲ್ಲಿಕಾರ್ಜುನನವನೇ ಎಂಬೆ ನೋಡಾ

೫೦ ತನುವಿನೊಳಗಿದ್ದು ತನುವ ಗೆದ್ದಳು ಮನದೊಳಗಿದ್ದು ಮನವ ಗೆದ್ದಳು ವಿಷಯದೊಳಗಿದ್ದು ವಿಷಯಂಗಳ ಗೆದ್ದಳು ಅಂಗ ಸಂಗವ ತೊರೆದು ಭವವ ಗೆದ್ದಳು ಕೂಡಲಚನ್ನಸಂಗಯ್ಯನ ಹೃದಯ ಕಮಲವ ಬಗಿದು ಹೊಕ್ಕು ನಿಜಪದವನೈದಿದ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು

೫೧ ಚಿರಂಜೀವಿ ಎಂದರೆ ನಿರೋಗಿ. ಚಿರಂಜೀವಿ ಎಂದರೆ ಸಶಕ್ತನು ಚಿರಂಜೀವಿ ಎಂದರೆ ಬಹು ಕಾಲ ಬದುಕುವವನು ಚಿರಂಜೀವಿ ಎಂದರೆ ಪ್ರಳಯವ ಮೀರುವವನಲ್ಲ ದೇಹ ಚಿರಂಜೀವಿಯಾದೊಡೆ, ಕಪಿಲಸಿದ್ಧಮಲ್ಲಿಕಾರ್ಜುನ ಬ್ರಹ್ಮವೆಂಬ ಶಬ್ದ ಬೇರುಂಟೇ?

೫೨ ಕಾಯದಿಂದ ಲಿಂಗದರುಶನ ಕಾಯದಿಂದ ಜಂಗಮ ದರುಶನ ಕಾಯದಿಂದ ಪ್ರಸಾದ ಸಂಪತ್ತು ಕೂಡಲಚನ್ನಸಂಗಯ್ಯ ಈ ಕಾಯದಿಂದ ನಿಮ್ಮುವ ಕಂಡೆನಯ್ಯ

೫೩ ಬಯಸಿ ಬಂದುದು ಅಂಗ ಭೋಗ ಬಯಸದೆ ಬಂದುದು ಲಿಂಗಭೋಗ ಅಂಗಭೋಗವನರ್ಪಿತ ಲಿಂಗಭೋಗ ಪ್ರಸಾದವಯ್ಯಾ ಬೇಕೆಂಬುದು ಕಾಯದ ಗುಣ ಬೇಡೆಂಬುದು ವೈರಾಗ್ಯ ಬೇಕೆಂಬುವನಲ್ಲ ಈ ಉಭಯವನತಿಗಳೆದು ಭೋಗಿಸಬಲ್ಲಡೆ, ಕೂಡಲ ಚನ್ನಸಂಗ ನಿಮ್ಮ ಶರಣನೆಂಬೆನು

೫೪ ಅಂಗಾಶ್ರಯವಳಿದು ಲಿಂಗಾಶ್ರಯವಾದ ಬಳಿಕ ಆ ಅಂಗಕ್ಕೆ ಲಿಂಗಾಚಾರವಲ್ಲದೆ, ಅಂಗ ಕ್ರಿ ಎಂಬುದನಂಗೈಸರು ನೋಡಾ! ಲಿಂಗದಲ್ಲಿ ನೈಷ್ಠಿಕವಂತನಾದ ಬಳಿಕ ಅನ್ಯ ನಾಮವಿಡಿದು ಬಳಲುವ ಬಳ

ಲಿಕೆ ಎಲ್ಲಿಹದೋ? ಅನಾಚಾರವ ಜರಿದು, ಆಚಾರವನರಿದ ಬಳಿಕ ನಮ್ಮ ಕೂಡಲಚನ್ನಸಂಗನ ಶರಣರು ಅನ್ಯವನಾಚರಿಸುವವರಲ್ಲ

೫೫ ಅಂಗ ಸಂಗಿಯಾದವಂಗೆ, ಲಿಂಗಸಂಗವಿಲ್ಲ ಲಿಂಗಸಂಗಿಯಾದವಂಗೆ ಅಂಗಸಂಗವಿಲ್ಲ ಅಂಗಸಂಗವೆಂಬುದೇ ಅನಾಚಾರ, ಲಿಂಗಸಂಗವೆಂಬುದೇ ಸದಾಚಾರ ಇದು ಕಾರಣವಾಗಿ ಅಂಗಸಂಗವಂ ಬಿಟ್ಟು, ಲಿಂಗಸಂಗವಾಗಿರಬೇಕು ನಮ್ಮ ಕೂಡಲಚನ್ನಸಂಗಯ್ಯನಲ್ಲಿ

೫೬ ಲಿಂಗವ ಪೂಜಿಸಿದವರು ಹಲಬರುಂಟು ಅಂಗವ ಪೂಜಿಸಿದವರು ಒಬ್ಬರೂ ಇಲ್ಲ ಕಾಮವ ತೊರೆದವರು ಹಲಬರುಂಟು. ನಿಃಕಾಮವನಳಿದವರು ಒಬ್ಬರೂ ಇಲ್ಲ ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ

೫೭ ಏಕೋ ವರ್ಣ ಷಟ್‌ಸ್ಥಲವೆಂದೆಂಬೆನೆ? ಪ್ರಣಮದ ದೃಷ್ಟಕಾಣಬಾರದು ಅಂಗವನು ಲಿಂಗವನು ಮಂತ್ರವನು ಸಂಗ ಸಮರಸವ ಮಾಡಿ ತೋರಿದೊಡೆ, ಒಂದೇ ಎಂಬೆನು ಅದು ಷಟ್‌ಸ್ಥಲವನೊಡಗೂಡಿದಲ್ಲದ ತೋರದಾಗಿ. ಕೂಡಲಚನ್ನಸಂಗಮದೇವಾ, ಈ ನಿರ್ಣಯವನರಿದೊಡೆ, ಅದು ಷಟ್‌ಸ್ಥಲಬ್ರಹ್ಮವೆಂಬೆನಯ್ಯ ಮತ್ತೆ ಮತ್ತೆಯೂ ನೀವೇ ನೀವೇ ಎಂದು ನೆರೆ ನಂಬುವೆನಯ್ಯಾ

೫೮ ಅಂಗವೇ ಲಿಂಗವೆಂಬರು ಲಿಂಗವೇ ಅಂಗವೆಂಬರು ಅದು ಹುಸಿ ಇದು ಹುಸಿ ಅಂಗವೇ ಲಿಂಗವಾದೊಡೆ, ಕಾಯದಲ್ಲಿ ಕಳವಳ ಉಂಟೇ? ಲಿಂಗವೇ ಅಂಗವಾದೊಡೆ ಪ್ರಳಯಕ್ಕೊಳಗಾಗಬಹುದೇ? ಇದು ಕಾರಣವಾಗಿ ಅಂಗ ಲಿಂಗವಲ್ಲ. ಲಿಂಗ ಅಂಗವಲ್ಲ ಅಂಗಲಿಂಗ ಸಂಬಂಧದ ಸಂದಳಿದಲ್ಲಿ ಪ್ರಾಣಲಿಂಗ ಸಂಬಂಧಿ ಪ್ರಾಣ ನಿಃಪ್ರಾಣವಾದಲ್ಲಿ ಲಿಂಗ ರೂಪಾಗಿ ರೂಪ ನಾಸ್ತಿಯಾದಂದು ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಲಿಂಗ ಸಂಬಂಧಿ

೫೯ ಅಂಗವೇ ಲಿಂಗ, ಲಿಂಗವೇ ಅಂಗವೆಂದರಿದ ಬಳಿಕ ನಮ್ಮ ಕೂಡಲಚನ್ನಸಂಗಮದೇವರು ಅಲ್ಲಿ ಹಿರಿಹಿಂಗದಿರ್ಪ ಕಾಣಿರೋ

೬೦. ದೇವಂಗಾಗಲಿ, ಭಕ್ತಂಗಾಗಲಿ, ಲಿಂಗಕ್ಕಾಗಲಿ, ಜಂಗಮಕ್ಕಾಗಲಿ, ಸದಾಚಾರ ಬೇಕಲ್ಲವೆ, ಆ ಸದಾಚಾರವುಳ್ಳವರಿಗೆ, ಅನಾಚಾರ

ಹೊದ್ದಲಾಗದು ಅನಾಚಾರವೆಂದೊಡೆ ಅನಾಯುತ, ಅನಾಯುತವೆಂದೊಡೆ ಅನುಸರಣೆ, ಅನುಸರಣೆ ಎಂಬುದೇ ಅಂಗದಿಚ್ಛೆ ಅಂಗದಿಚ್ಛೆ ಎಂಬುದೇ ಅನಾಚಾರ, ಅನಾಚಾರವೆಂಬುದೇ ಪಂಚಮಹಾಪಾತಕ ಇದು ಕಾರಣವಾಗಿ, ಕೂಡಲಚನ್ನಸಂಗಯ್ಯನಲ್ಲಿ ಆಚಾರವಂತರೆನಿಸಿಕೊಂಡ ಬಳಿಕ, ಅನಾಚಾರಕ್ಕೆ ಅನುಸರಣೆಯ ಮಾಡಿದರೆ, ಆಚಾರಭ್ರಷ್ಟರಿಗೆ ಅನುಸರಿಸಿ ನಡೆದೊಡೆ, ಅಘೋರ ನರಕ ತಪ್ಪದು ನೋಡಿರೇ

೬೧. ಲಿಂಗದಲ್ಲಿ ಬೆರೆದಲ್ಲಿ, ಬೆರೆದ ಬಳಿಕ, ಅಂಗದಲ್ಲಿ ಬೆರೆಯಲುಂಟೇ ದೇವಾ? ಎಲೇ ಅಲ್ಲಲ್ಲ. ಅಂಗದಲ್ಲಿ ಬೆರೆದ ಬಳಿಕ ಲಿಂಗ ಬೆರೆಯಲುಂಟೇ, ದೇವಾ ಕಪಿಲಸಿದ್ಧಮಲ್ಲಿಕಾರ್ಜುನಾ ನಿಮ್ಮ ಪೂಜಿಸಿದ ಫಲ ಪಕ್ವವಾಗದನ್ನಕ್ಕ?

೬೨ ಎನಗೆ ಗುರುವಿನ ಪ್ರಸಾದ ನಿನಗೆ ಚನ್ನನ ಪ್ರಸಾದ ಎನಗೆಯೂ ನಿನಗೆಯೂ ಸಮಯಾಚಾರ ಸರಿ ಕೂಡಲಸಂಗಮದೇವಾ, ನೀನೆನಗೆ ಚಿಕ್ಕ ತಮ್ಮ

## ಸತ್ಕರ್ಮಗಳನ್ನು ಮಾಡುವುದು.

**ವಿವರಣೆ:**— ಅಂಗವನ್ನು ಬಿಟ್ಟು ಲಿಂಗವಿಲ್ಲ, ಲಿಂಗವನ್ನು ಬಿಟ್ಟು ಅಂಗವಿಲ್ಲ ಆದುದರಿಂದ ಅಂಗಕ್ಕೆ ಸದಾಚಾರವೇ ಬೇಕು ಕೇವಲ ದ್ವೈತಾದ್ವೈತ ವಾದಮಾಡಿ ಪ್ರಯೋಜನವಿಲ್ಲ ಆದರೆ ನಿರ್ಧಾರವಾಗಿ ಸದ್ಭಕ್ತಿ ಸದಾಚಾರದಿಂದ ಮನುಷ್ಯನು ನಡೆಯಬೇಕು ಹೀಗೆ ನಡೆದಲ್ಲಿಯೇ ನಿಜವಾದ ಕ್ರಿಯೆಯನ್ನು ಮಾಡಿದಂತಾಗುವದು ಮರ್ತ್ಯಲೋಕದಲ್ಲಿ ಹೀಗೆ ಆಚರಿಸುವುದರಿಂದಲೇ ಮುಂದೆ ಶ್ರೇಷ್ಠ ಸ್ಥಿತಿಯನ್ನು ಹೊಂದುವರು ಇವರಿಗೆ ಭವವೆಂಬುದಿಲ್ಲ

### ವಚನಗಳು.

೬೩ ಆಪ್ಯಾಯನಕ್ಕೆ ನೀಡುವೆ ಲಾಂಛನಕ್ಕೆ ಶರಣೆಂಬೆ ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ, ಕೂಡಲಸಂಗಮದೇವ, ನೀ ಸಾಕ್ಷಿಯಾಗಿ ಛೀ ಎಂಬೆ

೬೪ ನುಡಿಯಬಹುದು ಅದ್ವೈತವನೊಂದು ಕೋಟಿ ವೇಳೆ. ಒಮ್ಮೆ ನುಡಿಯಬಹುದೆ ನಿರ್ಧಾರವಾಗಿ ಸದ್ಭಕ್ತಿ ಸದಾಚಾರವನು ? ನುಡಿದಂತೆ ನಡೆವ ನಡೆದಂತೆ ನುಡಿವ ಸದ್ಭಕ್ತಿಸದಾಚಾರಯುಕ್ತ ಮಹಾತ್ಮರ ಪಾದವ ಹಿಡಿದು ಬದುಕಿಸಯ್ಯ ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಯ್ಯ

೬೫ ನಿರ್ವಿಷಯಿಯಾಗಬೇಕೆಂದು ಹೇಳುವರಲ್ಲದೆ, ಆದವರನು ಒಬ್ಬರನು ಕಾಣೆ ನೋಡಯ್ಯ ಆಗುವದೇ ಆಗುವದೇ ಮಾಯಾಂಶಿಕಂಗೆ? ಆಗುವುದು ನಿನ್ನಂಶಿಕಂಗಲ್ಲದ ಇನ್ನಾರಿಗಯ್ಯ ಕಪಿಲಸಿದ್ಧಮಲ್ಲಿನಾಥಾ?

೬೬ ದುಷ್ಕರ್ಮಗಳ ಮಾಡುವವರನಂತರುಂಟು ಸತ್ಕರ್ಮಗಳ ಮಾಡುವವರೊಬ್ಬರು ಇಲ್ಲ ನೋಡಯ್ಯ ದುಷ್ಕರ್ಮವೆಂದರೆ ವಿಷಯವಾಸನೆ ಸತ್ಕರ್ಮವೆಂದರೆ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವ ವಾಸನೆ

೬೭ ಕೃಷಿಯ ಮಾಡಿ ಉಣ್ಣದೆ ಹಸಿವುದಿನ್ನೆಂತೋ, ಇನ್ನೆಂತೋ? ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೋ ? ಜೇಯದ ಅದನವನುಂಬ ದಾವಾವುದು ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗಕ್ಕೆ ?

೬೮ 'ಗೃಹ ಸ್ನಾನಂ ಕನಿಷ್ಠ ಚ ಕೂಪಸ್ನಾನಂತು ಮಧ್ಯಮಂ ಉತ್ತಮಂ ನದೀ ಸ್ನಾನಂ ಸತ್ಯಂ ಪರ್ವತನಂದನೆ' ಎಂಬುದಂತಿರಲಿ ಎಮ್ಮ ಮನಸಿನ ಕಿಲ್ಮಿಷವಳಿದುದೇ ಮಹಾಸ್ನಾನ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೬೯ ಅರವತ್ತೆಂಟು ಸಹಸ್ರ ವಚನಗಳ ಹಾಡಿ ಹಾಡಿ ಸೋತಿತ್ತೆನ್ನ ಮನ ನೋಡಯ್ಯ ! ಹಾಡುವುದೊಂದೇ ವಚನ ನೋಡುವುದೊಂದೇ ವಚನ ವಿಷಯ ಬಿಟ್ಟು ನಿರ್ವಿಷಯಿಯಾಗುವುದೊಂದೇ ವಚನ ಕಪಿಲಸಿದ್ಧಮಲ್ಲೇಶನಲ್ಲಿ

೭೦ ವೇದ ವೇದಾಂತವನೋದಿದರೇನು, ಮನಸೂತಕವಳಿಯದನ್ನಕ್ಕ? ಸಿದ್ಧ ಸಿದ್ಧಾಂತವ ಶ್ರಮಬಟ್ಟರೇನು, ಸಾಧಿಸಿ ಕೀರ್ತಿಯ ಹಡೆಯದನ್ನಕ್ಕ? ಇವೆಲ್ಲ ಹೊರಗಣ ಮಾತು ಮಾತೊಂದೇ ನಮ್ಮ ಕಪಿಲಸಿದ್ಧಮಲ್ಲೇಶನಲ್ಲಿ ಸದಾಚರಣ ಸನ್ಮಾರ್ಗವಯ್ಯ.

೭೧ ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ ಕೂಡಲಸಂಗಮದೇವಾ

೭೨ ಶಿವಾಚಾರವೆಂಬುದೊಂದು ಬಾಳಬಾಯಿ ಧಾರೆ ಲಿಂಗ ಮೆಚ್ಚಬೇಕು. ಜಂಗಮ ಮೆಚ್ಚಬೇಕು ಪ್ರಸಾದ ಮೆಚ್ಚಿ ತನ್ನಲ್ಲಿ ತನ್ನಲ್ಲಿ ಸ್ವಾಯತವಾಗಿರಬೇಕು ಬಿಚ್ಚಿ ಬೇರಾದರೆ, ಮೆಚ್ಚ ನಮ್ಮ ಕೂಡಲ ಸಂಗಮದೇವ.

೭೩. ಕಲಿ ಕರುಳ ತರ್ಕೈಸಿ, ಹರಿಯಬಲ್ಲನಲ್ಲದೆ, ಸಾಯ ಕಾದಿ ಸುವರೇ? ಎಡೆಗೋಲನಿಕ್ಕುವರೇ? ದಾತಾರನಧೀನವಲ್ಲದೆ ಕೂಡಲ ಸಂಗಮದೇವ, ನೀ ಮಾಡಿದಂತಹುದಯ್ಯ ತನು ಮನ ಧನದಲ್ಲಿ ವಂಚನೆಯನು ಬಯಸಿದರಂತಹುದಯ್ಯ?

೭೪ ಮಾಡುವ ಭಕ್ತನ ಕಾಯ ಬಾಳೆಯ ಕಂಭದಂತಿರಬೇಕು. ಮೆಲ್ಲಮೆಲ್ಲನೆ ಹೊರೆ ಎತ್ತಿ ನೋಡಿದಡೆ, ಒಳಗೆ ಕೆಚ್ಚಿಲ್ಲದಿರಬೇಕು ಮೇಲಾದ ಫಲವ ನಮ್ಮವರು ಬೀಜ ಸಹಿತ ನುಂಗಿದರು ಎನಗಿ ನ್ನಾವ ಭವವಿಲ್ಲ ಕೂಡಲಸಂಗಮದೇವಾ

೭೫ ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಮಾಣಿ ಕ್ಯದ ದೀಪ್ತಿಯಂತಿರಬೇಕು ನುಡಿದರೆ ಸ್ಫಟಿಕದ ಶಲಾಕೆಯಂತಿರ ಬೇಕು ನುಡಿದರೆ ಲಿಂಗ ಮೆಚ್ಚಿ ಅಹುದೆನ್ನಬೇಕು ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ?

೭೬ ದೇವಲೋಕ, ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ ಆಚಾರವೇ ಸ್ವರ್ಗ ಅನಾಚಾರವೇ ನರಕ ಕೂಡಲಸಂಗಮದೇವಾ ನೀವೇ ಪ್ರಮಾಣು

೭೭ ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ, ಇದಾರಿಂಗಳ ವಡುವುದಯ್ಯಾ? ನಿಧಾನ ತಪ್ಪಿ ಬಂದರೆ, ಒಲ್ಲೆನೆಂಬವರಿಲ್ಲ ಪ್ರೇಮದ ವಶ ಬಂದರೆ, ಹುಸಿ ಎಂಬುವರಿಲ್ಲ ನಿರಾಶೆ ನಿರ್ಭಯ ಕೂಡಲಸಂಗ ಮದೇವ ನೀನೊಲಿದ ಶರಣಂಗಲ್ಲದಿಲ್ಲ.

೭೮ ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ ವೃಥಾ ಬರುದೊರೆ ಹೋಹ ಕೆಡುಕ ಹಾರುವ ನಾನಲ್ಲ ಹಾರುವೆನಯ್ಯಾ, ಭಕ್ತರ ಬರವ ಗುಡಿಗಟ್ಟಿ ಹಾರುವೆನಯ್ಯಾ, ಶರಣರ ಬರವ ಗುಡಿಗಟ್ಟಿ ಕೂಡಲಸಂಗಮದೇವನು ವಿಪ್ರ ಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ

೭೯ ಆಚಾರ ಸಂಗವೇನೇನ ಮಾಡದಯ್ಯಾ? ಕೇಡಿ ಕುಂಡಲಿಗನಾಗವೇನಯ್ಯಾ? ಚಂದನದ ಸನ್ನಿಧಿಯಲ್ಲಿ ಪರಿಮಳ ತಾಗಿ ಬೇವು ಬೊಬ್ಬಲಿ ತರಿಯು ಗಂಧಂಗಳಾಗವೆ? ನಮ್ಮ ಕೂಡಲಸಂಗನ ಶರಣರ ಸನ್ನಿಧಿಯಿಂದ ಕರ್ಮ ನಿರ್ಮಳವಾಗದಿಹುದೇ ಅಯ್ಯಾ?

## ಕ್ರಿಯೆಗಳಲ್ಲಿ ನಿರ್ಲೇಪನಾಗಿ ಆಚರಿಸುವುದು.

೮೦ ಮಾಡುವಂತಿರಬೇಕು, ಮಾಡದಂತಿರಬೇಕು ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು ಕೂಡಲಸಂಗಮದೇವರ ನೆನೆವುತ್ತ, ನೆನೆವುತ್ತ, ನನೆಯದಂತಿರಬೇಕು

೮೧ ಕಾಯ ಧರಿಸಿದವ ನವನೀತ ರೋಮದಂತಿರಬೇಕು ಮುಕುರದಲ್ಲಿಯ ಪ್ರತಿಬಿಂಬದಂತಿರಬೇಕು ಬೆಟ್ಟದಲ್ಲಿಯ ಕಾಡಗಿಚ್ಚಿನಂತಿರಬೇಕು ಆಷಾಢದಲ್ಲಿಯ ಚಂಡಮಾರುತನಂತಿರಬೇಕು ಸರ್ವರಲ್ಲಿ ಸರ್ವರಂತಾಗಿರಬೇಕು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ

೮೨ ಅವಲೋಹವ ಪರುಷ ಮುಟ್ಟಲು ಸುವರ್ಣವಾಗುತ್ತಿದ ಕಬ್ಬಿಣ ಇದ್ದಲಿಯ ಹಾಕಿ ಅಗ್ನಿಯನಿಕ್ಕಿ ಕಾವುಗೊಳಲಾಗಿ, ಕರಗಿ ನೀರಾಗುತ್ತಿದ ಹಾಲಿಗೆ ನೀರ ಹೊಯ್ದರೆ, ಅದು ಏರುವ ಭೇದವನಾರೂ ಅರಿಯರು ಶರಣರು ತನುವಿಡಿದಿದ್ದರೂ ಇದ್ದವರಲ್ಲ ಅದು ಹೇಗೆಂದರೆ ಹಿಂದಣ ದೃಷ್ಟದ ಪರಿಯಲ್ಲಿ ಲಿಂಗವ ಹಿಡಿದಂಗಕ್ಕೆ ಬೇರೊಂದು ಸಂಗ ಸುಖ ಉಂಟೇ? ಅದು ಕಾರಣ ಸರ್ವಾಂಗ ಲಿಂಗಿಯಾದ ಶರಣನು ಮುಟ್ಟಿದ, ತಟ್ಟಿದ, ಕೇಳಿದ, ನೋಡಿದ, ನುಡಿದ, ಸೋಂಕಿದ

ನೆನ್ನಬೇಡ ಅದು ಕಾರಣ ಕಬ್ಬಿಣ ನೀರುಂಡಂತೆ ಅರ್ಪಿತವ ಬಲ್ಲ ಐಕ್ಯಂಗೆ ಕೈಯೆಲ್ಲ ಬಾಯಿ ಇದರ ಬೇಧವ ನಿಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನೇ ಬಲ್ಲ

೮೩ ಮಹಾಘನ ನೆಲೆಗೊಂಡಿಪ್ಪ ಶರಣನ ನೆಲೆ ಎಂತಿಪ್ಪುದೆಂದರೆ, ನೆಲದ ಮರೆಯ ನಿಧಾನದಂತೆ, ತಿಲದ ಮರೆಯ ತೈಲದಂತೆ, ಮುಗಿಲ ಮರೆಯ ಮಿಂಚಿನಂತೆ, ನೀರೊಳಗಣ ಕಿಚ್ಚಿನಂತೆ, ಕಾಷ್ಠದೊಳಗಣ ಅಗ್ನಿಯಂತೆ, ತೃಣದೊಳಗಡಗಿದ ಚೈತನ್ಯದಂತೆ, ಈ ವಿಶ್ವದೊಳು ಇದ್ದು ಇಲ್ಲದಂತಿಪ್ಪ ಮಹಾಘನವ ನಿಮ್ಮ ಶರಣರು ಬಲ್ಲರಲ್ಲದೆ, ಮರ್ತ್ಯದ ಮರಣ ಬಾಧೆಗೊಳಗಾದ ಮನುಜರೆತ್ತ ಬಲ್ಲರು ಬಸವ ಪ್ರಿಯ ಕೂಡಲ ಚನ್ನಬಸವಣ್ಣ ?

೮೪ ಲಿಂಗವೇ ಅಂಗವಾಗಿಹನೆಂಬವನ ಭಾವ ಇದರಲ್ಲೇ ನಿಶ್ಚಯ ನೋಡಾ. ನಿಂದೆ ಸ್ತುತಿಗಳು ಬಂದಲ್ಲಿ ಹರ್ಷ ರೋಷಗಳಿಲ್ಲದಿರಬೇಕು ನೀಚಾನೀಚ ಗುಣವ ನೋಡದೆ ನಮ್ರ ಭಾಷಾವಂತನಾಗಬೇಕು ಸರ್ವ ಜೀವಿಗಳ ತನ್ನಂತೆ ತಿಳಿದು ನೋಡಬೇಕು ಸಂಶಯಾಸಂಶಯವಳಿದು ನಿಶ್ಚಿಂತನಾಗಬೇಕು ಆಕಾಶದ ಬೆಳಗಿನ ಬೆಳಗು ನೋಡಿ ಬೆಳಗುಮಯನಾಗಬೇಕು ನೋಡಾ, ಎಲೆ ಮನವೇ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ

೮೫ ಹುತ್ತದ ಮೇಲಣ ಸರ್ಪ ಸತ್ತಿತ್ತೆಂದು ಮುಟ್ಟಿ ಬಾಳ್ದ ಮನುಜರುಂಟೇ ? ಒತ್ತಿಗೆ ಬಂದ ವ್ಯಾಘ್ರನನಪ್ಪಿಕೊಂಡ ಮನುಜರುಂಟೇ ? ತತ್ವವ ಬಲ್ಲ ಶರಣರು ಸತ್ತ ಹಾಗೆ ಇದ್ದರೆ, ಇವರು ಕತ್ತೆಯ ಮನುಜರೆಂದು ಮರ್ತ್ಯದವರು ಒತ್ತಿ ನುಡಿದರ, ಅವರೆತ್ತ ಬಲ್ಲರೋ ? ಅವರ ನುಡಿವವರು ಅತ್ತಲೂ ಇಲ್ಲ, ಇತ್ತಲೂ ಇಲ್ಲ, ನೋಡಾ ಬಸವ ಪ್ರಿಯ ಕೂಡಲಚನ್ನಬಸವಣ್ಣ

೮೬ ಜಲದಲ್ಲಿಯ ಚಂದ್ರನ ಚಲನೆ ಜಲದಲ್ಲಿದೆ ನಿಜ ಚಂದ್ರನಲ್ಲಿಲ್ಲವಯ್ಯ ಘಟದಲ್ಲಿಯ ಬಿಂದುಗಳು ಘಟದಲ್ಲಿವೆ ಬಿಂಬದಲ್ಲಿಲ್ಲ ನೋಡಯ್ಯ ಜಲದಲ್ಲಿಯ ಚಲನೆ, ಘಟದಲ್ಲಿಯ ಬಿಂಬ ನಿಜವಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೮೭ ಸುಳಿದೊಡೆ ಒಡಲಿಲ್ಲ, ನಿಂದಡೆ ನೆಲೆಯಿಲ್ಲ ನಡೆವಡೆ ಗಮನವಿಲ್ಲ, ನುಡಿವಡೆ ಶಬ್ದವಿಲ್ಲ ದಗ್ಧಪಟ ನ್ಯಾಯದಂತೆ ಉಂಡಡೆ ಉಪಾಧಿ

ಇಲ್ಲ, ಉಣದಿರ್ದಡೆ ಕಾಂಕ್ಷೆ ಇಲ್ಲ. ಯಥಾ ಲಾಭ ಸಂತುಷ್ಟನಾಗಿ ಸ್ತುತಿ ಇಲ್ಲ ನಿಂದೆ ಇಲ್ಲ ನಂಟರಿಲ್ಲ ಹಗೆ ಇಲ್ಲ ಅರುಹು ಇಲ್ಲ ಮರಹು ಇಲ್ಲ ತಾನೆಂಬ ನೆನಹಿಲ್ಲಾಗಿ. ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು ಲಿಂಗ ಪ್ರಾಣಿಗಳಾಗಿ ಒಡಲ ಮರಗೊಂಡು ಎಂತಿರ್ದೊಡಂ ಎಂತು ನಡೆದೊಡಂ ಅಂತೇ ಸಂದಿರ್ಪ

೮೮ ಹರಣವಿದ್ದು ಹರಣವಿಲ್ಲ, ಹರಣ ಲಿಂಗದಲ್ಲಿ ನಿರಿಯಾಣವಾಯಿತ್ತಾಗಿ. ಮನವಿದ್ದು ಮನವಿಲ್ಲ, ಮನವು ಮಹದಲ್ಲಿ ಲೀಯವನೆಯ್ದಿತ್ತಾಗಿ. ಜೀವವಿದ್ದು ಜೀವವಿಲ್ಲ, ಜೀವ ಸಜ್ಜೀವವಾಯಿತ್ತಾಗಿ. ಭಾವವಿದ್ದು ಭಾವವಿಲ್ಲ, ಭಾವ ನಿರ್ಭಾವವಾಯಿತ್ತಾಗಿ. ಕರಣಂಗಳಿದ್ದು ಕರಣಂಗಳಿಲ್ಲ, ಕರಣಂಗಳಲ್ಲಿ ಕರಣಂಗಳಾಗಿ. ಇಂತು ಸರ್ವವು ಇದ್ದೂ ಸರ್ವವು ಇಲ್ಲದ ಕಾರಣ, ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು

## ತನ್ನ ಕ್ರಿಯೆಗಳನ್ನು ತಾನೇ ಮಾಡುವುದು.

೮೯ ತನ್ನಾಪ್ರಿಯಳ ರತಿಸುಖವನು, ತಾನುಂಬ ಊಟವನು, ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೆ? ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವ ತಾ ಮಾಡಬೇಕಲ್ಲದೆ, ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೆ? ಕಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ?

೯೦ ಆತನ ಸುಖ ದುಃಖವೀತಗೇನು? ಈತನ ಸುಖ ದುಃಖ ವಾತಗೇನು? ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಅರುಹ ಸಂತೈಸಿಕೊಳ್ಳಿ. ರಂಭೆ ಎಂದರ ನಿನ್ನಂಗನೆಯಾಗಲಿಲ್ಲವು. ಒಂದು ದಿನ ಸ್ವಪ್ನದಲ್ಲಾದರೂ ರತಿಸಲಿಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೯೧ ಶೀಲವಂತನಾದರೆ ತಾ ಸವೆದು ಶೀಲವ ಮಾಡಬೇಕಯ್ಯಾ. ತಾನಿರ್ದಡೆಯಲ್ಲಿ ಸುಳಿದು ಮಾಡುವ ಶೀಲ ಕೆಟ್ಟು ಪೂಜಿಸುವ ಕೈ

ಕೂಲಿತನವಿಲ್ಲ ಪೂಜೆಯು ಫಲ ಕೊಡವಾಲ ಕರೆವ ಸುರಭಿಯಂತೆ. ತನ್ನುದರ ನಿಮಿತ್ಯವಿಡಿದು ಶೀಲಬೇಕೆಂಬ ದುಶ್ಶೀಲರ ಮೆಚ್ಚುವನೇ ಸಕಳೇಶ್ವರಾ ?

## ಕ್ರಿಯೆಯಲ್ಲಿ ಪ್ರತಿಫಲವನ್ನಪೇಕ್ಷಿಸಕೂಡದು.

೯೨ ಮಾಡುವ ಭಕ್ತನು ನೀನೇ, ಮಾಡಿಸಿಕೊಂಬ ದೇವನು ನೀನೇ, ಎಂದರಿದೆ ಇದು ಕಾರಣ ಅಖಂಡೇಶ್ವರಾ ನಿಮ್ಮ ಫಲಪದವ ಬೇಡಲಿಲ್ಲ, ನೀವು ಒಲಿದು ಎನಗೆ ಕೊಡಲಿಲ್ಲ.

೯೩ ಕ್ಷೀರಸಾಗರದೊಳಗಿರ್ದ ಹಂಸೆ ಹಾಲ ಬಯಸಲುಂಟೇ ? ಪುಷ್ಪದೊಳಗಿರ್ದ ತುಂಬಿ ಪರಿಮಳವನರಸಲುಂಟೇ ? ಕಡಲೊಳಗಿರ್ದ ಕಪ್ಪೆ ಜಲವ ಬಯಸಲುಂಟೇ ? ಇದೆಂತಯ್ಯ ! ತಾ ಲಿಂಗದೊಳಗಿರ್ದು, ಬೇರೆ ಇತರ ಕಾಮ್ಯದೊಳಗಿರ್ಪ ಭ್ರಾಂತರನೇನೆಂಬೆನಯ್ಯ ಗುಹೇಶ್ವರಾ ?

೯೪ ಮಾಟ ಕೂಟ ಫಲ ಪ್ರಾಪ್ತಿ ಎಂಬ ಮಾತ ಕೇಳಲಾಗದು ಶಿವ ಶಿವಾ, ನಿಮ್ಮ ಭಕ್ತರಿಗೆ ಮಾಡಿದೆನೆನ್ನದಿರೆಂದು ಶ್ರೀಗುರುಲಿಂಗವು ಕೃಪೆ ಮಾಡಿದ ಕಾರಣ, ಅಲ್ಲಿ ಮಾಡುವವನು ಮಾಡಿಸಿಕೊಂಬುವವನು ನೀನೇ ಅಯ್ಯ, ಕೂಡಲಸಂಗಮದೇವಾ.

೯೫ ಮಾಡುವಲ್ಲಿ ಎನ್ನ ನಾನರಿದು ಮಾಡಿದೆನಾದಡೆ, ನೀಡುವಲ್ಲಿ ಎನ್ನ ನಾನರಿದು ನೀಡಿದನಾದಡೆ, ನೀಡುವಲ್ಲಿ ರುಚಿಗೆ ಮನವೆಳಸಿ ಹಾರೈಸಿದನಾದಡೆ, ನಿಮಗಂದೇ ದ್ರೋಹವಯ್ಯ ಮಾಡುವಲ್ಲಿ, ನೀಡುವಲ್ಲಿ, ಶುದ್ಧನಲ್ಲದಿರ್ದಡೆ, ನೀನಂದೇ ಮೂಗ ಕೊಯ್ಯಿ, ಕೂಡಲಸಂಗಮದೇವಾ

೯೬ ಮಾಡಿದೆನೆಂಬುದು ಮನದಲ್ಲಿ ಹೊಳೆದರೆ, ಏಡಿಸಿ ಕಾಡಿತ್ತು ಶಿವನ ಡಂಗುರ ಮಾಡಿದೆನೆನ್ನದಿರಾ ಲಿಂಗಕ್ಕೆ ಮಾಡಿದನೆಂಬುದು ಮನದಲ್ಲಿ ಇಲ್ಲದಿರ್ದಡೆ, ಬೇಡಿದ್ದನೀವ ನಮ್ಮ ಕೂಡಲಸಂಗಮದೇವಾ

೯೭ ಅನ್ನವನಿಕ್ಕಿ, ನನ್ನಿಯ ನುಡಿದು, ಅರವಟಿಗೆಯನಿಕ್ಕಿ, ಕೆರೆಯ ಕಟ್ಟಿಸಿದಡೆ, ಮರಣದಿಂದ ಮೇಲೆ ಸ್ವರ್ಗ ಉಂಟಲ್ಲದೆ, ಶಿವನ ನಿಜವು ಸಾಧ್ಯವಾಗದು ಗುಹೇಶ್ವರನರಿದ ಶರಣಂಗೆ ಆವ ಫಲವೂ ಇಲ್ಲ

೯೮ ಅಷ್ಟವಿಧಾರ್ಚನೆ, ಷೋಡಶೋಪಚಾರ, ಅಂದಂದಿನ ಕೃತ್ಯ ಅಂದಂದಿಗೆ ಮಾಡಿ ನಾನು ಶುದ್ಧನಯ್ಯ, ಹಂಗು ಹರಿ ಇಲ್ಲದ ಕಾರಣ ಕೂಡಲಸಂಗಮದೇವಾ, ನೀಫಲದಾಯಕನಾಗಿ ನಾನು ಮಾಡಿ ಶುದ್ಧನಯ್ಯ

೯೯ ಮಾಡಿ, ನೀಡಿ, ಹೋಹೆನೆಂಬಾಗ, ಕೈಲಾಸವೇನು ಕೈಕೂಲಿಯೇ? ಮುಂದೊಂದು ಕಲ್ಪಿಸದೆ, ಹಿಂದೊಂದು ಭಾವಿಸದೆ, ಸಲೆ ಸಂದಿದ್ದಾಗಳೇ, ಮಾರಯ್ಯಪ್ರಿಯ ಅಮುಳೇಶ್ವರ ಲಿಂಗವಿದ್ದ ಕೈಲಾಸ

೧೦೦ ಲೋಕ ತನ್ನೊಳಗಾದ ಬಳಿಕ ಲೋಕದ ಸೊಮ್ಮು ತನಗೇಕಯ್ಯ? ಪರುಷ ತಾನಾದ ಬಳಿಕ ಸುವರ್ಣದ ಸೊಮ್ಮು ತನಗೇಕಯ್ಯ? ಧೇನು ತಾನಾದ ಬಳಿಕ ಗೋಪಿನ ಸೊಮ್ಮು ತನಗೇಕಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನಾ?

೧೦೧ ಕರ್ತೃಭೃತರಾಗಿ ಮಾಡುವ ಮಾಟದಲ್ಲಿ ವಿಚಾರವುಂಟು ಅದೆಂತೆಂದೊಡೆ ಸಂಸಾರದಿ ಫಸವುಳ್ಳೊಡೆ ಜಂಗಮಲಿಂಗವಹುದು ಅದಕ್ಕೆ ಮಾಡಿದಲ್ಲಿ ಫಲಪದವುಂಟು ಆ ಫಲಪದವುಂಟಾದಲ್ಲಿ ಭವವುಂಟು ಫಲಪದವಿಲ್ಲದಲ್ಲಿ ಭವವಿಲ್ಲ ಮನದಂತೆ ಮಂಗಳವೆಂಬ ಸಟೆಯ ದಿಟಮಾಡಿ ಈ ಉಭಯದೊಳಗೆ ಆವುದು ಪ್ರಿಯವಾಗಿ ಮಾಡುವರು ಆ ಭಾಗಿಹರಯ್ಯ ಕೂಡಲಚನ್ನಸಂಗಮದೇವಾ

೧೦೨ ಗತಿ ಪದ ಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ ಗತಿ ಪದ ಮುಕ್ತಿಗೆ ವಿರಹಿತ ಭಕ್ತ ಹಮ್ಮು ಬಿಮ್ಮುಗಮನ ನಿರ್ಗಮನ ಸೂತಕ ವಿರಹಿತ ಜಂಗಮ ಮಾಡುವರೆ ಭಕ್ತ ಮಾಟದೊಳಗಿಲ್ಲದಿರಬೇಕು ಮಾಡಿಸಿಕೊಂಬುವದರೊಳಗಿಲ್ಲದಿರಬೇಕು ಜಂಗಮ ಪ್ರಾಣವಿಲ್ಲದ ಭಕ್ತ ಜಂಗಮದ ನುಡಿ ಗಡಣದ ಮೇಳಾಪದಂತಿರಬೇಕಯ್ಯಾ ಎಂದೊಡೆ ಪ್ರಚ್ಛನ್ನವಾಗಿ ಲೋಕಕ್ಕೆ ತೋರಿ ಲೋಕಕ್ಕೆ ಅದೃಶ್ಯನಾಗಿರಬೇಕು ಜಲಚರಾದಿಗಳ ಪದದಂತೆ, ಶಿಸು ಕಂಡ ಕನಸಿನಂತೆ, ಮೊಲೆಯುಂಡ ರುಚಿಯಂತೆ, ಆಚಾರಸಂಪನ್ನನಾದವನಿಗಿದು ಚಿಹ್ನವು

ಇಂತಲ್ಲದೆ ಹಗರಣದ ಓಗರ ಹಳಸಿದಂತೆ, ಕುಹಕನ ವಾದ್ಯದಂತೆ, ನ
ಗೆಡೆಯಾಗುತ್ತೈದಾರೆ ಆ ಭಕ್ತಜಂಗಮದ ಘನವನುಪಮಿಸಬಾರದಯ
ಕೂಡಲಚನ್ನಸಂಗಮದೇವಾ.

೧೦೩ ಅನ್ನವನಿಕ್ಕಿದೊಡೇನು ? ಪುಣ್ಯವಹುದು ವಸ್ತ್ರವ ಕೊಟ
ಡೇನು ? ಪುಣ್ಯವಹುದು ಹಣವ ಕೊಟ್ಟಡೇನು ? ಪುಣ್ಯವಹುದು
ಆಯಾಯ ಫಲಪದದ ಸಿರಿ ಸಂಪತ್ತು ಅಹುದಯ್ಯ ಕೂಡಲಚನ್ನಸ
ಗಮದೇವಾ

೧೦೪ ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕ
ಹಂಗಿಂಗೆ ಶರಣಾರ್ಥಿ ಎಂಬೆನಯ್ಯ ಒಕ್ಕುದ ಕೊಂಬ ಹಂಗಿಂಗೆ ಎ
ಯಾಟ ಕಡ ಬಡ್ಡಿಯ ಕೊಟ್ಟು ಕೆಟ್ಟಿತ್ತು ನೋಡಾ ಭಕ್ತಿ ಕೂಡಲಸ
ಗನ ಶರಣರ ನಿಲವನರಿಯದ ಮುಯ್ಯಿಗೆ ಮುಯ್ಯಾಗಿ ಕಟ್ಟಿತ್ತಯ
ಎನ್ನ ಭಕ್ತಿ

೧೦೫ ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು ಮರ್ಮವನ
ಯದ ಮಾಟ ಸುಯಿಧಾನದ ಕೇಡು ಬಂದ ಸಮಯೋಚಿತವನರಿ
ದಿದ್ದರೆ, ನಿಂದಿರಲೊಲ್ಲ ಕೂಡಲಸಂಗಮದೇವ

## ಪರಮಾತ್ಮನಿಗೋಸ್ಕರ ಮಾಡುವುದು.

೧೦೬ ಲಿಂಗಕ್ಕೆಂದೇ ನೆನೆವೆ ಲಿಂಗಕ್ಕೆಂದೇ ಮಾಡುವೆ ಲಿಂ
ಕ್ಕೆಂದೇ ಕೂಡುವೆನು ನಾನಯ್ಯ ಸಕಲ ಪದಾರ್ಥಂಗಳ ಲಿಂಗಕ್ಕೇ
ಭಾವಿಸುವೆ ಅಂಗಗುಣಂಗಳನರಿಯೆನಯ್ಯ ಲಿಂಗಕ್ಕೆಂದೇ ಕಾಮಿ
ವೆನು ನಿಃಕಾಮಿಯಾಗಿ ಎನ್ನ ದೇಹೇಂದ್ರಿಯಮನಪ್ರಾಣಾದಿಗಳು ಲಿಂಗ
ಸತಿಯರಾಗಿ ಲಿಂಗಕ್ಕೆಂದೇ ಬಯಸಿ ಲಿಂಗಪ್ರಾಣಿಗಳಾದ ಕಾರಣ ಲಿಂ
ಕ್ಕೆಂದೇ ಕೈಕೊಂಬೆನು ಅನರ್ಪಿತವನರಿಯ ಕೂಡಲಸಂಗಮದೇವ

೧೦೭ ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ ಎನ್ನೊಡಲಿಂಗೆ ಎ
ಮಡದಿಮಕ್ಕಳಿಗೆಂದು ಕುದಿವೆನಾದಡೆ ಎನ್ನ ಮನಕ್ಕೆ ಮನವೇ ಸಾ

ಶ್ಲೋ॥ ಅಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ। ಸಂಚ
ರಂತಿ ಮಹಾ ಘೋರೇ ನರಕೇ ಕಾಲಮಕ್ಷಯಂ॥ ಎಂದುದಾಗಿ ಈ
ಶ್ರುತಿಯ ಬಸವಣ್ಣನೋದುವನು ಭವಿಯ ಬಿಜ್ಜಳನ ಗದ್ದುಗೆಯ ಕೆಳಗೆ
ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು ಕೊಡುವೆನುತ್ತ
ರವನವರಿಗೆ ಕೊಡಲಮ್ಮೆನು ಹೊಲೆಹೊಲೆಯರ ಮನೆಯ ಹೊಕ್ಕಾ
ದರೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ನಿಲವಿಂಗೆ ಕುದಿ
ವೆನಲ್ಲದೆ ಎನ್ನೊಡಲವಸರಕ್ಕೆ ಕುದಿವೆನಾದಡೆ ತಲೆದಂಡ ತಲೆದಂಡ
ಕೂಡಲಸಂಗಮದೇವಯ್ಯ

೧೦೮ ಹಲವು ಕೊಂಬೆಗೆ ಹಾಯಲು ಬೇಡ ಬರು ಕಾಯಕೆ
ನೋಡಲುಬೇಡ ಲೋಗರಿಗೆ ಕೊಟ್ಟು, ಭ್ರಮಿತನಾಗಬೇಡ ಆಚಾರ
ವೆಂಬುದು ಹಾವಸೆಗಲ್ಲು ಭಾವ ತಪ್ಪಿದ ಬಳಿಕ ಏಗೈದಡಾಗದು ಅಂಜ
ದಿರು ಅಳುಕದಿರು, ಪರದೈವಕ್ಕೆರಗದಿರು ಕೂಡಲಸಂಗನ ಕೈಯ್ಯಲು
ಇರಿಸುವುದೆನ್ನ ಭಾರ

೧೦೯ ಕರ್ಮವೆಂಬ ಅಂಕದೊಡನೆ ತೊಡರಿದೆ ಬಿನ್ನಪವ ಅವ
ಧಾರು ನಿರ್ಮಾಳಿನ ಭಾಷೆಯ ಕಡೆಗಳಕ್ಕೆ ನೂಂಕುವೆ ಕೆಡಹುವೆ
ನಂಕವ ಕರೆದಡೋಸರಿಸಿದರೆ ನಿರ್ಮಾಳಲ್ಲ ಶಿವಶರಣೆಂಬ ದಂಡೆಯ
ಹಿಡಿ ಗಣಮೇಳಾಪವೆಂಬ ಅಲಗಿನಿಂದಿರಿವೆ ಕೂಡಲಸಂಗಮದೇವ

೧೧೦ ಕಾಯವೆಂಬ ಘಟಕ್ಕೆ ಚೈತನ್ಯವೇ ಸುಯಿಧಾನ ಸಮತೆ
ಎಂಬ ಜಲ ಕರಣಾದಿಗಳೇ ದ್ರವಣ ಜ್ಞಾನಿಯೆಂಬ ಅಗ್ನಿಯನಿಕ್ಕಿ,
ಮತಿ ಎಂಬ ಸಟ್ಟುಗದಲ್ಲಿ ಘಟ್ಟಿಸಿ, ಪಾಕಕ್ಕೆ ತಂದು, ಭಾವದಲ್ಲಿ ಕುಳ್ಳಿ
ರಿಸಿ, ಪರಿಣಾಮದೋಗರವ ನೀಡಿದರೆ, ಕೂಡಲಸಂಗಮದೇವಂಗಾರೋ
ಗಣೆಯಾಯಿತ್ತು

೧೧೧ ನಡೆ ಚನ್ನ, ನುಡಿ ಚನ್ನ, ಎಲ್ಲಿ ನೋಡಿದಡೆ ಚನ್ನ,
ಪ್ರಮಥರೊಳಗೆ ಚನ್ನ, ಪುರಾತರೊಳಗೆ ಚನ್ನ ಸವಿದು ನೋಡಿ
ಅಂಬಲಿ ರುಚಿಯಾಯಿತ್ತೆಂದು ಕೂಡಲಸಂಗಮದೇವಂಗೆ ಬೇಕೆಂದು
ಕೈವೆಗೆವ ನಮ್ಮ ಚನ್ನ

೧೧೨ ಈ ಸತ್ಕ್ರಿಯೆಗೆ ಈ ಫಲ, ಈ ಪುಷ್ಪಕ್ಕೀಫಲ, ಎಂಬ
ಕೈಕೂಲಿಕಾರರು ಅವರೆಲ್ಲ ಕರ್ಮಿಗಳಯ್ಯ ಪುಣ್ಯ ಪಾಪವನೆಂಬ ಕರ್ಮ

ಗಳಯ್ಯ ಸ್ವರ್ಗ ನರಕವನುಂಬ ಕರ್ಮಿಗಳಯ್ಯ ಒಡಲೊಡವೆ ಪಡೆದರ್ಥ ಮೃಡದೇವ ಸೊಡ್ಡಳನಿಗೆಂಬಾತ ಬೆಡಗಿನ ಶಿವಪುತ್ರ ಉಳಿದವರೆಲ್ಲ ಜಗದ ಮಿತ್ರರು

## ಸಕಲ ಪ್ರಾಣಿಗಳಿಗೋಸ್ಕರ ಮಾಡುವುದು.

೧೧೩ ಸಕಲ ಪ್ರಾಣಿಗಳಿಗೆ ಲೇಸಾಗಲೆಂದು ಮಜ್ಜನಕ್ಕೆರೆವ ಲಾಂಛನ ಧಾರಿಗಳ ವೇಷಕ್ಕೆ ಶರಣೆಂಬೆನಯ್ಯಾ ಆ ಲಾಂಛನದ ಹೆಚ್ಚು ಕುಂದನರಸದೆ ಸಕಲ ಪದಾರ್ಥವನು ಗುರುಲಿಂಗ ಜಂಗಮಕ್ಕೆ ಒಪ್ಪಿಸಿ ಸಕಲ ಕೃತ್ಯಂಗಳಿಂದ ನಿಮಗೋಸುಗ ತಹೆನು ದಯದಿಂದೆ ಮನೆಗೆ ಬಂದಂತೆ ಭಯಭಕ್ತಿಯಿಂದ ಪರಿಣಾಮಿಸಿ ಅವರಿಚ್ಛೆಯನೀವೆನು, ಆತ ನಿರ್ದಲ್ಲಿಗೆ ಹೋಗಿ ಕೂಡಲಚನ್ನಸಂಗಯ್ಯನಲ್ಲಿ ನಾನು ಇಲ್ಲ ನೀನು ಇಲ್ಲ ನಾನಿಲ್ಲದ ಮುನ್ನ ನೀನಿರ್ದುದಿಲ್ಲವಯ್ಯಾ

೧೧೪ ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ, ಮತ್ತಾರ ಹಿತಕ್ಕಲ್ಲ ನೋಡಯ್ಯ! ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ ಮತ್ತಾರ ಹಿತಕ್ಕಲ್ಲ ನೋಡಯ್ಯ! ತನ್ನ ಬಿಟ್ಟನ್ಯ ಹಿತವ ನೋಡಿದರೆ ಕೂಡಿಕೊಂಬ ನಮ್ಮ ಕಪಿಲಸಿದ್ಧಮಲ್ಲಯ್ಯ

೧೧೫ ಮಾಡಿದವನ ಹೆಸರು ಮಣ್ಣಿನಲ್ಲಿ ಮಣ್ಣು ಮಾಡಿದವನ ಹೆಸರು ಮೂಲೋಕದಲ್ಲಿ ಮಾಡಿದೆನೆಂಬುದು ಮನವ ಗುಣ ಮಾಡಿದವನ ವನಿಗೆಂಬುದು ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವ ಗುಣ

೧೧೬ ಭಕ್ತರಲ್ಲದವರನಾಸೆಗೈದರೆ ಕಕ್ಕುಲಿತೆಯಲ್ಲದೆ ಕಾರ್ಯವಿಲ್ಲ ಆಸೆಗೈದರೆ ಆಸೆಗೈವುದು ಭಕ್ತರನು ಆಸೆಗೈದು ಬಂದ ಶಿವಂಗೆ ಸುತನ ಕೊಟ್ಟರು, ಧನವ ಕೊಟ್ಟರು, ಮನವ ಕೊಟ್ಟರು, ಅಸುವ ಕೊಟ್ಟರು ಶರಣನ ಸರಿ ಆವ ಲೋಕದೊಳಗೂ ಇಲ್ಲ ಶರಣಭರಿತ ಲಿಂಗವಾಗಿ ಬೇಡಿದ್ದ ಕೊಡುವರಯ್ಯ ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ

# ಪರಮಾತ್ಮನನ್ನು ಧ್ಯಾನಿಸುವುದು.

೧೧೭ ವಚನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ಮೂರುತಿ ತುಂಬಿ ಮನದಲ್ಲಿ ನಿಮ್ಮ ನೆನಹು ತುಂಬಿ ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ ಕೂಡಲಸಂಗಮದೇವಾ ನಿಮ್ಮ ಚರಣ ಕಮಲದೊಳು ಸೊಗದ ಬಂಡನುಂಬ ತುಂಬಿಯಾಗಿರ್ದೆನು

೧೧೮ ಹೊರ ಕಣ್ಣು ಮುಚ್ಚಿ ಒಳ ಕಣ್ಣು ತೆರೆದು ಮನದೊಡೆಯ ಬಂದಾನೆಂದು ಕಿವಿಯೊಡ್ಡಿ ಕೇಳುತ್ತಿರ್ದೆನಯ್ಯ ಅವತ್ತಣಿಂದ ಬಂದು ನಿಜ ರೂಪು ಸುಳಿಯಿತ್ತೆಂದರಿಯೆ. ಪರಮನ ಪ್ರತಿಬಿಂಬ ಹೊಳೆದೊಡೆ ಕಣ್ಣು ತುಂಬ ಕಂಡು, ಕರ ತುಂಬ ಹಿಡಿದು, ಮನ ಮುಟ್ಟಿ ನೆರೆವನು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ

೧೧೯ ನಿಮ್ಮ ನೋಟವನಂತ ಸುಖ ಕೂಟ ಪರಮ ಸುಖವಯ್ಯ ಅಷ್ಟಕೋಟಿ ರೋಮಂಗಳಾಗಿ ಕಂಗಳಾಗಿ ನೋಡುತ್ತಿದ್ದೆನು. ಕೂಡಲಸಂಗವ ದೇವ, ನಿಮ್ಮ ನೋಡಿ ಮನದಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಂಗಳು

೧೨೦ ಕಾಯಸಂಗ ನಿಸ್ಸಂಗವಾಗಿ, ಇನ್ನಾವ ಸಂಗವನರಿಯೆನಯ್ಯ ಮಿಗೆ ಒಲಿದನಾಗಿ ಅಗಲಲಾರೆನಯ್ಯ ನಗೆಮೊಗದರಸಾ ಅವಧಾರು ಕೂಡಲಸಂಗಮದೇವಾ ಬಗಿದು ಹೋಗುವೆನು ನಾ ನಿಮ್ಮ ಮನವ

೧೨೧ ಜಗವ ಸುತ್ತಿಪ್ಪುದು ಮಾಯೆಯಯ್ಯ ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ ಜಗಕ್ಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು ಕಂಡಯ್ಯ ಜಗವು ನಿನ್ನೊಳಗೆ, ನೀನು ಎನ್ನೊಳಗೆ ಕರಿಯು ಕನ್ನಡಿಯೊಳಗೆ ಅಡಗಿದಂತೆ ನೀನೆನ್ನೊಳಗಡಗಿದೆ ಕೂಡಲಸಂಗಮದೇವಾ

೧೨೨. ಸುಚಿತ್ತದಿಂದ ನಿಮ್ಮ ನೆನೆಯಲೊಲ್ಲದೆನ್ನ ಮನ ಎಂತಯ್ಯ? ಎನಗಿನ್ನಾವುದು ಗತಿ ಎಂತಯ್ಯ? ಎನಗಿನ್ನಾವುದು ಮತಿ ಎಂತಯ್ಯ? ಹರಹರಾ ಕೂಡಲಸಂಗಮದೇವಾ, ಮನವ ಸಂತೈಸೆನ್ನ

## ಧ್ಯಾನಕ್ರಿಯೆಗಳೆರಡೂ ಇರುವದು ಅವಶ್ಯವು.

೧೨೩ ದೇವರ ನೆನೆದು ಮುಕ್ತರಾದೆವೆಂಬ ಯುಕ್ತಿ ಶೂನ್ಯ ಮಾತ ಕೇಳಲಾಗದು ಅದೇನು ಕಾರಣವೆಂದರೆ, ದೇವರ ನೆನೆದರೆ ದೇವರುಂಟೇ ದೂರ? ದೂರದಲ್ಲಿದ್ದವರ ನೆನೆವರಲ್ಲದೆ ಸಮೀಪದಲ್ಲಿದ್ದ ವರನಾರೂ ನೆನೆವರಿಲ್ಲ ಇದನರಿದು, ನಿನ್ನೊಳಡಗಿ, ನಾ ನಿನ್ನ ನೆನೆಯ ಲಿಲ್ಲ ನನ್ನೊಳಡಗಿ ನೀನೆನಗೆ ಮುಕ್ತಿಯನೀಯಲಿಲ್ಲ ಇದುಕಾರಣ ನಾ ನಿನ್ನ ನೆನೆಯಲಿಲ್ಲ, ಮಹಾಲಿಂಗ ಗಜೇಶ್ವರಾ

೧೨೪. ಕೆಂಚ ಕರಿಕನ ನೆನೆದರೆ, ಕೆಂಚ ಕರಿಕನಾಗಬಲ್ಲನೇ? ಕರಿಕ ಕೇಂಚನ ನೆನೆದರೆ, ಕೆಂಚನಾಗಬಲ್ಲನೇ? ದರಿದ್ರನು ಸಿರಿವಂ ತನ ನೆನೆದರೆ ಸಿರಿವಂತನಾಗಬಲ್ಲನೇ? ಸಿರಿವಂತ ದರಿದ್ರನ ನೆನದರ ದರಿದ್ರನಾಗಬಲ್ಲನೆ? ಮುಂದಿನ ಪುರಾತನರ ನೆನೆದು ಧನ್ಯನಾದೆನೆಂಬ ಮಾತಿನ ರಂಜಕರನೇನೆಂಬೆ ಕೂಡಲಸಂಗಮದೇವಾ?

೧೨೫ ಬೀಜದೊಳಗಿಹ ವೃಕ್ಷ ಫಲವ ಸವಿಯಬಹುದೇ? ಮಳ ವನಿಯೊಳಿಪ್ಪ ಹುರಮುಂಜಿ ಮುತ್ತುಗಳಂ ಸರಗೊಳಿಸಿ, ಕೊರಳೊಳ ಧರಿಸಬಹುದೇ? ಹಾಲೊಳಗಿರ್ಪ ತುಪ್ಪವು ಅರಸಿದರೆ, ಸಿಕ್ಕುವುದೇ? ಕಬ್ಬಿನೊಳಗಿರ್ಪ ಬೆಲ್ಲವು ಕಣ್ಣಿಗೆ ಕಾಣಿಸುವುದೇ? ತನ್ನೊಳಗಿರ್ಪ ಶಿವ ತತ್ವವು ನೆನೆದಾಕ್ಷಣವೆ ಅನುಭವಕ್ಕೆ ಬರ್ಪುದೇ? ಭಾವಿಸಿ ತಿಳಿದ ಮಥಿಸಿ ಪ್ರಯೋಗಾಂತರದಿಂ ಪ್ರಸನ್ನತ್ವವಂ ಮಾಡಿಕೊಂಡು ತದನ ಭವ ಸುಖದೊಳೋಲಾಡುವದು ಅತಿ ಚತುರನಾದ ಶಿವಶರಣಂಗಲ್ಲದೆ ಉಳಿದರ್ಗುಂಟೇ, ಮಹಾಘನ ದೊಡ್ಡ ದೇಶಿಕಾರ್ಯ ಗುರುಪ್ರಭುವೇ?

೧೨೬ ಶಿವನ ನೆನೆವಡೆ, ಭವ ಹರಿವುದೆಂಬ ವಿವರಗೇಡಿಗಳ ಮಾತ ಕೇಳಲಾಗದು. ಅದೇನು ಕಾರಣವೆಂದಡೆ ಜ್ಯೋತಿಯ ನೆನೆವರೆ, ಕತ್ತಲೆ ಹರಿವುದೇ? ಮೃಷ್ಟಾನ್ನವ ನೆನೆದರೆ, ಹೊಟ್ಟೆ ತುಂಬುವುದೇ? ರಂಭೆಯ ನೆನೆವರೆ, ಕಾಮದ ಕಳವಳ ಹಿಂಗುವುದೇ? ನೆನೆದಡಾಗದು ನಿರ್ಧ ರಿಸಿ ದ್ವಯ ಕುಳವಳಿದು ಬೆರೆಯಬಲ್ಲಡೆ, ಸದ್ಗುರುಸಿದ್ಧ ಸೋಮೇಶ್ವರ ಲಿಂಗವು ತಾನೆ

೧೨೭ ಅಂತರಂಗದಲ್ಲಿ ಅರಿವಾದಡೇನಯ್ಯ, ಬಹಿರಂಗದಲ್ಲಿ ಕ್ರಿಯೆ ಇಲ್ಲದನ್ನಕ್ಕ? ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯ ಉಂಟೇ? ಕನ್ನಡಿ ಇಲ್ಲದಿರ್ದಡೆ ತನ್ನ ಮುಖವ ಕಾಣಬಹುದೇ? ಸಾಕಾರ ನಿರಾಕಾರ ಏಕೋ ದೇವ ನಮ್ಮ ಕೂಡಲಸಂಗಯ್ಯ.

೧೨೮ ಕ್ರಿಯೆ ಇಲ್ಲದ ಭಕ್ತ ಮನುಜ ಕ್ರಿಯೆ ಇಲ್ಲದ ಜಂಗಮ ರಾಕ್ಷಸ ಕ್ರಿಯೆ ಇಲ್ಲದ ಪ್ರಸಾದಿ ಯವನ ಕ್ರಿಯೆ ಇಲ್ಲದ ಶರಣ ಅಜ್ಞಾನಿ ಕ್ರಿಯೆ ಇಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ ಕೂಡಲ ಚನ್ನಸಂಗಮದೇವಾ

೧೨೯ ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ? ಕ್ರಿಯಾ ಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ? ಕ್ರಿಯಾ ಮಥನವಿಲ್ಲದ ಕಾಣಬಂದುದೇ ಕ್ಷೀರದೊಳಗಣ ತುಪ್ಪ? ಕ್ರಿಯಾ ಮಥನವಿಲ್ಲದ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ? ಇದು ಕಾರಣ ನಮ್ಮ ಗುಹೇಶ್ವರ ಲಿಂಗವ ತನ್ನೊಳರಿದನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣಿ ಭೋ

೧೩೦ ಭೂಪ ಗೋಪನ ನೆನೆವರೆ ಗೋಪನಾಗಬಲ್ಲನೇ? ಅಂದಿನ ಗಣಂಗಳ ಕಂಡು ಇಂದಿನ ಜೀವಿಗಳು ನೆನೆನೆನೆದು ಧನ್ಯರಾದೆವೆಂಬ ಪರಿಯ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

## ಪರಮಾತ್ಮನಲ್ಲಿ ವಿಶ್ವಾಸವನ್ನಿಟ್ಟು ಮಾಡುವುದು.

೧೩೧ ಎಲವೋ, ಎಲವೋ, ಪಾಪಕರ್ಮವ ಮಾಡಿದವನೇ, ಎಲವೋ, ಎಲವೋ, ಬ್ರಹ್ಮಹತ್ಯವ ಮಾಡಿದವನೇ, ಒಮ್ಮೆ ಶರಣೆನ್ನೆಲವೋ. ಒಮ್ಮೆ ಶರಣೆಂದಡೆ, ಪಾಪಕರ್ಮ ಓಡುವವು ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೇ ಇಪ್ಪವು ಓರ್ವಂಗೆ ಶರಣೆನ್ನು ನಮ್ಮ ಕೂಡಲಸಂಗಮದೇವಂಗೆ

೧೩೨ ಶಿವಭಕ್ತಿ ಎಂಬುದು ಯುಕ್ತಿಯ ಪರಿಯಂತಲ್ಲ ಮೂಗರು ಕಂಡ ಕನಸಿನಂತಿಪ್ಪುದು ಕಾಣಿರೋ ಹೇಳಿ ಕೇಳಿ ಮಾಡುವುದು ಯುಕ್ತಿ

ಭಕ್ತಿ ಸಾಧಕನಿಂದ ಮಾಡುವುದು ಅಭ್ಯಾಸ ಭಕ್ತಿ ಮನ ಕೂರ್ತು ಮಾಡುವುದು ಮುಕ್ತಿ ಭಕ್ತಿ ಕೇಡಿಲ್ಲದೆ ಮಾಡುವುದು ನಿತ್ಯಭಕ್ತಿ ಇದ್ದಂತಿದ್ದು ನಿಜವಪ್ಪುದು ನಿಜಭಕ್ತಿ ಈ ನಿಜಭಕ್ತಿಯಲ್ಲಿ ಭರಿತರು ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು

೧೩೩. ನಂಬಿ ಕರೆದಡೆ, 'ಓ' ಎಂಬ ಶಿವನು ನಂಬದೆ ಕರೆದಡೆ 'ಓ' ಎಂಬನೇ ಶಿವನು ? ನಂಬಲರಿಯರು, ನಚ್ಚಲರಿಯರು, ಡಂಭಿನ ಭಕ್ತರು ನಂಬದೆ ನಚ್ಚದೆ ಕರೆದಡೆ ಶಂಭು ಮೌನದಲ್ಲಿಪ್ಪ ಕೂಡಲಸಂಗಮದೇವ.

೧೩೪ ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ, ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ ಚಿತ್ರದ ರಬ್ಬು ಕಾಣಿರಣ್ಣಾ ಅಪ್ಪಿದರೆ ಸುಖವಿಲ್ಲ ಮೆಲಿದರೆ ಸವಿ ಇಲ್ಲ. ಕೂಡಲಸಂಗಮದೇವ ನಿಜವಿಲ್ಲದವನ ಭಕ್ತಿ.

೧೩೫ ಪರಮ ಪ್ರಭುವೇ ನೀ ಮುನಿದೆನ್ನ ಮರ್ತ್ಯಲೋಕದೊಳಗಿರಿಸಿದರೆ ಆನು ಸೈರಿಸಿದೆನಯ್ಯಾ ಕುಲಮದ ಛಲಮದವಿದೇನಯ್ಯಾ ? ದರುಶನ ಭ್ರಾಂತಿ ಇದೇನಯ್ಯಾ ? ಕ್ರಿಯಾ ಕರ್ಮ ಸೂತಕವಿದೇನಯ್ಯಾ ? ಲಿಂಗಯ್ಯ ನಿಮ್ಮ ನಂಬಿದೆನಯ್ಯಾ ಇನ್ನು ಕಲಿಯುಗದಲ್ಲಿ ಬಳಸಿದರೆ ಕೂಡಲಸಂಗಮದೇವಾ ನಿಮ್ಮ ರಾಣಿವಾಸದಾಣೆ.

೧೩೬ ಕೆರೆಯೊಡೆದಬಳಿಕ ತುಂಬು ತಡೆಯಬಲ್ಲುದೇ ? ಒಡೆದ ಮಡಕಿಗೆ ಒತ್ತು ಮಣ್ಣ ಕೊಟ್ಟರೆ ನಿಲ್ಲಬಲ್ಲುದೇ ? ಮುತ್ತೊಡೆದರೆ ಹತ್ತಬಲ್ಲುದೇ ? ಸುರಚಾಪ ನಿರ್ಧರವಾಗಬಲ್ಲುದೇ ? ಚಿತ್ತು ಒಡೆದರೆ ಭಕ್ತಿ ನೆಲೆಗೊಳ್ಳದು ಭಕ್ತಿ ಬೇಸರವಾದರೆ ಮುಕ್ತಿ ಎಂಬುದು ಎಂದೆಂದಿಗೂ ಇಲ್ಲವಾಗಿ ಇದುಕಾರಣ ಎನ್ನ ಚಿತ್ತ ಗುಹೇಶ್ವರಲಿಂಗವನಪ್ಪಿ ಉಭಯವಾಗದೆ ಭಕ್ತಿ ಬೇಸರವಿಲ್ಲದೆ ಎನ್ನಿದಿರೊಳಗಿರುವ ಸಂಗನಬಸವಣ್ಣನ ನಿಜ ಚಿದ್ಬೆಳಗಿನೊಳಗೆ ಕೂಡಿ ನಿಲವು ನೆಳಲ ಕೂಡಿ ಬಯಲ ಸೇರಿದಂತೆ ನಿತ್ಯನಿರ್ಮುಕ್ತನಾದೆನಲ್ಲದೆ ಎಲ್ಲರ ಪರಿಯಂತಲ್ಲ. ಎನ್ನ ಪರಿ ಬೇರೆ ನೋಡಾ ಸಂಗನಬಸವಣ್ಣ

೧೩೭. ಸರ್ಪನ ಸಂಯೋಗ, ಜ್ಯೋತಿಯ ಪತಂಗನ ಬೆಸನದಂತೆ, ಮನದ ಮದವರಿಯದೆ, ನಿಮ್ಮ ಕೃಪೆಯಿಂದ ನಿನ್ನ ನೆನೆವೆ ಎನ್ನ

ಛಾವದ ಕೊನೆಯು ಮೊನೆಯುಮೇಲೆ ಮನೆಯು ಮಾಡಿಕೊಂಡಿಪ್ಪೆಯಯ್ಯ,
ಕೂಡಲಸಂಗಮದೇವ ನೀನೆನ್ನ ಪ್ರಾಣನಾಥನಾಗಿ.

೧೩೮ ಮದ್ದು ತಿಂದ ಮನುಜನಂತೆ ವ್ಯರ್ಥ ಹೋಗದಿರಾ
ಮನವೇ ವರ್ಷದಲಾದರೂ ಒಂದು ದಿವಸ ಶಿವರಾತ್ರಿಯ ಮಾಡು
ಮನವೇ ಕಪಿಲಸಿದ್ಧ ಮಲ್ಲೇಶನೆಂಬ ಇಷ್ಟಲಿಂಗಕ್ಕೆ.

## ಭಾವಶುದ್ಧವಾಗಿ ಮಾಡುವುದು.

೧೩೯ ಭೂಮಿ ಒಂದೆಂದಡೆಂಬ ವಚನವಿದೆ ಹಿಂದೆ ಕಾಯ
ಸೊನೆಯುರತಲ್ಲದೆ ಹಣ್ಣಿನ ರಸ ಚಿನ್ನದೋರದು ಕಾಯ ಕರ್ಮವ
ಮಾಡಿ ಜೀವ ಜ್ಞಾನವನರಿವು ತ್ರಿವಿಧ ಭಾವ ಶುದ್ಧವಾಗಿಯಲ್ಲದೆ ಕಾಣ
ಲಿಲ್ಲ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ

೧೪೦ ಸತ್ಯವಿಲ್ಲದ ಭಕ್ತಿ ಹತ್ತುಸಾವಿರ ಕಾಲ ಮಾಡಿದಡೇನು?
ನಿಷ್ಠೆ ಇಲ್ಲದ ಪೂಜೆಯನೇಸು ಕಾಲ ಮಾಡಿದಡೇನು, ಭಾವ ನೆಲೆಗೊ
ಳ್ಳದನ್ನಕ್ಕರ? ನಿಜವಿಲ್ಲದ ಪ್ರಸಾದವನೇಸು ಕಾಲ ಕೊಂಡಡೇನು! ಅಭ್ಯಾ
ಸವಾಯಿತ್ತಲ್ಲದೆ ಸಹಜವಲ್ಲ ಸಮ್ಯ್ರತವಲ್ಲ. ಒಬ್ಬರ ಕಂಡೊಬ್ಬರು
ಮಾಡುವರಲ್ಲದೆ ತವ್ರ ತಾವು ವಿಚಾರಿಸಿಕೊಳ್ಳಲರಿಯರು ಇಂತೀ
ವಿವರವನರಿಯದ ಅಜ್ಞಾನಿಗಳಿಗೆ ಭಕ್ತಮಹೇಶ್ವರರೆನಲಾಗದಯ್ಯ ಕೂಡಲ
ಚನ್ನಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆನು

೧೪೧ ಆಗುವದಾದರೆ ನಿನ್ನ ಪೂಜೆಯದೇಕೊ ಲಿಂಗಯ್ಯ?
ಯಥಾ ಭಾವಸ್ತಥಾ ದೇವ ಎಂಬ ಭಾವವಿದ್ದಡೆಯಲ್ಲಿ, ಆದಂತೆ ಆಗಲಿ
ಹೋದಂತೆ ಹೋಗಲಿ ನಿಮಗೆ ಪೂಜಿಸಿದವರಿಗೆ ಸಂಪದಾದಿ ಮಹ
ದೈಶ್ವರ್ಯ ತಪ್ಪದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೧೪೨ ಆವಾವ ತ್ರಿಗುಣ ಭೇದದಲ್ಲಿ ವಿಶ್ವಾಸವ ಮಾಡಿದಡೂ
ಭಾವ ಶುದ್ಧವಾಗಿರಬೇಕು ಯೋಗಿಯಾದಲ್ಲಿ ದೇಹ ಧರ್ಮವ ಮರೆದು,
ಭೋಗಿಯಾದಲ್ಲಿ ಸಂಚಿತವ ಮರೆದು, ತ್ಯಾಗಿಯಾದಲ್ಲಿ ನೆನಹು ಹಿಂಚು

ಗೊಡುವುದು ಮುಂತಾಗಿರಬೇಕು. ಇಂತೀ ಯೋಗಿ ಭೋಗಿ ತ್ಯಾಗಿ ಇಂತೀ ತ್ರಿವಿಧವನೊಳಕೊಂಡು ವಿರಕ್ತನಾದಲ್ಲಿ ಆತನಡಿಗೆರಗುವೆನೆಂದ ಅಂಬಿಗರ ಚೌಡಯ್ಯ

೧೪೩ ಭಾವ ಬಲಿದಲ್ಲಿ ಲಿಂಗವನಿಸಿತ್ತು ಭಾವ ವಿಭಾವವಾದಲ್ಲಿ ಪಾಷಾಣವೆನಿಸಿತ್ತು ಭಾವ ನಿರ್ಭಾವವಾದಲ್ಲಿ ಏನೆಂದೆನಿಸದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

## ಗುರುಲಿಂಗ ಜಂಗಮುಕ್ಕೋಸ್ಕರ ಮಾಡುವುದು.

೧೪೪ ನಾನು ಆರಂಬವ ಮಾಡುವೆನಯ್ಯ ಗುರು ಪೂಜೆಗೆಂದು ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು ನಾನಾ ವಾವ ಕರ್ಮಂಗಳ ಮಾಡಿದಡೆಯೂ, ಆ ಕರ್ಮ ಫಲ ಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆನು ನೀ ಕೊಟ್ಟ ದ್ರವ್ಯವ ನಿಮಗಲ್ಲದೆ, ಮತ್ತೊಂದು ಕ್ರಿಯೆಯ ಮಾಡೆನು ನಿಮ್ಮ ಸೊಮ್ಮು ನಿಮಗೆ ಸಲ್ಲಿಸುವೆನು ನಿಮ್ಮಾಣೆ ಕೂಡಲಸಂಗಮದೇವ

೧೪೫ ಕೂಳು ಪ್ರಸಾದವೆಂದು ನುಡಿವ ಜಾಳು ಮಾತ ಕೇಳಿ ಕೂಳಿಂಗೆ ಆಳಾಗಿ ಬೀಳಾದ ಬೇಳುವೆಯುಲಾಳಿದ ಗುರುಲಿಂಗ ಜಂಗಮದ ಪ್ರಸಾದದ ನೆನಹು ಪ್ರಸಾದದಲ್ಲಿ ಪ್ರಸನ್ನನಾದ ಪ್ರಸಾದ ಲಿಂಗವ ಪ್ರಸನ್ನತೆಯ ಪ್ರಸಾದದಿಂದ ಜನಿಸಿದಾತ ಜಂಗಮ ಆ ಜಂಗಮದ ಮುಖದಿಂದ ತೋರಿತ್ತು ಪ್ರಸಾದ ಇದುಕಾರಣ ಗುರು ಲಿಂಗ ಜಂಗಮ ಪ್ರಸಾದ ಲಿಂಗಕ್ಕು ಜಂಗಮ ಪ್ರಸಾದ ಇದನರಿದು ಪ್ರಸಾದವೇ ಪ್ರಾಣವಾಗಿರಬಲ್ಲಡೆ ಸೌರಾಷ್ಟ್ರ ಸೋಮೇಶ್ವರ ಲಿಂಗವೆಂದೆಂಬೆನು.

೧೪೬. ಒಲ್ಲೆನೆಂಬುದು ವೈರಾಗ್ಯ ಒಲಿವೆನೆಂಬುದು ಕಾಯ ಗುಣ ಆವ ಪದಾರ್ಥವಾದರೇನು? ತಾನಿದ್ದೆಡೆಗೆ ಬಂದುದ ಲಿಂಗಾ

ರ್ಪಿತವ ಮಾಡಿ ಭೋಗಿಸುವದೇ ಆಚಾರ ಕೂಡಲಸಂಗಮದೇವನ
ನೊಲಿಸ ಬಂದ ಪ್ರಸಾದಕಾಯುವ ಕೆಡಿಸಲಾಗದು.

೧೪೭ ಲಿಂಗಕ್ಕೆಂದೇ ನೆನೆವೆ ಲಿಂಗಕ್ಕೆಂದೇ ಮಾಡುವೆ ಲಿಂಗ
ಕ್ಕೆಂದೇ ಕೂಡುವೆನು ನಾನಯ್ಯ ಸಕಲ ಪದಾರ್ಥಂಗಳ ಲಿಂಗಕ್ಕೆಂದೇ
ಭಾವಿಸುವೆ. ಅಂಗ ಗುಣಂಗಳನರಿಯೆನಯ್ಯ ಲಿಂಗಕ್ಕೆಂದೇ ಕಾಮಿ
ಸುವೆನು ನಿಃಕಾಮಿಯಾಗಿ. ಎನ್ನ ದೇಹೇಂದ್ರಿಯ ಮನ ಪ್ರಾಣಾದಿಗಳು
ಲಿಂಗದ ಸತಿಯಾಗಿ ಲಿಂಗಕ್ಕೆಂದೇ ಬಯಸಿ, ಲಿಂಗ ಪ್ರಾಣಿಗಳಾದ
ಕಾರಣ, ಲಿಂಗಕ್ಕೆಂದೇ ಕೈಕೊಂಬೆನು. ಅನರ್ಪಿತವನರಿಯೆ ಕೂಡಲ
ಸಂಗಮದೇವಾ

೧೪೮ ತನು ಮನವ ನಿತ್ಯವೆಂಬರು ತನು ಮನ ನಿತ್ಯವೆಂಬ
ಮಾತ ಕೇಳಲಾಗದು ಅಂಬಲಿಯನಿಕ್ಕುವರೆಲ್ಲರು ಭಕ್ತರೇ? ಕಂಬ
ಳಿಯ ಕೊಟ್ಟವರೆಲ್ಲರು ಭಕ್ತರೇ? ಧರ್ಮಾರ್ಥ ಕಾಮ ಮೋಕ್ಷವೆಂಬ
ಚತುರ್ವಿಧ ಪದವಿಗಳಲ್ಲಿದ ಗುರು ಲಿಂಗ ಜಂಗಮಕ್ಕೆ ತನು ಮನ ಧನ
ವನಿತ್ತು ಕಿಂಚಿತ್ತು ಸಂಶಯವಿಲ್ಲದೆ ತನ್ನ ಹರಿಯ ತಾನರಿಯದನ್ನಕ್ಕರ
ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ತ್ರಿವಿಧ ವಂಚಕರನೆಂತು ಸದ್ಭಕ್ತ
ನೆಂಬೆನಯ್ಯ? ಎನಲಾಗದು.

೧೪೯ ಮಾಡುವೆನಯ್ಯ ಪೂಜೆಗೆಂದು ದ್ರವ್ಯನಾಶವನು ನೋಡು
ವೆನಯ್ಯ ಲಿಂಗ ಸಂಭ್ರಮಕ್ಕೆಂದು ಪೂಮೋಟಂಗಳ ಹಾಡುವೆನಯ್ಯ
ನಾಟ್ಯರಚನೆಗೆಂದು ಗಾನವ ಕೊಡುವೆನಯ್ಯ ಕಪಿಲಸಿದ್ಧಮಲ್ಲಿಕಾ
ರ್ಜುನ ಇಷ್ಟಲಿಂಗದಲ್ಲಿ

೧೫೦ ಸುಳಿವ ಜಂಗಮವು ಕಾಲಿಲ್ಲದ ಸುಳಿಯಬೇಕು ಮಾಡುವ
ಭಕ್ತನು ಕೈಯಿಲ್ಲದೆ ಮಾಡಬೇಕು. ಸುಳಿವ ಜಂಗಮಕ್ಕೆ ಕಾಲಿದ್ದರೇ
ನಯ್ಯ? ಅನ್ಯಗೃಹಕ್ಕೆ ಗಮಿಸಿಸದಿರ್ದೊಡೆ ಸಾಕು ಮಾಡುವ ಭಕ್ತಂಗೆ
ಕೈ ಇರ್ದಡೇನಯ್ಯಾ? ಗುರು ಲಿಂಗ ಜಂಗಮಕ್ಕಲ್ಲದೆ, ಮಾಡದಿರ್ದೊಡೆ
ಸಾಕು ಈ ಸುಯಿಧಾನದ ಹೊಲಬನರಿಯರು. ಧರ್ಮವನಿವರೆತ್ತ
ಬಲ್ಲರೋ? ಭಕ್ತ ಜಂಗಮದ ನಿಲವು ದಾನ ಧರ್ಮದ ಕೂಟವು,
ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ಪರಾರ್ಥವು ಇದೇ ಸರ್ವ ಸಮ್ಮತ
ನಿರ್ಣಯವು.

## ಇಂದ್ರಿಯಗಳನ್ನು ವ್ಯಥೆಗೊಳಿಸಬಾರದು.

೧೫೧. ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಕಾಯದ ಸಂಗವೇ ಲೇಸು ಕಂಡಯ್ಯ ತಾಯಿ ರಕ್ಕಸಿಯಾದಂತೆ ಕಾಯವಿಕಾರವು. ಚನ್ನಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯಗೊಂಡಿದ್ದರೆನಬೇಡ

೧೫೨ ಕೈದುವೊನೆ ಏರುವುದಕ್ಕೆ ಮುನ್ನವೇ ಕಟ್ಟಬಲ್ಲಡೆ ಕೈದೇನ ಮಾಡುವುದು ? ಹಾವು ಬಾಯಿ ಬಿಡುವುದಕ್ಕೆ ಮೊದಲೆ ಹಿಡಿದ ಮತ್ತೆ ವಿಷವೇನ ಮಾಡುವುದು ? ಮನವಿಕಾರಿಸುವುದಕ್ಕೆ ಮೊದಲೆ ಮಹದಲ್ಲಿ ನಿಂದ ಮತ್ತೆ ಇಂದ್ರಿಯಂಗಳೇನ ಮಾಡುವವು ಜಾಂಬೇಶ್ವರಾ ?

೧೫೩. ಅಂಗವೇ ಭೂಮಿಯಾಗಿ ಲಿಂಗವೇ ಬೆಳೆಯಾಗಿ ವಿಶ್ವಾಸವೆಂಬ ಬಿತ್ತು ಬಲಿದು ಉಂಡು ಸುಖಿಯಾಗಿರಬೇಕೆಂದ ಕಾಮ ಭೀಮ ಜೀವದನದೊಡೆಯ

೧೫೪ ಪಂಚೇಂದ್ರಿಯ ಸಪ್ತಧಾತುವನತಿಗಳೆದಲ್ಲಿ ಫಲವೇನು ? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ವಿಷಯನತಿಗಳೆದಲ್ಲಿ ಫಲವೇನು ? ಇವೆಲ್ಲವ ಕೊಂದ ಪಾಪ ನಿಮ್ಮ ತಾಗುವುದು ಗುಹೇಶ್ವರಾ

ಅರ್ಥಃ—ಸಕಲ ಕರಣಂಗಳು ಲಿಂಗದಲ್ಲಿ ಅಡಗಿ ಲಿಂಗೈಕ್ಯವಾದಡೆ, ಅದೇ ಲಿಂಗೈಕ್ಯವು ಅದಲ್ಲದೆ ಕಳೆಯಬಾರದ ಇಂದ್ರಿಯ ವಿಷಯ ಕರಣಾದಿ ವೃತ್ತಿಗಳ ಕಳೆದು ಪಿಡಿದು ನೋಯಿಸಿ ಲಿಂಗವ ಬೆರಸಿಹೆನೆಂದಡೆ ಎಂದೆಂದಿಗೂ ಅಸಾಧ್ಯವೆಂಬುದೀ ವಚನಾರ್ಥ.

೧೫೫ ಭಕ್ತನ ಮನ ಹೆಣ್ಣಿನೊಳಗಾದರೆ ವಿವಾಹವಾಗಿ ಕೂಡುವುದು ಭಕ್ತನ ಮನ ಮಣ್ಣಿನೊಳಗಾದರೆ ಕೊಂಡು ಆಲಯವ ಮಾಡುವುದು ಭಕ್ತನ ಮನ ಹೊನ್ನಿನೊಳಗಾದರೆ ಬಳಲಿ ದೊರಕಿಸುವುದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೧೫೬. ಒಲ್ಲೆನೆಂಬುದು ವೈರಾಗ್ಯ ಒಲಿವೆನೆಂಬುದು ಕಾಯಗುಣ. ಆವ ಪದಾರ್ಥವಾದರೇನು, ತಾನಿದ್ದೆಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವುದೇ ಸದಾಚಾರ ಕೂಡಲಸಂಗಮದೇವರ ಒಲಿಸ ಬಂದ ಪ್ರಸಾದಕಾಯವ ಕೆಡಿಸಲಾಗದು

೧೫೭. ಅರುಹಿನ ಕ ಮಹನರಿಯದೆ ತನುವ ಕರಗಿಸಿ, ಮನವ ಬಳಲಿಸಿದಡೇನು ಪ್ರಯೋಜನವು? ಇಂದ್ರಿಯ ನಿಗ್ರಹವ ಮಾಡಿ ವಿಷಯಂಗಳ ಬಂಧಿಸಿ ಆತ್ಮಂಗೆ ಬಂಧನವ ಮಾಡಿದರೆ, ಆತ್ಮದ್ರೋಹ ಕಾಣಿರೋ. ಹೀಗೆ ಉದ್ದೇಶವಿಂದ ತನುವ ಒಣಗಿಸಿದರೆ ಹಸಿಯ ಮರನ ತಂದು ಬಿಸಿಲಿಗೆ ಹಾಕಿದಂತೆ ತನುವ ಒಣಗಿಸಿದರೇನಯ್ಯ, ಮನದ ಮಲಿನವು ಹಿಂಗವನ್ನಕ್ಕರ? ಭವ ಹಿಂಗಿತ್ತು ಎಂಬ ಭಂಡರನೇನೆಂಬೆನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ?

೧೫೮ ಇಂದ್ರಿಯ ನಿಗ್ರಹ ಮಾಡಿದರೆ, ಹೊಂದುವವು ದೋಷಂಗಳು ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು ಸತಿ ಪತಿ ರತಿ ಸುಖವ ಬಿಟ್ಟರೇ ಸಿರಿಯಾಳ ಚಂಗಳೆಯರು? ಸತಿ ಪತಿ ರತಿ ಸುಖ ಭೋಗೋಪಭೋಗವ ಬಿಟ್ಟನೇ ಸಿಂಧುಬಲ್ಲಾಳನು? ನಿಮ್ಮ ಮುಟ್ಟಿ, ಪರಧನ ಪರಸ್ತ್ರೀಗೆಳಸಿದಡೆ, ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವಾ

## ಲಿಂಗಭೋಗೋಪಭೋಗಿಯಾಗಿರುವುದು.

೧೫೯ ಕಣ್ಣೊಳಗೆ ಕಣ್ಣಿದ್ದು, ಕಾಣಲರಿಯರಯ್ಯಾ! ಕಿವಿಯೊಳಗೆ ಕಿವಿ ಇರ್ದು ಕೇಳಲರಿಯರಯ್ಯಾ! ಘ್ರಾಣದೊಳಗೆ ಘ್ರಾಣವಿರ್ದು ಘ್ರಾಣಿಸಲರಿಯರಯ್ಯಾ! ಜಿಹ್ವೆಯೊಳಗೆ ಜಿಹ್ವೆ ಇರ್ದು ರುಚಿಸಲರಿಯರಯ್ಯಾ! ತ್ವಕ್ಕಿನೊಳಗೆ ತ್ವಕ್ಕಿರ್ದು ಸ್ಪರ್ಶನವ ಮಾಡಲರಿಯರಯ್ಯಾ! ಪ್ರಾಣದೊಳಗೆ ಪ್ರಾಣವಿರ್ದು ಪ್ರಾಣನ ಪರಿಯನರಿಯರಯ್ಯಾ! ಕಾಯದೊಳಗೆ ಕಾಯವಿರ್ದು ಬಿಡದು, ಬೇರಾಗದು ಕೂಡಲಚನ್ನಸಂಗಮದೇವಾ, ನೀವಿಕ್ಕಿಹ ಆಣಕದ ತೊಡಕಿನ ಭೇದವ ಭೇದಿಸಬಾರದಯ್ಯಾ

೧೬೦. ನಡೆವ ನುಡಿವ ಚೈತನ್ಯದ ಒಡಲ ಗುಣವುಳ್ಳನ್ನಕ್ಕರ ಅರಿಗೆಯು ಕಾಣಬಾರದು ಕೇಳುವ ಶ್ರೋತ್ರ, ನೋಡುವ ನಯನ, ವಾಸಿಸುವ ಘ್ರಾಣ, ರುಚಿಸುವ ಜಿಹ್ವೆ, ಸೋಂಕುವ ತ್ವಕ್ಕು, ಇದಕ್ಕೆ ಸಂಶ

ಯುವನರಿದು, ನಾ ಕೇಳಿದೆ, ನಾ ನೋಡಿದೆ, ನಾ ವಾಸಿಸಿದೆ, ನಾ ರುಃ
ಸಿದೆ, ನಾ ಮುಟ್ಟಿದೆನೆಂಬುದನಳಿದು ಕೇಳುತ್ತ, ನೋಡುತ್ತ, ವಾಸಿಸುತ್ತ
ರುಚಿಸುತ್ತ, ಸೋಂಕಿಸುತ್ತ, ಲಿಂಗಾರ್ಪಿತವ ಮಾಡಿ ಲಿಂಗ ಭೋಗೊ
ಪಭೋಗಿಯಾದ ಪರಮ ಪ್ರಸಾದಿಗೆ ಸರ್ವಾಂಗವು ಶುದ್ಧವಾಯಿತ್ತಯ್ಯಾ
ಕಾಯತ್ರಯಂಗಳ ಜೀವತ್ರಯಂಗಳ ಭಾವತ್ರಯಂಗಳನೊಂದುಮಾ
ಸುಖ ದುಃಖವ ಸಗುಣ ನಿರ್ಗುಣಂಗಳೆಂಬುಭಯ ಲಿಂಗದಲ್ಲೇಕವ ಮಾಡಿ
ಅಹುದಲ್ಲ, ಬೇಕು ಬೇಡೆಂಬ ಸಂಶಯಮಂ ಕಳೆದು ನಮ್ಮ ಕೂಡ
ಚನ್ನಸಂಗಯ್ಯನಲ್ಲಿ ಆದಿ ಪುರಾತರೊಳಗಾಗಿ ಈ ಲಿಂಗಾಂಗ ಸಂಗ ಸ
ರಸವೆಂಬ ಸಕೀಲದೊಳೊಡಗೂಡಿದ ಮಹಾಪ್ರಸಾದಿಯ ಪಥವಿದು.

೧೬೧ ಇಂದ್ರಿಯದ ಬಾಗಿಲಲ್ಲಿ ಮನವಿಪ್ಪುದು ಮನದ ಮುಂಬ
ಗಿಲಲ್ಲಿ ಭೋಗಲಿಂಗವಿದ್ದು, ಸಕಲ ಭೋಗಂಗಳ ಭೋಗಿಸಿ ಪ್ರಸಾದ
ಕರಣಂಗಳಿಗೆ ಕೊಟ್ಟು ಎನ್ನ ಮನವ ತನ್ನತ್ತ ಸೆಳೆದ. ಮರಹ ಮಾಣಿ
ಕುರುಹಳಿದ ತೆರಹುಗೊಂಡ ಸೌರಾಷ್ಟ್ರಸೋಮೇಶ್ವರಲಿಂಗವ ಬಲ್ಲರೆ ಬಲ್ಲೆ

೧೬೨ ಕ್ರಿಯೆ ಇಲ್ಲದ ನಿಃಕ್ರಿಯೆಯನೆಂತು ನಡೆಯಬಹುದಯ್ಯಾ
ಸೀಮೆ ಇಲ್ಲದೆ ನಿಸ್ಸೀಮ ನಾನೆಂತಿರಬಹುದಯ್ಯಾ ? ಮೊದಲಿಲ್ಲದ ಲಾ
ವನೆಂತನಬಹುದಯ್ಯಾ ? ಹರಿವ ಮನವ ನಿಲ್ಲೆಂದು ನಿಲಿಸಿ ಜಿಹ್ವೆಂ
ಜುಂಜುಕತ್ವವ ಕಳೆದು ಲಿಂಗಭೋಗೋಪಭೋಗಿಯಾದಲ್ಲದೆ ಮೆಚ
ವರೇ ನಿಮ್ಮ ಶರಣರು ಕೂಡಲಚನ್ನಸಂಗಮದೇವಾ ?

೧೬೩ ಅಂಗ ಒಂದಾದ ಬಳಿಕ ಲಿಂಗೇಂದ್ರಿಯಂಗಳಾಚರಿಸ
ಗದು ಅಂಗೇಂದ್ರಿಯಂಗಳು ಹೋಗಿ ಲಿಂಗೇಂದ್ರಿಯಂಗಳಾಗಿ ಆಚ
ಸುವುದು 'ಘೃತೋ ಭೂತ್ವಾ ಕಥಂ ಕ್ಷೀರಂ ಭವತ್ಯೇವಂ ವರಾನ
ಎಂಬಾಗವೇೂಕ್ತಿ ಪುಸಿಯಾಯಿತ್ತೇ ? ಆಗಿ ಆಚರಿಸಿದರೆ ಭವ ಹಿಂಗ
ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

# ಕಾಯಕವನ್ನು ಮಾಡುವುದು.

೧೬೪ ಒಲ್ಲಿದ ಬಾಣನ ಬಾಗಿಲ ಕಾಯ್ವರವರು ಭೂತಿಗಳೇನಯ್ಯ? ಅಪ್ಪ ರಾವಣಸಿದ್ಧ ನೀರು ಹೊತ್ತನೆಂಬರು ನಮ್ಮ ನೀರು ಹೊರುವವರವರು ಕೂಲಿಕಾರರೇನಯ್ಯ? 'ಸರ್ವೇಷಾಂ ಹೃದಿಸ್ಥ ಚಂದ್ರಮೌಲೀ' ಎಂಬ ಶ್ರುತಿವಾಕ್ಯವ ನಂಬು ನಂಬು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಮುಂದೆ ಎಲೆ ಮನವೆ

೧೬೫ ಅಸ್ಪೃಶ್ಯವವುಳ್ಳ ಭಕ್ತನ ಮನೆಯಾರೋಗಣೆಯು ಅನ್ಯಹಾರವಯ್ಯಾ! ನಂಬಗೆ ಇಲ್ಲದ ಭಕ್ತನ ಮನೆಯಾರೋಗಣೆ ಸಂದೇಹದ ಕೂಳು ಕೊಟ್ಟು ಕೊಂಡು ನೀಡಿ ಮಾಡಿ ಹಮ್ಮು ನುಡಿದ ಭಕ್ತನ ಮನೆಯಾರೋಗಣೆ ಕಾಳಿದ ಕೂಳು ನಿಮ್ಮ ನಂಬಿದ ಸದ್ಭಕ್ತರ ಮನೆಯಾರೋಗಣೆ ಲಿಂಗಾರ್ಪಿತವಯ್ಯಾ ಅದೆಂತೆಂದಡೆ, ಸದಾಚಾರ, ಶಿವಾಚಾರ, ಲಿಂಗಾಚಾರ, ಗಣಾಚಾರ, ಭೃತ್ಯಾಚಾರ, ಸತ್ಕಾಯಕದಿಂದ ಬಂದುದಾಗಿ, ಭಕ್ತಿ ಪದಾರ್ಥವಯ್ಯಾ ಕೂಡಲಚನ್ನಸಂಗಮದೇವಾ

೧೬೬ ತಪಸಿದ್ಧಿ ಬೆಳೆವಂಗೆ ಕಣಜದ ಹಂಗುಂಟೇ? ವಿರಕ್ತಂಗೆ ಅಪ್ಪಕೆಗೊಂಬುದರುಂಟೇ? ಕಾಯಕವ ಮಾಡುವ ಭಕ್ತಂಗೆ ಇನ್ನಾರ ಕಾಡಲೇತಕೋ? ಆ ಗುಣ ಅಮುಳೇಶ್ವರಲಿಂಗಕ್ಕೆ ದೂರ

೧೬೭ ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧನಾಗಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯಪ್ರಿಯ ಅಮುಳೇಶ್ವರಲಿಂಗದ ಸೇವೆಯುಳ್ಳನ್ನಕ್ಕರ

೧೬೮ ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು ಲಿಂಗಪೂಜೆಯಾದಡೂ ಮರೆಯಬೇಕು. ಜಂಗಮ ಮುಂದಿದ್ದಡೂ ಹಂಗುಹರಿಯಬೇಕು ಕಾಯಕವೇ ಕೈಲಾಸವಾದ ಕಾರಣ ಅಮುಳೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು

೧೬೯ ಕಾಯಕಕಾರದ ವೈಸೊಂಬತನದಿಂದ ಜೇರಿ ಕೂಳ ಗಳಿಸಲಾರದೆ ಹಸಿದಿಪ್ಪರಯ್ಯ ಒಡಲು ಸೀರೆಯು ಗಳಿಸಲಾರದ ಕಚ್ಚುಟವ

ಕಟ್ಟಿಕೊಂಡಿಪ್ಪರಯ್ಯ ಮೀಯಲು ಎಣ್ಣೆಯು ಗಳಿಸಲಾರದೆ ಮಂ
ಬೋಳಾಗಿಪ್ಪರಯ್ಯ ದಿಟದಿಂದ ಬಿಡಿಸಲರಿಯದೆ ಸಂಸಾರದ ಶರೆಯನ
ಧರಿಸಿಕೊಂಡಿಪ್ಪವರಿಗೆ ನಾನಂಜುವೆನಯ್ಯ ಸಕಳೇಶ್ವರಾ

೧೭೦ ಗುರುವಾದಡೂ ಕಾಯಕದಿಂದವೇ ಜೀವನ್ಮುಕ್ತಿ ಲಿಂ
ವಾದಡೂ ಕಾಯಕದಿಂದವೇ ಶಿಲೆಯ ಕುಲ ಹರಿವುದು ಜಂಗಮವ
ದಡೂ ಕಾಯಕದಿಂದಲೇ ವೇಷದ ಪಾಶವು ಹರಿವುದು ಇದು ಚನ
ಬಸವಣ್ಣ ಪ್ರಿಯಚಂದೇಶ್ವರಲಿಂಗದ ಅರಿವು.

೧೭೧ ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ
ಕಾಯಕ ಬಿಟ್ಟು ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲವೇ ? ಆ ಗು
ಅಮಳೇಶ್ವರಲಿಂಗಕ್ಕೆ ದೂರ

## ದಾಸೋಹ ಭಾವವುಳ್ಳವನಾಗಿ ಮಾಡುವುದು.

೧೭೨ ಸೋಹಂ ಎಂಬುದದು ಅಂತರಂಗದ ಮದ ನೋಡಯ
ಶಿವೋಹಂ ಎಂಬುದು ಬಹಿರಂಗದ ಮದ ನೋಡಯ್ಯ ಈ ದ್ವಂದ್ವ
ನಳಿದು ದಾಸೋಹಂ ಎಂದೆನಿಸಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

೧೭೩ ಕೃಷಿ ಕೃತ್ಯ ಆವ ಕಾಯಕದಿಂದಾದೊಡೇನು ? ತ
ಮನ ಬಳಲಿಸಿ ಗಳಿಸಿ ತಂದು, ಗುರು ಲಿಂಗ ಜಂಗಮಕ್ಕೆ ವೆಚ್ಚಿಸಿ ದಾಸ
ಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯಾ ಎನಗೆ ಅ
ತೆಂದೊಡೆ ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶು
ನುಡಿ ಎಲ್ಲ ಪಾವನವು ಆತಂಗೆ ಉಪದೇಶವ ಮಾಡಿದಾತನೇ ಪರ
ಸದ್ಗುರು ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊ
ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾವನ ಇಂತಪ್ಪ ಗ
ಶಿಷ್ಯ ಜಂಗಮಕ್ಕೆ ನಾನು ನೆರೆ ನಂಬಿ ನಮೋ ನಮೋ ಎಂಬೆನ
ಕೂಡಲ ಚನ್ನಸಂಗಮದೇವಾ

೧೭೪ ಕಾಯಕವೆಂದು ಕಾಯುವ ಬಳಲಿಸದೆ ತನು ಕರಗದೆ ಮನ ನೋಯದೆ ಬೇಡಿ ಕಾಡಿ ಮಾಡುವುದು ದಾಸೋಹವೇ? ಆವ ಕಾಯಕವಾದಡೂ ಪ್ರಾಣವೇ ಕಡೆಯಾಗಿ ಚಿತ್ತ ಶುದ್ಧದಲ್ಲಿ ಮೆಯ್ಯಾಂತು ಬಂದುದನು ಸರಿಗಂಡು ದೇಹಿಗಳನೆಲ್ಲ ಒಂದೇ ಪ್ರಮಾಣದಲ್ಲಿ ಕಂಡರೆ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗಕ್ಕೆ ತೃಪ್ತಿ

೧೭೫ ಭಕ್ತ ಭಕ್ತನ ಮನೆಗೆ ಬಂದರೆ, ಭೃತ್ಯಾಚಾರವ ಮಾಡಬೇಕು ಕರ್ತನಾಗಿ ಕಾಲ ತೊಳೆಯಿಸಿಕೊಂಡರೆ ಹಿಂದೆ ಮಾಡಿದ ಭಕ್ತಿಗೆ ಹಾನಿ ಲಕ್ಷ ಗಾವುದ ದಾರಿಯು ಹೋಗಿ, ಭಕ್ತನು ಭಕ್ತನ ಕಾಂಬುದು ಸದಾಚಾರ ಅಲ್ಲಿ ಕೂಡಿ ದಾಸೋಹವ ಮಾಡಿದರೆ ಕೂಡಿಕ್ಕೊಂಬನು ನಮ್ಮ ಕೂಡಲಸಂಗಯ್ಯ

೧೭೬ ಜನ್ಮ ಜನ್ಮಕ್ಕೆ ಹೋಗಲೀಯದೆ, ಸೋಹಂ ವೆಂದೆನಿಸದೆ, ದಾಸೋಹಂವೆಂದೆನಿಸಯ್ಯ ಲಿಂಗಜಂಗಮದ ಪ್ರಸಾದದ ನಿಲವ ತೋರಿ ಬದುಕಿಸಯ್ಯ ಕೂಡಲಸಂಗಮದೇವಾ

೧೭೭ ಮಾಡುವ ದಾಸೋಹ ಕಿಂಕುರ್ವಾಣದಿಂದಾದೊಡೆ, ಆ ಭಕ್ತನ ಅವಗುಣಂಗಳ ಮುಟ್ಟಲಮ್ಮವು ಅರ್ಥ ಪ್ರಾಣ ಅಭಿಮಾನವೆಂಬ ತ್ರಿಸ್ಥಾನವ ಶುದ್ಧವ ಮಾಡುವಲ್ಲಿ ನಿರಾಭಾರಿಯ ಮಾಡಿಕೊಂಡಿರ್ದನು ನಿರಾಭಾರಿಯೊಳಡಗಿರ್ದ ನಮ್ಮ ಕೂಡಲಚನ್ನಸಂಗಯ್ಯನು

೧೭೮ ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ ಕಂಡಕಂಡವರ ಬೇಡಿ ತಂದು ಮಾಡಿಹೆನೆಂಬುದು ದಂದುಗದಾಗರ ಲಿಂಗ ನೈವೇದ್ಯಕ್ಕೆ ಸಲ್ಲದು ತನು ಕರಗಿ ಮನ ಬಳಲಿ ಬಂದ ತೆರದನುವನರಿದು ಸಂದಿಲ್ಲದೆ ಸಂಶಯವಿಲ್ಲದೆ ದಾಸೋಹವ ಮಾಡುವುದೇ ಮಾಟ ಕಾರಿಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂ ಬಂದುದು ಅನರ್ಪಿತ ಇದುಕಾರಣ ಸತ್ಯ ಶುದ್ಧ ಕಾಯಕದ ನಿತ್ಯ ದ್ರವ್ಯ ಚಂದೇಶ್ವರಲಿಂಗಕ್ಕೆ ನೈವೇದ್ಯ

೧೭೯ ಹೊನ್ನ ಬಿಟ್ಟು, ಹೆಣ್ಣ ಬಿಟ್ಟು, ಮಣ್ಣ ಬಿಟ್ಟು, ಬ್ರಹ್ಮಚಾರಿಗಳಾಗಬೇಕೆಂದು ಒಣ್ಣವಿಟ್ಟು ನುಡಿವ ಅಣ್ಣಗಳ ಪರಿಯ ನೋಡಿರೇ ಹೆಣ್ಣ ಬಿಟ್ಟಡೆಯೂ ಹೊನ್ನ ಬಿಡದು. ಹೊನ್ನ ಬಿಟ್ಟಡೆಯೂ ಮಣ್ಣ

ಬಿಡಿರಿ. ಒಂದು ಬಿಟ್ಟಡೆಯೂ ಒಂದ ಬಿಡಿರಿ ಬ್ರಹ್ಮಚಾರಿಗಳೆಂತಪ್ಪಿ
ಹೇಳಿರಣ್ಣಾ ಹೆಣ್ಣ ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು ಅವರೆಂತ
ಹೇಳಿದರು ? ನೀವೆಂತು ಕೇಳಿದಿರಿ? ಹೆಣ್ಣನು ಹೆಣ್ಣೆಂದರಿವಿರಿ ಹೊನ್ನನ
ಹೊನ್ನೆಂದರಿವಿರಿ ಮಣ್ಣನು ಮಣ್ಣೆಂದರಿವಿರಿ ಬ್ರಹ್ಮಚಾರಿಗಳೆಂತಪ್ಪಿರಣ್ಣಾ
ಬಿಟ್ಟಡೆ ಹೆಣ್ಣು ಹೊನ್ನು ಮಣ್ಣು ಈ ಮೂರನು ಹಿಡಿದು ಗುರು ಲಿಂ
ಜಂಗಮಕ್ಕೆ ಸದ್ಭಕ್ತಿಯಿಂದ ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿ
ತಪ್ಪದು. ಎಲ್ಲಿ ಇದ್ದರೆಯೂ ನೀರತಾವರೆಯಂತಿಪ್ಪರು ಉರಿಲಿಂಗಪೆದ್ದಿ
ಪ್ರಿಯವಿಶ್ವೇಶ್ವರಾ ನಿಮ್ಮ ಶರಣರು

## ಭಿಕ್ಷೆಯನ್ನು ಬೇಡಬಾರದು.

೧೮೦ ಮಾಡುವ ನೀಡುವ ಭಕ್ತನ ಕಂಡರೆ, ನಿಧಿನಿಧಾನ
ಕಂಡಂತಾಯಿತ್ತು ಪಾದೋದಕ ಪ್ರಸಾದ ಜಿಹ್ವೆಯವರ ಕಂಡರೆ
ಹೋದ ಪ್ರಾಣ ಬಂದಂತಾಯಿತ್ತು ಅನ್ಯರ ಮನೆಗೆ ಹೋಗಿ, ತನ
ವರವ ಹೊರೆಯದ ಅಚ್ಚ ಶರಣರ ಕಂಡರೆ, ನಿಶ್ಚಯವಾಗಿ ಕೂಡ
ಸಂಗಯ್ಯನೆಂಬೆ

೧೮೧ ಬೇಡಲಾಗದು ಜಂಗಮ ಬೇಡಿಸಲಾಗದು ಭಕ್ತ ಬೇ
ದವ ನೋಡಿದರೆ ಬೇಡ ಬೇಡ ಭಕ್ತಿಯ ಆಡಂಬರವ ಮೃಡಮೂರ್ತಿ
ಕಪಿಲಸಿದ್ಧಮಲ್ಲಿಕಾರ್ಜುನಾ

೧೮೨ ಬೇಡುವವ ಜಂಗಮವೇ? ಬೇಡಿಸಿಕೊಂಬುವವ ಸದ್ಭಕ್ತನೇ
ಈ ಮರ್ಮವನರಿಯದ ಹಿರಿಯರು ನರಮಾಂಸಭಕ್ಷಕರಯ್ಯ ತನ
ವೆತ್ತಿ ಮನ ಉಬ್ಬಿ ಮಾಡಿದೊಡೆ ಲಿಂಗಾರ್ಪಿತವಾಯಿತ್ತಯ್ಯ ಮಾ
ಮನವಿಲ್ಲದಿರ್ದೊಡೆ ನೀಡಿ ನಿಜವಿಲ್ಲದಿರ್ದೊಡೆ ಕೊಟ್ಟು ಕುದಿಗೊ
ಡೊಡೆ ಮಾಡಿ ನೀಡಿ ಕೊಟ್ಟು ಕೊಂಡುದು ಅನರ್ಪಿತವಾಯಿತ್ತು ಮಾ
ದಷ್ಟಿಷ್ಟೇನು ಇಲ್ಲವೆ ಅನರ್ಥವಾಗಿ ಹೋಗಿ ಮುಂದೆ ನರಕವಪ್ಪುದ
ತಪ್ಪದಯ್ಯಾ ಇದು ಕಾರಣ ಕೂಡಲಚನ್ನಸಂಗಮದೇವ ಲಕ್ಷಕ್ಕಾದಡ
ಒಬ್ಬ ಭಕ್ತನುಂಟು. ಕೋಟಿಗಾದಡೆಯೂ ಒಬ್ಬ ಜಂಗಮವಿಲ್ಲ.

೧೮೩ ಅರ್ಥ ಪ್ರಾಣಾಭಿಮಾನ ಹೊಲ್ಲಹದೆಂಬುವರು ಭಕ್ತರಿಗೆ ತಮ್ಮ ಹೊದ್ದಿದ ಮಲಿನವನರಿಯರು ಬೇಡುವಾತ ಜಂಗಮವಲ್ಲ, ಬೇಡಿಸಿಕೊಂಬಾತ ಭಕ್ತನಲ್ಲ ಬೇಡದೆ ಆ ಭಕ್ತ ತಾನೆ ಮಾಡಿದ ಮಾಟವ ಪರಿಣಾಮಿಸಬಲ್ಲಡೆ ಆತನೇ ಸದ್ಭಕ್ತನು ಆ ಭಕ್ತರ ಇಂಗಿತವರಿದು ಅವರ ಮನದಿಚ್ಛೆಯ ಸಲ್ಲಿಸಬಲ್ಲಡೆ ಆತನೇ ಪರಮ ಜಂಗಮ ಆ ಭಕ್ತನು ನನ್ನದು ನಾನೆಂದು ನುಡಿದೊಡೆ. ನಾಯ ಮಾಂಸ ಸತ್ತ ಹೆಣನ ಮಲವು ನಾಯಡಗು ಇವನರಿಯದೆ ಓಡಲಾರದ ಮೃಗವು ಶ್ವಾನಂಗೆ ಮಾಂಸವನೀವಂತೆ ಇದು ಕಾರಣವಾಗಿ, ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಬೇಡದೆ ಮಾಡುವ ಭಕ್ತನುಂಟಾದಡೆಯೂ ಬೇಡದೆ ಮಾಡಿಸಿಕೊಂಬ ಜಂಗಮವಪೂರ್ವವಯ್ಯಾ

೧೮೪ ಬೇಡುವಾತ ಜಂಗಮನಲ್ಲ ಬೇಡಿಸಿಕೊಂಬಾತ ಭಕ್ತನಲ್ಲ ಬೇಡದೆ ಆ ಭಕ್ತ ತಾನೆ ಮಾಡಿದ ಮಾಟವ ಪರಿಣಾಮಿಸಬಲ್ಲಡೆ ಜಂಗಮ ಬೇಡಿಸಿಕೊಳ್ಳದೆ ಆ ಜಂಗಮದ ಇಂಗಿತವನರಿದು ಮಾಡಬಲ್ಲಡೆ ಆತನೇ ಸದ್ಭಕ್ತನು ಆ ಭಕ್ತನ ಇಂಗಿತವನರಿದು ಅವರ ಮನದಿಚ್ಛೆಯ ಸಲಿಸಬಲ್ಲಡೆ ಆತನೇ ಪರಮ ಜಂಗಮನು ಆ ಭಕ್ತ ನನ್ನದು ನಾನೆಂದು ನುಡಿದಡೆ ನಾಯ ಮಾಂಸ ಸತ್ತ ಹೆಣನ ಮಲವು ಇದು ಕಾರಣ ನಮ್ಮ ಕೂಡಲಚನ್ನಸಂಗಯನಲ್ಲಿ ಬೇಡದೆ ಮಾಡುವ ಭಕ್ತನುಂಟಾದಡೆಯೂ ಬೇಡಿಸಿ ಮಾಡಿಸಿಕೊಂಬುವ ಜಂಗಮವಪೂರ್ವವಯ್ಯಾ

## ತಾಮಸ ಶೀಲಗಳನ್ನು ಬಿಡುವುದು.

೧೮೫ ಶೀಲ ಶೀಲವೆಂಬೊಡೇನು? ಭವಿ ನೋಡಿದ ಮಡಕೆಯನು ಕಳೆವುದು ಶೀಲವೇ? ಕೆರೆ ಭಾವಿಯ ಕಳೆವುದು ಶೀಲವೇ? ಒಸರುವ ಉದಕವ ತಾಹುದು ಶೀಲವೇ? ಲಿಂಗಾರ್ಪಿತವ ಮಾಡದ ಪ್ರಸಾದವ ಕೊಂಡೊಡೆ, ಕಿಲ್ಬಿಷ, ಭಾಸೆಗೆ ವ್ರತಗೇಡಿ ಅಂತಲ್ಲದೆ ಕೊಳದಿರ್ದಡೆ ಪ್ರಸಾದದ್ರೋಹಿ ಇದು ಕಾರಣವಾಗಿ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಈ ನಿರ್ಣಯವನರಿಯದೆ ಸಂಕಲ್ಪದಿಂದೆ ಕೆಟ್ಟಿತ್ತು ಶೀಲ

೧೮೬ ಶೀಲವಂತನಾದೊಡೆ ಪ್ರಪಂಚ ನಾಸ್ತಿಯಾಗಿರಬೇಕು ಸೀಮೆಯಾದೊಡೆ ಪಂಚೇಂದ್ರಿಯಂಗಳು ನಾಸ್ತಿಯಾಗಿರಬೇಕು ತನ್ನ ಕರ್ತುವಿನಲ್ಲಿ ಸಕಲ ಸಂಶಯ ನಾಸ್ತಿಯಾದ ಶೀಲಕ್ಕೆ ಭವಂ ನಾಸ್ತಿ, ಭವಿ ನಾಸ್ತಿ, ಭ್ರಮೆ ನಾಸ್ತಿ ಇವು ನಾಸ್ತಿಯಾದಲ್ಲದೆ ನಮ್ಮ ಕೂಡಚನ್ನ ಸಂಗಯ್ಯನಲ್ಲಿ ಶೀಲವಂತನೆನಿಸಬಾರದು ಈ ವಂಚನೆಯ ಡಂಭಕ ಅಪಸ್ಮಾರಿಗಳಿಗೆಂತಯ್ಯಾ ?

೧೮೭ ನದಿಯ ತಟಾಕದಲ್ಲಿ ಕನ್ನವನಿಕ್ಕಿ ಉದಕವ ತಂದು ಮಜ್ಜನಕ್ಕೆರೆವ ಶೀಲವಂತರು, ಸುಯಿಧಾನಿಗಳಪ್ಪರೇ ? ಭವಿಪಾಕ ಪರ ಪಾಕವನೆ ಭುಜಿಸುವ ಉದರ ಪೋಷಕರೆಲ್ಲರು ಶೀಲವಂತರಪ್ಪರೇ ? ಅಲ್ಲಲ್ಲವಯ್ಯಾ ಮತ್ತೆಂತೆಂದೊಡೆ, ಅಶನವರತು ವ್ಯಸನ ಬೆಂದು ಹುಸಿ ಮುಸಣಿಸಿ, ಮಹಾಲಿಂಗದ ನಿಷಯದೊಳಗೆ ತಲ್ಲೀಯವಾಗಿ ಸರ್ವಾಂಗವು ಸಮತಯಾಗಿರಬಲ್ಲಡೆ, ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಅವರಚ್ಚ ಶೀಲವಂತರೆಂಬೆನು ಅವರೊಕ್ಕುದ ಕೊಂಡು ಸುಖಿಯಾಗಿಪ್ಪೆನಯ್ಯಾ

೧೮೮ ಭವಿಗಿಕ್ಕಬಾರದೆಂಬ ಶೀಲ ಸಂಬಂಧಿಗಳು ಮರಳಿ ಇಕ್ಕಿದೊಡೆ, ಭಾವೆಗೆ ವ್ರತಗೇಡಿ ಎಂಬುವ ಕಾಕು ಹೊಲೆಯರಿರಾ, ನೀವು ಕೇಳಿರೋ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬಾರು ಭವಿಗಳು ತಮ್ಮನಾವರಿಸಿಕೊಂಡಿರಲು, ಮತ್ತೆ ಭವಿಗಿಕ್ಕಬಾರದೆಂಬ ಪರಿ ಎಂತೋ ? ಭವಿ ಹಿಂಗಿಯಂಗದ ಭವಿಯ ಕಳೆವುದು ಅಭ್ಯಾಸವಲ್ಲದೆ ನಿಜವಲ್ಲ ಇದು ಕಾರಣ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಅಂತರಂಗದ ಭವಿಯ ಕಳೆವ ಶೀಲವಂತರಪೂರ್ವವಯ್ಯಾ ಅಂತರಂಗ ಬಹಿರಂಗವ ಕಳೆದು ಗುರುಲಿಂಗಜಂಗಮಕ್ಕೆ ಸಕಲ ಪದಾರ್ಥ ಸಲಿಸಿ ಸಂಶಯವಳಿದಿರಬಲ್ಲಡೆ ಶೀಲವಂತ ಶರಣನೆಂಬೆನಯ್ಯಾ

೧೮೯ ಭಕ್ತರಾದೆವೆಂದು, ಭವಿಪಾಕವನೊಲ್ಲೆವೆಂಬರಿ ಭವಿ ಪಾಕವೆಂಬುದೆಂತೆಂದೊಡೆ ಕೇಳಿರೇ ಅಂಗತ್ರಯದಿಂದೆ ನೋಡಿದಡದು ಭವಿಪಾಕ ಲಿಂಗತ್ರಯ ನೋಟಕ್ಕದು ಸಲ್ಲದು ಗುರು ಕಾರುಣ್ಯ ಮುಂಟೆ ನಾವು ಸದ್ಭಕ್ತರೆಂಬುವರು ಅವರಿಗೆ ಅಂಗತ್ರಯದ ನೋಟ ವುಳ್ಳನ್ನಕ್ಕರ ಲಿಂಗತ್ರಯದ ನೋಟವಿನ್ನೆಲ್ಲಿಯದೊ ? ಪಂಚಭೂತದ ಕಾಯವ ತಂದು ಸದ್ಭಕ್ತನೆಂದೊಡೆ ಪ್ರಸಾದ ನಾಸ್ತಿ ಎಂದುದು ನಮ್ಮ ಕೂಡಲಚನ್ನಸಂಗಮದೇವರ ವಚನ

೧೯೦ ಶಿವ ಮಂತ್ರ ಸಂಸ್ಕಾರವಾದಾತನು ತನ್ನ ಲಿಂಗಕ್ಕೆ ಭವಿ ಸನ್ನವ ಮಾಡುವನ್ನಕ್ಕರ, ಭವಿ ಮಿಶ್ರವ ಕಳೆವೆನೆಂದೆನ್ನಬಹುವೇ? ವ ಮಂತ್ರ ಸಂಸ್ಕಾರವ್ಯಕ್ತಿವನಾಗಿ, ಜಾತಿ ಸೂತಕ, ಜನನ ಸೂತಕ, ಪ್ರೇತ ಸೂತಕ, ಎಂಜಲ ಸೂತಕ, ರಜ ಸೂತಕವೆಂಬ ಪಂಚಸೂತಕ ಳ ಮಹಾನುಭಾವಿಗಳು ತಮ್ಮ ಲಿಂಗಕ್ಕೆ ಪದಾರ್ಥ ಮಾಡುವನ್ನಕ್ಕರ ಭವಿ ಮಿಶ್ರವ ಕಳೆವವೆಂತೆನ್ನಬಹುದೇ ಅಯ್ಯಾ? ತನು ಭವಿಯ ಹಸ್ತದಿಂದೆ ಪಂಚಮಹಾಪಾತಕ. ಮನಭವಿಯ ಹಸ್ತದಿಂದ ಅಘೋರ ನರಕ ಇಂತಪ್ಪ ಭವಿಯನೊಳಗಿಟ್ಟುಕೊಂಡು ಎನಗೆ ಭವಿ ಮಿಶ್ರವಿಲ್ಲ ವೆಂಬ ಲಜ್ಜೆಗೆಟ್ಟ ದುರಾಚಾರಿಗಳ ನಮ್ಮ ಸಜ್ಜನ ಸದ್ಭಕ್ತರು ಮೆಚ್ಚು ವರೇ? ಮೆಚ್ಚರಯ್ಯ ಕೂಡಲಚನ್ನಸಂಗಮದೇವಾ

೧೯೧ ಭವಿ ಎಂಬರ ಲಿಂಗವಿಲ್ಲದ ಭವಿಯೋ? ಅಲ್ಲಲ್ಲ ಭವಿ ಎಂದರೆ ವೇದ ವೇದಾಂತವನೋದಿ ಲಿಂಗವ ಧರಿಸಿದವ ಭವಿಯೆ? ಅಲ್ಲಲ್ಲ ಅಂಗದ ಸ್ಥಿತಿಯನರಿವಡೇನಾಯಿತ್ತು? ಗುಣ ತಿಳಿದು ಲಿಂಗವ ಕೊಡುವ ಗುರುವಿಲ್ಲ ಬಹಿರಂಗದಲ್ಲಿ ಲಿಂಗ ವಿರಹಿತ, ಅಂತರಂಗದಲ್ಲಿ ಲಿಂಗಲೋಲುಪ್ತ ಹೊಲಬುಗೆಟ್ಟವನಾದರೇನು? ಸತ್ಕ್ರಿಯಾ ಸಾಮ ರಸ್ಯಕ್ಕೆ ಭಕ್ತಿಯಿಲ್ಲದ ಅನುಭವ ಗೋಷ್ಠಿಗೆ ಭವಿಯೋ? ಅಲ್ಲಲ್ಲ ಭವಿ ಎಂದರೆ ಮದ ಪಾನ, ಮಾಂಸ ಭಕ್ಷಣ, ಪರಸ್ತ್ರೀ ಸಂಗ, ಪರ ಧನ ಚೋರತ್ವ, ನಿಜವಸ್ತು ಅಂತರತ್ವವಿಲ್ಲವನೇ ಭವಿಯಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಾ

## ಗ್ರಹಬಲವನ್ನು ನೋಡದೆ ಮಾಡುವುದು

೧೯೨ ಜ್ಯೋತಿಷ್ಯವದು ಜ್ಯೋತಿಯಂತಯ್ಯ ಕೂಡುವ ಕಾಲಕ್ಕೆ ಪ್ರಕಾಶವಾಯವು ಕೂಡದ ಕಾಲಕ್ಕೆ ದಗ್ಧವಾಯವು ಇದರಂತುವನ ರಿವವರ ಕಾಣೆ ಕಪಿಲಸಿದ್ಧಮಲ್ಲಿಕಾರ್ಜುನಾ

೧೯೩ ಲಗ್ನವೆಲ್ಲಿಯದೋ, ವಿಘ್ನವೆಲ್ಲಿಯದೋ ಸಂಗಯ್ಯ? ದೋಷವೆಲ್ಲಿಯದೋ, ದುರಿತವೆಲ್ಲಿಯದೋ ಸಂಗಯ್ಯ? ನಿಮ್ಮ ಮಾಣದೆ ನೆನೆವಂಗ ಭವಕರ್ಮವೆಲ್ಲಿಯದೋ ಕೂಡಲಸಂಗಮದೇವಾ?

೧೯೪ ಶುಭಕ್ಕೆ ವಿಘ್ನವಿಲ್ಲದೆ ಅಶುಭಕ್ಕೆ ವಿಘ್ನವೇ ಅಯ್ಯಾ? ಅಭಿಮಾನಿಗೆ ಅಂಜಿಕೆಯುಲ್ಲದೆ ಅಪಮಾನಿಗೆ ಅಂಜಿಕೆಯೇ ಅಯ್ಯಾ? ಶುಭಾಶುಭ ಶಿವಾರ್ಪಣವೆಂದು ನಂಬು ಮನವೇ ಕಪಿಲಸಿದ್ಧಮಲ್ಲೇಂದ್ರನಾಲಯದಲ್ಲಿ.

೧೯೫ ಲಗ್ನಕ್ಕೆ ವಿಘ್ನಬಾರದೆಂದು ಜ್ಯೋತಿಷ್ಯ ಕೇಳುವ ಅಣ್ಣಗಳಿರಾ ಕೇಳಿರಯ್ಯಾ ಅಂದೇಕೆ ವೀರಭದ್ರನ ಸತಿಯು ಸೆರಗು ಸುಟ್ಟಿತ್ತು? ಅಂದೇಕೆ ಮಹಾದೇವಿಯರ ಬಲ ಭುಜ ಹಾರಿತ್ತು? ಇಂದೇಕೆ ಎನ್ನ ವಾಮನೇತ್ರ ಚಲಿಸಿತ್ತು ಕಪಿಲಸಿದ್ಧಮಲ್ಲಿಕಾರ್ಜುನಾ?

೧೯೬ ತಿಥಿವಾರವೆಂದರಿಯೆನಯ್ಯಾ ಲಗ್ನ ವಿಲಗ್ನವೆಂದರಿಯೆನಯ್ಯಾ ಇದನರಿತು ಹದಿನಾರು ವಾರ ಹದಿನೆಂಟು ಕುಲವೆಂದೆಂಬರು ನಾವಿದನರಿಯೆನಯ್ಯಾ ಇರುಳೊಂದು ವಾರು, ಹಗಲೊಂದು ವಾರ, ಭವಿಯೊಂದು ಕುಲ, ಭಕ್ತನೊಂದು ಕುಲ ನಾವು ಬಲ್ಲುದು ಇದು ತಾನೆ ಬಸವಪ್ರಿಯ ಕೂಡಲಚನ್ನಸಂಗಮದೇವಾ

೧೯೭ ಅಂದು ಇಂದು ಮತ್ತೊಂದು ಎನಬೇಡ ದಿನ ಒಂದೇ ಶಿವಶರಣೆಂಬುವಂಗೆ. ದಿನ ಒಂದೇ ಹರಶರಣೆಂಬುವಂಗೆ ದಿನ ಒಂದೇ ನಮ್ಮ ಕೂಡಲಸಂಗನ ಮಾಣದೆ ನೆನೆಯುವಂಗೆ.

## ಹಿಂದಿನವರೇ ಶ್ರೇಷ್ಠರೆಂದು ಭಾವಿಸದಿರು.

೧೯೮ ಅಂದಿನವರು ನಡೆದ ದಾರಿ ಇಂದಿನವರು ನಡೆಯರು, ಇಂದಿನವರು ನಡೆದ ದಾರಿ ಅಂದಿನವರು ಕಾಣರು ಎಂಬರಯ್ಯಾ ಅಂದಿಂದು ಎಂಬ ದ್ವಂದ್ವ ಭೇದವನೆಂದೆಂದು ಕಾಣೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೧೯೯ ಅಂದಿನ ಶರಣರಿಗೆ ಇಂದಿನ ಶರಣರು ಸರಿಯಲ್ಲವೆಂದು ನುಡಿವ ಸಂದೇಹ ಸೂತಕ ಹೊಲೆಯರ ಮಾತ ಕೇಳಲಾಗದು ಅದೆಂತೆಂದೊಡೆ, ತಾ ಮೂಕೊರೆಯನೆಂದರಿಯದೆ ಕನ್ನಡಿಗೆ ಮೂಗಿಲ್ಲವೆಂ

ಬಂತೆ ತಾ ಕುಣಿಯಲಾರದೆ ಅಂಕಣ ಡೊಂಕೆಂಬಂತೆ, ತನ್ನ ನಡೆನುಡಿ ಸಿದ್ಧಾಂತವಿಲ್ಲದೆ, ಇತರ ಹೇವ ಅಧಮ ಮಾದಿಗರನೇನೆಂಬೆನಯ್ಯ? ಅಷ್ಟಾವರಣ ಪಂಚಾಚಾರವು ಅಂದೊಂದು ಪರಿ ಇಂದೊಂದು ಪರಿಯೇ? ಷಟ್‌ಸ್ಥಲ ಸ್ವಾನುಭವವು ಅಂದೊಂದು ಪರಿ ಇಂದೊಂದು ಪರಿಯೇ? ಭಕ್ತಿ ವಿರಕ್ತಿ ಮುಕ್ತಿ ಉಪರತಿ ಜ್ಞಾನ ವೈರಾಗ್ಯ ಅಂದೊಂದು ಪರಿ ಇಂದೊಂದು ಪರಿಯೇ? ನಡೆ ನುಡಿ ಸಿದ್ಧಾಂತವಾದ ಶರಣನ ಘನವು ಅಂದೊಂದು ಪರಿ ಇಂದೊಂದು ಪರಿಯೇ? ಇಂತೀ ವಿಚಾರವನರಿಯದೆ ಪರಸಮಯದವನಾದರೂ ಆಗಲಿ, ಶಿವಸಮಯದವನಾದರೂ ಆಗಲಿ, ಮರ್ಮಗಟ್ಟಿ ನಡೆವ ಕರ್ಮಜೀವಿಗಳ ಬಾಯಲ್ಲಿ ಬಾಲ್ವುಳು ಸುರಿಯದೆ ಮಾಣ್ಬವೇ ಹೇಳಾ ಅಖಂಡೇಶ್ವರಾ?

## ಜ್ಞಾನವಿಡಿದು ಆಚರಿಸುವುದು.

೨೦೦ ವಿಶ್ವದಲ್ಲಿ ಜ್ಞಾನ ಪ್ರತಿಷ್ಠೆಯ ಮಾಡುತಿಪ್ಪರು ಗೋವಿನ ದೇಹದಲ್ಲಿ ಘೃತವಿಪ್ಪುದಯ್ಯ, ಆದು ಆ ಗೋವಿಂಗೆ ಪುಷ್ಟಿಯಾಗಲರಿಯದು. ಆ ಗೋವ ಪೋಷಿಸಿ, ಹಾಲ ಕರೆದು, ಕಾಸಿ, ಹೆಪ್ಪನಿಕ್ಕಿ, ಆ ದಧಿಯ ಮಥನವ ಮಾಡಿ, ಬೆಣ್ಣೆಯ ತೆಗೆದು, ಆ ನವನೀತ ತುಪ್ಪವ ಕಾಸಿ, ಆ ಗೋವಿಗೆ ಕುಡಿಸಲಾಗಿ, ದಿನದಿನಕ್ಕೆ ಪುಷ್ಟಿಯಪ್ಪುದು ತಪ್ಪದಯ್ಯ. ಈ ಪ್ರಕಾರ ಸತ್ಕ್ರಿಯೋಪಚಾರವ ಮಾಡಲಾಗಿ ಜ್ಞಾನವಹುದು ಜ್ಞಾನವಾಗಲಿಕ್ಕೆ ಸಮ್ಯಜ್ಞಾನವಹುದು ಸಮ್ಯಜ್ಞಾನವಾಗಿ, ಪ್ರಾಣವೇ ಲಿಂಗವಪ್ಪುದು ತಪ್ಪದು ಸಂದೇಹವಿಲ್ಲವಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ

೨೦೧ ಜಗವಾವರಿಸಿದ ಕಣ್ಣು ತನ್ನ ತಗುಳ್ದ ಕಾಯ ಕಾಣದು ತೀವ ಅರಿವು ತನ್ನ ತಗುಳ್ದ ಭವದ ಮೊನೆಯ ಕಾಣದು ವಿವೇಕ ಪರನಾದರೆ ಕಾಣದದು ಕಾಣುವುದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೦೨ ತಾ ಮುನ್ನೋ, ತನ್ನ ಮನ ಮುನ್ನೋ? ತನ್ನ ಕಾಯ ಮುನ್ನೋ, ತಾ ಮುನ್ನವೋ ಅಯ್ಯ? ಮುನ್ನೆಂಬಲ್ಲಿ ತಿಳಿಯದೆ

ಹೋಯಿತ್ತು ಮನ ಮುನ್ನೆಂಬಲ್ಲಿ ಕಾಯಕೊಳ್ಳಗಾಯಿತ್ತು ಕಾಯ ಮುನ್ನೆಂಬಲ್ಲಿ ಜಡಮಯ ಪ್ರಳಯಕೊಳ್ಳಗಾಯಿತ್ತು ತಾ ಮುನ್ನಲ್ಲ. ತನ್ನ ಮನ ಮುನ್ನಲ್ಲ ತಿಳಿದಾಗಲೇ ಮುನ್ನ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨೦೩ ಅರಿವೆನೆಂದರೆ 'ಸತ್ಯ ಜ್ಞಾನ ಮನಂತ ಬ್ರಹ್ಮ' ಎಂದು ಶೃತಿ ಸಾರುತ್ತಿದೆ ಮರೆದನೆಂದರೆ 'ಸಾಕ್ಷಾತ್ಸಚ್ಚಿದಾನಂದ ಭವ' ಎಂದು ಕೈವಲ್ಯೋಪನಿಷದ್ಘೋಷಿಸುತ್ತದೆ ಅರಿವು ವಸ್ತು ಸ್ವರೂಪ, ಮರಹು ಮಾಯಾಸ್ವರೂಪವೆಂದರಾಸು ನಿರ್ವಯಲ ಸ್ವರೂಪನಾದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೦೪ ಜನನ ಮರಣ ದೇಹ ಧರ್ಮಕ್ಕಲ್ಲದೆ ಜಂಗಮಕ್ಕೆಲ್ಲಿಯದೋ? ಕ್ಷುಧಾ ತೃಷೆ ಪ್ರಾಣಧರ್ಮವಲ್ಲದೆ ಜಂಗಮಕ್ಕೆಲ್ಲಿಯದೋ? ಸುಖ ದುಃಖ ಮನೋಧರ್ಮವಲ್ಲದೆ, ಜಂಗಮಕ್ಕೆಲ್ಲಿಯದೋ? ಜ್ಞಾನಾಜ್ಞಾನಂಗಳು ಮುಮುಕ್ಷುವಿಂಗಲ್ಲದೆ ನಿಮ್ಮಲ್ಲಿ ಸಮರಸವಾದ ಸಚ್ಚಿದಾನಂದ ಶಿವಯೋಗಿ ಜಂಗಮಕ್ಕೆಲ್ಲಿಯದೋ ಕಪಿಲಸಿದ್ಧಮಲ್ಲಿಕಾರ್ಜುನಾ?

೨೦೫ ನಿನ್ನ ದೇಹ ನೋಡುವಡೆ ಪಂಚ ಭೌತಿಕ ನೀ ನೋಡುವಡೆ ಜೀವಾಂಶಿಕ ನಿನ್ನ ಧನ ನೋಡುವಡೆ ಕುಬೇರನದು ನಿನ್ನ ಮನ ನೋಡುವಡೆ ವಾಯುವ ಕೂಡಿದ್ದು ವಿಚಾರಿಸಿ ನೋಡಿದರೆ ಬ್ರಹ್ಮನದು ನಾ ಮಾಡುವೆನೆಂದಡೆ ಅದು ಅವಿರಕ್ತಿ ಚೈತನ್ಯ ನಾ ತಿಳಿದಿಹೆನೆಂದಡೆ ಅದು ಜ್ಞಾನದ ಬಲ ಆ ಜ್ಞಾನವು ನಾ ಎಂದಡೆ ಇದಿರಿಟ್ಟು ತೋರುತ್ತಿದ ತೋರುವ ಆನಂದ ಮೂರ್ತಿ ನಾ ಎಂದಡೆ ಅದು ಸಾಕ್ಷಿಯಾಗಿ ನಿಂದಿತ್ತು ಸಾಕ್ಷಿ ಎಂಬುದ ತಿಳಿವು ತಿಳಿಯದೆಂಬುದಕ್ಕೆ ಬಯಲಾದ ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನತಂದ

೨೦೬ ಜ್ಞಾನವೆಂದು ವಿವಾದಿಸುವ ಅಣ್ಣಗಳಿರಾ, ಕೇಳಿರಯ್ಯಾ. ಜ್ಞಾನವೆಂದರೆ ಮಹತ್ವಗಳ ಮಾಡಿ ಮೆರೆದುದು ಜ್ಞಾನವೇ? ಅಲ್ಲಲ್ಲ ಜ್ಞಾನವೆಂದರೆ ಸ್ವರ್ಗದ ವಾರ್ತೆಯ ಕೇಳಿ ಕೀರ್ತಿಯ ಹಬ್ಬಿದುದು ಜ್ಞಾನವೇ? ಅಲ್ಲಲ್ಲ ಜ್ಞಾನವೆಂದರೆ ತತ್ಕಾಲಕ್ಕಾಗುವ ಸುಖ ದುಃಖಗಳ ಹೇಳಿದುದು ಜ್ಞಾನವೇ? ಅಲ್ಲಲ್ಲ ಇವೆಲ್ಲ ಸಾಧನೆಯ ಮಾತು ಅಘೋರಮುಖದಿಂದ ಹುಟ್ಟಿದ ಮಂತ್ರಗಳೆಲ್ಲ ಜಪಿಸಿದಲ್ಲಿ ಮಹತ್ವಗ

ಗಾದವು. ಸೂಕ್ಷ್ಮ ತಂತ್ರ ಗಣಿಸಿದಲ್ಲಿ ಸ್ವರ್ಗದ ವಾರ್ತೆಯ ಹೇಳಿದನು. ಪ್ರಸಂಗ ಚಿಂತಾಮಣಿಯ ನೋಡಿ ಸುಖದುಃಖಗಳ ಹೇಳಿದನು ಇವೆಲ್ಲ ಸಾಧನೆಯಯ್ಯಾ ನಿನ್ನರಿವು ಕೈಕರಣವಾಗಿರೆ, ದೇಹವಳಿದರೇನು, ದೇಹ ಧರಿಸಿ ಬಂದರೇನು, ಎಲೆ ಅಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ?

೨೦೭ ಸಿಂಹ ಮದಕರಿಯಮೇಲೆ ಹಾರುವುದಲ್ಲದೆ, ಮಹಿಷಿಯ ಮೇಲೆ ಹಾರುವುದೇ ಅಯ್ಯಾ? ಪಕ್ಷಿ ಆಕಾಶದಲ್ಲಿ ಹಾರುವುದಲ್ಲದೆ ಪಂಜರದಲ್ಲಿ ಹಾರದು ನೋಡಯ್ಯಾ! ನಮ್ಮ ಕಪಿಲಸಿದ್ಧಮಲ್ಲೇಶನನರಿವವರು ಜ್ಞಾನದಮೇಲೆ ಹಾರುವರಲ್ಲದೆ ಅಜ್ಞಾನದಲ್ಲಿ ಹಾರರು

೨೦೮. ತಿಳಿ ನೀರೆಂಬೆ, ತಿಳಿ ನೀರೆಂಬೆ ತಿಳಿ ನೀಯೆಂದು ಒಂದು ದಿನ ಅಂದಿಲ್ಲೆಲೋ ಮಾನವಾ ಕ್ಷಣಕ್ಕೆ ಕ್ಷಣಕ್ಕೆ ತಿಳಿ ನೀ ಎಂದರೆ ತಿಳುಹದೆ ತನ್ನ ನಿಜವ ಕೊಡನೇ ಕಪಿಲಸಿದ್ಧಮಲ್ಲೇಂದ್ರಾ?

೨೦೯ ತಿಳಿಯದ ಪ್ರಾಣದರ್ಗುವುದೇನೋ ಅಯ್ಯಾ? ತಿಳಿದು ತಿಳಿದು ಮಾಡಬೇಕು ಜಂಗಮಾರ್ಚನೆಯ ತಿಳಿದು ತಿಳಿದು ಮಾಡಬೇಕು ತಿಳಿಯದ ಮಾಡಲು ನಿನ್ನ ಸಿದ್ಧಿಗಳಿಗೆ ಸಿದ್ಧರಲ್ಲದೆ ನಿನ್ನಂಗ ದೂರೆಕೊಂಬ ಪರಿಯ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೧೦ ತೋರಿ ಕೆಡುವ ದೇಹ ನಾನೆಂದು ನಂಬದಿರಾ ಮನವೇ. ತೋರುವ ಅರಿವು ನಾನೆಂದು ನಂಬು ಕಂಡಯಾ ಮನವೇ ತೋರಿ ಕೆಡುವುದು ಮಾಯಾತ್ಮಕವು ಮನವೇ ತೋರಿ ತೋರುವುದದು ನಿರುಪಾಧಿಕ ನಿಜಾನಂದ ಕಪಿಲಸಿದ್ಧಮಲ್ಲಿಕಾರ್ಜುನ ಕಂಡೆಯಾ ಮನವೇ

೨೧೧ ಜಲದಲ್ಲಿ ಚಂದ್ರನಿಲ್ಲ, ಜಲವಿಲ್ಲ ಮಾಯಾತ್ಮಕ ವಸ್ತುವಿಲ್ಲ ವಸ್ತುವಾತ್ಮಕ ಮಾಯ ಇಲ್ಲ ಉಪಾಧಿಯಿಂದ ತೋರ್ಪುದು ಪುಲ್ಲ ನಿಜವೇ ಅಯ್ಯ? 'ಸ್ಥಾಣುಚೋರ ನ್ಯಾಯ'ದಂತೆ 'ಶುಕ್ತಿರಜತ ನ್ಯಾಯ'ದಂತೆ, 'ರಜ್ಜು ಸರ್ಪ ನ್ಯಾಯ'ದಂಗೆ ಅಧ್ಯಾರೋಪವಾದ ಅವಿದ್ಯೆಯಲ್ಲಿ ಲೇಸುಂಟೇ ಕಪಿಲಸಿದ್ಧಮಲ್ಲಿಕಾರ್ಜುನಾ?

೨೧೨ ಹೇಳಿದ ಬೋಧೆ ಶಿಲಾಲಿಪಿಯಂತಾದರೆ ಶಿಲಾಸದೃಶ ನೋಡಾ ಭವಕ್ಕೆ ಹೇಳಿದ ಬೋಧೆ ಜಲಲಿಪಿಯಾದರೆ ಜಲಸದೃಶ ನೋಡಾ! ಭವಕ್ಕೆ ಹೇಳಿದ ಬೋಧೆ ಗಟ್ಟಿಗೊಂಡರಾಗುವುದೆತ್ತ ನಿನ್ನ ಮಾಯಾ ಜಾಲವನೆಲೆ ಕಪಿಲಸಿದ್ಧಮಲ್ಲಿಕಾರ್ಜುನಾ?

೨೧೩. ಬೋಧವೆಂದರೆ ಕರ್ಣವನೂದಿ ಮಂತ್ರವ ಹೇಳಿದ್ದು ಬೋಧವೇ? ಅಲ್ಲಲ್ಲ ಬೋಧವೆಂದರೆ ತನುತ್ರಯ ಸಾಕ್ಷಿ, ನೀನೇ ಪರವಸ್ತು ಎಂಬುವದದೇ ನಿಜಬೋಧ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೧೪ ಬಸವನವ ಎರಡನೆಯ ಶಂಭುವೆನ್ನುವರು ನಾವು ಮೂರನೆಯ ಶಂಭುವೇನಯ್ಯ? ತನ್ನ ತಾ ತಿಳಿದಲ್ಲಿ ಎರಡನೆಯ ಶಂಭುವೆನಿಸಿದ ತನ್ನ ತಾ ಮರೆದಲ್ಲಿ ಮಹೀತಳದ ಮಾನವನೆನಿಸಿದ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೧೫. ಆವ ಜ್ಞಾನಿಯಾದರೇನು? ದೇಹಾವಸಾನದಲ್ಲಿಯ ಭಾವದಂತೆ ತಪ್ಪಲರಿಯದು ನೋಡಾ! ಆವ ಜ್ಞಾನಿಯಾದರೇನು ನೋಡಾ? ಭಾವವೆಂಬುದು ಜನ್ಮಕ್ಕೆ ಈಡು ನಿರ್ಭಾವವೆಂಬುದು ಜನ್ಮಕ್ಕೆ ಕಾಡುಗಿಚ್ಚು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೨೧೬. ಆಕಾಶದಲ್ಲಿಯ ಮೇಘದಂತೆ, ಜಲದಲ್ಲಿಯ ತೆರೆಯಂತೆ ಬರುತ್ತಿದೆ ನೋಡಾ ಈ ಘಟ ಬಂದದ್ದರಿಯೆ, ಹೋದದ್ದರಿಯೆ ನಿಂದ ವಸ್ತುವದು ನಿಜವೆಂದರಿದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೧೭ ಅರಿದ ಬಳಿಕ ಬ್ರಹ್ಮವೆಂಬುದು ಮೃಗಜಲ ನೋಡಾ ಅರಿದ ಬಳಿಕ ಬ್ರಹ್ಮವೆಂಬುದು ವಂಧ್ಯಾ ಪುತ್ರ ನೋಡಾ ಅರಿದ ಬಳಿಕ ಬ್ರಹ್ಮವೆಂಬುದು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಶಬ್ದಮುಗ್ಧ ನೋಡಾ ಕಲ್ಲಯ್ಯ

೨೧೮. ಮನದಲ್ಲಿ ಭೇದವಲ್ಲದೆ ವಸ್ತುವಿನಲ್ಲಿ ಭೇದವಿಲ್ಲವಯ್ಯ! ಕ್ರಿಯಾಕ್ರಿಯೆಯಲ್ಲಿ ಭೇದವಲ್ಲದೆ ಜ್ಞಾನರೂಪದಲ್ಲಿ ಭೇದವೇನಯ್ಯ ಚೈತನ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೨೧೯. ತಿಳಿದು ತಿಳಿದು ವಿಷಯಕ್ಕೆ ಮೈಗೊಟ್ಟರೆ ಅನುಭಾವಿಯೇ ಅಯ್ಯ? ಅಳಿದು ಅಳಿದು ಆನಂದಕ್ಕೆ ಮೈಗೊಟ್ಟರೆ ಅಜ್ಞಾನಿಯೇ ಅಯ್ಯ? ತಿಳಿದ ಬಳಿಕ ವಿಷಯಂಗಳಳಿಯಬೇಕು ಅಳಿದ ಬಳಿಕ ಎಳೆಯ ಚಂದ್ರಧರ ಕಪಿಲಸಿದ್ಧಮಲ್ಲಿಕಾರ್ಜುನನಾಗಲೇಬೇಕು

೨೨೦. ಮನವೆಂಬುದು ಬೇರಿಲ್ಲ ಮಹಾದೇವನ ಮಹಾ ಅರುಹು ನೋಡಾ ಸಂಕಲ್ಪ ವಿಕಲ್ಪಂಗಳ ಧರಿಸಿದಲ್ಲಿ ಮನವೆನಿಸಿತ್ತು. ಅದು ಅಳಿದಲ್ಲಿ ಮಹಾಜ್ಞಾನವೆನಿಸಿತ್ತು ಅಳಿದು ಭಾವ ತಲೆದೋರಿದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನೆನಿಸಿತ್ತು.

೨೨೧ ಜ್ಞಾನವದು ದುರ್ಲಭವಲ್ಲ ಅದರ ಭಾವ ದುರ್ಲಭವಯ್ಯ ಭಾವವದು ದುರ್ಲಭವಲ್ಲ ಅದರ ಏಕತ್ವವದು ದುರ್ಲಭ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೨೨೨ ಕೆರೆಯು ನೀರು, ಮರದಲ್ಲಿಯು ಪುಷ್ಪವ ಧರಿಸಿದರೇನು ಅಯ್ಯ? ಆಗುವುದೇ ಆಗುವುದೇ ಲಿಂಗಾರ್ಚನೆ? ನೀರನೆರೆಯಲಿಕ್ಕಾತನೇನು ಬಸಿಲಿಸಿಂದ ಬಳಲಿದನೇ? ಪುಷ್ಪದಿಂದ ಧರಿಸಲಿಕ್ಕಾತನೇನು ವಿಟರಾಜನೇ? ನಿನ್ನ ಮನವೆಂಬ ನೀರಿಂದ ಜ್ಞಾನವೆಂಬ ಪುಷ್ಪದಿಂದ ಪೂಜಿಸಬಲ್ಲಡೆ ಭಕ್ತನೆಂಬೆ, ಮಹೇಶ್ವರನೆಂಬೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೨೩ ನಿತ್ಯವೆಂದರೆ ಲಿಂಗ ಅನಿತ್ಯವೆಂದರೆ ಅಂಗ ನಿತ್ಯವೆಂದರೆ ಜ್ಞಾನ, ಅನಿತ್ಯವೆಂದರೆ ಅಜ್ಞಾನ ನಿತ್ಯ ಕಾರ್ಯವು ಸತ್ಕರ್ಮ, ಅನಿತ್ಯ ಕಾರ್ಯಗಳೇ ದುರ್ವಿಷಯಗಳು ವಿಷಯಗಳೇ ನಿತ್ಯಗಳಾಗಲು ಜ್ಞಾನಿ ಎಂದು, ಐಕ್ಯನೆಂದು, ಪ್ರಮಥನೆಂದು, ಕಪಿಲಸಿದ್ಧಮಲ್ಲಿಕಾರ್ಜುನನೆಂದು ಬೇರೆ ಉಂಟೇನೋ ಹಾವಿನಹಾಳ ಕಲ್ಲಯ್ಯ?

೨೨೪ ಜ್ಞಾನವಿಡಿದು ಆಚರಿಸಿದರಲ್ಲದೆ ಕ್ರಿಯೆವಿಡಿದು ಆಚರಿಸಲಿಲ್ಲವು ಕ್ರಿಯೆವಿಡಿದು ಆಚರಿಸಿದರು ಜ್ಞಾನವಿಡಿದು ಆಚರಿಸಲಿಲ್ಲವು ರೂಪುವಿಡಿದು ನಿರೀಕ್ಷಿಸುವರಲ್ಲದೆ ಅರೂಪುವಿಡಿದು ನಿರೀಕ್ಷಿಸರು. ಜ್ಞಾನವಿಡಿದಾಚರಿಸಿದರು ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಚನ್ನಬಸವಣ್ಣನವರು

೨೨೫ ಅಂಗವೆಂದರೆ ಅಜ್ಞಾನ ಲಿಂಗವೆಂದರೆ ಸುಜ್ಞಾನ ಲಿಂಗವಿಡಿದು ಆಚರಿಸುವರಲ್ಲದೆ ಅಂಗವಿಡಿದು ಆಚರಿಸರು ಬಸವಾದಿ ಪ್ರಮಥರು ಕಪಿಲಸಿದ್ಧಮಲ್ಲಿಕಾರ್ಜುನಾ

೨೨೬ ಬಂದ ಮಹೇಶ ಬಂದಂತೆ ಪೋಪನಲ್ಲ ನೋಡಯ್ಯ ಒಂದ ಬರವು ಭವಕ್ಕೆ ಆಗರ. ನಿಂದ ಬರವು ಜ್ಞಾನಕ್ಕೆ ಆಗರ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

# ಕ್ರಿಯಾ ಜ್ಞಾನವಿಡಿದಾಚರಿಸುವುದು.

೨೨೭ ಕ್ರಿವಿಡಿದು ಆಚರಿಸಬೇಕಲ್ಲದೆ ಅಕ್ರಿಯೆಯೊಡನಾಚರಿಸ ಲಾಗದು ಜ್ಞಾನವಿಡಿದು ನೋಡಬೇಕಲ್ಲದೆ ದೃಷ್ಟಿವಿಡಿದು ನೋಡ ಬಾರದು ಲಿಂಗವಿಡಿದು ಪೂಜಿಸುವುದಲ್ಲದೆ ಅಂಗವಿಡಿದು ಪೂಜಿಸಲಾ ಗದು ನಮ್ಮ ಕಪಿಲಸಿದ್ಧಮಲ್ಲಿಕಾಜು ನನಲ್ಲಿ

೨೨೮ ನೆನೆದರಾಗದು ಸಾಧಿಸದನ್ನಕ್ಕ ಸಾಧಿಸಿದರಾಗದು ತಿಳಿ ಯದನ್ನಕ್ಕ ತಿಳಿಯದರಾಗದು ಎಲೆ ಬಾಲಚಂದ್ರಧರ ಕಪಿಲಸಿದ್ಧಮಲ್ಲಿ ಕಾರ್ಜುನನ ಕೈವಲ್ಯ ಪದವು

೨೨೯ ಕ್ರಿಯೆ ಅದು ಚನ್ನಬಸವಣ್ಣನ ಎಡಪಾದ ಜ್ಞಾನ ವದು ಚನ್ನಬಸವಣ್ಣನ ಬಲಪಾದ ನಾನು ಅವರ ಚಮ್ಮಾವುಗೆ ನೀನು ಅವನ ಮನೆಯ ದಾಸನು ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೨೩೦ ಕ್ರಿಯಾ ಜ್ಞಾನವೆಂಬುದಕ್ಕೆ ಭೇದ ತಿಲಾಂಶವಿಲ್ಲ ನೋಡಾ "ದ್ವಂದ್ವೇನ ಭೇದ" ಎಂಬ ಅಥರ್ವಣ ಶಾಖೆಯದು ಸರಿಯೇ' ಸೂಕ್ಷ್ಮೇಂ ದ್ರಿಯ ನಿಗ್ರಹದಲ್ಲಿ ಜ್ಞಾನವನಿಸಿತ್ತು 'ಜ್ಞಾನಂ ವಿನಾ ಕ್ರಿಯಾ ನ ಭಾತಿ ಕ್ರಿಯಾ ವಿನಾ ನ ಭಾತಿ ತತ್' ಎನ್ಬೆ ಕಪಿಲಸಿದ್ಧಮಲ್ಲಿಕಾರ್ಜುನಾ

೨೩೧ ದೇಹಿ ಎಂಬುದು ಅವಿದ್ಯೆ ಎಂಬುವರು ಅದೆಂತಯ್ಯ? ದೇಹ ತಾನಿಲ್ಲದಿರೆ ಆಶ್ರಯಿಸುವ ಪರಿ ಎಂತಯ್ಯ? ಅರಿದರೆ ಆಶ್ರಯಿಸ ಮರೆವರೆ ಆಶ್ರಯಿಸುವ ದೇಹವದು ಜಡ ಸಾಕ್ಷಿ ಅಜಡವೆಂಬ ಭಾವ ವಚನದಲಲ್ಲದ ಅನುಭಾವದಲಿಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೩೨ ಮಾನವಿಲ್ಲದ ಭೋಜನವದು ಶ್ವಾನನ ಮಾಂಸವಯ್ಯ. ಜ್ಞಾನವಲ್ಲದ ಕ್ರಿಯದು ಸಿದ್ಧಗಳಿಗೀಡವಯ್ಯ ಧ್ಯಾನವಿಲ್ಲದ ಪೂಜೆ ಯದು ಕಾನನದ ಜ್ಯೋತಿಯಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನ ನೀನಿಲ್ಲದ ಭಕ್ತಿಯದು ಚಾಂಡಾಲ ಪಾಕವಯ್ಯ

೨೩೩ ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪ್ಪುದು. ಅರಿವು ಮರೆ ದಲ್ಲಿ ಜ್ಞಾನ ಹೀನವಾಗಿಪ್ಪುದು ಜ್ಞಾನವ ಮರೆದಲ್ಲಿ ಬೆಳಗಿನ ಕಳೆ ಹೋಯಿತ್ತು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಆವರಿಗೆ ಮರೆಯಾಗಿ ತೊಲಗಿತ್ತು

೨೩೪ ಜ್ಞಾನದಲ್ಲಿ ಅರಿವರೇನಯ್ಯ, ಸತ್ಕ್ರಿಯಾಚಾರ ಸಂದದನ್ನಕ್ಕರ? ನೆನೆದ ಮಾತ್ರದಲ್ಲಿ ಕಾಂಬುದೇ, ಕಾರ್ಯವಲ್ಲದೇ? ಕುರುಡ ಕಾಣ ಪಥವ ಹೆಳವ ನಡಿಯಲರಿಯ ಒಂದಿಲ್ಲದಿದ್ದರೆ ಒಂದಾಗದು ಜ್ಞಾನವಿಲ್ಲದ ಕ್ರಿ ಜಡನು ಕ್ರಿ ಇಲ್ಲದ ಜ್ಞಾನ ಭ್ರಾಂತು ಇದು ಕಾರಣ ಸಿದ್ಧಸೋಮನಾಥನಲ್ಲಿ ಎರಡೂ ಬೇಕು

೨೩೫ ಕಣ್ಣೂ ಕಾಲೂ ಎರಡುಳ್ಳವ ದೂರ ಎಯ್ದುವನಲ್ಲದೆ, ಕಣ್ಣು ಕಾಲೂ ಎರಡರೊಳಗೆ ಒಂದಿಲ್ಲದವನು ದೂರ ಎಯ್ದಲರಿಯನೆಂಬಂತೆ, ಜ್ಞಾನ ರಹಿತವಾಗಿ ಕ್ರಿಯೆಯನೆಷ್ಟು ಮಾಡಿದರೇನು? ಅವನು ಕಣ್ಣಿಲ್ಲದವನ ನಡೆಯಂತೆ ಕ್ರಿಯಾ ರಹಿತವಾಗಿ ಜ್ಞಾನಿಯಾದಡೇನು, ಅದು ಕಾಲಿಲ್ಲದವನ ಇರವಿನಂತೆ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವ ಬೆರಸುವಡೆ, ಜ್ಞಾನವೂ ಕ್ರಿಯೆಯೂ ಎರಡೂ ಬೇಕು

೨೩೬ ಅಗ್ನಿ ಸುಡಲಿಲ್ಲದೆ, ಸುಳಿಯಲರಿಯದು ವಾಯು ಸುಳಿವದಲ್ಲದ, ಸುಡಲರಿಯದು ಆ ಅಗ್ನಿ ವಾಯುವ ಕೂಡಿದಲ್ಲದೆ, ಅಡಿ ಇಡಲರಿಯದು ಈ ಪರಿಯಂತೆ ನರರರಿವರೆ ಕ್ರಿಯಾಜ್ಞಾನಭೇದ ರಾಮನಾಥಾ

ಅರ್ಥ:— ಪಾವಕನು ಇದಿರಿಟ್ಟ ತರಗೆಲೆ ಕಾಷ್ಠಂಗಳನು ದಹಿಸಬಲ್ಲುದಲ್ಲದೆ ಮುಂದಕ್ಕೆ ಅಡಿ ಇಡಲರಿಯದು ಮಾರುತನು ತರಗೆಲೆ ತೃಣಂಗಳನು ಸ್ವಸ್ಥಾನದಿಂದ ಪರಸ್ಥಾನಕ್ಕೆ ಹಾಕಬಲ್ಲುದಲ್ಲದೆ ದಹಿಸಲರಿಯದೆಲ್ಲವನು ಆ ಪಾವಕನು ಮಾರುತ ಸಂಯೋಗದಿಂದಲ್ಲದೆ ಹೆಜ್ಜೆ ಇಟ್ಟು ಚರಿಸಲರಿಯದು ಈ ಉಪಮಾನದ ಹಾಗೆ ಬಹಿರಂಗದ ಕ್ರಿಯೆಯಿಂದ ಅಂತರಂಗದ ಜ್ಞಾನ ಪ್ರಭಾವಿಸಿ, ಸರ್ವಾಂಗಗಳ ಪ್ರಪಂಚ ದಹಿಸಿ, ಉಭಯ ಲಿಂಗ ಸಂಗ ಸಂಬಂಧವ ಮಾಡಿಕೊಂಡು ಜ್ಞಾನ ಕ್ರಿಯಾಯುಕ್ತನಾಗಿ ಆಚರಿಸುವ ವಿಚಾರವ ಪಶು ಪ್ರಾಣಿಗಳು ಅರಿಯರೆಂಬುದರ್ಥ

೨೩೭. ಕ್ರಿಯೆಯೇ ಜ್ಞಾನ ಆ ಜ್ಞಾನವೇ ಕ್ರಿಯೆ ಜ್ಞಾನವೆಂದರೆ ತಿಳಿಯುವುದು ಕ್ರಿಯೆ ಎಂದರೆ, ತಿಳಿದಂತೆ ಮಾಡುವುದು ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ ಅದರಂತೆ ಆಚರಿಸುವುದೇ ಕ್ರಿಯೆ ಅಂತು ಆಚರಿಸದಿದ್ದರೆ, ಅದೇ ಅಜ್ಞಾನ ನೋಡಾ ಕೂಡಲಚೆನ್ನಸಂಗಮದೇವಾ.

೨೩೮. ಕ್ರಿಯೆ ಜಡವೆಂಬರು, ಜ್ಞಾನ ಅಜಡವೆಂಬರು ಅದೆಂತಯ್ಯ? ನೀತಿಯು ಹೇಳಿದ್ದು ಜಡವೇ? ಕಷ್ಟವಿಲ್ಲದೆ ಬಂದಂತೆ ಬೊಗಳಿ, ಭೋಗಿಸಿ, ಭವಕ್ಕೆ ಹೋಗುವುದು ಅಜಡವೇ? ಕ್ರಿಯಾ ಜ್ಞಾನವೆಂಬ ಉಭಯು ಶಬ್ದದರ್ಥವನರಿಯದೆ, ಕಂಡ ಕಂಡ ಹಾಗೆ ಬೊಗಳುವ ಹೊಲೆ ಮಾದಿಗರನು ಏನೆಂಬೆ ಕೂಡಲಚನ್ನಸಂಗಮದೇವಾ?

೨೩೯ ಕ್ರಿಯೆಯೇ ಅಧಿಕವೆಂಬ ದೊಡ್ಡ ಸಿದ್ಧಾಂತಿಗಳ ಮಾತು ಸೊಗಸದಯ್ಯ ಎನಗೆ ಅದೇನು ಕಾರಣವೆಂದರೆ, ಆವುದಾನೊಂದು ಪಕ್ಷಿ ಉಭಯು ರೆಕ್ಕೆಯಿಂದ ಗಗನಕ್ಕೆ ಹಾರುವಂತೆ, ಅಂತರಂಗದಲ್ಲಿ ಸಮ್ಯಜ್ಞಾನ, ಬಹಿರಂಗದಲ್ಲಿ ಸತ್ಕ್ರಿಯಾ ಸಮ್ಯಜ್ಞಾನ ಸಂಪನ್ನರಾದ ಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ.

೨೪೦. ಕ್ರಿಯೆ ಇಲ್ಲದ ಜ್ಞಾನ ಪ್ರಯೋಜನವಿಲ್ಲವಯ್ಯ ಅದು ಹೇಗೆಂದಡೆ, ದೇಹವಿಲ್ಲದ ಪ್ರಾಣಕ್ಕೆ ಆಶ್ರಯು ಉಂಟೇ ಅಯ್ಯಾ? ಆ ಪ್ರಾಣವಿಲ್ಲದೆ ಕಾಯಕ್ಕೆ ಚೈತನ್ಯ ಉಂಟೇ ಅಯ್ಯಾ? ಅದು ಕ್ರಿಯೆ ಇಲ್ಲದೆ ಜ್ಞಾನಕ್ಕೆ ಆಶ್ರಯುವಿಲ್ಲ ಜ್ಞಾನವಿಲ್ಲದೆ ಕ್ರಿಯೆಗೆ ಆಶ್ರಯುವಿಲ್ಲ ಕ್ರಿಯಾ ಜ್ಞಾನ ಪ್ರಕಾಶವಿಲ್ಲದೆ ಲಿಂಗಕ್ಕೆ ಆಶ್ರಯವಿಲ್ಲ ಇದು ಕಾರಣ ಜ್ಞಾನ ಕ್ರಿಯೋಪಚಾರಂಗಳಿರಬೇಕೆಂದೆನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ

## ಅನುಭಾವಿಯಾಗಿ ವರ್ತಿಸುವುದು.

೨೪೧ ಅಯ್ಯ ನಿಮ್ಮ ಅನುಭಾವದಿಂದ ಎನ್ನ ತನುವು ಹಾಳಾಯಿತ್ತಯ್ಯಾ ನಿಮ್ಮನುಭಾವದಿಂದ ಎನ್ನ ಮನ ಹಾಳಾಯಿತ್ತಯ್ಯಾ ಅಯ್ಯ ನಿಮ್ಮ ಅನುಭಾವದಿಂದ ಎನ್ನ ಕರ್ಮ ಛೇದನವಾಯಿತ್ತಯ್ಯ. ನಿಮ್ಮವರು ಅಡಿಗಡಿಗೆ ಹೇಳಿ, ಭಕ್ತಿ ಎಂಬ ಒಡವೆಯನು ದಿಟಮಾಡಿ ತೋರಿದರು ಕಾಣಾ ಕೂಡಲಸಂಗಮದೇವಾ

೨೪೨ ಮರುಳ ಕಂಡ ಕನಸಿನ ಪರಿಯಂತೆ ಶಿವಾಚಾರ ಕರಿಯು ಕನ್ನಡಿಯೊಳಗಡಗಿದಂತಯ್ಯ ಗುಣಿಯುವಗುಣಿಯೊಡನಾಡಿದರೆ, ಅದೇ

ಆತನ ಕರ್ಮದ ಫಲ ನೋಡಾ ಕೂಡಲಸಂಗಮದೇವನ ಶರಣರನು
ಭಾವ ಭವದುಃಖಿಗಳಿಗೆ ವೇದ್ಯವಾಗದು

೩೪೩ ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವ
ಜ್ಞಾನ, ಶಿವಭಕ್ತಿ, ಲಿಂಗಸ್ಥಲವಳವಡದು ಜಂಗಮಸ್ಥಲವಳವಡದು
ಪಾದೋದಕ ಪ್ರಸಾದಸ್ಥಲವಳವಡದು ನರಕದಲ್ಲಿ ಬೀಳುವ ಕರ್ಮಿಗ
ಳಿಗೆ ಕೂಡಲಸಂಗನ ಶರಣರನುಭಾವ ನೆಲೆಗೊಳ್ಳದು

೩೪೪ ಅಯ್ಯ, ನಿಮ್ಮ ಅನುಭಾವದಿಂದ ಎನ್ನ ತನುವು ಹಾಳಾ
ಯಿತ್ತಯ್ಯಾ? ನಿಮ್ಮನುಭಾವದಿಂದ ಎನ್ನ ಮನ ಹಾಳಾಯಿತ್ತಯ್ಯ?
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಕರ್ಮ ಛೇದನವಾಯಿತ್ತಯ್ಯ?
ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿ ಎಂಬ ಒಡವೆಯನು ದಿಟಮಾಡಿ
ತೋರಿದರು ಕಾಣಾ ಕೂಡಲಸಂಗಮದೇವಾ

೩೪೫ ಅಯ್ಯಗಳನುಭಾವಕ್ಕಲ್ಲದೆ ನಿನ್ನ ಪಾಪಕ್ಕೆ ಅವರು ಅಯ್ಯ
ಗಳೇ? ಅಯ್ಯಗನುಭಾವ, ನಿನ್ನ ಮನೋಭಾವ ಏಕವಾದರೆ ಅಯ್ಯ
ತನುಮೇರಿತ್ತಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೩೪೬ ಒಂದಲ್ಲುಪಚರಿಸುವದಲ್ಲದೆ ನಿಂದನಿಂದಲ್ಲುಪಚರಿಸುವುದು
ಭಕ್ತಿಯ ಕೊಂಕು ನೋಡಯ್ಯ ಉಪಚಾರಕ್ಕೆ ಬಂದಾತ ಜಂಗಮ
ನಲ್ಲ ನೋಡಯ್ಯ ಉಪಚರಿಸಿದವ ಭಕ್ತನಲ್ಲ ಅನುಭವಕ್ಕೆ ಬಂದಿಹ
ನಯ್ಯ ಜಂಗಮ ಅನುಭವಸ್ಥ ಮಾಡುವನಯ್ಯ ಉಪಚಾರವ ಭಕ್ತ
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ

೩೪೭ ವಚಿಸಿ ಅನುಭಾವಿಯಾಗದವ ಪಿಶಾಚಿಯಯ್ಯ ವಚಿಸಿ
ಅನುಭಾವಿಯಾದವ ಪಂಡಿತನಯ್ಯ ವಿದ್ಯ ಎಂಬುದು ಅಭ್ಯಾಸಿಕನ
ಕೈವಶ ಅವಿದ್ಯ ಎಂಬುದು ಸರ್ವರಲ್ಲಿ ವಶ ವಿದ್ಯ ಅವಿದ್ಯೆಯನರಿತು
ಜಗದ್ವೇದ್ಯನಾಗಬಲ್ಲರೆ ಮಹಾ ಪಂಡಿತ ನೋಡಾ ಕಪಿಲಸಿದ್ಧಮಲ್ಲಿ
ಕಾರ್ಜುನಾ

೩೪೮ ಗುರುಮುಖದಿಂದಾಗಲಿ ಶಾಸ್ತ್ರಮುಖದಿಂದಾಗಲಿ ಮತ್ತಾವ
ಮುಖದಿಂದಾಗಲಿ ತಿಳಿದನುಭಾವಿಯೋ ಸಂಸ್ಕಾರಿ ನೋಡಾ ಆತನೇ
ಪರಮ ವೀರಶೈವ ನೋಡಾ ಆತನೇ ಕಪಿಲಸಿದ್ಧ ಮಲ್ಲಿಕಾರ್ಜುನ
ನೋಡಾ ಕಲ್ಲಯ್ಯ

೨೪೯ ಕಾಯಾನುಗ್ರಹಭಾವಿಗಳು ಕಾಯದಲ್ಲಿಯೇ ಮುಕ್ತರು ಜೀವಾನುಗ್ರಹಭಾವಿಗಳು ಜೀವದಲ್ಲಿಯೇ ಮುಕ್ತರು ಪ್ರಾಣಾನು ಗ್ರಹಭಾವಿಗಳು ಪ್ರಾಣದಲ್ಲಿಯೇ ಮುಕ್ತರು ಪವನಾನುಗ್ರಹಭಾವಿ ಗಳು ಪವನದಲ್ಲಿಯೇ ಮುಕ್ತರು ಇಂತಿವರೆಲ್ಲರು ಲಿಂಗಾನುಭಾವಿಗಳಿ ಗೆಂತು ಸರಿ ಎಂಬೆನಯ್ಯ? ಆದಿ ಅನಾದಿಯ ಸಂದಳಿಯಿತ್ತು ಪ್ರಣವ ಪ್ರಜ್ವಲಿತವಾದ ಕಾಲ ಕರ್ಮವಳಿದು, ಪ್ರಾಣಲಿಂಗವಾಯಿತ್ತು ನೋಡಾ ಕೂಡಲ ಚನ್ನಸಂಗಮದೇವಾ.

೨೫೦ ಭಕ್ತಿಗೆ ಅನುಭಾವವೇ ಬೀಜ ಕಾಣಿರೋ ಭಕ್ತಿಗೆ ಅನು ಭಾವವೇ ಆಚರಣೆ ಕಾಣಿರೋ ಭಕ್ತಿಗೆ ಅನುಭಾವವೇ ಸಕಲೈಶ್ವ ರ್ಯದ ಶೃಂಗಾರ ಕಾಣಿರೋ ವೀರಶೈವಾಚಾರ ಸಂಪನ್ನರೆನಿಸುವ ಪರಮ ಸದ್ಭಕ್ತನಿಗೆ ಅನುಭಾವವೇ ಅರಿವಿನ ಗೊತ್ತು ಕಾಣಿರೋ ಅದು ಕಾರಣವಾಗಿ ಅನುಭಾವವಿಲ್ಲದವನ ಭಕ್ತಿ ಎಳತಟಗೊಳಿಸಿತ್ತು. ಅನು ಭಾವವನರಿಯದವ ಕಾಮುಕ ಕಾಣಿರೋ ಆ ಮಹಾನುಭಾವವ ಮಾಡುವಲ್ಲಿ ಸಕಲ ಸಂಚಲವಳಿದು ವಿನಯದಿಂದೆ ಕೇಳದಿರ್ದೊಡೆ, ನಮ್ಮ ಕೂಡಲಚನ್ನಸಂಗಮದೇವರು ಅಘೋರ ನರಕದಲ್ಲಿಕ್ಕದೆ ಮಾಣ್ಬನೇ?

೨೫೧ ಕರ್ಮಿಯ ಕರ್ಮ ನಿಃಕರ್ಮವಲ್ಲೆಂದು ನಂಬಬಾರದಯ್ಯ ಮುಮುಕ್ಷುವಿನ ಮೋಕ್ಷ ಮೂರರಲ್ಲೆಂದು ನಂಬಬಾರದಯ್ಯ ಅಭ್ಯಾ ಸಿಯ ಮೋಕ್ಷ ಜನ್ಮದ್ವಯದಲ್ಲೆಂದು ನಂಬಬಾರದಯ್ಯ ಅನುಭಾವಿಯ ಜನ್ಮ ಒಂದರಲ್ಲೆಂದು ನಂಬಬಹುದೇ ಅಯ್ಯ? ಆರೂಢನ ಜನ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಜನ್ಮವೆಂದು ನಂಬಲೇಬೇಕು ಹಾವಿನಹಾಳ ಕಲ್ಲಯ್ಯ

೨೫೨ ತ್ರಿಕರಣ ಶುದ್ಧವಾಗಿ ಆಚಾರ ಪೂರಿತವಾಗಿ ಅನುಭಾವ ಯುಕ್ತನಾಗಿ ನಿಮ್ಮ ನೆರೆನಂಬಿ ಮಾಡಿದೊಡೆ ನಿಜಮುಕ್ತಿಯಹುದು ಅನುಭಾವ ಇಲ್ಲದ ಭಕ್ತಿ ಎಳತಟಗೊಳಿಸುವುದು ಅತಿ ಚಪಳಿಗನಾದ ಜಂಗಮ, ಸಂಸಾರಿಯಾದ ಭಕ್ತ, ನಿಃಸಂಸಾರಿಯಾದ ವೈರಾಗ್ಯವು, ಸಂಸಾರ ನಿಷ್ಠೆಯು, ಒಂದಾದೊಡೆ ತೆರಹಿಲ್ಲದಿರ್ದ ನಮ್ಮ ಕೂಡಲ ಚನ್ನಸಂಗಮದೇವಾ

೨೫೩ ಗುರುಲಿಂಗ ಜಂಗಮವು ಸನ್ನುತವಾದ ಕ್ರಿಯೆಯುನಹು ೦ಾಗದೆಂಬುವರು. ಸತ್ಕ್ರಿಯೆ ಪಿಡಿದು ತನುವ ಗವಿಸುವುದು. ಅರು ಹುವಿಡಿದು, ಮನವ ಗವಿಸುವುದು. ಸಾಕ್ಷಿ॥ 'ಕ್ರಿಯಾದ್ವೈತ ನ ಕರ್ತವ್ಯಂ। ಭಾವಾದ್ವೈತ ಸಮಾಚರೇತ್। ಕ್ರಿಯಾ ನಿರ್ವಹತೇ ಯಸ್ತು। ಭಾವ ಶುದ್ಧಂತು ಶಾಂಕರೀ' ಎಂದುದಾಗಿ ಅನುಭಾವದಿಂದೆ ಸಕಲೇಂದ್ರಿಯಂ ಗಳು ನಮ್ಮ ಕೂಡಲಚನ್ನಸಂಗಯ್ಯನಲ್ಲಿ ತದ್ರೂಪು

೨೫೪ ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವ ಜ್ಞಾನ, ಶಿವಭಕ್ತಿ, ಲಿಂಗಸ್ಥಲವಳವಡದು, ಜಂಗಮಸ್ಥಲವಳವಡದು, ಪಾದೋದಕ ಪ್ರಸಾದಸ್ಥಲವಳವಡದು, ನರಕದಲ್ಲಿ ಬೀಳುವ ಕರ್ಮಿಗ ಳಿಗೆ ಕೂಡಲಸಂಗನ ಶರಣರನುಭಾವ ನೆಲೆಗೊಳ್ಳದು

## ಶರಣರ ವಚನಾನುಭವದಂತೆ ನಡೆ.

೨೫೫. ನಮ್ಮ ಸಡಾವಳಿಗೆ ನಮ್ಮ ಪುರಾತರ ನುಡಿಯೇ ಇಷ್ಟ ವಯ್ಯ ಸ್ಮೃತಿಗಳು ಸಮುದ್ರವಾಗಲಿ ಶೃತಿಗಳು ವೈಕುಂಠ ಸೇರಲಿ. ಪುರಾಣಗಳು ಅಗ್ನಿಯ ಸೇರಲಿ ಆಗಮಗಳು ವಾಯುವ ಹೊಂದಲಿ ಎಮ್ಮ ನುಡಿ ಕಪಿಲಸಿದ್ಧಮಲ್ಲಿಕಾರ್ಜುನ ಮಹಾಲಿಂಗದ ಹೃದಯದೊಳು ಗ್ರಂಥಿಯಾಗಿರಲಿ

೨೫೬ ಪುರಾಣವ ಹೇಳಿದವರೆಲ್ಲ ಪುರಾಣಿಕರು ನೋಡಾ ಭವ ಭವದ ಶಾಸ್ತ್ರವ ಹೇಳಿದವರೆಲ್ಲ ಶಾಸ್ತ್ರಿಗಳು ನೋಡಾ ವೇದಾಂತವ ಹೇಳಿದವರೆಲ್ಲ ವೇದಾಂತಿಗಳು ನೋಡಾ ಭವಭವದಲ್ಲಿ ಆದ್ಯರ ವಚ ನವ ಹೇಳಿದವರೆಲ್ಲ ಪುರಾತನರು ನೋಡಾ, ಭವಭವದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನಾ

೨೫೭ ಎಲ್ಲ ಪುರಾಣಕ್ಕೆ ಹೆಸರುಂಟು ನಮ್ಮ ಪುರಾಣಕ್ಕೆ ಹೆಸ ರಿಲ್ಲ ನೋಡಯ್ಯ ಲಿಂಗವ ಮಹತ್ವ ಹೇಳಿದಲ್ಲಿ ಲಿಂಗ ಪುರಾಣವೆನಿ ಸಿತ್ತು ಷಣ್ಮುಖನ ಮಹತ್ವ ಹೇಳಿದಲ್ಲಿ ಸ್ಕಂದ ಪುರಾಣವೆನಿಸಿತ್ತು

ವೀರಭದ್ರನ ಮಹತ್ಮೆ ಹೇಳಿದಲ್ಲಿ ದಕ್ಷಖಂಡವೆನಿಸಿತ್ತು ಶಿವನ ಮಹಿಮೆ ಕಾಶೀ ಮಹಿಮೆ ಹೇಳಿದಲ್ಲಿ ಶಿವಪುರಾಣ ಕಾಶೀಖಂಡವೆನಿಸಿತ್ತು ಪಾರ್ವತಿಯ ಮಹಾತ್ಮೆ ಹೇಳಿದಲ್ಲಿ ಕಾಳೀ ಪುರಾಣವೆನಿಸಿತ್ತು ನಮ್ಮ ಪುರಾಣ ಹೆಸರಿಡಬೇಕೆಂದರೆ, ನಿಃಶಬ್ದ ನಿರವಯಲ ಪುರಾಣ ತಾನೆಯಾಯಿತ್ತ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೫೮ ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು ವ್ಯವಹಾರಿಕನ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಯಿತ್ತು ಇವೆಲ್ಲ ಭವಕ್ಕೆ ಕಾರಣವಲ್ಲದ ಭವರಹಿತ ಜ್ಞಾನವು ಸಾಧ್ಯವಾಗುವದು ದುರ್ಲಭವಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೨೫೯. ಓದಿದ ಫಲ ಕೂಚಭಟ್ಟನಂತಾಗಬಾರದು. ಓದಿದ ಫಲ ಪಾರಾಶರನಂತಾಗಬಾರದು ಓದಿದ ಫಲ ಮಯೂರನಂತಾಗಬಾರದು ಓದಿದ ಫಲ ನಮ್ಮ ಹಾವಿನಹಾಳ ಕಲ್ಲಯ್ಯನ ಮನೆಯ ಶ್ವಾನನಂತಾಗಬೇಕು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೬೦ ಅವು ಬಯಲಾದಂದಿಂಗೆ ಎಮ್ಮ ಪುರಾಣ ಸಾಗವೇನಯ್ಯ? ಎಮ್ಮ ಪುರಾಣವಾದಂದಿಂಗೆ ಜನರು ನಾಮವ ಹೊತ್ತು ನಡೆಯರೇನಯ್ಯ? ಎಮ್ಮ ಪುರಾಣ ಶಿವಪುರಾಣ ಎಮಗೆ ಗುರುಲಿಂಗ ಜಂಗಮತ್ರಯವು ಒಂದೇ ಎಂದು ತಿಳಿವ ಅರುಹಿನ ಜ್ಞಾನ ಪುರಾಣ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೨೬೧ ಕಲ್ಕುಟಿಗನ ಕೈಯಲ್ಲಿ ಕಲ್ಲುಳಿ ಕೊಟ್ಟರೆ ಕೊಟ್ಟಂತಲ್ಲದೆ ಕಲ್ಲು ರೂಪಾಗಿ ಬಾರದಯ್ಯ ಆಸ್ಯರ ವಚನ ಅವಿದ್ಯಾವಂತರ ಜಿಹ್ವೆಯಲ್ಲಿದ್ದರೆ ಇದ್ದಂತೆ ಅಲ್ಲದ, ವಿದ್ಯಾಮಯ ಕೀರ್ತಿಯಾಗನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೨೬೨ ವ್ಯಾಕರಣವನೋದಿದಲ್ಲಿ ಶಬ್ದ ಶುದ್ಧಿಯಲ್ಲದೆ ಮನ ಶುದ್ಧವಾಗಿ ಜ್ಞಾನ ಶುದ್ಧಿಯಾಗದು. ಛಂದಸ್ಸನು ಸಾಧಿಸಿದಲ್ಲಿ ಕವಿತಾ ಶುದ್ಧಿಯಲ್ಲದೆ ಕವಿತೆಯ ಸಾಧಿಸಿ ವ್ಯಾಸನಂತೆ ಚಿರಂಜೀವಿಯಾಗನು ಅಷ್ಟಾದಶ ಪುರಾಣವ ಸಾಧಿಸಿದಲ್ಲಿ ವಾಕ್ಶುದ್ಧಿಯಲ್ಲದೆ ಕಪಿಲಸಿದ್ಧಮಲ್ಲಿಕಾರ್ಜುನ ಮಹಾದೇವನ ದೇಹ ಸ್ವಭಾವ ಶುದ್ಧಿಯಾಗದು ನೋಡಾ

೨೬೩ ವೇದವನೋದಿ ವೇದಾಧ್ಯಯನವ ಮಾಡಿದರೇನು? ಬ್ರಾಹ್ಮಣನಾಗಬಲ್ಲನೇ? ಬ್ರಹ್ಮನೇತ್ರಗಳ ಶುಕ್ಲ ಶೋಣಿತದಿಂದ ಜನಿಸಿದರೇನು? ಬ್ರಾಹ್ಮಣನಾಗಬಲ್ಲನೇ? ಯಜನಾದ್ಯಷ್ಟ ಕರ್ಮಂಗಳ ಬಿಡದೆ ಮಾಡಿದರೇನು? ಬ್ರಾಹ್ಮಣನಾಗಬಲ್ಲನೇ? 'ಬ್ರಹ್ಮ ಜಾನಾತಿ ಬ್ರಾಹ್ಮಣ' ಎಂಬ ವೇದ ವಾಕ್ಯವನರಿತು ಬ್ರಹ್ಮಭೂತನಾದಾತನೇ ಬ್ರಾಹ್ಮಣ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೬೪. ಗುಣದಿಂದ ಹಾರುವನಲ್ಲದೆ ಅಗಣಿತ ವಿದ್ಯಾಭ್ಯಾಸದಿಂದ ಹಾರುವನಲ್ಲ ನೋಡಾ ಹಾರಬೇಕು ಮಲತ್ರಯಂಗಳ ಹಾರಬೇಕು ಸೃಷ್ಟಿ ಸ್ಥಿತಿ ಲಯವ ಹಾರಬೇಕು ಸರ್ವಹಾರ ಕಪಿಲಸಿದ್ಧಮಲ್ಲಿಕಾರ್ಜುನ ಆಹಾರದಲ್ಲಿ

## ಕ್ರಿಯೆಯಲ್ಲಿ ಪ್ರಗತಿ.

೨೬೫ ಸ್ಥಲವಿಡಿದಾಚರಿಸಬೇಕೆಂಬುವನ ಭಾಷೆ ಕಟ್ಟಳಿನ ಭಾಷೆ ಭಕ್ತನಾಗಿ ಭಕ್ತಸ್ಥಲವಾಚರಿಸುವುದು ಯೋಗ್ಯವಯ್ಯ ಭಕ್ತನಾಗಿ ಮಹೇಶಸ್ಥಲ ಅಳವಡಬಾರದೇನಯ್ಯ? ಭಕ್ತನಾಗಿ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯಸ್ಥಲವಳವಡಬಾರದೇನಯ್ಯ? ಮನೆಯಲ್ಲಿದ್ದ ಲೆತ್ತಗಳು ಮನೆಯ ಮೀರಿ ಮೀರಿ ಹಾರಬಾರದೇನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೨೬೬ ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಹೇಶ್ವರ, ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ, ಮೆಲ್ಲಮೆಲ್ಲನೆ ಶರಣ, ಮೆಲ್ಲಮೆಲ್ಲನೆ ಐಕ್ಯನಾದೆವೆಂಬರು ನಿಮ್ಮ ಶರಣರು ತಾವೇನು ಮರುಜೇವಣಿಯ ಕೊಂಡಿದ್ದರೇ? ಅಮೃತ ಸೇವನೆಯ ಮಾಡಿದ್ದರೇ? ಆವ ಸ್ಥಲದಲ್ಲಿ ನಿಂದಿದ್ದರೂ ಆ ಸ್ಥಲದಲ್ಲಿ ಷಟ್‌ಸ್ಥಲವಾಗದಿದ್ದಡೆ, ಆ ಭಕ್ತನ ಬಾಯಲ್ಲಿ ಹುಡಿಮಣ್ಣ ಹೊಯ್ಯ ಹೋಗನೇ ನಮ್ಮ ಕೂಡಲ ಚನ್ನಸಂಗಮದೇವಾ?

೨೬೭ ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ. ಮೆಲ್ಲಮೆಲ್ಲನೆ ಮಹೇಶ್ವರನೆನಿಸಿಕೊಂಬೆ ಮೆಲ್ಲಮೆಲ್ಲನೆ ಪ್ರಸಾದಿ ಎನಿಸಿಕೊಂಬೆ ಮೆಲ್ಲಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ ಮೆಲ್ಲಮೆಲ್ಲನೆ ಷಟ್‌ಸ್ಥಲವ ಮೀರಿ ನಿರವಯಸ್ಥಲವನೆಯ್ದುವೆನಯ್ಯ ಕೂಡಲಸಂಗಮದೇವಾ.

೨೬೮ ಕ್ರಿಯೆ ಎಂಬುದು ಪಿಪೀಲಿಕನ ಗುಣ. ಜ್ಞಾನವೆಂಬುದು ವಿಹಂಗನ ಗುಣ. ಮೆಲ್ಲಮೆಲ್ಲನೆ ತಿಳಿದಲ್ಲಿ ಕ್ರಿಯೆ ಎನಿಸಿತ್ತು ಏಕಕಾಲಕ್ಕಳವಟ್ಟಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ ಮನೆ ಸೂರೆಗೊಂಬ ತಸ್ಕರ ಜ್ಞಾನವೆನಿಸಿತ್ತು ಮರುಳ ಶಂಕರಯ್ಯ

೨೬೯ ಶ್ರೀಗುರು ಕಾರುಣ್ಯ ಸಂಪಾದನೆಯಾದಲ್ಲಿ ಮಾರ್ಗಕ್ರಿಯೆ, ಮೀರಿದ ಕ್ರಿಯೆ ಸಂಪಾದನೆಯಾದಲ್ಲಿ ಸದ್ಭಕ್ತ, ಸಮರಸಭಕ್ತಿ ಸಂಪಾದನೆಯಾದಲ್ಲಿ ಭಾವ, ನಿರ್ಭಾವ ನಿಷ್ಠೆಯಾದಲ್ಲಿ ಅರ್ಪಿತ, ಏಕಾರ್ಥವಾದಾಗಳೇ ಮಹಸ್ಥಲವೆನಿಸುವದು ಆ ಸ್ಥಲವನೆ ಅತ್ಯಂತ ಪ್ರಿತಿಯಿಂದ ಮಹಾವಿಶೇಷವೆಂದು, ಗಳದಲ್ಲಿ ಧರಿಸುವಡೆ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಗಳದಲ್ಲಿ ಧರಿಸುವ ಕ್ರಮ

೨೭೦ ಕುಂಡಲಿ ಬಂದು ಕೀಡಿಯನು ಕುಂಡಲಿಯ ಮಾಡಿತ್ತಯ್ಯ ಅಗ್ನಿ ಬಂದು ಕಾಷ್ಠವ ಅಗ್ನಿಯ ಮಾಡಿತ್ತಯ್ಯ ಮಹೇಶ ಬಂದು ಭಕ್ತನ ಮಹೇಶನ ಮಾಡಿ ಗವಿಸಿದನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೨೭೧. ಏನೆಂಬೆ, ಏನೆಂಬೆ ಕೊಟ್ಟ ದೇವರಂದವ ? ಮನದಲ್ಲಿ ಘನಲಿಂಗವಾಯಿತ್ತು. ಧ್ಯಾನದಲ್ಲಿ ಭಾವಲಿಂಗವಾಯಿತ್ತು ನೇತ್ರದಲ್ಲಿ ಶಿವಲಿಂಗವಾಯಿತ್ತು ಹೃದಯದಲ್ಲಿ ಮಹಾಲಿಂಗವಾಯಿತ್ತು ಕರಸ್ಥಲದಲ್ಲಿ ಇಷ್ಟಲಿಂಗವಾಗಿ ಅಳವಟ್ಟಿತ್ತು ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ ಎಲ್ಲ ಕಡೆಯಲ್ಲಿ ಪರಾತ್ಪರ ವಸ್ತುವಾಗಿ ಚನ್ನಬಸವಣ್ಣನಾಗಿ ನಾನು ಮರೆದೆನಯ್ಯ

೨೭೨ ಆಚಾರಲಿಂಗವಿಡಿದು ಅನುಭಾವ ಲಿಂಗಸಿದ್ಧಿ ಅನುಭಾವ ಲಿಂಗವಿಡಿದು ಮಾರ್ಗಕ್ರಿಲಿಂಗಸಿದ್ಧಿ ಮಾರ್ಗಕ್ರಿಲಿಂಗವಿಡಿದು ಮೀರಿದ ಕ್ರಿಲಿಂಗಸಿದ್ಧಿ ಮೀರಿದ ಕ್ರಿಲಿಂಗವಿಡಿದು ಕ್ರಿಯಾನಿಷ್ಪತ್ತಿಲಿಂಗಸಿದ್ಧಿ ಇದುಕಾರಣ ಕೂಡಲಸಂಗಮದೇವಾ, ಲಿಂಗವಿಡಿದು ಲಿಂಗಸಿದ್ಧಿ

೭೭೩ ಭಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ ಯುಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ ಸಾರಿ ಶರಣನೆನಿಸುವೆನಯ್ಯ ಮೆಲ್ಲಮೆಲ್ಲನೆ ಎಡಹುವ ಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯ ಕೂಡಲಸಂಗಮದೇವಾ ನಿಮ್ಮಿಂದಧಿಕನೆನಿಸುವೆನಯ್ಯ

೭೭೪ "ಯಸ್ಯ ಕ್ರೀತಸ್ಯ ಭವತಿ" ಎಂದು ಕಟ್ಟಾಚಾರದಲು ಇದ್ದು ಆನು ಅನುಸರಿಸಿಕೊಂಡು ನಡವನ್ನಕ್ಕ ಕರ್ಮಕಾಂಡಿಯಲ್ಲ. ಉತ್ಪತ್ತಿ ಸ್ಥಿತಿ ಭೋಗ ಭುಕ್ತಿ ಕಾಯವುಳ್ಳನ್ನಕ್ಕ ಭಕ್ತಿಕಾಂಡಿಯಲ್ಲ. ಪರವು ಸಾಧ್ಯವಾಯಿತ್ತೆಂದು ಕ್ರಿಯೆಲ್ಲವ ಮೀರಿ ನಡೆವೆನು, ಪರತತ್ವವನರಿದಿಹೆನು ಎಂಬನ್ನಕ್ಕ ಜ್ಞಾನ ಕಾಂಡಿಯಲ್ಲ ಇನ್ನು ಕರ್ಮಕಾಂಡಿ, ಭಕ್ತಿಕಾಂಡಿ, ಜ್ಞಾನಕಾಂಡಿ, ಈ ತ್ರಿವಿಧದಲ್ಲಿ ವಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ ಮೇಲೆ ಸತ್ಪುರುಷರ ಸಂಗವಿಲ್ಲ ಯುಕ್ತಿ ಇಲ್ಲ ಎನಗೆ ಜಕ್ತಿ ಎಂತಹುದಯ್ಯ? ಒಲ್ಲದವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಿಹುದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ ಕೂಡಲಸಂಗಮದೇವಾ ಎನ್ನ ಗುಣವ ನೋಡದೆ ಶಿವರಾತ್ರಿಯ ಸಂಕಣ್ಣಗಳಿಗೆ ಕರುಣಿಸಿದಂತೆ ಎನಗೆ ಕೃಪೆಯ ಮಾಡಯ್ಯಾ

## ಪ್ರಗತಿಯನ್ನು ಹೊಂದುತ್ತ ಕ್ರಿಯೆಗಳನ್ನು ಮೀರುವುದು.

೭೭೫ ಹಸಿವರತಲ್ಲದೆ, ಪ್ರಸಾದಿಯಲ್ಲ ತೃಷೆಯರತಲ್ಲದೆ ಪಾದೋದಕಿಯಲ್ಲ ನಿದ್ರೆಯರತಲ್ಲದೆ ಜಪ ವಿರಹಿತನಲ್ಲ ಅನಲ ಪವನ ಗುಣವರತಲ್ಲದೆ ಜನನ ಮರಣ ವಿರಹಿತನಲ್ಲ ಇದುಕಾರಣ ಕೂಡಲಸಂಗಯ್ಯನಲ್ಲಿ ಎಲ್ಲರಿಗೆಲ್ಲಿಯದೋ ಲಿಂಗೈಕ್ಯವು?

೭೭೬ ಆಚಾರ ನಾಸ್ತಿಯಾದುದೇ ಗುರು ಗುರು ನಾಸ್ತಿಯಾದುದೇ ಲಿಂಗ ಕಾಯಗುಣ ನಾಸ್ತಿಯಾದುದೇ ವಿಭೂತಿ ಕರಣಗುಣ ನಾಸ್ತಿಯಾದುದೇ ರುದ್ರಾಕ್ಷಿ ಮರಹು ನಾಸ್ತಿಯಾದುದೇ ಮಂತ್ರ ಇಂತೀ ಪಂಚಾಚಾರ ಪ್ರತಿಷ್ಠೆಯುಳ್ಳವನೇ ನಮ್ಮ ಕೂಡಲಚನ್ನಯ್ಯನಲ್ಲಿ ಸದಾಚಾರ ಸಂಪನ್ನನೆನಿಸುವನು

೨೭೭ ವೀರನಾದರೆ ವೈರಿಗಳ ಕಾಟ ಬಹಳವಯ್ಯಾ ದಾನಶೂರ ನಾದರೆ ಯಾಚಕರ ಗೋಳು ಬಹಳವಯ್ಯಾ ಮೂರರಲ್ಲಿ ನಿಂತರೆ ಮಲತ್ರಯಂಗಳ ಘೋರ ಹೆಚ್ಚಾಯಿತಯ್ಯಾ ಅಂಗದಲ್ಲಿ ಲಿಂಗ ಸಂಬಂಧವಾಗಬಾರದು ಆದ ಬಳಿಕ ವೀರನಾಗಿ ವಿಷಯಗಳಳಿವುದು ಬಹು ಘೋರವು, ಬಹು ಘೋರವು ನೋಡಯ್ಯಾ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

೨೭೮ ವಿಧಿ ನಿಷೇಧಗಳಿಲ್ಲದವನಾದೆ ನೀ ನೋಡಯ್ಯಾ ಜಪತಪವಿಲ್ಲದ ಮಹಾ ಮುನಿ ನೀ ನೋಡಯ್ಯಾ ಇಹಪರ ಸುಖದುಃಖಾತೀತನಯ್ಯಾ ನಿಮ್ಮ ಶರಣ ಕಪಿಲಸಿದ್ಧಮಲ್ಲಿಕಾರ್ಜುನಾ

೨೭೯ ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ ಜಗಕ್ಕೆ ಬಲ್ಲಿದ ನೀನು ಆನು ನಿನಗೆ ಬಲ್ಲಿದನು ಕಂಡಯ್ಯಾ ಕರಿಯು ಕನ್ನಡಿಯೊಳಗಡಗಿದಂತಯ್ಯಾ ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಾ

## ಅಂಗಲಿಂಗ ಸಾಮರಸ್ಯವು.

೨೮೦ ಕಾಯ ಮುನ್ನವೋ, ಕಾಯದಲ್ಲಿಪ್ಪ ಮನ ಮುನ್ನವೋ? ಮನ ಮುನ್ನವೋ ಮನದಲ್ಲಿಪ್ಪ ಚೈತನ್ಯ ಮುನ್ನವೋ? ಚೈತನ್ಯ ಮುನ್ನವೋ ಚೈತನ್ಯಾತ್ಮಕ ಮಾಯೆ ಮುನ್ನವೋ? ಅವು ಮುನ್ನವಲ್ಲ, ಮುನ್ನವಲ್ಲ ನಿನ್ನ ನಿರಾಳನಿಜದ ನಿರ್ವಯಲಿನ ಶೂನ್ಯಾಶೂನ್ಯವೇ ಮುನ್ನ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೮೧ ಮಾರ್ಗ ಕ್ರಿಯಾಸಮಯದಲ್ಲಿ ಶಿವಭಕ್ತಿ ಸಂಪನ್ನನಾಗಿ, ಮೀರಿದ ಕ್ರಿಯಾಸಮಯದಲ್ಲಿ ಶಿವಲಿಂಗ ಸಂಪನ್ನನಾಗಿ ಭಾವ ನೆಲೆಗೊಂಡಲ್ಲಿ ನುನಲಿಂಗ ಸಂಗದಿ ಮನ ಲಿಂಗಲೀಯವಾದಲ್ಲಿ ತೆರಹಿಲ್ಲದೆ ಕುರುಹಳಿದ ಲಿಂಗೈಕ್ಯ, ಸುತ್ತಿರ್ದ ಪ್ರಪಂಚ ಮೆಲ್ಲಮೆಲ್ಲನೆ ಅಚ್ಚಳಿದು ಹಿಂಗಿದವು ಕೂಡಲಚನ್ನಸಂಗಮದೇವಾ ನಿಮ್ಮ ಲಿಂಗೈಕ್ಯಂಗೆ

೨೮೨ ದೇಹ ನಿರ್ದೇಹಿಗೊಪ್ಪಿಸಿದಲ್ಲಿ ದೇಹ ನಿರ್ದೇಹವಾಯಿತ್ತು ಮನ ಲಿಂಗಕ್ಕರ್ಪಿಸಿದಲ್ಲಿ ಮನ ಲಿಂಗವಾಗಿ ಮನ ಲಯವಾಯಿತ್ತು

ಭಾವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತಯ್ಯ ದೇಹ ಮನ ಭಾವವ ದಲ್ಲಿ ಕಾರಣಕಾಯ ಅಕಾಯವಾಯಿತ್ತು ಎನ್ನ ದೇಹದ ಸುಖವ ಲಿಂಗ ಭೋಗಿಸುವುದಾಗಿ ಶರಣ ಸತಿ ಲಿಂಗ ಪತಿ ಎಂಬ ಭಾವ ಅಳವ ಟ್ಟಿತ್ತಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ

೨೦೩ ಅಂಗದಂತೆ ಲಿಂಗ, ಲಿಂಗದಂತೆ ಅಂಗವಾದ ಬಳಿಕ ಅಂಗ ದಂತೆ ಲಿಂಗೈಕ್ಯ, ಲಿಂಗದಂತ ಅಂಗೈಕ್ಯ ಮನವೇ ಲಿಂಗ ಲಿಂಗವೇ ಮನವಾದಬಳಿಕ ಮಾತು ಮಾತುಗಳಲ್ಲಿ ಹೊಕ್ಕಾದ ಕಾರಣ ಮೇಲೆ ಲಿಂಗೈಕ್ಯ ಲಿಂಗೈಕ್ಯವೇ ಸ್ವರ ಶಬ್ದ ಸಂದಣಿಗೆ ಇನ್ನು ತೆರಹುಂಟೇ ಕಪಿಸಿದ್ಧಮಲ್ಲಿನಾಥಯ್ಯಾ ?

೨೦೪ ಅಂಗಕ್ಕೆ ಭೋಗವ ಕೊಟ್ಟವರ ನೋಡಿದೆನಲ್ಲದೆ ಲಿಂಗಕ್ಕೆ ಕೊಟ್ಟವರ ನೋಡಲಿಲ್ಲವು ಲಿಂಗಕ್ಕೆ ಷೋಡಶೋಪಚಾರಂಗಳ ಕೊಟ್ಟ ವರ ನೋಡಿದೆನಲ್ಲದೆ ಮನವ ಕೊಟ್ಟವರ ನೋಡಲಿಲ್ಲ ಮನವ ಕೊಟ್ಟ ವರ ನೋಡಿದೆನಲ್ಲದೆ ಮನ ಲಿಂಗವಾದವರ ನೋಡಲಿಲ್ಲ ಕಪಿಲಸಿದ್ಧ ಮಲ್ಲಯ್ಯ

೨೦೫ ಒಂದಾದವಂಗೆ ಒಂದ ಸುಖದುಃಖಂಗಳ ಭಂಗೇನಯ್ಯ? ಒಂದಾದವಂಗ ಇಂದುಧಂಸಾರವೇನಯ್ಯ ? ಒಂದಾದವಂಗೆ ಕನಕಲೋ ಷ್ಟವೆಂಬುವುದೇನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ ?

೨೦೬ ಕುರುಹಿಲ್ಲ, ಕುರುಪಿಲ್ಲ, ಲಿಂಗವೆಂದೆಂಬರೆ ತೆರಹಿಲ್ಲ, ತರಹಿಲ್ಲ ಜಂಗಮವೆಂದೆಂಬರೆ ಇದೇ ನೋಡಾ ಶಿವಾಚಾರ ಇದೇ ನೋಡಾ ಶಿವದೊಡಕು 'ಆತ್ಮಾನಾಂ ಪ್ರಕೃತಿ ಸ್ವಭಾವ' ಎಂದುದಾಗಿ, ಮುಟ್ಟಬಾರದ ಠಾವ ಮರೆಗೊಂಡಿಪ್ಪ ಮಹಾ ಕರ್ತ ಕೂಡಲಸಂಗ ಮದೇವ

೨೦೭ ಶಿವ ಶಿವಾ, ಮೂರ್ತಿಗೆ ಸತ್ಯ ಶುದ್ಧ ಉಂಟೆಂಬರಿ ಸತ್ಯ ಶುದ್ಧವುಳ್ಳವಂಗೆ ಗುರುಪಿಲ್ಲ ಸತ್ಯ ಶುದ್ಧವುಳ್ಳವಂಗೆ ಲಿಂಗಪಿಲ್ಲ ಸತ್ಯ ಶುದ್ಧವುಳ್ಳವಂಗೆ ಜಂಗಮಪಿಲ್ಲ ಸತ್ಯ ಶುದ್ಧವುಳ್ಳವಂಗೆ ಪ್ರಸಾದಪಿಲ್ಲ ಸತ್ಯ ಶುದ್ಧವುಳ್ಳವಂಗೆ ಗಣತ್ವಪಿಲ್ಲ ಕೇಳಿರೇ, ಸತ್ಯ ಶುದ್ಧ ದೇವರಿಗೆ ಉಪಚಾರ ಉಂಟು ಸತ್ಯ ಶುದ್ಧ ದೇವರಿಗ ಧ್ಯಾನ ಮೌನ ಅನುಷ್ಠಾನ ಉಂಟು ಸತ್ಯ ಶುದ್ಧ ಉಪದೇಶಕ್ಕೆ ಜಪ ತಪ ಸಂಧ್ಯಾ ಸಮಾಧಿ

೨೭೭ ವೀರನಾದರೆ ವೈರಿಗಳ ಕಾಟ ಬಹಳವಯ್ಯಾ ದಾನಶೂರನಾದರೆ ಯಾಚಕರ ಗೋಳು ಬಹಳವಯ್ಯಾ ಮೂರರಲ್ಲಿ ನಿಂತರೆ ಮಲತ್ರಯಂಗಳ ಘೋರ ಹೆಚ್ಚಾಯಿತಯ್ಯ ಅಂಗದಲ್ಲಿ ಲಿಂಗ ಸಂಬಂಧವಾಗಬಾರದು ಆದ ಬಳಿಕ ವೀರನಾಗಿ ವಿಷಯಗಳಳಿವುದು ಬಹು ಘೋರವು, ಬಹು ಘೋರವು ನೋಡಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ

೨೭೮ ವಿಧಿ ನಿಷೇಧಗಳಿಲ್ಲದವನಾದೆ ನೀ ನೋಡಯ್ಯಾ ಜಪತಪವಿಲ್ಲದ ಮಹಾ ಮುನಿ ನೀ ನೋಡಯ್ಯಾ ಇಹಪರ ಸುಖದುಃಖಾತೀತನಯ್ಯ ನಿಮ್ಮ ಶರಣ ಕಪಿಲಸಿದ್ಧಮಲ್ಲಿಕಾರ್ಜುನಾ

೨೭೯ ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ ಜಗಕ್ಕೆ ಬಲ್ಲಿದ ನೀನು ಆನು ನಿನಗೆ ಬಲ್ಲಿದನು ಕಂಡಯ್ಯಾ ಕರಿಯು ಕನ್ನಡಿಯೊಳಗಡಗಿದಂತಯ್ಯಾ ಎನ್ನೊಳಗೆ ನೀನಡಗಿದ ಕೂಡಲಸಂಗಮದೇವಾ

## ಅಂಗಲಿಂಗ ಸಾಮರಸ್ಯವು.

೨೮೦ ಕಾಯ ಮುನ್ನವೋ, ಕಾಯದಲ್ಲಿಪ್ಪ ಮನ ಮುನ್ನವೋ? ಮನ ಮುನ್ನವೋ ಮನದಲ್ಲಿಪ್ಪ ಚೈತನ್ಯ ಮುನ್ನವೋ? ಚೈತನ್ಯ ಮುನ್ನವೋ ಚೈತನ್ಯಾತ್ಮಕ ಮಾಯೆ ಮುನ್ನವೋ? ಅವು ಮುನ್ನವಲ್ಲ, ಮುನ್ನವಲ್ಲ ನಿನ್ನ ನಿರಾಳನಿಜದ ನಿರ್ವಯಲಿನ ಶೂನ್ಯಾಶೂನ್ಯವೇ ಮುನ್ನ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೮೧ ಮಾರ್ಗ ಕ್ರಿಯಾಸಮಯದಲ್ಲಿ ಶಿವಭಕ್ತಿ ಸಂಪನ್ನನಾಗಿ, ಮೀರಿದ ಕ್ರಿಯಾಸಮಯದಲ್ಲಿ ಶಿವಲಿಂಗ ಸಂಪನ್ನನಾಗಿ ಭಾವ ನೆಲೆಗೊಂಡಲ್ಲಿ ಮನಲಿಂಗ ಸಂಗದಿ ಮನ ಲಿಂಗಲೀಯವಾದಲ್ಲಿ ತೆರಹಿಲ್ಲದೆ ಕುರುಹಳಿದ ಲಿಂಗೈಕ್ಯ, ಸುತ್ತಿರ್ದ ಪ್ರಪಂಚ ಮೆಲ್ಲನೆಲ್ಲನೆ ಅಚ್ಚಳಿದು ಹಿಂಗಿದವು ಕೂಡಲಚನ್ನಸಂಗಮದೇವಾ ನಿಮ್ಮ ಲಿಂಗೈಕ್ಯಂಗೆ

೨೮೨ ದೇಹ ನಿರ್ದೇಹಿಗೊಪ್ಪಿಸಿದಲ್ಲಿ ದೇಹ ನಿರ್ದೇಹವಾಯಿತ್ತು ಮನ ಲಿಂಗಕ್ಕರ್ಪಿಸಿದಲ್ಲಿ ಮನ ಲಿಂಗವಾಗಿ ಮನ ಲಯವಾಯಿತ್ತು

ಭಾವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತಯ್ಯ ದೇಹ ಮನ ಭಾವವ
[illegible]ವಲ್ಲಿ ಕಾರಣಕಾಯ ಅಕಾಯವಾಯಿತ್ತು ಎನ್ನ ದೇಹದ ಸುಖವ
ಲಿಂಗ ಭೋಗಿಸುವುದಾಗಿ ಶರಣ ಸತಿ ಲಿಂಗ ಪತಿ ಎಂಬ ಭಾವ ಅಳವ
ಟ್ಟಿತ್ತಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ

೨೮೩ ಅಂಗದಂತೆ ಲಿಂಗ, ಲಿಂಗದಂತೆ ಅಂಗವಾದ ಬಳಿಕ ಅಂಗ
ದಂತೆ ಲಿಂಗೈಕ್ಯ, ಲಿಂಗದಂತ ಅಂಗೈಕ್ಯ ಮನವೇ ಲಿಂಗ ಲಿಂಗವೇ
ಮನವಾದಬಳಿಕ ಮಾತು ಮಾತುಗಳಿಲ್ಲ ಹೊಳ್ದಾದ ಕಾರಣ ಮೇಲೆ
ಲಿಂಗೈಕ್ಯ ಲಿಂಗೈಕ್ಯವೇ ಸ್ವರ ಶಬ್ದ ಸಂಪದಿಗೆ ಇನ್ನು ತರಹುಂಟೇ
ಕಪಿಸಿದ್ಧಮಲ್ಲಿನಾಥಯ್ಯಾ ?

೨೮೪ ಅಂಗಕ್ಕೆ ಭೋಗವ ಕೊಟ್ಟವರ ನೋಡಿದನಲ್ಲದ ಲಿಂಗಕ್ಕ
ಕೊಟ್ಟವರ ನೋಡಲಿಲ್ಲವು ಲಿಂಗಕ್ಕ ಷೋಡಶೋಪಚಾರಂಗಳ ಕೊಟ್ಟ
ವಂ ನೋಡಿದನಲ್ಲದ ಮನವ ಕೊಟ್ಟವರ ನೋಡಲಿಲ್ಲ ಮನವ ಕೊಟ್ಟ
ವರ ನೋಡಿದೆನಲ್ಲದೆ ಮನ ಲಿಂಗವಾದವರ ನೋಡಲಿಲ್ಲ ಕಪಿಲಸಿದ್ಧ
ಮಲ್ಲಯ್ಯ

೨೮೫ ಒಂದಾದವಂಗೆ ಬಂದ ಸುಖದುಃಖಂಗಳ ಭಂಗೇನಯ್ಯ?
ಒಂದಾದವಂಗೆ ಇಂದುಧರನೂಲಿಪೇನಯ್ಯ ? ಒಂದಾದವಂಗೆ ಕನಕಲೋ
ಷ್ಟವೆಂಬುವುದೇನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ ?

೨೮೬ ಕುರುಹಿಲ್ಲ, ಕುರುಹಿಲ್ಲ, ಲಿಂಗವೆಂದೆಂಬರೆ ತೆರಹಿಲ್ಲ,
ತರಹಿಲ್ಲ ಜಂಗಮವೆಂಪಂಬರ ಇದೇ ನೋಡಾ ಶಿವಾಚಾರ ಇದೇ
ನೋಡಾ ಶಿವದೂಡಕು 'ಆತ್ಮಾನಾಂ ಪ್ರಕೃತಿ ಸ್ವಭಾವ ಎಂದುದಾಗಿ,
ಮುಟ್ಟಬಾರದ ರಾವ ಮರೆಗೊಂಡಿಪ್ಪ ಮಮ ಕರ್ತ ಕೂಡಲಸಂಗ
ಮದೇವ

೨೮೭ ಶಿವ ಶಿವಾ, ಮೂರ್ತಿಗೆ ಸತ್ಯ ಶುದ್ಧ ಉಂಟೆಂಬರಿ ಸತ್ಯ
ಶುದ್ಧವುಳ್ಳವಂಗೆ ಗುರುವಿಲ್ಲ ಸತ್ಯ ಶುದ್ಧವುಳ್ಳವಂಗೆ ಲಿಂಗವಿಲ್ಲ ಸತ್ಯ
ಶುದ್ಧವುಳ್ಳವಂಗೆ ಜಂಗಮವಿಲ್ಲ ಸತ್ಯ ಶುದ್ಧವುಳ್ಳವಂಗೆ ಪ್ರಸಾದವಿಲ್ಲ
ಸತ್ಯ ಶುದ್ಧವುಳ್ಳವಂಗೆ ಗಣತ್ವವಿಲ್ಲ ಕೇಳಿರೇ, ಸತ್ಯ ಶುದ್ಧ ದೇವರಿಗೆ
ಉಪಚಾರ ಉಂಟು ಸತ್ಯ ಶುದ್ಧ ದೇವರಿಗೆ ಧ್ಯಾನ ಮೌನ ಅನುಷ್ಠಾನ
ಉಂಟು ಸತ್ಯ ಶುದ್ಧ ಉಪದೇಶಕ್ಕೆ ಜಪ ತಪ ಸಂಧ್ಯಾ ಸಮಾಧಿ

ಹೋಮ ನೇಮ ನಿತ್ಯ ಅಷ್ಟವಿಧಾರ್ಚನೆ ಷೋಡಶೋಪಚಾರ ಉಂಟು ಸತ್ಯ ಶುದ್ಧ ದೇವರಿಗೆ ಉಪಚಾರ ಉಂಟಾದ ಕಾರಣ ಇಂತಪ್ಪ ಸತ್ಯ ಶುದ್ಧ ಗುರುವಿಂಗೆ ಶರಣೆನ್ನೆ ಇಂತಪ್ಪ ಸತ್ಯ ಶುದ್ಧ ಲಿಂಗಕ್ಕೆ ಶರಣೆನ್ನೆ ಜಂಗಮಕ್ಕೆ ಶರಣೆನ್ನೆ ಇಂತಪ್ಪ ಸತ್ಯ ಶುದ್ಧ ಪ್ರಸಾದಕ್ಕೆ ಕೆಯ್ಯಾನೆ ಇವರೆಲ್ಲರು ಬ್ರಹ್ಮನ ಮಕ್ಕಳು ಎನಗೆ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ, ಆವ ಸಹಜವಿಲ್ಲದ ಲಿಂಗೈಕ್ಯ ಕಾಣಾ ಕೂಡಲಸಂಗಮದೇವಾ

೨೮೮ ಭಿತ್ತಿ ಇಲ್ಲದ ಚಿತ್ರಾರವಂತೆ, ಭಕ್ತಿ ಇಲ್ಲದ ಪ್ರಮಥನಾಗಿ ಎಂದಿಪ್ಪೆನಯ್ಯಾ? ಸತ್ಯವಿಲ್ಲದ ಶರಣನಾಗಿ ಎಂದಿಪ್ಪೆನಯ್ಯಾ? ಗೆರೆ ಇಲ್ಲದ ಕೋಲಲ್ಲಿ ಉದ್ದರಿಯಸಿಕ್ಕಿದ ಭಂಡದ ಹರದನಂತಾದೆನಯ್ಯಾ ಕೂಡಲಸಂಗಮದೇವಾ

೨೮೯ ಮಣ್ಣ ಮಡಿಕೆ ಮಣ್ಣಾಗದು, ಕ್ರಿಯಳಿದು ಬೆಣ್ಣೆ ಕರಗಿ ತುಪ್ಪವಾಗಿ, ಮರಳಿ ಬೆಣ್ಣೆಯಾಗದು, ಕ್ರಿಯಳಿದು ಹೊನ್ನು ಕಬ್ಬಿಣವಾಗದು ಕ್ರಿಯಳಿದು ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರಿಯಳಿದು ಕೂಡಲಸಂಗನ ಶರಣನಾಗಿ, ಮರಳಿ ಮಾನವನಾಗನು ಕ್ರಿಯಳಿದು

# ಆಚಾರಭೇದಗಳು.

ವೀರಶೈವರು ಆಚಾರಗಳಿಗೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ ಅವು ಷಟ್‌ಸ್ಥಲ ಶಾಸ್ತ್ರದ ತತ್ವಗಳಿಗನುಸಾರವಾಗಿ ಅನೇಕ ವಿಧವಾಗಿ ವಿಂಗಡಿಸಲ್ಪಟ್ಟಿರುತ್ತವೆ ಅವು ಈ ಪ್ರಕರಣದಲ್ಲಿ ಹೇಳಲ್ಪಟ್ಟಿವೆ ಇಲ್ಲಿ ಮೊದಲು ಆಚಾರದ ಮಹತ್ವವು ಸ್ವಲ್ಪದರಲ್ಲಿ ಹೇಳಲ್ಪಟ್ಟಿದ್ದು ಮುಂದೆ ಅವರ ಮುಖ್ಯ ವರ್ಗಗಳು ಕೊಡಲ್ಪಡುವವು

## ಆಚಾರದ ಮಹತ್ವವು.

೧ ಆಚಾರವೇ ಭಕ್ತಂಗೆ ಅಲಂಕಾರವು ಆಚಾರವೇ ಭಕ್ತಂಗೆ ಸರ್ವಪೂಜ್ಯವು ಇಂತೀ ಆಚಾರವುಳ್ಳವನೇ ಭಕ್ತನು ಆಚಾರವುಳ್ಳವನೇ ಯುಕ್ತನು ಆಚಾರವುಳ್ಳವನೇ ಮುಕ್ತನಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ

೨ ಸದಾಚಾರವನಾಚರಿಸುವ ಸತ್ಕ್ರಿಯಾ ಸಂಪನ್ನಂಗೆ ಸಮ್ಯಜ್ಞಾನ ಉದಯವಹುದು ಆ ಸಮ್ಯಜ್ಞಾನೋದಯದಿಂದ ತನ್ನ ತಾನರಿದು ತಾನೇ ಶಿವನಹನಲ್ಲದೆ ತನಗೇನೂ ಇದಿರಿಲ್ಲ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವನೆಯ್ದುವಡೆ ಆಚಾರವೇ ಮುಖ್ಯವಯ್ಯಾ.

೩ ಆಚಾರವಿಲ್ಲದವರಿಗೆ ಜ್ಞಾನವಿಲ್ಲ ಜ್ಞಾನವಿಲ್ಲದವರಿಗೆ ಭಾವಶುದ್ಧವಿಲ್ಲ ಭಾವಶುದ್ಧವಿಲ್ಲದವರಿಗೆ ಧ್ಯಾನವಿಲ್ಲ ಧ್ಯಾನವಿಲ್ಲದವರಿಗೆ ಪ್ರಸಾದವಿಲ್ಲ ಪ್ರಸಾದವಿಲ್ಲದವರಿಗೆ ಮುಕ್ತಿ ಇಲ್ಲ ಇದು ಕಾರಣ ಆಚಾರ ಜ್ಞಾನ ಭಾವವುಳ್ಳವರಿಗೆ ಪ್ರಸಾದ ಉಂಟು ಪ್ರಸಾದವುಳ್ಳವರಿಗೆ ಮುಕ್ತಿಯುಂಟು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ

## ಆಚಾರದ ಪರಿಣಾಮಗಳು

**ವಿವರಣೆ:**— ಆಚಾರದ ಮೂಲಕ ಮನುಷ್ಯನಲ್ಲಿಯ ದುರ್ಗುಣಗಳೂ ದೋಷಗಳೂ ದೂರಾಗುತ್ತಿವೆ ದೂರಾಗುವ ದೋಷಗಳಲ್ಲಿ ಉದಾಹರಣೆಗಾಗಿ ಕೆಲವು ಮಾತ್ರ ಕೆಳಗೆ ಹೇಳಲ್ಪಟ್ಟಿವೆ

## ಷಡೂರ್ಮಿಗಳ ನಾಶ.

೪  ಕ್ಷುತ್ ಪಿಪಾಂಸೆ ಶೋಕ ಮೋಹ ಜರೆ ಮರಣ ಈ ಷಡೂರ್ಮಿಗಳು ಕೆಡುವುದಕ್ಕೊಂದು ವಿವರವ ಹೇಳಿಹ ಕೇಳಿರಯ್ಯ ಅಂಗದಾಪ್ಯಾಯನವಳಿದು ಲಿಂಗದಾಪ್ಯಾಯನ ಉಳಿದರೆ ಕ್ಷುತ್ತು ಕೆಟ್ಟದು . ಲಿಂಗ ಮೋಹಿಯಾಗಿ ದೇಹ ಮೋಹವ ಮರೆದಲ್ಲಿ ಮೋಹ ಕೆಟ್ಟದು ಶಿವ ಲಿಂಗದಲ್ಲಿ ಕರಗಿ ಕೊರಗಿ ಸರ್ವ ಕರಣೇಂದ್ರಿಯಂಗಳು ಲಿಂಗದಲ್ಲಿ ಲೀಯ್ಯವಾಗಿ ಶಿಥಿಲತ್ವವನೆಯ್ದಿದಲ್ಲಿ ಜರ ಕೆಟ್ಟದು ಮಹಾಲಿಂಗದಲ್ಲಿ ತಾನೆಂಬುದುಳಿದು ಲಿಂಗೈಕ್ಯವಾದಲ್ಲಿ ಮರಣ ಕಟ್ಟುದು ಇಂತೀ ಷಡೂರ್ಮಿಗಳನು ಈಪರಿ ಲಿಂಗಾವಧಾನದಲ್ಲಿ ಕಡಿಸಿದಾತನೇ ಭಕ್ತ ಕಾಣಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ.

## ಷಡ್ಭಾವಗಳ ನಾಶ

೫  ಅಸ್ತಿತೆ, ಜಾಯತ ವಿಪರಿಣತ, ವಿವರ್ಧತೆ, ಅಪಕ್ಷತೆ ವಿನಶ್ಯತೆ ಎಂಬ ಷಡ್ಭಾವಂಗಳು ಕೆಡುವುದಕ್ಕೆ ವಿವರವೆಂತೆಂದೊಡೆ, ಶ್ರೀಗುರುವಿನ ಕೃಪಾಗರ್ಭಮಧ್ಯದಲ್ಲಿ ಇದ್ದವ ನಾನಹುದು ಎಂದರಿದಾಗಳೇ ಅಸ್ತಿತೆ ಎಂಬ ವಿಕಾರ ಕೆಟ್ಟಿತ್ತು ಗುರುಕರುಣದಲ್ಲಿ ಜನಿಸಿದನಾಗಿ ನಾಹಂ ಯೋನಿಜನೆಂದರಿದಾಗಳೇ ಜಾಯತ ಎಂಬ ವಿಕಾರ ಕೆಟ್ಟಿತ್ತು ಗುರುವಿನ ಸದ್ಭಾವಜತಲಿಂಗವನಂಗದಲ್ಲಿ ಧರಿಸಿ ಪರಮ ಪರಿಣಾಮದಲ್ಲಿ ಪರಿಣಾಮಿಸುತ್ತಿರ್ದ ಕಾರಣ ವಿಪರಿಣತೆ ಎಂಬ ವಿಕಾರ ಕಟ್ಟಿತ್ತು .. ದೇಹೇಂದ್ರಿಯಾದಿಗಳೆಲ್ಲ ಲಿಂಗದಲ್ಲಿ ಅಡಗಿ ಶಿಥಿಲಮಯವಾಗಲು ಅಪಕ್ಷತೆ ಎಂಬ ವಿಕಾರ ಕೆಟ್ಟಿತ್ತು ಲಿಂಗಾಂಗದ ಐಕ್ಯಸನ್ನಿಧಿ ಲಿಂಗದಲ್ಲಿ ಲೀಯ್ಯವಾಗಲು ವಿನಶ್ಯತೆ ಎಂಬ ವಿಕಾರ ಕಟ್ಟಿತ್ತು ಇಂತೀ ಲಿಂಗಸಂಗದಿಂದ ಷಡ್ಭಾವವಿಕಾರವಳಿದು ನಿಮ್ಮ ವಿಕಾರವೆಡೆಗೊಂಡಿತ್ತು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ಭಕ್ತಂಗೆ

## ಪಂಚಕೋಶಗಳ ನಾಶ.

೬  ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯವೆಂಬ ಪಂಚಕೋಶ ಕೆಡುವುದಕ್ಕೆ ವಿವರ ಸರ್ವಪದಾರ್ಥವನು ಸಾವಧಾನಮುಖದಲ್ಲಿ ಲಿಂಗಾರ್ಪಿತವ ಮಾಡಿ ಲಿಂಗಭೋಗೋಪಭೋಗಿಯಾದಲ್ಲಿ ಅನ್ನಮಯ ಕೋಶ ಕೆಟ್ಟಿತ್ತು ಪ್ರಾಣಮಯ

ಲಿಂಗಾಂಗವಾಗಿ ಲಿಂಗಪ್ರಾಣಿಯಾದಲ್ಲಿ ಪ್ರಾಣಮಯ ಕೋಶ ಕೆಟ್ಟಿತ್ತು ಮನೋಮಧ್ಯದಲ್ಲಿ ಲಿಂಗದ ನೆನಹು ನೆಲೆಗೊಂಡು ಮನವೇ ಲಿಂಗವಾದಲ್ಲಿ ಮನೋಮಯ ಕೋಶ ಕೆಟ್ಟಿತ್ತು ಸುಜ್ಞಾನ ಪರಿಪೂರ್ಣವಾಗಿ ಜ್ಞಾನ ಜ್ಞೇಯಗಳೆರಡು ಒಂದಾದಲ್ಲಿ ವಿಜ್ಞಾನಮಯ ಕೋಶ ಕೆಟ್ಟಿತ್ತು ಪರಮಾನಂದ ಪದದಲ್ಲಿ ಓಲಾಡುತ್ತ ಆ ಶಿವಾನಂದದಲ್ಲಿ ಇರಲಿಕ್ಕಾಗಿ ಆನಂದಮಯ ಕೋಶ ಕೆಟ್ಟಿತ್ತು. ಇಂತೀ ಪಂಚಕೋಶದ ಪ್ರಕೃತಿಗುಣ ಕೆಟ್ಟು ಲಿಂಗಗುಣ ನಿಂದುದು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ನಿಜಶರಣಂಗೆ

## (೧) ೫೦ ತರದ ಆಚಾರಗಳು.

೭ ಆಚಾರವೆಂಬುದು ಕೂರಲಗು ತಪ್ಪಿ ಬಂದರೆ ಪ್ರಾಣವ ತಗಲುವದು ಅದುಕಾರಣ ಅದರಿಂದು ಆಚರಿಸಬೇಕು. ಆಚಾರ ವಿಚಾರ ಉಭಯದ ವಿಚಾರವ ನೋಡದೆ ಶಿವದೀಕ್ಷೆಯು ಮಾಡಲಾಗದು ಅದೆಂತೆಂದೊಡೆ:—

ಪರರ ಹೆಣ್ಣಿಗೆ ಕಣ್ಣಿಡದಿಹುದೇ ೧ನೇ ಆಚಾರ ಪರರ ದ್ರವ್ಯವ ಅಪಹಾರ ಮಾಡದಿಹುದೇ ೨ ನೇ ಆಚಾರ ಸುಳ್ಳಾಡದಿಹುದೇ ೩ ನೇ ಆಚಾರ ವಿಶ್ವಾಸ ಘಾತವ ಮಾಡದಿಹುದೇ ೪ ನೇ ಆಚಾರ. ಪ್ರಾಣ ಹಿಂಸೆಯ ಮಾಡದಿಹುದೇ ೫ ನೇ ಆಚಾರ ಸಕಲ ಶಿವಗಣಂಗೆ ಸಂತೋಷವನು ಪುಟ್ಟಿಸುವದೇ ೬ ನೇ ಆಚಾರ ಸ್ವೀಕರಿಸುವ ನೇಮವಂ ಸ್ವಾತಂತ್ರವಾಗಿ ಹಿಡಿಸೆಂಬುದೇ ೭ ನೇ ಆಚಾರ ಷಟ್‌ಸ್ಥಲದವರ ಧಿಕ್ಕರಿಸುವ ಜನರ ಸೀಳುವೆನೆಂಬುವ ವ್ರತವೇ ೮ನೇ ಆಚಾರ. ಕೇಡು ಜನರ ಸಹವಾಸ ಮಾಡದಿಹುದೇ ೯ ನೇ ಆಚಾರ ಸಜ್ಜನಸಂಗತಿಯ ಬಿಡದಿಹುದೇ ೧೦ನೇ ಆಚಾರ ಅನ್ಯ ದೇವತಾಭಜನೆಗೆ ವಿಮುಖನಾಗುವುದೇ ೧೧ನೇ ಆಚಾರ ಶಿವನೇ ಸರ್ವದೇವಶಿಖಾಮಣಿ ಎಂದು ಮನದಲ್ಲಿ ಅಚ್ಚೊತ್ತಿಪ್ಪುದೇ ೧೨ನೇ ಆಚಾರ ಶಿವನಿಗೆ ಶಿವಗಣಂಗಳಿಗೆ ಭೇದ ಮಾಡದಿಹುದೇ ೧೩ ನೇ ಆಚಾರ ಸಕಲ ಜೀವಿಗಳಿಗೆ ಹಿತವ ಬಯಸುವುದೇ ೧೪ ನೇ ಆಚಾರ. ಸರ್ವರಿಗೆ ಹಿತವ ಮಾಡುವುದೇ ೧೫ ನೇ ಆಚಾರ

ಕಡ್ಡಿಯು ಲಿಂಗಕ್ಕೆ ತೋರಿ ದಂತಧಾವನೆ ಮಾಡುವುದೇ ೧೬ ನೇ ಆಚಾರ
ಸರ್ವಾಂಗವನು ಸ್ವಚ್ಛವಾಗಿ ಪ್ರಕ್ಷಾಳಿಸುವುದೇ ೧೭ನೇ ಆಚಾರ ಲಿಂಗ
ಮುದ್ರೆ ಇಲ್ಲದ ಗುಡಿಯಲ್ಲಿ ಪಾಕವ ಮಾಡದಿಹುದೇ ೧೮ನೇ ಆಚಾರ
ಪ್ರಣವ ಮುದ್ರೆ ಇಲ್ಲದ ವಸ್ತ್ರವ ಹೊದೆಯದಿಹುದೇ ೧೯ ನೇ ಆಚಾರ
ಹುಟ್ಟಿದ ಶಿಸುವಿಗೆ ಲಿಂಗಧಾರಣವ ಮಾಡದೆ ತಾಯ ಮೊಲೆಹಾಲು
ಜೇನುತುಪ್ಪ ಮುಟ್ಟಿಸದಿಹುದೇ ೨೦ ನೇ ಆಚಾರ ಆಡಿದ ಭಾಷೆಯಂ
ಕಡೆಪೂರೈಸುವುದೇ ೨೧ ನೇ ಆಚಾರ ಸತ್ಯವನ್ನು ನುಡಿದು ತಪ್ಪದಿಹುದೇ
೨೨ ನೇ ಆಚಾರ ತುರುಗಳಂ ಕಟ್ಟಿ ರಕ್ಷಿಸುವುದೇ ೨೩ ನೇ ಆಚಾರ
ತುರುಗಳಿಗೆ ಲಿಂಗಮುದ್ರೆಯನಿಕ್ಕಿ ಹಾಲು ಕರೆವುದೇ ೨೪ನೇ ಆಚಾರ ಮಂತ್ರ
ಸಹಿತ ಗೋಮಯವಂ ಹಿಡಿದು ಮಂತ್ರಸಹಿತ ಪುಟವಿಕ್ಕಿ ಭಸ್ಮದ ರಾಶಿಯಂ
ಮಾಡುವುದೇ ೨೫ ನೇ ಆಚಾರ ಆ ಭಸ್ಮದ ರಾಶಿಯಂ ಪಾದೋದಕ
ದೊಡನೆ ಉಂಡಿಯಂ ಕಟ್ಟುವುದೇ ೨೬ ನೇ ಆಚಾರ ವಿಧಿಯರಿತು
ಸ್ನಾನವರಿತು ರುದ್ರಾಕ್ಷಿಗಳಂ ಧರಿಸುವುದೇ ೨೭ ನೇ ಆಚಾರ ಶಿವಾನುಭವ
ಶಾಸ್ತ್ರವಂ ವಿಚಾರಿಸುವುದೇ ೨೮ ನೇ ಆಚಾರ ಮನವ ನೋಯಿಸಿ
ಮಾತನಾಡದಿಹುದೇ ೨೯ ನೇ ಆಚಾರ. ಲಿಂಗದ ಕಳೆಯರಿತು ಲಿಂಗವ
ಪೂಜಿಸುವುದೇ ೩೦ ನೇ ಆಚಾರ ಗುರುಮುಖದಿಂ ತಾನಾರು ತನ್ನ
ನಿಜವೇನೆಂದು ಬೆಸಗೊಳ್ಳುವುದೇ ೩೧ ನೇ ಆಚಾರ ಷಡ್ವರ್ಗಂಗಳಂ
ಮೆಟ್ಟಿ ಷಟ್ಸ್ಥಲವನಿಂಬುಗೊಂಡುದೇ ೩೨ ನೇ ಆಚಾರ ಅವಿಚ್ಛಿನ್ನ
ವಾಗಿ ಅಂಗತ್ರಯದಲ್ಲಿ ಮನ ಓಕರಿಸಿಕೊಂಡುದೇ ೩೩ ನೇ ಆಚಾರ.
ಲಿಂಗದಲ್ಲಿ ಶಿಲೆಯ ಭಾವವನರಸದಿಹುದೇ ೩೪ ನೇ ಆಚಾರ ಜಂಗಮ
ದಲ್ಲಿ ಕುಲವನರಸದಿಹುದೇ ೩೫ ನೇ ಆಚಾರ ವಿಭೂತಿಯಲ್ಲಿ ಭೇದವ
ಮಾಡದಿಹುದೇ ೩೬ನೇ ಆಚಾರ ರುದ್ರಾಕ್ಷಿಯ ರೂಪವ ಮಾಡಿ ಮಣಿ
ಗಂ ಅರಸುವುದೇ ೩೭ ನೇ ಆಚಾರ ಪಾದೋದಕದಲ್ಲಿ ಉಚ್ಛಿಷ್ಟವಿ
ದುದೇ ೩೮ ನೇ ಆಚಾರ ಪ್ರಸಾದದಲ್ಲಿ ರುಚಿಯ ನೋಡದಿಹುದೇ
೩೯ ನೇ ಆಚಾರ ಮಂತ್ರದಲ್ಲಿ ಕುತ್ಸಿತ ಕಲ್ಪನೆಯ ಮಾಡದಿಹುದೇ
೪೦ ನೇ ಆಚಾರ ಲಿಂಗಾರ್ಚನೆ ವಿರಹಿತ ಭೋಜನ ಮಾಡದಿಹುದೇ
೪೧ನೇ ಆಚಾರ ಐಕ್ಯರಂ ಸಮಾಧಿಗೊಳಿಸಿ ತಾನು ಲಿಂಗಪೂಜೆಯ
ಮಾಡುವುದೇ ೪೨ ನೇ ಆಚಾರ ಲಿಂಗದ್ರೋಹವಂ ಕೇಳಿ ತಾನು ಪ್ರಾಣ
ಬಿಡುವುದೇ ೪೩ನೇ ಆಚಾರ ಜಂಗಮದ್ರೋಹವಂ ಕೇಳಿ ತಾನು ಐಕ್ಯ
ನಾಗುವದೇ ೪೪ ನೇ ಆಚಾರ ಲಿಂಗದ್ರೋಹವಂ ಮಾಡಿದವನ ಪ್ರಾಣವಂ

ಭೇದಿಸುವುದೇ ೪೫ನೇ ಆಚಾರ ಜಂಗಮ ದ್ರೋಹ ಮಾಡಿದವನ ಶಿರವನೀಡಾಡುವುದೇ ೪೬ನೇ ಆಚಾರ ಅಷ್ಟಾವರಣವ ಸಂಗವ ಮಾಡುವ ಭೇದವಂ ತಿಳಿಯುವುದೇ ೪೭ನೇ ಆಚಾರ ತಾನಾರು ಲಿಂಗವಾರು ಎಂಬ ಭೇದವು ತಿಲ ಮಾತ್ರವಿಲ್ಲದಿಹುದೆ ೪೮ನೇ ಆಚಾರ ತನ್ನ ನಿಜ ವಿಚಾರವಂ ತಾ ಮರೆಯುವೆ ಷಟ್‌ಸ್ಥಲವವರಿಗೆ ಅರುಹಿ ತನ್ನಂತೆ ಮಾಡುವುದೇ ೪೯ನೇ ಆಚಾರ ಇಂತಿಷ್ಟು ಆಚಾರಂಗಳ ಕಡೆ ಮುಟ್ಟಿಸುವುದೇ ಕೂಡಲಚನ್ನಸಂಗಮದೇವರಲ್ಲಿ ೫೦ನೇ ಆಚಾರ ನೋಡಾ ಸಿದ್ಧರಾಮಯ್ಯ

೮ ಒಂದನೇ ಆಚಾರದಿಂದ ಶೀಲವಂತನಾಗುವನು ೨ನೇ ಆಚಾರದಿಂದ ಧನವಂತನಾಗುವನು ೩ನೇ ಆಚಾರದಿಂದ ಕೀರ್ತಿವಂತನಾಗುವನು ೪ನೇ ಆಚಾರದಿಂದ ವಿಶ್ವಾಸವಂತನಾಗುವನು ೫ನೇ ಆಚಾರದಿಂದ ಸತ್ಪುರುಷನಾಗುವನು ೬ನೇ ಆಚಾರದಿಂದ ಭಕ್ತಿವಂತನೆನಿಸುವನು ೭ನೇ ಆಚಾರದಿಂದ ವೀರಶೈವನೆನಿಸುವನು ೮ನೇ ಆಚಾರದಿಂದ ವೀರ ಮಾಹೇಶ್ವರನೆನಿಸುವನು ೯ನೇ ಆಚಾರದಿಂದ ಸಾತ್ವಿಕನೆನಿಸುವನು ೧೦ನೇ ಆಚಾರದಿಂದ ವಿವೇಕಿ ಎನಿಸುವನು ೧೧ನೇ ಆಚಾರದಿಂದ ವೀರವ್ರತಿ ಎನಿಸುವನು ೧೨ನೇ ಆಚಾರದಿಂದ ವೀರ ಭಕ್ತನೆನಿಸುವನು ೧೩ನೇ ಆಚಾರದಿಂದ ಶರಣನೆನಿಸುವನು ೧೪ನೇ ಆಚಾರದಿಂದ ಸದಾಚಾರಿ ಎನಿಸುವನು ಇನ್ನು ಮೇಲೆ ಹೇಳಿದ ೫೦ ಆಚಾರವುಳ್ಳವನೇ ಪ್ರಮಥನೆನಿಸುವನು, ಪುರಾತನರ ಲಲಾಟ ಲಲಾಮನೆನಿಸುವನು, ಕೂಡಲ ಚನ್ನಸಂಗಯ್ಯ ನಿಮ್ಮಡಿ ಮುಮ್ಮಡಿ ಸಹಸ್ರ ಮಡಿ ಮಹಿಮನೆನಿಸುವನು ಕೇಳು ಸಿದ್ಧರಾಮಯ್ಯ.

## (೨) ಬಸವಣ್ಣನ ೫೨ ವಿಧದ ಇರವು.

೯ ಗುರುಕಾರುಣ್ಯವೇದ್ಯನು, ವಿಭೂತಿ ರುದ್ರಾಕ್ಷಿ ಧಾರಕನು, ಪಂಚಾಕ್ಷರೀ ಭಾಷಾ ಸಮೇತನು, ಲಿಂಗಾಂಗ ಸಂಬಂಧಿ, ನಿತ್ಯ ಲಿಂಗಾರ್ಚಕನು, ಅರ್ಪಿತದಲ್ಲಿ ಅವಧಾನಿ, ಪಾದೋದಕ ಪ್ರಸಾದ ಗ್ರಾಹಕನು, ಭಕ್ತಿಸಂಪನ್ನನು, ಏಕಲಿಂಗ ನಿಷ್ಠಾಪರನು, ಚರಲಿಂಗ ಲೋಲುಪ್ತನು ಶರಣ ಸಂಗನೇಶ್ವರನು, ತ್ರಿವಿಧದಲ್ಲಿ ಆಯತನು, ತ್ರಿಕರಣ ಶುದ್ಧನು,

ತ್ರಿವಿಧ ಲಿಂಗಾಂಗ ಸಂಬಂಧಿ, ಅನ್ಯದೈವ ಸ್ಮರಣೆಯ ಹೊದ್ದ, ಭವಿ ಸಂಗವ ಮಾಡನು, ಭವಿಪಾಕವ ಕೊಳ್ಳನು, ಪರಸತಿಯ ಬೆರಸನು, ಪರಧನವನೊಲ್ಲನು, ಪರ ನಿಂದೆಯ ನಾಡ, ಅನೃತವ ನುಡಿಯ, ಹಿಂಸೆಯ ಮಾಡನು, ತಾಮಸ ಭಕ್ತ ಸಂಗವಮಾಡನು, ಅರ್ಥ, ಪ್ರಾಣ, ಅಭಿಮಾನ ಮುಂತಾಗಿ ಗುರುಲಿಂಗ ಜಂಗಮಕ್ಕೆ ಅರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ, ಜಂಗಮ ನಿಂದೆಯ ಸೈರಿಸ, ಪ್ರಸಾದ ನಿಂದೆಯ ಕೇಳ, ಅನ್ಯರನಾಸೆಗೆಯ್ಯ, ಪಾತ್ರಾಪಾತ್ರವನರಿದೀವ, ಚತುರ್ವಿಧ ಪದವಿಯ ಹಾರ ಅರಿಷಡ್ವರ್ಗಕ್ಕೆ ಅಳುಕ ಕುಲಾದಿ ಮದಂಗಳ ಬಗೆಗೊಳ್ಳ, ದ್ವೈತಾದ್ವೈತವನೊಲ್ಲ, ಸಂಕಲ್ಪವಿಕಲ್ಪವ ಮಾಡುವನಲ್ಲ, ಕಾಲೋಚಿತವ ಬಲ್ಲ, ಕ್ರಮಯುಕ್ತನಾಗಿಹ, ಷಟ್‌ಸ್ಥಲಭರಿತ, ಸರ್ವಾಂಗಲಿಂಗಿ, ದಾಸೋಹ ಸಂಪನ್ನನಯ್ಯ ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು ಆ ಬಸವಣ್ಣನ ಪಾದಕ್ಕೆ ನಾನು ಅಹೋರಾತ್ರಿಯಲ್ಲಿ ನಮೋ ನಮೋ ಎನುತಿರ್ದೆನು ಕಾಣಾ ಚೆನ್ನಮಲ್ಲಿಕಾರ್ಜುನಾ ೧

## (೩) ೩೨ ಕಲೆಗಳು.

೧೦ ಅಯ್ಯಾ ಸದಾಚಾರ, ಸದ್ಭಕ್ತಿ, ಸಮ್ಯಜ್ಞಾನ, ಸತ್ಕ್ರಿಯೆ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತಭೇದ, ಸತ್ಪಾತ್ರಪ್ರವ್ಯಾಪರ್ಣ, ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ದಶವಿಧಪಾದೋದಕ, ಏಕಾದಶ ಪ್ರಸಾದ, ಷೋಡಶ ಭಕ್ತಿನಿರ್ವಾಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ತ್ರಿವಿಧ ಷಡ್ವಿಧ ನವವಿಧ ಜಪ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಿತ, ಚಿದ್ಭೂತಿ ಸ್ನಾನ ಧೂಳನ ಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷ ಧಾರಣ, ತಾ ಮಾಡುವ ಸತ್ಯ ಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷೆ, ತಾ ಕೊಟ್ಟು ಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆ ನುಡಿ, ತಾ ನಿಂದ ನಿರ್ವಾಣಪದ, ಇಂತೀ ಮೂವತ್ತೆರಡು ಕಲೆಗಳ ಸದ್ಗುರು ಮುಖದಿಂದರಿವ ಬಸವ

೧ ಟೀಕು– ಇದರಲ್ಲಿ ಕಾಣಿಸಿದ ಪ್ರತಿಯೊಂದು ಭಾಗದಲ್ಲಿಯು ಉಪ ಭಾಗಗಳನ್ನೂ ಕೂಡ ಎಣಿಕೆ ಮಾಡತಕ್ಕದ್ದು

ನೊವಲಾದ ಸಮಸ್ತ ಪ್ರಮಥಗಣಂಗಳೆಲ್ಲ ನಿರಾಭಾರಿ ವೀರಶೈವ ಸನ್ಮಾರ್ಗವಿಡಿದು ಆಚರಿಸಿದರು ನೋಡಾ ಇಂತು ಪ್ರಮಥಗಣಂಗಳಾಚರಿಸಿದ ಸತ್ಯ ಸನ್ಮಾರ್ಗವನರಿಯದ ಮೂಢ ಅಧಮರನೆಂತು ಶಿವಭಕ್ತ ಶಿವ ಜಂಗಮವೆಂಬೆನಯ್ಯ ಚನ್ನಮಲ್ಲಿಕಾರ್ಜುನಾ

## (೪) ಷಡ್ವಿಧವ್ರತಗಳು.

೧೧ ಭಕ್ತಂಗೆ ವ್ರತಾಚಾರದಲ್ಲಿ ತದ್ಗತವಾಗಿಹುದೇ ಭಕ್ತಿ ಅದೆಂತೆಂದೊಡೆ:— ಗುರುವನೇ ಶಿವನೆಂದರಿದು ಗುರುವಾಜ್ಞೆಯ ಪಾಲಿಸುವುದೇ ಗುರುವ್ರತ ಗುರುಮುಖದಲ್ಲಿ ಬಂದ ಲಿಂಗ ಪೂಜೆಯಲ್ಲಿ ನಿಯತಾತ್ಮನಾಗಿ ಭಕ್ತಿ ಭಾವ ಸಮೇತವಾದುದು ಲಿಂಗವ್ರತ. ಜಂಗಮವೇ ಮಹಾಲಿಂಗವೆಂದರಿದು ಪೂಜಾದಿ ಕ್ರಿಯೆಯಿಂದ ಆತ್ಮಾರ್ಪಣಮಾಡುವುದೇ ಚರವ್ರತ ಗುರುಲಿಂಗಜಂಗಮದ ಪ್ರಸಾದ ಸೇವನಾನುಭಾವವೇ ಪ್ರಸಾದ ವ್ರತ ಲೋಕಪಾವನವಾದ ಶ್ರೀಗುರುಪಾದಾಂಬುಜ ಸ್ನಾನಪಾನಾದಿಗಳಿಂದ ಆಚರಿಸುವದೇ ಪಾದೋದಕವ್ರತ ಗುರುಲಿಂಗಜಂಗಮದ ಪಾದೋದಕ ಪ್ರಸಾದದಲ್ಲಿ ತಲ್ಲೀಯವಾದ ಭಕ್ತಿಯೇ ಭಾಕ್ತಿಕವ್ರತ ಇಂತೀ ಷಡ್ವಿಧವ್ರತವನರಿದು ಆಚರಿಸುತಿರ್ಪಾತನೇ ಸದ್ಭಕ್ತನಯ್ಯ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ

## (೫) ಸರ್ವಾಚಾರಸಂಪತ್ತು.

೧೨ ಜೀವನ ಬಾಗಿಲಲ್ಲಿ ಭ್ರಮೆಯ ತಡದು, ಆತ್ಮನ ಬಾಗಿಲಲ್ಲಿ ಪ್ರಕೃತಿಯ ತಡೆದು, ಪರಮನ ಬಾಗಿಲಲ್ಲಿ ಚಿತ್ತವ ತಡೆದು ಮುಕ್ಕಾದ ವಾಯುಗಳ ದೆಸೆಯಿಂದ ಇಂದ್ರಿಯಂಗಳ ತಿಳಿದು, ಇಂತೀ ಜೀವ ಆತ್ಮ ಪರಮ ತ್ರಿವಿಧ ಗುಣಂಗಳು ತಲೆದೋರದೆ, ಕರ್ಮೇಂದ್ರಿಯ ಭಾವೇಂದ್ರಿಯ ಜ್ಞಾನೇಂದ್ರಿಯ ಇಂತೀ ತ್ರಿವಿಧವ ಸ್ವಾನುಭಾವದಲ್ಲಿ ಅಡಗಿ,

ಓಂಕಾರದ ಉಲುಹು ನಷ್ಟವಾಗಿ, ಷಡಕ್ಷರ ಪಂಚಾಕ್ಷರ ಮೂಲದ ಉಭಯದ ವೊಳೆ ಮುರಿದು, ಐವತ್ತೊಂದು ಭೇದದ ಸೂತಕದ ಸುಳುಹಡಗಿ, ಹಿಂದುಮುಂದಣ ಎಚ್ಚರಿಕೆ ಅಳವಟ್ಟಿಪ್ಪುದು ಕೂಡಲಸಂಗಮದೇವರಲ್ಲಿ ಬಸವಣ್ಣನ ಮುಂದಣ ಎಚ್ಚರಿಕೆಗುಂದದಂತೆ ಉಗ್ಘಡಿಸುತ್ತಿರ್ದನು

ಅರ್ಥಃ— ಜೀವಾತ್ಮನಲ್ಲಿ ಇಷ್ಟಲಿಂಗ ಸಂಬಂಧವ ಮಾಡಿಕೊಂಡು ಆಚರಿಸುವ ಸತ್ಕ್ರಿಯಾಮಾರ್ಗದಿಂದ ಜೀವಭಾವ ಭ್ರಾಂತನು ನಿಲಿಸಿ, ಅಂತರಾತ್ಮನಲ್ಲಿ ಪ್ರಾಣಲಿಂಗ ಸಂಬಂಧವ ಮಾಡಿಕೊಂಡು ಆಚರಿಸುವ ಸುಜ್ಞಾನ ಮಾರ್ಗದಿಂದ ಮನೋ ಪ್ರಪಂಚ ಬೇರ್ಪಡಿಸಿ, ಉಳಿದ ದಶವಾಯುಗಳೆಲ್ಲವು ಷಡಕ್ಷರೀ ಮಂತ್ರದಲ್ಲಡಗಿ ನಿವೃತ್ತಿಯಾಗಿರುವುದರಿಂದ, ಷಡಿಂದ್ರಿಯುಗಳಲ್ಲಿ ಷಡ್ವಿಧಲಿಂಗ ಸಂಬಂಧವ ಮಾಡಿಕೊಂಡು ಆಚರಿಸುವ ಆಚರಣೆಯನರಿದು, ಆತ್ಮತ್ರಯಂಗಳ ವರ್ತನೆಯ ಕುರುಹುಗಾಣಿಸದೆ ಜೀವಾತ್ಮ ಸಂಬಂಧವಾದ ಕರ್ಮೇಂದ್ರಿಯಂಗಳು ಅಂತರಾತ್ಮ ಸಂಬಂಧವಾದ ಜ್ಞಾನೇಂದ್ರಿಯಂಗಳು ಪರಮಾತ್ಮ ಸಂಬಂಧವಾದ ಕರಣಂಗಳು ಈ ಹದಿನೈದು ತತ್ವಂಗಳ ಸ್ವಾನುಭಾವ ಜ್ಞಾನವನುಳ್ಳ ತ್ರಿವಿಧ ಲಿಂಗದಲ್ಲಿ ನಿಷ್ಪತ್ತಿಯಾಗಿ, ಶಿವೋಹಂ, ಶಿವೋಹಂ ಎಂಬ ಪ್ರಣವು ನಾದ ಘೋಷವು ನಿಷ್ಪತ್ತಿಯಾಗಿ, ಮೂಲ ಪಂಚಾಕ್ಷರೀ ಸ್ವರೂಪವಾದ ಪ್ರಾಣಲಿಂಗವು, ಓಂಕಾರ ಪ್ರಣವು ಸ್ವರೂಪವಾದ ಭಾವಲಿಂಗವು ಅಂಗತ್ರಯಂಗಳು ಲಿಂಗತ್ರಯಂಗಳೆಂಬ ಜ್ಞಾನದ ವೊಳಕೆಯು ನಷ್ಟವಾಗಿ, ಅಂಗತ್ರಯ ಲಿಂಗತ್ರಯಂಗಳು ಜ್ಞಾನದ ಪರಾಂಬರಿಕೆಯಿಂದ ಆ ಅಂಗತ್ರಯ ಲಿಂಗತ್ರಯಂಗಳು ಅಭಿಮುಖವಾಗಲಾಗಿ, ತ್ರಿವಿಧ ಲಿಂಗವೇ ಷಡ್ವಿಧಲಿಂಗವಾಗಿ, ಷಡಾಧಾರ ಚಕ್ರಂಗಳಲ್ಲಿ ಸಂಬಂಧವಾಗಲು, ಆ ಷಟ್ಚಕ್ರದ ದಳಂಗಳಲ್ಲಿ ಸಂಬಂಧವಾದ ಐವತ್ತೊಂದಕ್ಷರವು ಚಕ್ರ ವರ್ಣ ದಳ ಅಧಿದೇವತೆ ಅವಸ್ಥೆಗಳೆಲ್ಲರ ಭಿನ್ನವರ್ತನೆ ನಷ್ಟವಾಗಿ ಅವೆಲ್ಲವು ಷಡ್ವಿಧ ಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಪ್ಪವೆಂದು ಬೋಧಿಸುತ್ತಿರ್ದನು ಪರಶಿವಲಿಂಗದಲ್ಲಿ ಇಷ್ಟಲಿಂಗದ ಮುಂದಣ ಎಚ್ಚರಿಕೆಯೇ ಕ್ರಿ ಇಷ್ಟ ಲಿಂಗಸಂಬಂಧವಾದ ಕ್ರಿಯೆ ಬಿಡಬೇಡ ಎಂದು ಬೋಧಿಸುತ್ತಿರ್ದನೆಂಬುದರ್ಥ

## (೬) ಷಟ್‌ಸ್ಥಲಾಚರಣೆಗಳು

(೧೩) ಅಯ್ಯಾ ಕೇಳಾ ಪ್ರಮಥಗಣಂಗಳೆಲ್ಲ ಷಡ್ವಿಧಭಕ್ತಿ ಎಂಬ ಪರಮಾಮೃತವ ಸೇವಿಸಿ ನಿವೃತ್ತಿ ಮಾರ್ಗದಲ್ಲಿ ಅರಿವೈರಿಗಳ ಸಂಗವ ತ್ಯಜಿಸಿ ನಿವೃತ್ತಿ ಮಾರ್ಗದಲ್ಲಿ ಚರಿಸುವ ಷಡ್ಗುಣಗಳ ಸಂಗವ ಸಾಧಿಸಿ, ಜಂಗಮದ ಆಚಾರ ವಿಚಾರವ ತಿಳಿದು, ಷಟ್‌ಸ್ಥಲ ಮಾರ್ಗದಲ್ಲಿ ನಿಂದು, ಭಕ್ತಿ ಜ್ಞಾನ ವೈರಾಗ್ಯದಲ್ಲಾಚರಿಸಿದ ವಿಚಾರವೆಂತೆಂದೊಡೆ, ಅನಾದಿ ನಿರಂಜನ ಆಕಾಯ ಚರಿತ್ರ ನಿರಾಲಂಬ ಪರಶಿವ ಮೂರ್ತಿ ಸಾಕ್ಷಾತ್ ಶ್ರೀ ಗುರುದೇವನಿಂದ ಏಕವಿಂಶತಿ ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾ ದೀಕ್ಷೆಯ ಪಡೆದು ತನ್ನ ತಾನರ್ಚಿಸಿ, ಆ ಶ್ರೀಗುರುದೇವನ ಲಿಂಗಜಂಗ ಮದ ಲೀಲೆ ಹೇಗುಂಟೋ ಹಾಗೆ ಭಕ್ತಿಯ ಮಾಡಿ, ಆ ಶ್ರೀಗುರು ಲಿಂಗ ಜಂಗಮದ ಅಂತಃಕರಣವೆಂಬ ಪರಮಾಮೃತ ಸುಧೆಯೊಳಗೆ ಲೋಲುಪ್ತರಾಗಿ ನಿರವಯ ಸಮಾಧಿಯಲ್ಲಿ ಬಯಲಾದರು ನೋಡಾ ಅದರ ವಿಚಾರವೆಂತೆಂದೊಡೆ—

ಭಕ್ತಸ್ಥಲಕ್ಕೆ ಕಾರಣವಾದ ಬಸವಣ್ಣಂಗೆ ಲಾಂಛನಂಗಳ ನೋಡಿ ತನು ಮನ ಧನವನೊಪ್ಪಿಸಿ ಶರಣೆಂದರಯ್ಯ

ಮಹೇಶ್ವರಸ್ಥಲಕ್ಕೆ ಕಾರಣವಾದ ಮಡಿವಾಳ ದೇಶಿಕೇಂದ್ರಂಗೆ ಲಿಂಗ ಲಾಂಛನ ವಿಭೂತಿ ರುದ್ರಾಕ್ಷಿ ಪಂಚಾಚಾರವ ನೋಡಿ, ತನು ಮನ ಧನವನೊಪ್ಪಿಸಿ ಶರಣೆಂದರಯ್ಯ

ಪ್ರಸಾದಿಯಸ್ಥಲಕ್ಕೆ ಕಾರಣವಾದ ಮರುಳ ಶಂಕರದೇವಂಗೆ ಲಿಂಗ ಲಾಂಛನ ವಿಭೂತಿ ರುದ್ರಾಕ್ಷಿ ಮಂತ್ರ ಪಂಚಾಚಾರದಾಚರಣ ಸಪ್ತಾ ಚಾರವ ಸಂಬಂಧದ ನಡೆ ನುಡಿಯ ವಿಚಾರಿಸಿ ತನು ಮನ ಧನವ ನೊಪ್ಪಿಸಿ ಶರಣೆಂದರಯ್ಯ

ಪ್ರಾಣಲಿಂಗಿಸ್ಥಲಕ್ಕೆ ಕಾರಣವಾದ ಸಿದ್ಧರಾಮೇಶ್ವರಂಗೆ ಲಿಂಗಲಾಂ ಛನ ಶ್ರೀ ವಿಭೂತಿ ರುದ್ರಾಕ್ಷಿ ಮಂತ್ರ ದಶವಿಧಾಚಾರ ಮೊದಲಾದ ಸರ್ವಾಚಾರ ಸಂಪತ್ತಿನಾಚರಣೆಯ ಸರ್ವಾಂಗದಲ್ಲಿ ನ್ಯೂನವಿಲ್ಲದೆ ನಡೆ ನುಡಿಗಳು ಹೊದ್ದದ ನಿರಾಭಾರಿ ವೀರಶೈವತ್ವವ ನೋಡಿ ಇದೇ ಪರ ವಸ್ತುವೆಂದು ತನು ಮನ ಧನವನೊಪ್ಪಿಸಿ ಶರಣೆಂದರಯ್ಯ

ಶರಣಸ್ಥಲಕ್ಕೆ ಕಾರಣವಾದ ಚನ್ನಬಸವರಾಜೇಂದ್ರಂಗೆ ಇಂತು ಚತುರ್ವಿಧ ಮೂರ್ತಿಗಳು ವಿಚಾರಿಸಿ ಆಚರಣೆಯು ನೋಡಿ ಗುರು ಸೂತ್ರ ಗೊತ್ರ ಸಂಪದ ದೀಕ್ಷೆಯು ವಿಚಾರಿಸಿ, ಲಿಂಗಾಂಗ ಷಟ್‌ಸ್ಥಾನಂಗಳ ನೋಡಿ, ಗುರುಮಾರ್ಗಾಚಾರ ನಡೆನುಡಿಗಳ ವಿಚಾರಿಸಿ ಸ್ವಾನುಭಾವ ಸಕೀಲದ ಗೊತ್ತು ತಿಳಿದು ಬಾಂಧನವ ನೋಡಿ ಮನ್ನಿಸಿ ತನು ಮನ ಧನವನೊಪ್ಪಿಸಿ ಶರಣೆಂದರಯ್ಯಾ

ಐಕ್ಯಸ್ಥಲಕ್ಕೆ ಕಾರಣವಾದ ಅಜಗಣ್ಣಗಳಿಗೆ ಬಸವ ಮಡಿವಾಳ ಮರುಳು ಶಂಕರ ಸಿದ್ಧರಾಮ ಚನ್ನಬಸವ ಮೊದಲಾದ ಮಹಾಗಣಂಗಳು ಅರ್ಥಿ ಉತ್ಸಾಹದಿಂದ ಭಕ್ತಿಯ ಮಾಡಿದ ಜಂಗಮವೇ ನನಗೆ ಮಹಾಪ್ರಸಾದವೆಂದು ಅವರಡಿಗಳಿಗೆ ವಂದಿಸಿ ತನು ಮನ ಧನವನೊಪ್ಪಿಸಿ ಶರಣೆಂದರಯ್ಯಾ

ನಿರವಯ ಸ್ಥಲಕ್ಕೆ ಕಾರಣವಾದ ಪ್ರಭುದೇವಗೆ ಅವ ಮತವೆಂದು ನೋಡದ ಬಾಲಬ್ರಹ್ಮಿ, ಬಸಿಬ್ರಹ್ಮಿ ಎಂಬ ಸಂಸಾರ ಸಂಕಲ್ಪ ಸೂತಕವನೆಣಿಸದೆ, ಸರ್ವಾಂಗದವಯವಗಳ ನೋಡಿ ಸರ್ವಸಂಗ ಪರಿತ್ಯಾಗತ್ವದಿಂದ ದ್ವಾದಶ ಮಲಂಗಳ ತ್ಯಜಿಸಿ, ಭಕ್ತಿ ಜ್ಞಾನ ವೈರಾಗ್ಯದಿಂದ ಸಮಸ್ತವಾದ ಭೋಗ ಯೋಗಾದಿಗಳಿಗೆ ಹೇವರಿಸಿ, ನಿರಾಶಕತ್ವದಿಂ ಶಿವಧೋ ಎಂದು ಗುರೂಪಾವಸ್ಥೆಯ ಮಾಡುವಂತಹ ಜ್ಞಾನ ಕಲಾತ್ಮಂಗೆ ಜಂಗಮಾಕೃತಿಯಿಂದ ಪ್ರತ್ಯಕ್ಷವಾಗಿ ಆ ಜ್ಞಾನ ಕಲಾತ್ಮನ ಉಪಾವಸ್ಥೆಯನೊಂದಿಸಿ ಅತನಿಗೆ ಅಂಜಬೇಡೆಂದು ಅಭಯ ಹಸ್ತವನಿತ್ತು ರೇವಣಸಿದ್ಧೇಶ್ವರ ಮೊದಲಾದ ಗಣಾಚಾರದ ಮಧ್ಯದಲ್ಲಿ ಈ ಜ್ಞಾನ ಕಲಾತ್ಮನನೊಪ್ಪಿಸಿ, ಅವರಿಂದ ನಿರಾಕಾರವಾದ ಪ್ರಾಣಲಿಂಗವ ಬಹಿಷ್ಕರಿಸಿ, ಪಂಚಕಲಶ ಸೂತ್ರದಿಂದ ಪ್ರಮಥಗಣ ಸಾಕ್ಷಿಯಾಗಿ ಅತನ ಷಡ್ವಿಧಸ್ಥಾನದಲ್ಲಿ ಸ್ಥಿರಂಗೊಳಿಸಿ, ಅಂತರಂಗ ಬಹಿರಂಗದಲ್ಲಿ ಅಷ್ಟವಿಧಾರ್ಚನೆ, ಷೋಡಶೋಪಚಾರಗಳ ಭಕ್ತಿಯನರುಹಿ, ಆ ಪರಶಿವಲಿಂಗದಲ್ಲಿ ನೈಷ್ಠೆಯ ನೋಡಿ. ಏಕವಿಂಶತಿ ದೀಕ್ಷೆ ಮೊದಲಾಗಿ ಪ್ರಮಥರು ನುಡಿದ ಎರಡೆಂಬತ್ತು ಕೋಟಿ ವಚನಾನುಭಾವ ಉದಾಹರಣೆಯ ಬೋಧಿಸಿ, ನಾನು ನೀನು ಎಂಬ ಭಿನ್ನಭಾವವನಳಿದು ಏಕಸ್ವರೂಪವೆಂಬ ಅಭಿನ್ನ ಲೀಲೆಯಿಂದ ಪಾದೋದಕ ಪ್ರಸಾದದಲ್ಲಿ ಏಕಭಾಜನವ ಮಾಡಿದ ಮೇಲೆ

ಶ್ರೀಗುರು ಬಸವ ಮೊದಲಾದ ಪ್ರಮಥ ಗಣಾರಾಧ್ಯರ ಕರೆದು ಇಲ್ಲೊಂದು ನಿಜವಸ್ತು ಉಂಟೆಂದು ತಾವು ಮೊದಲು ಶರಣೊಕ್ಕು ತಮ್ಮ ಹಿಂದೆ ಶರಣಗಣಂಗಳೆಲ್ಲ ಶರಣೊಕ್ಕು ಅಡಿ ಮುಡಿಯಿಂದ ವಸ್ತುವ ಬೆಸಗೊಂಡು ಆ ಲಿಂಗ ಜಂಗಮ ದೇವನೊಡಗೂಡಿ ಬಯಲೊಳಗೆ ಮಹಾ ಬಯಲಾದರು ನೋಡಾ ಸಂಗನಬಸವೇಶ್ವರಾ

## (೭) ಪಂಚಾಚಾರ, ಸಪ್ತಾಚಾರಗಳು.

೧೪ ಅಯ್ಯಾ ಆಚಾರದ ವಿವರವ ವಿಸ್ತಾರವಾಗಿ ಕರುಣಿಸೆಲೆ ಚಿಕ್ಕದಂಡ ಪ್ರಭುವೇ ಎಂದು ಅಕ್ಕಮಹಾದೇವಿ ಮೊದಲಾದ ಸಕಲ ಪ್ರಮಥಗಣಂಗಳೆಲ್ಲ ಹಸ್ತಾಂಜುಳಿತರಾಗಿ ಬೆಸಗೊಳಲು ಆಗ ಚಿಕ್ಕದಂಡ ಪ್ರಭುವು ಲಿಂಗವಲ್ಲಿ ಆನಂದ ಜಲ ಉಕ್ಕಿ ಬೋಧಿಸಿದಂತಹ ಮಹಾ ಪ್ರಸಾದ ಉಂಟು ಅದೆಂತೆಂದೊಡೆ,

ಅಯ್ಯಾ, ಶ್ರೀಗುರುಲಿಂಗ ಜಂಗಮದ ವೇಧಾ ಮಂತ್ರ ಕ್ರಿಯಾ ದೀಕ್ಷೆಗೆ ಹೊರಗಾದ ಭುವನದ ಶೈವಪ್ಪವದ ಅರ್ಚನೆ ಪೂಜೆಯ ಮಾಡಿ ಅವರುಚ್ಛಿಷ್ಟವ ಭುಂಜಿಸುವದನುಳಿದು, ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಸ್ವರೂಪವಾದ ಅನಾದಿ ಗುರುಲಿಂಗ ಜಂಗಮದರ್ಚನೆ ಪೂಜೆಯ ಮಾಡಿ ಕಿಂಕುರ್ವಾಣತೆಯಿಂದ ಅವರ ಪ್ರಸಾದವ ಹಾರೈಸುವುದೇ ಲಿಂಗಾಚಾರ. ಈ ಭೇದವ ತಿಳಿದು ಪಂಚಾಚಾರವ ಆಚರಣೆಗೆ ತಂದು ಸಪ್ತಾಚಾರವ ಸಂಬಂಧವ ಇಟ್ಟು, ಅಷ್ಟಾವರಣದ ಕಲೆನೆಲೆಗಳ ಒಳಹೊರಗು ಎನ್ನದೆ ಸದ್ಗುರು ಮುಖದಿಂದ ಆಚರಣೆಯ ಸಂಬಂಧವ ತಿಳಿದ, ಸದ್ಭಕ್ತಿ ಜ್ಞಾನ ವೈರಾಗ್ಯ ಷಟ್‌ಸ್ಥಲ ಮಾರ್ಗವಿಡಿದು ನಿಜಾಚರಣೆಯುಳ್ಳಾಚರಿಸುವುದೇ ಶಿವಭಕ್ತಿ ಶಿವಜಂಗಮವಲ್ಲದೆ ಉಳಿದ ವೇಷಧಾರಿಗಳೆಲ್ಲ ಎನ್ನೊಡೆಯ ಪ್ರಮಥ ಗಣಾಚಾರಕ್ಕೆ ಹೊರಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

### ಪಂಚಾಚಾರಗಳು.

೧೫ ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ, ಈ ಪಂಚಾಚಾರದ ಆಚರಣೆ ಎಂತೆಂದೊಡೆ, ಲಿಂಗವಲ್ಲದೆ ಅನ್ಯವನಾರಾಧಿಸದಿಹುದೇ ಲಿಂಗಾಚಾರ, ಸಜ್ಜನ ಸಾಧಕವಲ್ಲಿ ತಂದು

ಗುರುಲಿಂಗ ಜಂಗಮಕ್ಕೆ ಮಾಡಿ ನೀಡಿ ನಿತ್ಯನಾಗಿಹುದೇ ಸದಾಚಾರ, ಶಿವಭಕ್ತರಲ್ಲಿ ಜಾತಿವರ್ಣ ಆಶ್ರಮವನರಸದೆ ಅವರೊಕ್ಕುದ ಕೊಂಬುದೇ ಶಿವಾಚಾರ, ಶಿವಾಚಾರದ ನಿಂದೆಯ ಕೇಳದಿಹುದೇ ಗಣಾಚಾರ, ಶಿವಶರಣರೇ ಹಿರಿಯರಾಗಿ ತಾನೇ ಕಿರಿಯನಾಗಿ ಭಯಭಕ್ತಿಯಿಂದ ಆಚರಿಸುವುದೇ ಭೃತ್ಯಾಚಾರ ಇಂತೀ ಪಂಚಾಚಾರವುಳ್ಳ ಭಕ್ತರ ಒಕ್ಕುದ ನಿಕ್ಕಿ ಸಲಹಯ್ಯ ಪ್ರಭುವೇ ಕೂಡಲಚನ್ನಸಂಗಮದೇವಾ

೧೩. ಭೃತ್ಯಾಚಾರ, ಲಿಂಗಾಚಾರ, ಶಿವಾಚಾರ, ಗಣಾಚಾರ, ಸದಾಚಾರವೆಂಬ ಪಂಚಾಚಾರದೊಳಗಣ ಭೃತ್ಯಾಚಾರವೆಂತೆಂದೊಡೆ:- ದಾಸತ್ವವು, ಪರದಾಸತ್ವವು, ಸ್ವಾಮಿ ಭೃತ್ಯತ್ವವು, ವೀರಭೃತ್ಯತ್ವವು, ಸಜ್ಜನತ್ವವು, ಸಕಲಾವಸ್ಥೆಯು, ಗುರುಪೂಜಕತ್ವವು, ಲಿಂಗಾರ್ಚಕತ್ವವು, ಜಂಗಮಾರಾಧನತ್ವವು, ಭಕ್ತಕಾಂಕ್ಷಿತ್ವವು, ಸ್ವಗೃಹ, ಸ್ವಧನ, ಸ್ವದೇಹವು ಲಿಂಗ ಜಂಗಮ ಭಕ್ತರಿಗೆ ಸಮರ್ಪಣವು, ಇಂತೀ ಭಕ್ತಿ ಮುಖವಾಗಿ ದೇವಭಕ್ತರೇ ಹಿರಿದು ತಾ ಕಿರಿದಾಗಿ ಭಯ ಭೃತ್ಯತ್ವವೇ ಭೃತ್ಯಾಚಾರವು

ಗೃಹವು, ಕ್ಷೇತ್ರವು, ವೇಷವು, ಪಶು, ವಸ್ತ್ರ, ಆಭರಣ ಸ್ಥಾನ ದ್ರವ್ಯಾದಿಗಳು ಸತಿ ಸುತ ಭೃತ್ಯರು ನೆಂಟರು ಇಷ್ಟರು ತಾನಿಹ ದೇಶಕೋಶಾದಿಗಳು ಲಿಂಗಧಾರಣರಾಗಿಹ ಭಕ್ತರುಗಳ ಆಶ್ರಯದಲ್ಲಿ ಇಹುದು ಸಕಲ ಪಡಿ ಪದಾರ್ಥಂಗಳು ತೈಲಾದಿ ಪಂಚಾಮೃತಂಗಳು ಶಿವಲಿಂಗ ಧಾರಣರಾದ ಭಕ್ತರುಗಳ ಹಸ್ತದಿಂ ಬಂದಿರ್ದಲ್ಲಿ ಅದನು ಗ್ರಹಿಸುವುದೇ ಲಿಂಗಾಚಾರವು.

ಹೀಗೆ ಲಿಂಗಾಚಾರವೇ ಪ್ರಾಣವಾಗಿ ಬ್ರಾಹ್ಮಣಾದಿ ಚಾಂಡಾಲಾಂತ್ಯವಾದ ಅಷ್ಟಾದಶ ವರ್ಣಾಶ್ರಮದ ಕುಲದಲ್ಲಿ ಹುಟ್ಟಿ ಪೂರ್ವ ಜಾತಿ ಮಂತ್ರಂಗಳಂ ಬಿಟ್ಟು ಗುರುಕರ ಜಾತರಾಗಿ ಇಷ್ಟಲಿಂಗ ಸಂಬಂಧಿಗಳಾಗಿ ಭಕ್ತ ಜಂಗಮ ಲಾಂಛನ ಯುಕ್ತರಾಗಿ ಆಚರಿಸುತ್ತಿಪ್ಪ ಶಿವಭಕ್ತ ಜಂಗಮರ ಪೂರ್ವಕುಲ ವರ್ಣಾಶ್ರಮಂಗಳ ವಿಚಾರಿಸದೆ ಸಮಯಾಚಾರದಿಂದೆ ಲಿಂಗಾರ್ಪಿತ ಮಾಡುವುದೇ ಶಿವಾಚಾರವು

ಹೀಗೆ ಶಿವಾಚಾರವೇ ಪ್ರಾಣವಾಗಿ ಗುರುಲಿಂಗ ಜಂಗಮ ಭಕ್ತರುಗಳ ನಿಂದಿಸುವ ದುರಾಚಾರಿಗಳ ಭಕ್ತನಿಂದೆ ಹರನಿಂದೆ ಆಚಾರ

ನಿಂದೆಯು ಮೊಳ್ಪ ಮಾಯಾವಾದಿಗಳ ಇತರ ವ್ರತಂಗಳಂ, ಪರದೈವಂ ಗಳ ನಿಷ್ಠೆಯಿಂ ಶಿವಾಚಾರದ ವ್ರತಂಗಳಂ ಕೆಡಿಸುವ ಜೈನ ಬೌದ್ಧ ಚಾರ್ವಾಕ ಮಾಯಾವಾದಿಗಳು ಪ್ರಾಣಲಿಂಗ ಸಂಬಂಧಿಗಳಪ್ಪ ಭಕ್ತರ ವ್ರತಂಗಳ ಕೆಡಿಸುವ ಪ್ರಯತ್ನದ ಸಮಯದಲ್ಲಿ ಪರವಾದಿಗಳ ಕಾಣು ತಾಕ್ಷಣವೇ ಹಸ್ತ ಖಡ್ಗದಿಂದ ಅವರ ಪ್ರಾಣತ್ಯಾಗವಂ ಮಾಡುವುದು, ಅಲ್ಲದೊಡೆ ಶಪಿಸುವುದು, ಹಾಗಾಗದ ಪಕ್ಷ ಆ ಸ್ಥಾನಗಳ ತೊಲಗಿ ಹೋಗು ವುದು, ಇಂತಿಷ್ಟು ಆಗದ ಪಕ್ಷಕ್ಕೆ ತನ್ನ ಪ್ರಾಣವಾದರೂ ತ್ಯಾಗ ಮಾಡು ವುದು, ಹಾಗಾಗದಿದ್ದೊಡೆ ಆ ದೇಶತ್ಯಾಗವ ಮಾಡುವುದು, ಇಂತೀ ಪ್ರಕಾ ರದಲ್ಲಿ ತನ್ನ ಗಣಾಚಾರವನುಂಟು ಮಾಡುವುದೇ ಗಣಾಚಾರ.

ಹೀಗೆ ಗಣಾಚಾರವೇ ಪ್ರಾಣವಾಗಿ ಆಚರಿಸುತಿಪ್ಪ ಶರಣಂಗೆ ಸದಾ ಚಾರ ವಿಲ್ಲದೆ ಜೀವನ್ಮುಕ್ತನಾಗಬಾರದೆಂದು ನಿಶ್ಚಯಿಸಿ ಸದಾಚಾರದ ಭಾವನೆ ಎಂತೆಂದೊಡೆ, ಅಷ್ಟಾವರಣ ಪಂಚಾಚಾರಂಗಳ ನೈಷ್ಠಿಕ ದೃಢವ್ರತಂಗಳ ಸತ್ಕ್ರಿಯಾ ಸಮ್ಯಜ್ಞಾನಂಗಳ ಸಂಬಂಧಿಸಿದ ಶ್ರೀಗುರು ಉಪದೇಶಪರ ಗುರುಮಾರ್ಗಾಚಾರದಲ್ಲಿ ವರ್ತಿಸುವ ಭಕ್ತ ಜಂಗಮರ ನಿಯಮವ್ರತಂಗಳು ತನ್ನ ಭೃತ್ಯಾಚಾರ ಸಂಬಂಧದಿಂದ ಧರ್ಮಾಚಾರ ಗಳ ಅಳವಡಿಸಿಕೊಟ್ಟು ತನ್ನ ಸದಾಚಾರಂಗಳ ಬಿಡದೆ ಆಚರಿಸುತಿರ್ಪ ಸಮಯಂಗಳಲ್ಲಿ ವಾಗ್ಜಾಲ, ಶಾಸ್ತ್ರಜಾಲ, ಮಹೇಂದ್ರಜಾಲ, ಮಾಯಾ ಜಾಲ, ಮಂತ್ರ ತಂತ್ರ ಜಾಲಂಗಳೆಂಬ ಬಹು ಚಾಪಲ್ಯ ಕುಶಲದಿಂ ಪಂಚಮುಖನಪ್ಪ ಪರಮೇಶ್ವರನಾದಡೆಯೂ ಬಂದು ಶರಣನು ತಾನು ನಡೆವ ಸತ್ಕ್ರಿಯಾಚಾರಂಗಳ ಬಿಡಿಸಲೆಂದು ಬಹು ಪ್ರಯತ್ನಂಗೆಯ್ಯಲು ಪ್ರಾಣಾಭಿಮಾನಾದಿ ಪರಿಯಂತರವೂ ಬಿಡದ ಸದಾಚಾರಂಗಳ ಆಚರಿ ಸುತಿರ್ಪುದೇ ಸದಾಚಾರವು

ಹೀಗೆ ಸರ್ವಾಚಾರ ಸಂಪನ್ನನಹ ಶರಣನ ಸದಾಚಾರವೇ ಪ್ರಾಣ ವಾಗಿ ಆಚರಿಸುವ ಶರಣನ ಚರಣಕ್ಕೆ ನಮೋ ನಮೋ ಎಂಬೆ ಕಾಣಾ ಸದ್ಗುರು ಒಸವಲಿಂಗ ಪ್ರಭುವೇ

೧೭ ಅಯ್ಯ ಶ್ರೀಗುರು ಕರುಣಿಸಿ ಕೊಟ್ಟಲಿಂಗ ಜಂಗಮವಲ್ಲದೆ ಅನ್ಯ ದೈವಂಗಳ ತ್ರಿಕರಣದಲ್ಲಿ ಅರ್ಚಿಸದಿಪ್ಪುದೇ ಲಿಂಗಾಚಾರವೆಂ ಬೆನಯ್ಯಾ.

ಭಕ್ತನಾದಡೆ ಸತ್ಯ ಶುದ್ಧಕಾಯಕ, ಮಹೇಶನಾದಡೆ, ಸತ್ಯಶುದ್ಧ ಭಿಕ್ಷವ ಬೇಡಿ, ಸಮಸ್ತ ಪ್ರಾಣಿಗಳಲ್ಲಿ ಪಾತ್ರಾಪಾತ್ರವ ತಿಳಿದು, ಹಸಿವು ತೃಷೆ ಸೀತಕ್ಕೆ ಪರಹಿತಾರ್ಥಿಯಾಗಿರ್ಪುದೇ ಸದಾಚಾರವೆಂಬೆನಯ್ಯ

ಗುರುಮಾರ್ಗಾಚಾರದಲ್ಲಿ ನಿಂದ ಶಿವಲಾಂಛನ ಧಾರಿಗಳೆಲ್ಲ ಪರ ಶಿವಲಿಂಗವೆಂದು ಭಾವಿಸಿ ಅರ್ಥ ಪ್ರಾಣಾಭಿಮಾನವನೊಪ್ಪಿಸುವುದೇ ಶಿವಾ ಚಾರವೆಂಬೆನಯ್ಯಾ

ಅಷ್ಟಾವರಣಾಂಗಳ ಮೇಲೆ ನಿಂದೆ ಕುಂದುಗಳು ಬಂದು ತಟ್ಟ ದಲ್ಲಿ ಗಣ ಸಮೂಹವನೊಡಗೂಡಿ, ಆ ಸ್ಥಲವ ತ್ಯಜಿಸುವುದೇ ಗಣಾ ಚಾರವೆಂಬೆನಯ್ಯ

ಜಾತ್ಯಾಶ್ರಮ ಕುಲಗೋತ್ರ ನಾಮರೂಪ ಕ್ರಿಯಾರಹಿತವಾಗಿ ಗುರೂಪಾವಸ್ಥೆಯಿಂದ ಗುರು ಪ್ರತ್ಯಕ್ಷವ ಮಾಡಿ, ಆ ಗುರುವಿನಿಂದ ಚಿದ್ಘನ ಮಹಾಲಿಂಗವ ಪಡೆದು, ಆ ಲಿಂಗಸಹಿತವಾಗಿ ಭಕ್ತಿ ಜ್ಞಾನ ವೈರಾಗ್ಯ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಮೊದಲಾದ ಷಟ್ ಸ್ಥಲ ಮಾರ್ಗದಲ್ಲಿ ನಿಂದ ಭಕ್ತಗಣಂಗಳಲ್ಲಿ ಪಂಚಸೂತಕಂಗಳ ಕಲ್ಪಿ ಸದೆ, ಅವರಿದ್ದ ಸ್ಥಲಕ್ಕೆ ಹೋಗಿ ತನು ಮನ ಧನಂಗಳ ಸಮರ್ಪಿಸಿ ಅವರೊಕ್ಕು ಮಿಕ್ಕುದ ಹಾರೈಸಿ ಹಸ್ತಾಂಜಲಿತರಾಗಿ ಪ್ರತಿ ಉತ್ತರವ ಕೊಡದಿರ್ಪುದೇ ಭೃತ್ಯಾಚಾರವೆಂಬೆನಯ್ಯ

## ಸಪ್ತಾಚಾರಗಳು.

೧. ಮಲ ಮಾಯಾ ಪಾತಕ ಸೂತಕ ರಹಿತನಾದ ದೀಕ್ಷಾ ಗುರು ಶಿಕ್ಷಾಗುರು ಜ್ಞಾನ ಗುರುವಿಂದ ವೇಧಾ ಮಂತ್ರ ಕ್ರಿಯಾದೀಕ್ಷೆಯ ಪಡೆದು, ದ್ವಾದಶ ಮಲಪಾಶ ಕರ್ಮವ ತ್ಯಜಿಸಿ ಮನ ಮಾರುತ ಮೊದಲಾದ ದ್ವಾದಶ ಇಂದ್ರಿಯಂಗಳ ಗುರುಪಾದ ಜಲದಿಂದ ಪ್ರಕ್ಷಾ ಲಿಸಿ ದಂತ ಪಂಕ್ತಿ ಕ್ರಿಯೆಗಳ ಮಾಡಿ, ಕಟಿಸ್ನಾನ ಕಂಠಸ್ನಾನ ಮಂಡೆ ಸ್ನಾನ ಸರ್ವಾಂಗಸ್ನಾನವ ಮಾಡಿ, ಕ್ರಿಯಾ ಭಸಿತದಿಂದ ಸ್ನಾನ ಧೂಳನ

ಧಾರಣ ಮರ್ಮಂಗಳ ತಿಳಿದಾಚರಿಸಿ, ಸಾಕಾರ ನಿರಾಕಾರ ಅಷ್ಟವಿಧಾ
ರ್ಚನೆ ಷೋಡಶೋಪಚಾರದಿಂದ ಲಿಂಗ ಜಂಗಮವನರ್ಚಿಸಿ, ನಿರ್ವಂ
ಚಕತ್ವದಿಂದ ಘನವಾದ ತೀರ್ಥ ಪ್ರಸಾದ ಮಂತ್ರದಲ್ಲಿ ನಿಂದ ನಿಜಾ
ವಸ್ಥೆಯೇ ಕ್ರಿಯಾಚಾರವೆಂಬೆನಯ್ಯಾ

ಅಂತರಂಗದಲ್ಲಿ ಕರಣ ವಿಷಯ ಕರ್ಕಶದಿಂದಹಂಕರಿಸಿ ಗುರುಹಿರಿ
ಯರಲ್ಲಿ ಸಂಕಲ್ಪ ವಿಕಲ್ಪಗಳಿಂದ ಕುಂದು ನಿಂದೆ ಹಾಸ್ಯ ರೋಷವೆಂಬ
ಅಜ್ಞಾನವ ಒಳಿಸದೆ ಪರಮಪಾತಕರ ದರ್ಶನ ಸ್ಪರ್ಶನ ಸಂಭಾಷಣೆ ಸಮ
ಪಂಙ್ತಿ ಪಾಕವ ಕೊಳ್ಳದೆ, ಸತ್ಯ ನಡೆನುಡಿಯುಳ್ಳ ಶಿವ ಶರಣ ಗಣಂಗ
ಳಲ್ಲಿ ಷಡ್ವಿಧಭಕ್ತಿ ಮುಂದುಗೊಂಡು ಎರಡೆಂಬತ್ತುಕೋಟಿ ವಚನಾನು
ಭಾವದಲ್ಲಿ ನಿಂದ ನಿಲುಕಡೆಯೇ ಜ್ಞಾನಾಚಾರವೆಂಬೆನಯ್ಯ

ತನುವಿನ ವಿಕಾರದಿಂದ ಕಾಮ ಕ್ರೋಧ ಲೋಭ ಮೋಹ ಮದ
ಮತ್ಸರಂಗಳ ಬಳಕೆಯ ಮಾಡದ, ಲೋಕದಂತೆ ನಡೆನುಡಿಗಳ ಬಳಸದೆ
ತನ್ನ ಗುಣಾವಗುಣಂಗಳ ಸ್ವಾತ್ಮಾನುಭವದಿಂದ ಅರಿದು ದುರ್ಗುಣವ
ತ್ಯಜಿಸಿ ಸದ್ಗುಣವ ಹಿಡಿದು ಬಿಡದಿರ್ಪುದೇ ಭಾವಾಚಾರವೆಂಬೆನಯ್ಯ

ಕೊಡುವಲ್ಲಿ ಕೊಂಬಲ್ಲಿ ಅತಿ ಆಶೆಯಿಂದ ಹುಸಿನುಡಿಯ ನುಡಿ
ಯದೆ ಕೊಟ್ಟ ಭಾಷೆಯ ಪ್ರಾಣಾಂತ್ಯ ಬಂದರೂ ನುಡಿಯಂತೆ ನಡೆ
ವುದೇ ಸತ್ಯಾಚಾರವೆಂಬೆ ನೋಡಾ

ಕಾಲಕಾಮಗಳ ಬಾಧೆಗೊಳಗಾದ ಹರಯೋಗದ ಕಟ್ಟು ಮಟ್ಟು
ಸೋಂಕುಗಳಲ್ಲಿದೆ ಲಿಂಗಾಣತಿಯಿಂ ಬಂದೊದಗಿದ ಪರಿಣಾಮ ಪ್ರಸಾದ
ದಲ್ಲಿ ಲೋಲುಪ್ತನಾಗಿರ್ಪುದೇ ನಿತ್ಯಾಚಾರವೆಂಬೆ ನೋಡಾ

ಸರ್ವಾವಸ್ಥೆಯಲ್ಲಿ ದಶವಿಧ ಪಾದೋದಕ ಏಕಾದಶ ಪ್ರಸಾದ
ಮೂವತ್ತಾರು ಪ್ರಣವ ಮೊದಲಾದ ಮಹಾಮಂತ್ರಂಗಳಲ್ಲಿ ಎರಕತ್ವವ
ನುಳ್ಳದೇ ಧರ್ಮಾಚಾರವೆಂಬೆ ನೋಡಾ

ಇಂತೀ ಮರ್ಮವ ಗುರುಕೃಪೆಯಿಂದರಿದು ಆಚಾರವೇ ಅಂಗ
ಮನ ಪ್ರಾಣ ಭಾವಂಗಳಾಗಿ ಇಹಪರಂಗಳ ಮೀರಿ ಪಿಂಡಾದಿ ಜ್ಞಾನ
ಶೂನ್ಯಾಂತವಾದ ಏಕೋತ್ತರ ಮಾರ್ಗದಲ್ಲಿ ನಿಂದು ಒಯಲೊಳಗೆ ಬಚ್ಚ

ಬರಿಯ ನಿರವಯುವ ಸಾಧಿಸುವುದೇ ಸರ್ವಾಚಾರ ಸಂಪತ್ತಿನಾಚಾರದ ನಿಲುಕಡೆ ನೋಡಾ

ಇಂತು ಆಚಾರದ ಕುರುಹ ತಿಳಿದು ಪಂಚಾಚಾರವ ಬಹಿಷ್ಕರಿಸಿ, ಸಪ್ತಾಚಾರವ ಗೋಪ್ಯವ ಮಾಡಿ ದರಿದ್ರಗೆ ನಿಧಿನಿಧಾನ ದೊರೆತಂತೆ, ರೋಗಿಗೆ ವೈದ್ಯಲತೆ ದೊರೆತಂತೆ, ಮೂಕ ಫಲ ಸವಿದಂತೆ, ಕಳ್ಳಗೆ ಚೇಳೂರಿದಂತೆ, ತಮ್ಮ ಚಿದಂಗ ಸ್ವರೂಪವಾದ ಶರಣ ಗಣಂಗಳಲ್ಲಿ ಉಸುರಿ, ದುರ್ಜನರಲ್ಲಿ ಬಳಸದೆ ನಿಂದ ಪರಮಸುಖಿ ನಿಮ್ಮ ಶರಣರಲ್ಲದೆ ಉಳಿದ ಕಣ್ಣಾಗೆಟ್ಟಣ್ಣಗಳೆತ್ತ ಬಲ್ಲರಯ್ಯ ಕೂಡಲ ಚನ್ನಸಂಗಮದೇವಾ

## ಪಂಚಾಚಾರ, ಸಪ್ತಾಚಾರ ಇವುಗಳ ಪರಿಣಾಮುಗಳು.

೧೯. ಹರಹರಾ ಶಿವಶಿವಾ ಜಯುಜಯು, ಹರಗಣಂಗಳಾಚರಿಸಿದ ಸತ್ಕಾಯಕದಿಂದ ಬಹು ಜನ್ಮದ ದೋಷ ತೊಲಗುವುದಯ್ಯಾ. ಸತ್ಕ್ರಿಯೆಯಿಂದ ಕಾಮಕಾಲರ ಭಯ ಹರಿವುದಯ್ಯಾ ಸಮ್ಯಜ್ಞಾನದಿಂದ ಮಾಯೆಯು ಹಿಂದಾಗುವುದಯ್ಯ. ಸದ್ಭಕ್ತಿಯಿಂದ ಪಾವನ ಸ್ವರೂಪವಾಗುವದಯ್ಯ

ಲಿಂಗಾಚಾರದಿಂದ ತನ್ನಂಗ ಶುದ್ಧವಾಗುವುದಯ್ಯ. ಸದಾಚಾರದಿಂದ ಮನ ಶುದ್ಧವಾಗುವುದಯ್ಯ ಶಿವಾಚಾರದಿಂದ ಧನ ಪ್ರಸಿದ್ಧವಾಗುವುದಯ್ಯ ಗಣಾಚಾರದಿಂದ ನಡೆ ಪರುಷವಾಗುವುದಯ್ಯ ಭೃತ್ಯಾಚಾರದಿಂದ ನುಡಿ ಪರುಷವಾಗುವುದಯ್ಯ

ಕ್ರಿಯಾಚಾರದಿಂದ ಕರ್ಮೇಂದ್ರಿಯಂಗಳು ಪವಿತ್ರವಾಗುವವಯ್ಯ ಜ್ಞಾನಾಚಾರದಿಂದ ಜ್ಞಾನೇಂದ್ರಿಯಂಗಳು ಪಾವನವಾಗುವವಯ್ಯ ಭಾವಾಚಾರದಿಂದ ಕರಣಂಗಳು ನಿಜಸ್ವರೂಪವಾಗುವವಯ್ಯ ಸತ್ಯಾಚಾರದಿಂದ ವಿಷಯಂಗಳು ಲಿಂಗಮುಖವಾಗುವವಯ್ಯ ನಿತ್ಯಾಚಾರದಿಂದ ವಾಯುಗಳು ಮಹಾ ಪ್ರಸಾದವಾಗುವವಯ್ಯ ಧರ್ಮಾಚಾರದಿಂದ

ಲಿಂಗಾಂಗಗಳು ಏಕವಾಗುವವಯ್ಯ ಸರ್ವಾಚಾರದಿಂದ ಸರ್ವಾಂಗ ಜ್ಞಾನ ಜ್ಯೋತಿಯುಪ್ಪುದು ತಪ್ಪದು ನೋಡಾ

'ಲಿಂಗಾಚಾರ ಸದಾಚಾರ ಶಿವಾಚಾರಸ್ತಥೈವಚ ।
ಗಣಾಚಾರ ಭೃತ್ಯಾಚಾರ ಪಂಚಾಚಾರಾಃ ಪ್ರಕೀರ್ತಿತಾಃ ॥
ಕ್ರಿಯಾಚಾರ ಜ್ಞಾನಾಚಾರೋ ಭಾವಾಚಾರಸ್ತಥೈವಚ ।
ಸತ್ಯಾಚಾರೋ ನಿತ್ಯಾಚಾರೋ ಧರ್ಮಾಚಾರೋವರಾನನೇ ॥
ಸರ್ವಾಚಾರ ಸಂಪನ್ನೇನ ಸದಾಸನ್ನಿಹಿತಃ ಶಿವಃ ।
ಲಿಂಗಾವಸಾನ ಕಾಲೇ ದ್ವಾದಶಾಚಾರಕಂ ಶೃಣು ॥

ಇಂತೆಂದುದಾಗಿ ಸತ್ಯಾಯುಕ ಮೊದಲಾದ ಷೋಡಶ ನೆಲೆ ಕಲೆಗಳ ಸದ್ಗುರು ಮುಖದಿಂದ ಚಿದ್ಘನಲಿಂಗವ ಮಾಡಿಕೊಂಡು, ಷೋಡಶ ವರ್ಣವ ಸದ್ಗುರು ಮುಖದಿಂದ ಚಿದಂಗವ ಮಾಡಿಕೊಂಡು ಸದ್ಗುರು ಮುಖದಿಂ ಎರಡಳಿದು ಏಕ ಸ್ವರೂಪದಿಂದ ಜ್ಯೋತಿಯು ಜ್ಯೋತಿ ಬೆರೆವಂತೆ ಬಸವ ಮೊದಲಾದ ಪ್ರಮಥಗಣಂಗಳೆಲ್ಲ ಬಯಲೊಳಗೆ ಮಹಾ ಬಯಲಾದರು ನೋಡಾ ಸಂಗನಬಸವೇಶ್ವರಾ.

# ಅಷ್ಟಾವರಣಗಳು.

## ಸಾಮಾನ್ಯ ನಿರೂಪಣೆ.

೨೦ ಅಷ್ಟಾವರಣ ಸಂಬಂಧವೆಂತೆಂದೊಡೆ, ಜಗತ್ಪತಿಯಾದ ಪರಮೇಶ್ವರನು ತನ್ನ ಸೊಮ್ಮಿನ ಜೀವನು ವ್ಯರ್ಥ ಪ್ರಾಣಿಯಾಗಿ ಕೆಡುತಾನೆ ಎಂದು ದಯೆ ಹುಟ್ಟಿ ತ್ರಿವಿಧ ರೂಪ ಧರಿಸಿದನು:— ಅದೆಂತೆಂದೊಡೆ, ಏಕಮೂರ್ತಿಯಾದ ಮಹಾದೇವನು ತ್ರಿವಿಧ ರೂಪಾದನು ಅದೆಂತೆಂದೊಡೆ, ಗುರು ಲಿಂಗ ಜಂಗಮ ರೂಪ ಧರಿಸಿ ಆ ಜೀವಾತ್ಮನಿಗೆ ಕಾಯದಲ್ಲಿ ಗುರುವಾಗಿ, ಜೀವದಲ್ಲಿ ಲಿಂಗವಾಗಿ, ಪ್ರಾಣದಲ್ಲಿ ಜಂಗಮವಾಗಿ, ಗುರು ರೂಪದಿಂದ ಬೋಧೆಯ ಮಾಡಿ, ಲಿಂಗರೂಪದಿಂದ ಪೂಜೆಯ ಕೈಕೊಂಡು, ಜಂಗಮ ರೂಪದಿಂದ ಪಾದೋದಕ ಪ್ರಸಾದವ ದಯಪಾಲಿಸಿ, ತನ್ನ ದೇಹದ ಪ್ರಸಾದವೇ ಆತನ ತ್ವಕ್ಕಿನಲ್ಲಿ ಭಸ್ಮಸಂಬಂಧವ ಮಾಡಿ, ತನ್ನ ನೇತ್ರ ಸ್ವರೂಪವಾದ ರುದ್ರಾಕ್ಷಿಗಳನ್ನು ಆತನ ನೇತ್ರಗಳಲ್ಲಿ ಸಂಬಂಧವ ಮಾಡಿ, ತನ್ನ ನಾಮವೆಂಬ ಪಂಚಾಕ್ಷರಿಯ ಮಂತ್ರವನ್ನು ಆತನ ವಾಕ್ಯದಲ್ಲಿ ಸಂಬಂಧವ ಮಾಡಿ, ತನ್ನ ಆನಂದವನ್ನ ಆತನ ಜಿಹ್ವೆಯಲ್ಲಿ ಪಾದೋದಕವ ಸಂಬಂಧಿಸಿ, ತನ್ನ ದಯೆಯನ್ನು ಆತನ ಶ್ರೋತ್ರದಲ್ಲಿ ಪ್ರಸಾದನ ಮಾಡಿ ಸಂಬಂಧಿಸಿ, ಮೇಲಾಗಿ ತನ್ನ ಇಪ್ಪತ್ತೆಂಟು ಸ್ವಾಂಗಳಾದ ಇಪ್ಪತ್ತೆಂಟು ಆಗಮಗಳನ್ನು ಉತ್ಪನ್ನವ ಮಾಡಿ, ತನ್ನ ಪಂಚಮುಖಗಳಿಂದ ಪಂಚವೇದಂಗಳ ಹುಟ್ಟಿಸಿ, ಮೂವತ್ತೆರಡು ಉಪನಿಷತ್ತುಗಳ ಹುಟ್ಟಿಸಿ, ಷಟ್‌ಶಾಸ್ತ್ರಗಳ ಉತ್ಪನ್ನವ ಮಾಡಿದನು ಏನು ಕಾರಣವೆಂದಡೆ, ಈ ಜೀವನು ವ್ಯರ್ಥ ಪ್ರಾಣಿಯಾಗಿ ಭವಕ್ಕೆ ಬೀಳುತ್ತಾನೆ, ಯತ್ರ ಜೀವಸ್ತತ್ರ ಶಿವನೆಂದು ಎನ್ನ ವಚನ ಉಂಟಾದ ಕಾರಣದಿಂದ ಆತನ ಮೇಲೆ ದಯವಿಟ್ಟು ಹೇಳಿದೆನು, ಅದು ಕಾರಣದಿಂದ ಈ ಅಷ್ಟಾವರಣವನ್ನು ನಂಬಿಕೊಂಡು ಆಚರಿಸಿ ಶಿವಾನುಭಾವವನ್ನು ಗುರು ಮುಖದಿಂದ ಕೃತಪಡಿಸಿಕೊಂಡು ಜೀವಾತ್ಮನು ಎನ್ನಲ್ಲಿ ಐಕ್ಯವಾಗಲಿ ಎಂದು ನಿರೂಪಿಸಿದ ಪ್ರಸಾದವಾಕ್ಯ ಸಂಪೂರ್ಣ ಮಂಗಳ ಮಹಾಶ್ರೀಗುರು

೨೧ ವಿಭೂತಿ ರುದ್ರಾಕ್ಷಿಯ ಧರಿಸಿ ಷಡಕ್ಷರಿಯಂ ಜಪಿಸಿ, ಗುರು ಲಿಂಗ ಜಂಗಮದ ಆದಿ ಅಂತ್ಯವನರಿಯದೆ ಏನೆಂದು ಪೂಜಿಸುವಿರಿ, ಆರಾಧಿಸುವಿರಿ? ಅದೆಂತೆಂದೊಡೆ, ನೆಲದ ಮೇಲಣ ಸಿಲೆಯ ಕಲು ಕುಟಿಗ ಕಡಿದು ಖಂಡಿಸಿ ಹರದನ ಕಯ್ಯಲ್ಲಿ ಕೊಟ್ಟು ಮಾರಿಸಿಕೊಂಡುದು ಲಿಂಗವಾದ ಪರಿ ಹೇಗೆ? ಸಕಲ ವ್ಯಾಪಾರದಳವಿಂಗೆ ಒಳಗಾಗಿ ತೊಡಿಸಿ ಬರಿಸಿಕೊಂಡುದು ಮಂತ್ರವಾದ ಪರಿ ಹೇಗೆ? ಅಜ್ಞಾನಿ ಮೃಗವಿನ ಸಗಣಿಯ ಸುಟ್ಟುದು ವಿಭೂತಿಯಾದ ಪರಿ ಹೇಗೆ? ಪಂಚ ಭೌತಿಕದಿಂದ ಜನಿಸಿದ ವೃಕ್ಷದ ಫಲ ರುದ್ರಾಕ್ಷಿಯಾದ ಪರಿ ಹೇಗೆ? ಸಕಲ ಜೀವವೆರಸಿ ಕರಗಿಸುವ ಜಲ ತೀರ್ಥವಾದ ಪರಿ ಹೇಗೆ? ಸಕಲ ಪ್ರಾಣಿಗಳಾಹಾರ ಹದಿನೆಂಟು ಧಾನ್ಯ ಕ್ಷುಧಾಗ್ನಿಯಲ್ಲಿ ಪಚನವಾದುದು ಪ್ರಸಾದವಾದ ಪರಿ ಹೇಗೆ? ಅದಂತೆಂದೊಡೆ, ನಿಗಮಶಾಸ್ತ್ರಕ್ಕೆ ಅಗಣಿತವಾದ ನಾದಬಿಂದುವಿಗೆ ನಿಲುಕದ ನಿತ್ಯ ತೃಪ್ತಿ ಪರಂಜ್ಯೋತಿ ಲಿಂಗವೈಭವಕ್ಕೆ ಅಂಗವಾದುದು ಈ ಗುರುವಲಾ ಎಂದರಿದು ಮಾಡುವುದು ತನು ಮನ ಧನ ವಂಚನೆಯುಳಿದು ಗುರುಭಕ್ತಿ ಸನ್ನಿಹಿತನಾಗಿ ಆ ಲಿಂಗದ ಮನ ಈ ಜಂಗಮವಲಾ ಎಂದರಿದು ಮಾಡುವುದು ತನು ಮನ ಧನವಂಚನೆಯುಳಿದು ಜಂಗಮ ಭಕ್ತಿ ಸನ್ನಿಹಿತನಾಗಿ, ಆ ಲಿಂಗದ ಕಾಯ ಕಾಂತಿ ಬೆಳಗಿನ ಐಶ್ವರ್ಯವಲಾ ಎಂದರಿದು ಧರಿಸುವುದು ಶ್ರೀ ವಿಭೂತಿಯ ಆ ಲಿಂಗದ ಶೃಂಗಾರದ ಹರಸಾಭರಣವಲಾ ಎಂದರಿದು ಅಳವಡಿಸುವುದು ರುದ್ರಾಕ್ಷಿಯನು ಆ ಲಿಂಗದ ಉತ್ತುಂಗ ಕಿರಣ ಚರಣಾಂಬುಜ ಜಲವಲಾ ಎಂದರಿದುಕೊಂಬುವುದು ಪಾದೋದಕವನು ಆ ಲಿಂಗದ ನಿತ್ಯ ಪದ ಸಂಯೋಗ ಶೇಷವಲಾ ಎಂದರಿದುಕೊಂಬುವುದು ಪ್ರಸಾದವನು ಇಂತಿವೆಲ್ಲವನರಿದು ಸಂತೋಷ ಭರಿತನಾಗಿ ಚರಿಸುವಾತನೇ ಸದ್ಭಕ್ತನು ಆತನ ಕಾಯ ಕರಣ ಪ್ರಾಣ ಭಾವಾದಿಗಳು ಸೋಂಕಿದುದೆಲ್ಲವು ಲಿಂಗ ಸೋಂಕು, ಲಿಂಗದ ಕ್ರಿ, ಲಿಂಗ ದಾಸೋಹ, ಇಂತೀ ತ್ರಿವಿಧವನರಿದು ಅಳಿದುಳಿದ ಸದ್ಭಕ್ತನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು ಕಾಣಾ ಬಸವಣ್ಣ ಪ್ರಿಯ ನಿಃಕಳಂಕ ಸೋಮೇಶ್ವರಾ

೨೨ ಯಥಾಭಾವಂ ತತ್ಫಲತಿ ಎಂಬ ಭಾವ ಉಂಟಾಗಿ ಶಿವ ತಾನೆ ಗುರುವಾದ ಯದ್ಭಾವಂ ತದ್ಭವತಿ ಎಂಬ ಭಾವ ಉಂಟಾಗಿ ಶಿವ

ತಾನೆ ಶಿಷ್ಯನಾದ ಯದ್ಭಾವಂ ತದ್ಭವತಿ ಎಂಬ ಭಾವ ಉಂಟಾಗಿ, ಶಿವ ತಾನೆ ಜಂಗಮನಾದ ಯದ್ಭಾವಂ ತದ್ಭವತಿ ಎಂಬ ಭಾವ ಉಂಟಾಗಿ, ಶಿವ ತಾನೆ ಪ್ರಸಾದವಾದ ಯದ್ಭಾವಂ ತದ್ಭವತಿ ಎಂಬ ಭಾವ ಉಂಟಾಗಿ ಶಿವ ತಾನೆ ಪ್ರಸಾದಿಯಾದ. ಯದ್ಭಾವಂ ತದ್ಭವತಿ ಎಂಬ ಭಾವ ಉಂಟಾಗಿ, ಕೂಡಲ ಚನ್ನಸಂಗ ತಾನೆಯಾದ

೨೩ ಅಯ್ಯ ಶ್ರೀ ಮಹಾ ವಿಭೂತಿಯಿಂದ ಕಂಡೆ ಆ ನಿಮ್ಮ ದಿವ್ಯ ಬೆಳಗಿನ ಹೊಳಹ ಈ ಎನ್ನ ಕರಸ್ಥಲದೊಳಗೆ ಅಯ್ಯ ಶ್ರೀಮಹಾ ರುದ್ರಾಕ್ಷಿಯಿಂದ ಕಂಡೆ ಆ ನಿಮ್ಮ ದಿವ್ಯ ಮೂರ್ತಿಯ ರೂಪವ ಈ ಎನ್ನ ಕರಸ್ಥಲದೊಳಗೆ ಅಯ್ಯ ಶ್ರೀಮಹಾ ಪಂಚಾಕ್ಷರಿಯಿಂದ ಕಂಡೆ ಆ ನಿಮ್ಮ ದಿವ್ಯ ವಸ್ತ್ರಂಗಳ ಈ ಎನ್ನ ಕರಸ್ಥಲದೊಳಗ ನಾ ಬಯಸುವ ಬಯಕೆ ಕೈಸಾರಿತೆಂದು ಕೂಡಲಸಂಗಮದೇವಾ

## ಅಂತರಂಗ ಅಷ್ಟಾವರಣಗಳು

೨೪ ಭಕ್ತನ ಮನವೇ ಲಿಂಗ, ತನ್ಮನದ ಜ್ಞಾನವೇ ಜಂಗಮ, ಆ ಜ್ಞಾನದ ಪರಿಪೂರ್ಣವೇ ಗುರು, ತದ್ಭಕ್ತನೇ ದೇವ, ಆ ಜ್ಞಾನದ ಸಾರವೇ ಪಾದೋದಕ, ಆ ಜ್ಞಾನದ ಪ್ರಕಾಶವೇ ವಿಭೂತಿ, ಆ ಮಾಯಾ ಕರಣಂಗಳ ಮೇಲೆ ಕವಿದ ಜ್ಞಾನ ಸಾರಾವೃತ ವೃಷ್ಟಿಯೇ ರುದ್ರಾಕ್ಷಿ, ಆ ಭಕ್ತನ ನಾಮವೇ ಮಂತ್ರ, ಇಂತಹ ಭಕ್ತನೇ ಪರಬ್ರಹ್ಮವೆಂದು ಶರಣೆಂದವರೇ ಧನ್ಯರು ನೋಡಾ

೨೫ ಗುರುವೇ ಇಷ್ಟ, ಲಿಂಗವೇ ಪ್ರಾಣ, ಜಂಗಮವೇ ಭಾವ, ಪ್ರಸಾದವೇ ಚಿತ್ಕಾಯ, ಪಾದೋದಕವೇ ಶರಣ, ವಿಭೂತಿಯೇ ಅಂತ ರಂಗದ ಚಿತ್ಪ್ರಕಾಶ, ರುದ್ರಾಕ್ಷಿಯೇ ಚತುರ್ದಶೇಂದ್ರಿಯಂಗಳು, ಮಂತ್ರವೇ ಷಟ್‌ಪ್ರಕಾರವಾದ ಮಂತ್ರ ತತ್ವ ಕರಣಂಗಳು ನೋಡಾ

೨೬ ಎನ್ನ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ, ಮತ್ತಾ ಮನಸ್ಥಲಕ್ಕೆ ಪ್ರಾಣಲಿಂಗ ಸ್ವರೂಪವಾಗಿ, ಮತ್ತೆ ಭಾವಸ್ಥಲಕ್ಕೆ ಭಾವ ಲಿಂಗ ಸ್ವರೂಪವಾಗಿ, ಈ ತ್ರಿವಿಧ ಮೂರ್ತಿಯೇ ಅಷ್ಟಾವರಣ ಸ್ವರೂ

ಷವಾಗಿ, ಎನ್ನ ಅರುಹಿನಲ್ಲಿ ಗುರುವಾಗಿ ನಿಂದು, ಎನ್ನ ಪ್ರಾಣದಲ್ಲಿ ಲಿಂಗ, ಎನ್ನ ಜ್ಞಾನದಲ್ಲಿ ಜಂಗಮ, ಎನ್ನ ಜಿಹ್ವೆಯಲ್ಲಿ ಪಾದೋದಕ, ಎನ್ನ ನಾಸಿಕದಲ್ಲಿ ಪ್ರಸಾದ, ಎನ್ನ ತ್ವಕ್ಕಿನಲ್ಲಿ ವಿಭೂತಿ, ಎನ್ನ ನೇತ್ರದಲ್ಲಿ ರುದ್ರಾಕ್ಷಿ, ಎನ್ನ ಶ್ರೋತ್ರದಲ್ಲಿ ಪಂಚಾಕ್ಷರಿ, ಇಂತಿವು ಅಷ್ಟಾವರಣದಲ್ಲಿ ಸ್ವರೂಪವವು ಎನ್ನೊಳಗೆ ತನ್ನ ಕರುಣ ಕೃಪೆಯಿಂದ ತೋರಿದ ನಮ್ಮ ಶಾಂತ ಕೂಡಲ ಸಂಗಮದೇವ

## ಅಷ್ಟಾವರಣಗಳ ಸಾಧನೆ

### (ಸ್ಥೂಲಶರೀರದಲ್ಲಿ)

೨೭ ದೀಕ್ಷಾತ್ರಯಂಗಳಲ್ಲಿ ನಿಜ ಗುರುವ ಸಂಬಂಧವ ಮಾಡಿಕೊಂಡು, ಪೂಜಾತ್ರಯಂಗಳಲ್ಲಿ ನಿಜಲಿಂಗವ ಸಂಬಂಧವ ಮಾಡಿಕೊಂಡು, ಭೋಗತ್ರಯಂಗಳಲ್ಲಿ ನಿಜ ಜಂಗಮವ ಸಂಬಂಧವ ಮಾಡಿಕೊಂಡು, ಕ್ರಿಯಾತ್ರಯಂಗಳಲ್ಲಿ ನಿಜ ಪಾದೋದಕವ ಸಂಬಂಧವ ಮಾಡಿಕೊಂಡು, ಜ್ಞಾನತ್ರಯಂಗಳಲ್ಲಿ ನಿಜ ಪ್ರಸಾದವ ಸಂಬಂಧವ ಮಾಡಿಕೊಂಡು, ಆಚಾರತ್ರಯಂಗಳಲ್ಲಿ ನಿಜ ಚಿದ್ಭಸಿತವ ಸಂಬಂಧವ ಮಾಡಿಕೊಂಡು, ಸರ್ವಾಂಗದಲ್ಲಿ ನಿಜ ರುದ್ರಾಕ್ಷಿಗಳ ಸಂಬಂಧವ ಮಾಡಿಕೊಂಡು, ಪಂಚಾಕ್ಷರ, ಷಡಕ್ಷರಂಗಳೇ ನಡೆ ನುಡಿಯಾಗಿ ಸಕಲಶಾಸ್ತ್ರಗಮ ಪುರಾಣಂಗಳೇ ಹಸ್ತಪಾದಂಗಳಾಗಿ, ಎರಡೆಂಭತ್ತುಕೋಟಿ ವಚನಂಗಳೇ ಮಹಾ ಮಂತ್ರಗಳ ಸಂಬಂಧವ ಮಾಡಿಕೊಂಡರು ನೋಡಾ ಪರಹಿತಾರ್ಥಕ್ಕೋಸ್ಕರ ಸ್ಥೂಲ ಕಂಥೆಯ ಧರಿಸಿ ನಿರ್ವಂಚಕ ಲೀಲಾ ಮೂರ್ತಿಯಾಗಿ, ಇಂತೀ ಏಕಲಿಂಗ ನಿಷ್ಠಾ ಪರತ್ವದಿಂದ ಆರಿದಾಚರಿಸುವರೇ ನೂತನ ಸದ್ಭಕ್ತ ಶಿವಶರಣಂಗಳು ನೋಡಾ ಸಂಗನಬಸವೇಶ್ವರಾ.

೨೮ ಇಂತೀ ಅಷ್ಟಾವರಣವ ಸದ್ಗುರು ಮುಖದಿಂ ಚಿದಂಗ ಚಿದ್ಘನ ಲಿಂಗದ ಮಧ್ಯದಲ್ಲಿ ಸಂಬಂಧವಿಟ್ಟು ಏಕ ಲಿಂಗ ನಿಷ್ಠಾ ಪರತ್ವದಿಂದ ಸ್ಥೂಲ ಕಂಥೆಯ ಧರಿಸಿ ಸತ್ಕಾಯಕ ಸತ್ಕ್ರಿಯಾ ಸಮ್ಯಜ್ಞಾನ ಸದ್ಭಕ್ತಿ ಸದಾಚಾರ ಸನ್ನಿಹಿತರೇ ನೂತನ ಗಣಂಗಳೆನಿಸುವರು ನೋಡಾ.

ಆದರಿಂ ಮೇಲೆ ಚಿದಂಗ ಚಿತ್ಪ್ರಾಣಾಂಗ ಚಿದ್ಘನ ಲಿಂಗ ಇವು ಗಳನು ಸದ್ಗುರು ಮುಖದಿಂ ಸಂಬಂಧವಿಟ್ಟು ಆ ಲಿಂಗದ ಮಧ್ಯದಲ್ಲಿ ಸಿರಾಕಾರವಾದ ಷೋಡಶ ವರ್ಣವ ಮಾಡಿಕೊಂಡು ಸೂಕ್ಷ್ಮ ತನು ಎಂಬ ಕಂಥೆಯು ಧರಿಸಿ ಕಂಗಳಾಲಯದ ಜ್ಯೋತಿರ್ಲಿಂಗದ ಮಧ್ಯದಲ್ಲಿ ಮನ ಮುಳುಗಿಸುವರೇ ಅನಾದಿಗಣಂಗಳು ಎನಿಸುವರು ನೋಡಾ

ಆದರಿಂ ಮೇಲೆ ಚಿದ್ಘನ ತ್ರಿವಿಧಾಂಗ, ಚಿದ್ಘನತ್ರಿವಿಧ ಲಿಂಗವ ಸದ್ಗುರು ಮುಖದಿಂ ಸಂಬಂಧಿಸಿ ಕೊಂಡು, ಆ ಲಿಂಗಾಂಗ ಮಧ್ಯದಲ್ಲಿ ಕ್ರಿಯಾಷ್ಟಾವರಣ, ಜ್ಞಾನಾಷ್ಟಾವರಣ ಮಹಾ ಜ್ಞಾನಾಷ್ಟಾವರಣ ಸಂಬಂಧವಿಟ್ಟು, ಕಾರಣ ತನುವೆಂಬ ಕಂಥೆಯು ಧರಿಸಿ, ಹೃತ್ಕಮಲ ಮಧ್ಯದಲ್ಲಿ ಬೆಳಗುವ ಪರಂಜ್ಯೋತಿ ಲಿಂಗ ಮಧ್ಯದಲ್ಲಿ ಭಾವ ಮುಳುಗಿ ಬಚ್ಚಬರಿಯಾನಂದದಲ್ಲಿ ಪರಿಪೂರ್ಣಾನಂದದಿಂದ ಆಚರಿಸುವರೇ ಅನಾದಿ ಗಣಂಗಳೆನಿಸುವರು ನೋಡಾ

ಆದರಿಂ ಮೇಲೆ ಚಿದ್ಘನ ಅಷ್ಟಾಂಗ ಮಧ್ಯದಲ್ಲಿ ಚಿದ್ಘನ ಅಷ್ಟ ಲಿಂಗಗಳ ಸದ್ಗುರು ಮುಖದಿಂ ಧರಿಸಿ, ಆ ಲಿಂಗಾಂಗದ ಮಧ್ಯದಲ್ಲಿ ೬೪ ತೆರದ ವರ್ಣವ ಸಂಬಂಧವ ಮಾಡಿಕೊಂಡು, ತವ್ವ ಸರ್ವಾಂಗದಲ್ಲಿ ಅಷ್ಟ ವಿಧ ಕಮಲಗಳ ಕಂಡು, ಆ ಕಮಲ ಮಧ್ಯದಲ್ಲಿ ನೆಲೆಸಿರ್ದ ಚತುರ್ವಿಧ ಬಿಂದು ಲಿಂಗ, ಷಡ್ವಿಧ ಧಾತು ಲಿಂಗ, ದಶವಿಧ ಕ್ಷೇತ್ರ ಲಿಂಗ, ದ್ವಾದಶ ವಿಕೃತಿ ಲಿಂಗ, ಷೋಡಶ ಕಳಾ ಲಿಂಗ, ದ್ವಿವಿಧ ವಿದ್ಯಾ ಲಿಂಗ, ಸಹಸ್ರ ಶಿವ ಕಳಾ ಲಿಂಗ, ತ್ರಿವಿಧ ವಿವೇಕ ಲಿಂಗ, ಇಂತು ಅಷ್ಟವಿಧ ಕಮಲಂಗಳ ಮಧ್ಯದಲ್ಲಿ ನೆಲಸಿರ್ಪ ಅಷ್ಟ ವಿಧ ಲಿಂಗಂಗಳ ಅಷ್ಟವಿಧ ಹಸ್ತಂಗಳಿಂದ ಅಷ್ಟ ವಿಧಾರ್ಚನೆ, ಷೋಡ ಶೋಪಚಾರಂಗಳ ಮಾಡಿ, ಎರಡಳಿದು ಏಕ ರೂಪವಾಗಿ, ನಿರವಯ ಕಂಥೆಯು ಧರಿಸಿ, ಪರತತ್ವ ಜ್ಯೋತಿರ್ಮಯ ಲಿಂಗದೊಳಗೆ ಉರಿ ಉಂಡ ಕರ್ಪುರದಂತೆ ಸಮರಸವಾದರು ನೋಡಾ ಅವರಾರೆಂದಡೆ, ರುದ್ರ ಗಣಂಗಳು, ಶಿವಗಣಂಗಳು, ದೇವಗಣಂಗಳು, ನಾಗಗಣಂಗಳು, ಶಾಂಭವ ಗಣಂಗಳು, ಮುಂತಾದವರು ಬಯಲೊಳಗೆ ಮಹಾ ಬಯಲು ಬೆರೆ ದಂತಾದರು ನೋಡಾ ಇಂತೀ ಸರ್ವಾಚಾರ ಸಂಪತ್ತಿನಾಚರಣೆಯ ನಾಚರಿಸುವರೇ ನಿರವಯ ಗಣಂಗಳೆನಿಸುವರು ನೋಡಾ ಸಂಗನಬಸ ವೇಶ್ವರಾ

## (ಸೂಕ್ಷ್ಮ ಶರೀರದಲ್ಲಿ)

೨೯ ಆಚಾರ ಅರುಹಿನಲ್ಲಿ ಸತ್ಕ್ರಿಯಾ ಸಜ್ಞಾನ ಗುರುವ ಸಂಬಂಧವ ಮಾಡಿಕೊಂಡು, ಪಾಣಿ ಪ್ರಾಣದಲ್ಲಿ ಸತ್ಕ್ರಿಯಾ ಸುಜ್ಞಾನ ಲಿಂಗವ ಸಂಬಂಧವ ಮಾಡಿಕೊಂಡು, ಆಚರಣೆ ಸಂಬಂಧಗಳಲ್ಲಿ ಸತ್ಕ್ರಿಯಾ ಸುಜ್ಞಾನ ಜಂಗಮವ ಸಂಬಂಧವ ಮಾಡಿಕೊಂಡು, ನಡೆ ನುಡಿಗಳಲ್ಲಿ ಸತ್ಕ್ರಿಯಾ ಸುಜ್ಞಾನ ಪ್ರಸಾದವ ಸಂಬಂಧವ ಮಾಡಿಕೊಂಡು, ಸರ್ವಾಂಗ ಸುಮನದಲ್ಲಿ ಸತ್ಕ್ರಿಯಾ ಸುಜ್ಞಾನ ಚಿದ್ವಿಭೂತಿಯ ಸಂಬಂಧವ ಮಾಡಿಕೊಂಡು ತತ್ತತ್ ಸ್ಥಾನಂಗಳಲ್ಲಿ ಚಿದ್ರುಕ್ಕಿನಲ್ಲಿ ಸತ್ಕ್ರಿಯಾ ಸುಜ್ಞಾನ ಚಿದ್ರುದ್ರಾಕ್ಷಿಯ ಸಂಬಂಧವ ಮಾಡಿಕೊಂಡು, ಕ್ರಿಯಾಕಾಶ ಜ್ಞಾನಾಕಾಶಂಗಳಲ್ಲಿ ಸತ್ಕ್ರಿಯಾ ಸುಜ್ಞಾನ ಚಿನ್ಮಂತ್ರವ ಸಂಬಂಧವ ಮಾಡಿಕೊಂಡರು ನೋಡಾ, ಸೂಕ್ಷ್ಮ ಕಂಥೆಯ ಧರಿಸಿ, ಸಚ್ಚಿದಾನಂದ ಲೀಲಾ ಮೂರ್ತಿಗಳಾಗಿ ಇಂತೀ ಉಭಯ ವಿಚಾರ ಪಿಡಿದು ಆಚರಿಸುವರೇ ಅನಾದಿ ಸದ್ಭಕ್ತ ಶಿವಶರಣಂಗಳು ನೋಡಾ ಸಂಗನಬಸವೇಶ್ವರಾ

## (ಕಾರಣ ಶರೀರದಲ್ಲಿ)

೩೦ ತನುತ್ರಯಂಗಳಲ್ಲಿ ಕ್ರಿಯಾಗುರು, ಜ್ಞಾನಗುರು, ಮಹಾಜ್ಞಾನಗುರು ಸಂಬಂಧವ ಮಾಡಿಕೊಂಡು, ಮನತ್ರಯಂಗಳಲ್ಲಿ ಕ್ರಿಯಾಲಿಂಗ ಜ್ಞಾನಲಿಂಗ ಮಹಾಜ್ಞಾನಲಿಂಗವ ಸಂಬಂಧವ ಮಾಡಿಕೊಂಡು, ಭಾವತ್ರಯಂಗಳಲ್ಲಿ ಕ್ರಿಯಾಜಂಗಮ, ಜ್ಞಾನಜಂಗಮ, ಮಹಾಜ್ಞಾನಜಂಗಮವ ಸಂಬಂಧವ ಮಾಡಿಕೊಂಡು, ಆತ್ಮತ್ರಯಂಗಳಲ್ಲಿ ಕ್ರಿಯಾಪ್ರಸಾದ, ಜ್ಞಾನಪ್ರಸಾದ, ಮಹಾಜ್ಞಾನಪ್ರಸಾದವ ಸಂಬಂಧವ ಮಾಡಿಕೊಂಡು, ಕರಣತ್ರಯಂಗಳಲ್ಲಿ ಕ್ರಿಯಾಭಸಿತ, ಜ್ಞಾನಭಸಿತ, ಮಹಾಜ್ಞಾನಭಸಿತವ ಸಂಬಂಧವ ಮಾಡಿಕೊಂಡು, ಜೀವತ್ರಯಂಗಳಲ್ಲಿ ಕ್ರಿಯಾರುದ್ರಾಕ್ಷಿ, ಜ್ಞಾನರುದ್ರಾಕ್ಷಿ, ಮಹಾಜ್ಞಾನರುದ್ರಾಕ್ಷಿಗಳ ಸಂಬಂಧವ ಮಾಡಿಕೊಂಡು, ಗುಣತ್ರಯಂಗಳಲ್ಲಿ ಕ್ರಿಯಾಮಂತ್ರ, ಜ್ಞಾನಮಂತ್ರ, ಮಹಾಜ್ಞಾನಮಂತ್ರಗಳ ಸಂಬಂಧವ ಮಾಡಿಕೊಂಡರು ನೋಡಾ ಕಾರಣ ಕಂಥೆಯ ಧರಿಸಿ ತ್ರಿವಿಧ ವಿಚಾರಪಿಡಿದು ಆಚರಿಸುವರೆ ಅನಾದಿ ಸದ್ಭಕ್ತ ಶಿವಶರಣ ಗಣಂಗಳು ನೋಡಾ ಸಂಗನಬಸವೇಶ್ವರಾ

# ಗುರು

## ಗುರುವಿನ ಕಾರ್ಯಗಳು.

೧ ಅಂಗದಲ್ಲಿ ಆಚಾರವ ತೋರಿದ ಆಚಾರವೇ ಲಿಂಗವೆಂದರು ಹಿದ ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ ಅರಿವೇ ಜಂಗಮವೆಂದು ತೋರಿದ ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನ್ನನೀ ಕ್ರಮವನರುಹಿದನಯ್ಯಾ

೨ ಕಂಗಳ ಕತ್ತಲೆಯ ಕೆಡಿಸಿದ ರವಿಯ ಚಂದದಂತಾಯಿತ್ತು ಎನ್ನ ಗುರುವಿನುಪದೇಶ ಕನ್ನಡಿಯು ರವಿಯ ತನ್ನೊಳಗೆ ಇರಿಸಿಕೊಂಡಂ ತಾಯಿತ್ತೆನ್ನ ಗುರುವಿನುಪದೇಶ ಜಲದ ನಿರ್ಮಳ ಗಗನವನೊಳಕೊಂಡ ಪರಿಯಂತಾಯಿತ್ತೆನ್ನ ಗುರುವಿನುಪದೇಶ ಚಂದ್ರಕಾಂತದ ಶಿಲೆಯು ಚಂದ್ರಮನ ಸೋಂಕಿದಂತಾಯಿತ್ತೆನ್ನ ಗುರುವಿನುಪದೇಶ ಕೊಡನೊಳ ಗಣ ಬಯಲ ಹಂಚಿಕೊಂಡ ಪರಿಯಂತಾಯಿತ್ತೆನ್ನ ಗುರುವಿನುಪದೇಶ. ಇದು ಕಾರಣ ಮಹಾಘನ ಸದ್ಗುರು ಸಿದ್ಧಸೋಮನಾಥನೆಂಬ ಲಿಂಗ ದಂತಾಯಿತ್ತೆನ್ನ ಗುರುವಿನುಪದೇಶ

೩ ಪೂರ್ವಕರ್ಮವ ಕೆಡಿಸಿದನೆನ್ನ ಗುರುವು ಉಭಯ ಕರ್ಮವ ಬಿಡಿಸಿ ತೋರಿದ ಸದುಭಕ್ತರ ತೋರಿದನು ಅವರಿಂದ ಬದುಕಿದೆನು. ನಾಚಯ್ಯ ಪ್ರಿಯ ಮಲ್ಲಿನಾಥಯ್ಯ ಗುರುವಿನಿಂದ ಬದುಕಿದೆನು ನಿನ್ನ ಹಂಗೇನು ?

೪ ಗುರುಕಾರುಣ್ಯವೇ ಸದಾಚಾರ ಗುರುಕಾರುಣ್ಯವೇ ಶಿವಾ ಚಾರ ಗುರುಕಾರುಣ್ಯವೇ ಪ್ರಸಾದರುಚಿ ಮುಂದೆ ಗುರು, ಹಿಂದೆ ಲಿಂಗ ಕೂಡಲಸಂಗಮದೇವಾ

೫ ಭವ ತಿಮಿರವೆಂಬ ಅಜ್ಞಾನದಿಂದ ಮುಸುಕಿಕೊಂಡು, ಕಾಣ ಬಾರದೆ ಇದ್ದಾಗ ಕಣ್ಣಿಂಗೆ ಜ್ಞಾನವೆಂಬ ಅಂಜನವನೆಚ್ಚಿ ಶಿವಪಥವಿ ದೆಂದು ತೋರಿದ ಸದ್ಗುರು ದೇವಂಗೆ ನಮೋ ನಮೋ ಎಂಬೆನಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ

೬ ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮಾಯೆ ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮರವೆ ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಎನ್ನ ಸುತ್ತಿದ್ದ ಮಾಯಾಪಾಶವು ಕಣ್ಣಿಂಗೆ ಸತ್ವರಜ ತಮವೆಂಬ ತಿಮಿರು ಕವಿದು ಅಜ್ಞಾನ ವಶದಲ್ಲಿ ಸದ್ಗುರುವನುಪಥಾವಿಸಿ, ಔಷಧ ಬೇಡಲೊಡನೆ ಶಿವಜ್ಞಾನವೆಂಬ ಅಂಜನವ ನಚ್ಚಿ, ಎನ್ನ ಕಣ್ಣ ಮುಸುಕಿದ ಅಜ್ಞಾನ ವೆಂಬ ಕಾಳಿಕೆಯ ಬೇರ್ಪಡಿಸಿ ತನ್ನ ಶ್ರೀಗುರು ಪಾದವನರುಹಿಸಿ ಕೊಟ್ಟ ನಯ್ಯ ನಮ್ಮ ಕಪಿಲಸಿದ್ಧಮಲ್ಲಿನಾಥಯ್ಯ

೭ ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ ಹಿಡಿದಿಹೆ ನೆಂದಡೆ ಸಿಕ್ಕಿದನೆಂಬ ಬಾಲಿಕೆಯ ನೋಡಾ ಕಂಡುದನೇ ಕಂಡು ಗುರು ಪಾದವ ಹಿಡಿದಲ್ಲಿಯೇ ಕಾಣಬಹುದು ಗುಹೇಶ್ವರಾ

೮ ಅಯ್ಯ ನೀನೆನಗೆ ಗುರುವಪ್ಪೊಡೆ, ನಾ ನಿನಗೆ ಶಿಷ್ಯನಪ್ಪೊಡೆ, ಎನ್ನ ಕರಣಾದಿ ಗುಣಂಗಳ ಕಳೆದು, ಎನ್ನ ಕಾಯದ ಕರ್ಮವ ತೊಡೆದು, ಎನ್ನ ಪ್ರಾಣನ ಧರ್ಮವ ನಿಲಿಸಿ, ನೀನೆನ್ನ ಕಾಯದಲಡಗಿ, ನೀನೆನ್ನ ಪ್ರಾಣದಲಡಗಿ, ನೀನೆನ್ನ ಭಾವದಲಡಗಿ, ನೀನೆನ್ನ ಕರಸ್ಥಲಕ್ಕೆ ಬಂದು ಕಾರುಣ್ಯವ ಮಾಡು ಗುಹೇಶ್ವರಾ

೯ ಸಕಲವನೆಲ್ಲ ಲಿಂಗದೊಳಗೆ ತೋರಿದನು ಆ ಲಿಂಗದ ಬೆಳಗ ಸಕಲದೊಳಗೆ ತೋರಿದನು ಎನ್ನ ಮನಕ್ಕೆ ಅತಿಶಯವಾಗಿ ತೋರಿ ತೋರಿ ರಕ್ಷಿಸಿದನು ಎನ್ನೊಳಗೆ ತನ್ನ ತೋರಿದನು ತನ್ನೊಳಗೆ ಎನ್ನ ತೋರಿ ದನು ಮತ್ತೆ ಎರಡನೇಕವಾಡಿ, ಎನ್ನೊಳಗೆ ಗುಹೇಶ್ವರನಾದನು ಹೊರಗೆ ಮಹಾಲಿಂಗವಾಗಿ ನಿಂದನು ಶ್ರೀಗುರುಲಿಂಗ ಬಸವಣ್ಣನು

೧೦ ಗುರುಸ್ವರೂಪವಾಗಿ ಬಂದು, ಬ್ರಹ್ಮನ ಉತ್ಪತ್ತಿಯ ಕೆಡಿಸಿ ಮಾಂಸ ಪಿಂಡವ ಕಳೆದು, ಮಂತ್ರ ಪೀಠದಿಂದ ಪ್ರತಿಷ್ಠೆಯ ಮಾಡಿ, ನಾನಾ ಕ್ರಿ ವರ್ತನೆಗೆ ಹೊಲಬನಿಟ್ಟುಕೊಟ್ಟ, ನಿನ್ನ ಕರಕಮಲ ದಲ್ಲಿ ಜ್ಯೋತಿರ್ಮಯವಪ್ಪ ನಿನ್ನ ನಿಜಾತ್ಮದಿರವ ಆ ಕುರುಹಿನಲ್ಲಿ ಬೈಚಿಟ್ಟ ನಿಜಲಿಂಗವ ಮಾಡಿ, ಎನ್ನ ಕೈಯಲ್ಲಿ ಕೊಟ್ಟ ಲಿಂಗ ಸ್ವರೂಪು ನೀನಾಗಿ ಒಂದು, ಎನ್ನ ಹೃತ್ಕಮಲದಲ್ಲಿ ನಿಂದು, ಕರಣ ನಾಲ್ಕು, ಮರವೆ ಎಂಟು, ಇಂದ್ರಿಯಪ್ಪತ್ತು, ವಿಷಯವಾರು, ಇಂತಿವರೊಳಗಾದ ಸರ್ವೇಂದ್ರಿಯವ ಕೆಡಿಸಿ, ತ್ರಿಗುಣಾತ್ಮಕವ, ತ್ರಿಶಕ್ತಿ ಭೇದವ, ತ್ರಿಮಲ

ದೋಷವ ಕೆಡಿಸಿ, ನಿಶ್ಚಯ ಪದದಿಂದ ಕೃತ್ಯವನುಳ್ಳವನಾಗಿಯಾದೆ ಆ ಗುಣ ದಿಂದ ಸಾಫಲ್ಯನಾದ ಜಂಗಮ ಮೂರ್ತಿಯಾಗಿ ಬಂದು ಎನಗೆ ದೀಕ್ಷಾ ಗುರು, ಶಿಕ್ಷಾಗುರು, ಜ್ಞಾನಗುರುವಾಗಿ ಬಂದು, ಶುದ್ಧ, ಸಿದ್ಧ, ಪ್ರಸಿ ದ್ಧವಂ ತೋರಿ, ಎನ್ನ ಭವಚ್ಛೇದವಂ ಮಾಡಿದೆ ಇಂತೀ ತ್ರಿವಿಧ ಮೂರ್ತಿ ಭಕ್ತಿ ವಿಷಯದಿಂದ ಬಸವಣ್ಣ, ಚನ್ನಬಸವಣ್ಣಗೋಸ್ಕರ ಕ್ರಿಯಾ ಸಂಬಂಧಿಯಾದೆ, ಶಂಭುಗಿಂದಿತ್ತ ಸ್ವಯಂಭುಗಿಂದತ್ತ ಅತಿಬಳ ನೋಡಾ ಮಾತುಳಂಗಮಧುಕೇಶ್ವರನು.

೧೧ ಬ್ರಹ್ಮಸೃಷ್ಟಿ ಪಂಚಭೂತಸಮ್ಮಿಶ್ರದಿಂದಾದ ಕಾಯವು ಭೂತ ಕಾಯವು, ವಾಯು ಪ್ರಾಣಿ ಉತ್ಪತ್ತಿ ಸ್ಥಿತಿ ಲಯ ಕಾರಣ ಕಾಯವು ಈ ಪರಿಯ ಉತ್ಪತ್ತಿಯು ದೇವ, ದಾನವ ಮಾನವರಿಗೆಯೂ ಒಂದೇ ಪರಿ ಶ್ರೀಗುರುವಿನ ಸೃಷ್ಟಿಯಿಂದಲೂ ಮಹಾ ಪ್ರಸಾದದಿಂದಲೂ ಮಹಾ ಮಂತ್ರ ಸಮ್ಮಿಶ್ರದಿಂದಾದ ಕಾಯವು ಪ್ರಸಾದ ಕಾಯವು, ಮಹಾಮಂತ್ರ ಪಿಂಡವು, ಭಕ್ತಿ ಕಾಯವು ಲಿಂಗಪ್ರಾಣಿಗೆ ಉತ್ಪತ್ತಿ, ಸ್ಥಿತಿ, ಲಯವಿಲ್ಲ, ನಿತ್ಯನು ಈ ಪರಿಯು ಶ್ರೀಗುರು ಕಾರಣ್ಯವ ಪಡೆದ ಮಹಾತ್ಮರಿಗೆ ಒಂದೇ ಪರಿ ಶ್ರೀಗುರುವಿನ ಕಾರುಣ್ಯದ ಪರಿ, ಶಿವಭಕ್ತನ ಇರವಿನ ಪರಿ ಇಂತುಂಟಯ್ಯಾ ಉರಿಲಿಂಗ ಪೆದ್ದಿ ಪ್ರಿಯವಿಶ್ವೇಶ್ವರಾ, ಸಿದ್ಧ ಶರಣರಿಗೆ ಲೋಕದ ಮಾನವರು ಸರಿ ಎಂದರೆ ನಾಯಕ ನರಕ ತಪ್ಪದು

೧೨ ಎನ್ನ ಭಾವಪಾಶಗಳ ಹರಿದು ಶಿವಸಂಸ್ಕಾರಿಯ ಮಾಡಿದ ಶ್ರೀಗುರುವೇ ನಮೋ ನಮೋ ಎಂಬೆನಯ್ಯಾ ಎನ್ನ ಭೂತ ಕಾಯವ ಕಳೆದು ಮಂತ್ರ ಶರೀರವ ಮಾಡಿದ ಶ್ರೀಗುರುವಿಗೆ ನಮೋ ನಮೋ ಎಂಬೆ ನಯ್ಯಾ ಎನ್ನ ಹಣೆಯ ದುರ್ಲಿಖಿತವತೊಡೆದು ಶಿವ ಮಂತ್ರವ ಸಂಬೋಧಿ ಸಿದ ಶ್ರೀ ಗುರುವಿಗೆ ನಮೋ ನಮೋ ಎಂಬೆನಯ್ಯಾ ಎನ್ನ ವಾಯು ಪ್ರಾಣಿ ಎಂದೆನಿಸದೆ, ಲಿಂಗಪ್ರಾಣಿ ಎಂದೆನಿಸಿದ ಶ್ರೀಗುರುವಿಗೆ ನಮೋ ನಮೋ ಎಂಬೆನಯ್ಯಾ ಅಖಂಡೇಶ್ವರಾ

೧೩ ಸಕಲ ವಿಸ್ತಾರದೊಳಗೆಲ್ಲ ಲಿಂಗವ ತೋರಿದ, ಆ ಲಿಂಗ ದೊಳಗೆ ಎನ್ನ ತೋರಿದ, ಎನ್ನೊಳಗೆ ತನ್ನ ತೋರಿದ, ಮಹಾಗುರು ವಿಗೆ ನಮೋ ನಮೋ ಎಂಬೆನಯ್ಯಾ ಅಖಂಡೇಶ್ವರಾ

೧೪ ಪರಶು ಮುಟ್ಟಿದ ಲೋಹದಂತೆ ಮಾಡಿತ್ತೆನ್ನ ಶ್ರೀಗುರುವಿನುಪದೇಶ ಕರ್ಪೂರ ಜ್ಯೋತಿಯಂತೆ ಮಾಡಿತ್ತೆನ್ನ ಶ್ರೀಗುರುವಿನುಪದೇಶ. ಈಡಾಕುಂಡಲಿಯಂತೆ ಮಾಡಿತ್ತೆನ್ನ ಶ್ರೀಗುರುವಿನುಪದೇಶ ಒರೆಗಲ್ಲು ಪುಥ್ಥಳಿಯೊಪ್ಪವ ಮಾಡಿದಂತೆ ಅಖಂಡೇಶ್ವರಾ ನಿಮ್ಮ ವಚನೋಪದೇಶ

೧೫ ಗುರುವಿಡಿದು ಕುರುಹ ಕಾಣಬೇಕು ಗುರುವಿಡಿದು ಅರುಹ ಕಾಣಬೇಕು ಗುರುವಿಡಿದು ಆಚಾರವ ಕಾಣಬೇಕು ನಿಜವಿಡಿದು ನಿಮ್ಮ ಅಖಂಡೇಶ್ವರನ ಕೂಡಬೇಕು

೧೬ ಎನ್ನ ಕರಸ್ಥಲದ ಮಧ್ಯದಲ್ಲಿ ಪರಮ ನಿರಂಜನ ಕುರುಹು ದೋರಿದ ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆ ತೋರಿದ ಆ ಕಳೆಯ ಮಧ್ಯದಲ್ಲಿ ಮಹಾ ಜ್ಞಾನದ ಬೆಳಗು ತೋರಿದ ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ ಎನ್ನೊಳಗೆ ತನ್ನ ತೋರಿದ ತನ್ನೊಳಗೆನ್ನ ನಿಂಬಿಟ್ಟುಕೊಂಡ ಮಹಾಗುರುವಿಗೆ ನಮೋ ನಮೋ ಎನುತಿರ್ದೆನಯ್ಯಾ ಅಖಂಡೇಶ್ವರಾ

೧೭ ಅಂಕುರ, ಫಲ, ತರು, ಕುಸುಮ, ಪರ್ಣ, ರಸ, ಸಾರವು ಇನಿತಿನಿತೆಲ್ಲಿರ್ದುದೋ, ಬೀಜ ಮೊಳೆ ದೋರದಂದು ? ಪಶುವಿನ ಅಮೃತವೆಲ್ಲಿರ್ದುದೋ, ವೃಷಭ ಮುಟ್ಟದಂದು ? ಘನ ಜವ್ವನೆಯರ ಅವಸ್ಥಾಂತರವಲ್ಲಿ ಉದಿಸಿದ ಶಿಶುವೆಲ್ಲಿರ್ದುದೋ, ಕೊಡಗೂಸು ಕನ್ಯೆಯುಳಿಯದಂದು ? ಶರಧಿಯು ಸಿಂಪಿನ ರತ್ನವೆಲ್ಲಿರ್ದುದೋ, ಸ್ವಾತಿಯು ಸಲಿಲವಿಲ್ಲದಂದು ? ಸಪ್ತಸ್ವರ, ಅಕ್ಷರ, ಪುಸ್ತಕ, ವರ್ಣಕವೆಲ್ಲಿರ್ದುದೋ ಜ್ಞಾನವುದಯಿಸದಂದು? ತ್ರಿಜಗದುತ್ಪತ್ತಿ ಸ್ಥಿತಿಲಯ ಕಾರಣ ಸಚರಾಚರಗಂಭೀರವೆಲ್ಲಿರ್ದುದೋ, ಶಿವನ ಅಷ್ಟ ತನುಮೂರ್ತಿಗಳಿಲ್ಲದಂದು ? ಶರಣಪದ ಲಿಂಗೈಕ್ಯವೆಲ್ಲಿರ್ದುದೋ, ಅಗಾಧ ಲಿಂಗ ಸಕಳೇಶ್ವರ ಮಹಾಘನಲಿಂಗನಿಧಾನೆಂದು ಸದ್ಗುರು ಸ್ವಾಮಿ ಕೃಪಮಾಡಿ ತೋರದಂದು ?

೧೮ ಗುರುವಿನ ಕೃಪೆಯಿಂದ ಸಾಧಾರಣ ತನುವ ಮರೆದೆ ಗುರುವಿನ ಕೃಪೆಯಿಂದ ಮಲತ್ರಯವ ತೊಳೆದೆ ಗುರುವಿನ ಕೃಪೆಯಿಂದ ಅನುಭಾವಿಯಾದೆ ಗುರುವಿನ ಕೃಪೆಯಿಂದ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಮಾಣವನರಿದೆ ಎನಗಾಧಿಕ್ಯವಪ್ಪ ವಸ್ತು ಬೇರೊಂದಿಲ್ಲ ಅದೇನು ಕಾರಣ?

ಅವ ಸಾನಾದೆನಾಗಿ ಗುರುವೇ ಎನ್ನ ತನುವಿಂಗೆ ಲಿಂಗದೀಕ್ಷೆಯ ಮಾಡಿ ಎನ್ನ ಜ್ಞಾನಕ್ಕೆ ಸ್ವಾನುಭಾವ ದೀಕ್ಷೆಯ ಮಾಡಿ, ಎನ್ನ ತನುಮನಧನ ದಲ್ಲಿ ವಂಚನೆ ಇಲ್ಲದ ಮಾಡಲೆಂದು ಜಂಗಮ ದೀಕ್ಷೆಯ ಮಾಡಿ, ಎನ್ನ ಸರ್ವಾಂಗವು ನಿನ್ನ ವಿಶ್ರಾಮಸ್ಥಾನ ಶುದ್ಧ ಮಂಟಪವಾದ ಕಾರಣ, ಲೋಕವ್ಯಾಪ್ತಿಯನರಿಯದೆ ಲೋಕ ಎನ್ನೊಳಗಾಯಿತ್ತು, ಆ ಲೋಕಕ್ಕೆ ಹೊರಗಾದನಾಗಿ ಅದೇನು ಕಾರಣ? ಜನನ ಮರಣಗಳಿಗೆ ಹೊರ ಗಾದೆನಾಗಿ, ಗುರುವೇ, ಸದ್ಗುರುವೇ, ಎನ್ನ ಭವದ ಬೇರ ಹರಿದ ಗುರುವೇ, ಭಾವನಾಶವಿಮೋಚನ, ಮುಕ್ತಿಫಲದಾಯಕ ಗುರುವೇ, ಬಸವಣ್ಣ ಕಪಿಲ ಸಿದ್ಧಮಲ್ಲಿಕಾರ್ಜುನ ಚೆನ್ನಬಸಣ್ಣನಾಗಿ ಪ್ರಭು ಮೊದಲಾದ ಅಸಂಖ್ಯಾತರ ನೆಲ್ಲರನು ತೋರಿದ ಗುರುವೇ?

೧೯. ಚಿನ್ನದೊಳಗಣ ಬಣ್ಣವ ಆ ಚಿನ್ನ ತಾನರಿವುದೇ? ಕಬ್ಬು ರುಚಿಸ ಬಲ್ಲುದೇ ತನ್ನ ತಾನೇ? ಈ ಪರಿಯಂತ ನರರರಿವರೆ ಕ್ರಿಯಾ ಜ್ಞಾನಭೇದವ ರಾಮನಾಥಾ

ಅರ್ಥಃ— ಸುವರ್ಣ ತನ್ನೊಳಗಿಪ್ಪ ಕಾಂತಿಯ ತಾನರಿಯದು ಮಚ್ಚುಗಲ್ಲಿಂದ ಒರೆದಪನೆಂಬುದರ್ಥ ಹಾಗೆ ಇಕ್ಷು ದಂಡವು ತನ್ನ ಲ್ಲಿಪ್ಪ ಮಧುರವ ತಾನೇ ಸ್ವೀಕರಿಸಲರಿಯದು ಮನುಷ್ಯರು ಸ್ವೀಕರಿಸಿ ತಿಳಿವರೆಂಬ ಹಾಗೆ ಆತ್ಮದಲ್ಲಿಪ್ಪ ಜ್ಞಾನ ಕ್ರಿಯೆಗಳು ಶ್ರೀಗುರುವು ಅರುಹು ಕೊಟ್ಟಲ್ಲದೆ ಪ್ರಕಟವಿಲ್ಲೆಂಬುದರ್ಥ.

೨೦ ಜ್ಞಾನಾವೃತವೆಂಬ ಜಲಧಿಯ ಮೇಲೆ ಸಂಸಾರವೆಂಬ ಹಾವಸೆ ಬಂದು ಮುಸುಕಿಹುದು ನೀರು ವೊಗೆವರು ಬಂದು ನೂಂಕುವು ದಲ್ಲದೆ ತೆರಳದು ಮರಳಿ ಮರಳಿ ಮುಸುಕುವುದು ಮಾಣದಯ್ಯ ಆಗಳು ಎನ್ನವನು ನೆನೆಯುತ್ತಿರಬೇಕೆಂದು ಬೇಗ ಗುರು ಒಪ್ಪಯಿಸಿ ತನ್ನ ಪ್ರಸಾದ ವೆಂದು ಕುರುಹ ತ್ರಿಕಾಲ ಮಾಡ ಹೇಳಿದ ಲಿಂಗ ಪೂಜೆಯ ತನ್ನನ ರಿಯಬೇಕೆಂದು ಕೆರೆಯಸೀರನುಂಡು ತೊರೆಯ ನೀರ ಹೊಗಳುವ ಅರಿ ಮರುಳುಗಳ ಮೆಚ್ಚ ನಮ್ಮ ಕೂಡಲಸಂಗಮದೇವಾ

೨೧ ಅರಲುಗೊಂಡಕೆರೆಗೆ ತೊರೆ ಬಂದು ಹಾಯ್ದಂತೆ, ಬರಲು ಗೊಂಡ ಮಳೆ ಸುರಿದಂತಾಯಿತ್ತು ನೋಡಾ ಇದೆ ಎನಗೆ ಇಹದ ಸುಖವ

ಪರದ ಗತಿ ನಡೆದು ಬಂದಂತಾಯಿತ್ತು ಎನಗೆ ಚನ್ನಮಲ್ಲಿಕಾರ್ಜುನಯ್ಯ ಗುರುಪಾದವ ಕಂಡು ಧನ್ಯನಾದನು

೨೨ ಇನ್ನು ಮುಕ್ತನೆಂದೊಡೆ ಮುನ್ನಲೇನು ಬದ್ಧನೇ ? ಮುನ್ನ ಮುನ್ನವೇ ಮುಕ್ತನು ಒಂದು ಕಾರಣದಿಂದ ಬದ್ಧನಾದಡೇನು ? ಗುರು ಕಾರುಣ್ಯದಿಂದ ಮುಕ್ತನು ಗುರುಕಾರುಣ್ಯದಿಂದ ಗುರುವಾದ ಬಳಿಕ ಬದ್ಧ ಮುಕ್ತನೆನಲುಂಟೇ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ ?

೨೩ ಧ್ಯಾನಕ್ಕೆ ನಿಮ್ಮ ಶ್ರೀಮೂರ್ತಿಯೇ ಮುಖ್ಯವಯ್ಯ ಪೂಜೆಗೆ ನಿಮ್ಮ ಶ್ರೀಪಾದವೇ ಮುಖ್ಯವಯ್ಯ ಮಂತ್ರಕ್ಕೆ ನಿಮ್ಮ ನಾಮಾಮೃತವೇ ಮುಖ್ಯವಯ್ಯ ನಿಮ್ಮಿಂದಧಿಕರನಾರನೂ ಕಾಣೆನಯ್ಯ, ಕೂಡಲ ಸಂಗಮದೇವಾ ನೀವು ಜ್ಞಾನಗುರುವಾದ ಕಾರಣ

೨೪ ಮಡಕೆಯ ಮಾಡುವರೆ ಮಣ್ಣೇ ಮೊದಲು ತೊಡಿಗೆಯ ಮಾಡುವರೆ, ಹೊನ್ನೇ ಮೊದಲು ಶಿವಪಥವನರಿವಡೆ ಗುರುಪಥವೇ ಮೊದಲು ಕೂಡಲಸಂಗಮದೇವರನರಿವಡೆ ಶರಣರ ಸಂಗವೇ ಮೊದಲು

## ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರು.

೨೫ ದೀಕ್ಷಾಗುರು ಶಿಕ್ಷಾಗುರು ಮೋಕ್ಷಾಗುರು ತ್ರಿವಿಧಾಚಾರಂಗಳನರಿದು ಕರ್ಮಕ್ರಿ ಆಚಾರ ಸಂಬಂಧವ ಸಂಬಂಧಿಸಿ ಮಾಡುವಲ್ಲಿ ದೀಕ್ಷಾ ಗುರು ಆ ಕ್ರಿ ತ್ರಯದಲ್ಲಿ ಬಂಧನವ ಮಾಡುವಲ್ಲಿ ಶಿಕ್ಷಾ ಗುರು ಇಷ್ಟ ಕಾಮ್ಯ ಮೋಕ್ಷಂಗಳ ಗೊತ್ತುಗಡಿಸಿ ನಿಶ್ಚೈಸಿ ಮಾಡುವದು ಮೋಕ್ಷಾ ಗುರು ಇಂತೀ ಭೇದದಾಗವನರಿಯಬಲ್ಲಡೆ ಪರಮ ಗುರು ನಿಃಕಳಂಕ ಮಲ್ಲಿಕಾರ್ಜುನಾ

೨೬ ದೀಕ್ಷಾ ಗುರುವಾದಲ್ಲಿ ತ್ರಿವಿಧದಾಸೆ ಇಲ್ಲದಿರಬೇಕು ಶಿಕ್ಷಾ ಗುರುವಾದಲ್ಲಿ ಅರಿಗಳಿಗಂಜದೆ ಪ್ರಾಣತ್ಯಾಗ ನಿಷ್ಠೆಯನಾಗಿರಬೇಕು ಮೋಕ್ಷಾ ಗುರುವಾದಲ್ಲಿ ಸವ ಮೋಹ ಸರ್ವೇಂದ್ರಿಯ ನಾಶವಾಗಿರಬೇಕು. ಇಂತೀ ಮೂರು ಮೀರಿ ಬೇರೊಂದರಲ್ಲಿ ನಿಂದು, ತ್ಯಾಗಾಂಗ, ಭೋಗಾಂಗ,

ಯೋಗಾಂಗ, ತ್ರಿವಿಧಲೇಪನಾಗಿ ನಿಂದುದು ನಿಜ ಗುರುಸ್ಥಲ ಆ ಗುರು ವಿನ ಕೆಯ್ಯ ಅನುಜ್ಞೆ ಪರಂಜ್ಯೋತಿ ಪ್ರಕಾಶ ಅದು ನಿರವಯ ತತ್ವ, ಸದಾಶಿವಮೂರ್ತಿ ಲಿಂಗವು ತಾನೇ.

೨೭ ದೀಕ್ಷಾ ಗುರುವಾಗಿ ಬಂದು ಬ್ರಹ್ಮನ ಉತ್ಪತ್ತಿಯ ತೊಡೆದೆ ಶಿಕ್ಷಾ ಗುರುವಾಗಿ ಬಂದು ತ್ರಿವಿಧ ಮಲವ ಕೆಡಿಸಿ ಮುಕ್ತನ ಮಾಡಿದೆ ಮೋಕ್ಷಾ ಗುರುವಾಗಿ ಬಂದು ಆತ್ಮನ ಪ್ರಕೃತಿಯ ಕೆಡಿಸಿದೆ. ಇಂತೀ ಲೀಲೆಗ ಗುರುರೂಪಾಗಿ, ಸ್ವಲೀಲೆಗೆ ಲಿಂಗ ರೂಪಾಗಿ ನಿಜ ಲೀಲೆಗೆ ಜಂಗಮ ರೂಪಾಗಿ, ಇಂತೀ ತ್ರಿವಿಧ ರೂಪಾಗಿ, ಭಿನ್ನನಾದೆಯಲ್ಲಾ ಭಕ್ತಿ ಕಾರಣನಾಗಿ, ಶಂಭುಗಿಂದಿತ್ತ, ಸಯಂಭುಗಿಂದತ್ತ, ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು

೨೮ ಆಚಾರ ಗುರು, ಸಮಯ ಗುರು, ಜ್ಞಾನ ಗುರು ಆಚಾರ ಗುರು ಬ್ರಹ್ಮನ ಕಲ್ಪವ ತೊಡೆಯಬೇಕು ಸಮಯ ಗುರು ವಿಷ್ಣು ವಿನ ಸ್ಥಿತಿಯ ಹರಿಯಬೇಕು ಜ್ಞಾನ ಗುರು ಉತ್ಪತ್ತಿ ಸ್ಥಿತಿಲಯ ಮೂರನು ಕಳೆಯಬೇಕು ತ್ರಿವಿಧ ಗುರು ಏಕವಾದಲ್ಲಿ ಸದ್ಗುರು ಮದ್ಗುರು ಮಹಾಗುರುವೆಂಬೆ ನಿಃಕಳಂಕ ಮಲ್ಲಿಕಾರ್ಜುನಾ

೨೯ ಅಂಗಕ್ಕೆ ಲಿಂಗವ ಕೊಟ್ಟವ ಆಚಾರ್ಯನಾದ ಮನಕ್ಕೆ ಅರುಹ ತೋರಿದಾತ ಶಿಕ್ಷಾಗುರುವಾದ ಮೋಕ್ಷ ವಿಮೋಕ್ಷವಾಗಿ ಉಭಯದ ಗೊತ್ತು ತೋರಿ ಕಾಯದ ಕರ್ಮವ ಕೆಡಿಸಿ ಜೀವನಭವವ ಛೇದಿಸಿ ತದ್ರೂಪವ ತೋರಿದಾತ ಜ್ಞಾನ ಗುರು ಆತ ಪರಮಪ್ರಕಾಶ, ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ತಾನೇ

೩೦ ಒಳಗೆ ಶೋಧಿಸಿ, ಹೊರಗೆ ಶುದ್ಧವಿಸಿ, ಒಳಹೊರಗೆಂಬ ಉಭಯ ಶಂಕೆಯ ಕಳೆದು ಸ್ಫಟಿಕದ ಶಲಾಕೆಯಂತೆ ತಳವಳಗು ಮಾಡಿ, ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ ಶಿಷ್ಯನ ಸರ್ವ ಪ್ರಪಂಚ ನಿಷ್ಪತ್ತಿಯಂ ಮಾಡಿ ನಿಜೋಪದೇಶವನಿತ್ತು ಆ ಶಿಷ್ಯನ ನಿಜದಾದಿಯ ನೈದಿಸುವನೀಗ ದೀಕ್ಷಾಗುರು ಆ ಸಹಜ ಗುರುವೀಗ ಜಗದಾರಾಧ್ಯರು ಅವರ ಶ್ರೀಪಾದಕ್ಕೆ ನಮೋ ನಮೋ ಎಂಬೆ ಕಾಣಾ ಚನ್ನಮಲ್ಲಿಕಾರ್ಜುನಾ.

## ಯೋಗ್ಯ ಗುರುವಿನಿಂದ ದೀಕ್ಷೆಯನ್ನು ಪಡೆಯತಕ್ಕದ್ದು.

೩೧ ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯನು ಉಪಚಾರದ ಲಿಂಗವು, ಉಪಚಾರದ ಜಂಗಮವು, ಉಪಚಾರದ ಪ್ರಸಾದವು ಇಂತಹ ಗುರುವಿಂಗೆ ಭವದ ಲೆಂಕನಾಗಿ ಅಂಧಕನ ಕಯ್ಯ ಅಂಧಕ ಹಿಡಿದಂತೆ ಇವರೆಲ್ಲರೂ ಹೊಲಬುಗೆಟ್ಟರು ಕಾಣಾ ಗುಹೇಶ್ವರಾ

೩೨ ಭೂಮಿಗೆ ಹುಟ್ಟಿದ ಕಲ್ಲು, ಕಲ್ಲುಕುಟಿಗರ ಕೆಯ್ಯ ಕಡಿಸಿಕೊಂಡು, ಶಿಲೆಯನೆಂತು ಲಿಂಗವಯ್ಯ? ಕೊಟ್ಟಾತ ಗುರುವೇ, ಕೊಂಡಾತ ಶಿಷ್ಯನೇ? ಅಲ್ಲ ಕಾಣಿರಯ್ಯ ಶಿಲಾಲಿಖಿತವ ಕಳೆದು ಕ[illegible] ಭೇದವನರಿದು ಕಳೆಯ ತುಂಬಿ ಕೊಡಬಲ್ಲರೆ ಗುರುವೆಂಬೆ, ಕೊಂಬಾತ ಶಿಷ್ಯನೆಂಬೆನಯ್ಯ ಈ ಭೇದವನರಿಯದೆ ಇಷ್ಟವ ಮಾರುವಾತಂಗೂ ಕೊಂಬುವಾತಂಗೂ ನಾಯಕ ನರಕ ತಪ್ಪದು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ

೩೩ ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ? ಏನೇನೂ ಅರಿಯದ ಎತ್ತ ಮಾನವಂಗೆ ಉಪದೇಶ ಮಾಡುವ ಗೊಡ್ಡ ಮಾನವನ ಮುಖವ ತೋರದಿರಯ್ಯ ಅದೇನು ಕಾರಣವೆಂದಡೆ, ಆ ಗೊಡ್ಡ ಜೀವಿಯು ಪ್ರಪಂಚವ ಕಳೆಯಲಿಲ್ಲ ಅವನ ಪಂಚೇಂದ್ರಿಯಂಗಳು ಸಪ್ತ ವ್ಯಸನಂಗಳ ಅಷ್ಟಮದಂಗಳೆಂಬ ಗುಣಂಗಳ ಬಿಡಿಸಲಿಲ್ಲ ಸೂತಕ ಪಾತಕಂಗಳ ಕೆಡಿಸಿ ಮೂರು ಮಲಂಗಳ ಬಿಡಿಸಿ ಮುಕ್ತಿ ಪಥಂಗಳನರುಹಲಿಲ್ಲ ಮಹಾಜ್ಞಾನ ನಿರಾಳ ನಿರಂಜನ ಲಿಂಗವ ಕರ ಮನ ಭಾವ ಸರ್ವಾಂಗದಲ್ಲಿ ತುಂಬಿ ನಿತ್ಯನೆಂದಿನಿಸಲಿಲ್ಲ ಇದನರಿಯದ ವ್ಯರ್ಥ ಕಾಯರುಗಳ ಗುರುವೆಂದಡೆ ಪ್ರಮಥರು ಮೆಚ್ಚುವರೇ? ಇಂತಪ್ಪ ಗುರು ಶಿಷ್ಯರೀರ್ವರು ಅಜ್ಞಾನಿಗಳು. ಅವರು ಇಹ ಪರಲೋಕಕ್ಕೆ ಹೊರಗೆಂದಾತ ಅಂಬಿಗರ ಚೌಡಯ್ಯ

೩೪ ತನ್ನ ಶಿಷ್ಯ ತನ್ನ ಮಗನೆಂಬುದು ತಪ್ಪದಲ್ಲ ಇಲ್ಲದೆ ಆತನ ಧನಕ್ಕೆ ತಂದೆಯಾದನಲ್ಲದೆ ಆತನ ಮನಕ್ಕೆ ತಂದೆಯಾದನೇ? ಏಕೆ? ಆತನ ಮನವನರಿಯನಾಗಿ, ಆತನ ಧನಕ್ಕೆ ತಂದೆಯಾದನು ತನ್ನಲ್ಲಿದ್ದ ಭಕ್ತಿಯ ಮಾರಿಕೊಂಡುಂಬುವನು ನಿಮ್ಮ ನಿಜ ಭಕ್ತರಲ್ಲವಯ್ಯ ಮಲ್ಲಿಕಾರ್ಜುನಾ

೩೫ ಮಹಾಘನ ಶ್ರೀಗುರು ಲಿಂಗವೇ ಲಿಂಗವಲ್ಲದೆ, ಸುತ ನೊಂದು ಗುರುವೇ? ಭ್ರಾತೃವೊಂದು ಗುರುವೇ? ಪತಿಯೊಂದು ಗುರುವೇ? ಸುತನೊಂದು ಗುರುವೇ? ಗುರುಗುರುವೆಂದರೇನೋ? ಆ ಮಹಾಘನ ಗುರುಲಿಂಗಕ್ಕೆ ಇವೆಲ್ಲವ ಸರಿಗಂಡರೆ ಅಘೋರ ನರಕ ತಪ್ಪದು ಕೂಡಲ ಚನ್ನಸಂಗಮದೇವಾ

೩೬ ಕಾಲಚಕ್ರ ಕರ್ಮಚಕ್ರ, ನಾದಚಕ್ರ, ಬಿಂದು ಚಕ್ರವೊಳಗೆ ಹುಟ್ಟದ ಯೋನಿ ಇಲ್ಲ ಮೆಟ್ಟದ ನೆಲವಿಲ್ಲ- ಉಣ್ಣದಾಹಾರವಿಲ್ಲ ಕಾಣದ ದುಃಖವಿಲ್ಲ ಇಂತೀ ನಾನಾ ಜನ್ಮದಲ್ಲಿ ಸುಗ್ಗುಸುರಿಯಾಗಿ ಬಂದವಂಗೆ, ಪ್ರಾಯಶ್ಚಿತ್ತವಿಲ್ಲದೆ ಗುರುವ ಮುಟ್ಟಬಹುದೇ? ಲಿಂಗವನರ್ಚಿಸಬಹುದೇ? ಪ್ರಸಾದವ ಕೊಳ್ಳಬಹುದೇ? ಕೂಡಲ ಚನ್ನಸಂಗಮದೇವಾ ಈ ಹೀಗೆ ತ್ರಿಕರಣ ಶುದ್ಧವಿಲ್ಲದವಂಗೆ ಉಪದೇಶವ ಕೊಟ್ಟ ಗುರುವಿಂಗೆ ನಾಯಕ ನರಕ ತಪ್ಪದು

೩೭ ಲೋಕದಲ್ಲಿಯು ನೂರಾರು ಗುರುಗಳ ನೋಡಿ ನಾನು ಬೇಸರಗೊಂಡೆನಯ್ಯ ವಿತ್ತಾಪಹಾರಿ ಗುರುಗಳು ನೂರಾರು ಶಾಸ್ತ್ರಾರ್ಥ ಪೇಳುವ ಗುರುಗಳು ನೂರಾರು ಮಂತ್ರತಂತ್ರದಿಂದುಭಯ ಲೋಕದಲ್ಲಿ ಸುಖದುಃಖವನೀವ ಗುರುಗಳ ನೂರಾರು ಸತ್ಕರ್ಮೋಪದೇಶವನರುಹಿ ಸ್ವರ್ಗ ಮರ್ತ್ಯದಲ್ಲಿ ಸುಖವನೀವ ಗುರುಗಳು ನೂರಾರು ವಿಚಾರ ಮುಖದಿಂದ ಷಟ್ಸಾಧನೆಯನರುಹಿಸು ಗುರುಗಳು ನೂರಾರು ವಿಷಯಾದಿಗಳೆಲ್ಲ ಮಿಥ್ಯವೆಂದರುಹಿ ಆತ್ಮಾನುರಾಗತ್ವವನೀವ ಗುರುಗಳು ನೂರಾರು ಶಿವ ಜೀವರ ಏಕತ್ವವನರುಹಿ ನಿರ್ಮಲ ಜ್ಞಾನವನೀವ ಗುರುಗಳು ಪ್ರಮುಖರು ಸಂಶಯಾಳಿಗಳನ್ನೆಲ್ಲ ಜ್ಞಾನಾಗ್ನಿಯಿಂದೆ ದಹಿಸಿ ಅರುಹಿನ ಬಂಧನವಲ್ಲರಿಸಿದ ಗುರು ಚನ್ನಬಸವಣ್ಣನಲ್ಲದೆ ಮತ್ತೋರ್ವನ ಕಾಣೆ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ

# ದೀಕ್ಷೆಯ ತತ್ವಗಳು.

ಇಲ ಭವಿತನಕ್ಕೆ ಹೇಸಿ ಭಕ್ತನಾದೆನೆಂಬಾತನು ಪೂರ್ವಾಶ್ರಯವಂ ಕಳೆದು ಭಕ್ತನ ಮಾಡುವ ಪರಿ ಎಂತೆಂದೊಡೆ, ಕಾಯ ಶುದ್ಧಿ, ಜೀವ ಶುದ್ಧಿ, ಭೂತ ಶುದ್ಧಿ, ಆತ್ಮ ಶುದ್ಧಿ, ಮಂತ್ರ ಶುದ್ಧಿ ಎಂಬ ಪಂಚ ಶುದ್ಧಿಯ ಮಾಡಬೇಕು ಅದು ಹೇಗೆಂದಡೆ, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯವೆಂಬ ಕರ್ಮೇಂದ್ರಿಯಂಗಳ ದುಃಕ್ರಿಯೆಗಳಂ ಬಿಡಿಸಿ, ಶ್ರೋತ್ರ ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣವೆಂಬ ಬುದ್ಧೀಂದ್ರಿಯಂಗಳ ಉತ್ಪಾತವಂ ಮಾಣಿಸಿ, ದಶವಾಯುಗಳ ದುರ್ಗಮನಂಗಳಂ ನಿಲಿಸಿ ಮನ ಬುದ್ಧಿ ಚಿತ್ತಾಹಂಕಾರಂಗಳಂ ನಿವೃತ್ತಿಯ ಮಾಡಿ, ಆತಂಗೆ ಪಂಚ ಗವ್ಯವಂ ಕೊಟ್ಟು ಏಕ ಭುಕ್ತೋಪವಾಸವಂ ಮಾಡಿಸಿ ಕಾಯ ಶುದ್ಧಿಯಂ ಮಾಡುವುದು

ಮತ್ತಿರ್ದ ಮಾಯಾ ಪ್ರಪಂಚವಂ ಬಿಡಿಸಿ, ಜೀವನೇ ಶಿವನೆಂಬ ಪರಿಯಾಯವಂ ಕಲಿಸಿ, ಆ ಪರಶಿವನೇ ಇಷ್ಟಬ್ರಹ್ಮ, ಆ ಇಷ್ಟವೇ ನಿನ್ನ ಪ್ರಾಣ, ಆ ಪ್ರಾಣವೇ ಇಷ್ಟವೆಂದರುಹಿ, ಜೀವ ಶಿವನಲ್ಲ, ಆ ಶಿವನೇ ನಿನ್ನ ಜೀವನೆಂಬ ಪರಿಯಾಯವಂ ತೋರಿಸಿ, ಆತನ ಜೀವ ಭಾವವಂ ಕಳೆದು ಶಿವ ಭಾವವೆಂದೆನಿಸಿ ಜೀವ ಶುದ್ಧಿಯಂ ಮಾಡುವುದು

ಪೃಥ್ವೀ ಬ್ರಹ್ಮ ಜಲೇ ವಿಷ್ಣು । ತಥಾ ರುದ್ರ ಹುತಾಶನ । ಈಶಾನಂ ಪವನೋ ದೇವ । ಆಕಾಶ ಸದಾಶಿವ ॥ ಎಂಬ ಪಂಚಭೂತಾದಿ ದೇವತೆಗಳಪ್ಪ, ಬ್ರಹ್ಮ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಾಃ । ಏತೇ ಗರ್ಭಗತಶ್ಚೈವ ತಸ್ಮೈ ಶ್ರೀಗುರವೇ ನಮಃ ॥ ಎಂಬ ಪಂಚಭೂತಾದಿ ದೇವತೆಗಳು ಗರ್ಭೀಕರಿಸಿ ಕೊಂಡಿಪ್ಪ ಶ್ರೀಗುರುವ ತೋರಿಸಿ, ಪಂಚ ಭೂತಂಗಳ ಸ್ಥಾನವಂ ತಿಳುಹಿ, ಭೂತ ಶುದ್ಧಿಯಂ ಮಾಡುವುದು

'ಜೀವಾತ್ಮ ಪರಮಾತ್ಮಂಚ' ಎಂಬ ಶ್ರುತಿಯಿಂ ಜೀವಾತ್ಮನನೂ ಪರಮಾತ್ಮನನೂ ಏಕಾತ್ಮವ ಮಾಡಿ ಆತ್ಮಶುದ್ಧಿಯಂ ಮಾಡುವುದು

ಕರ್ಮಣಾ ಮನಸಾ ವಾಚಾ ಗುರುಣಾ ಭಕ್ತವತ್ಸಲ । ಶರೀರಮರ್ಥ ಪ್ರಾಣಂಚ ಸದ್ಗುರುಭ್ಯೋ ನಿವೇದಯೇತ್ ॥ ಎಂಬ ಶೃತಿಯ

ಪ್ರಮಾಣದಿಂದ ಆತನ ಶರೀರಾರ್ಥ ಪ್ರಾಣಂಗಳಂ ಅರ್ಪಿಸಿಕೊಂಡು ಭವದ ಬೇರ ಕೊಯ್ದು, ಶಿವಗಣ ತಿಂಥಿಣಿಯ ಮುಂದೆ ಆ ಶಿಷ್ಯನ ಕಯ್ಯವಿಡಿದು ತಂದು ಚೌಕ ಮಧ್ಯದಲ್ಲಿ ಕುಳ್ಳಿರಿಸಿ ಆತಣ ಮೇಲಣ ದೋಷ ಹೋದ ಹಾಗೆ 'ಕಾಮೇನ ಕಾಮು' ಎಂಬ ಮಂತ್ರದಿಂದ ಅಘೋರ್ದಕವಮಂ ತಳಿದು, ವಿಭೂತಿಯ ಪಟ್ಟಮಂ ಕಟ್ಟಿ ಮಸ್ತಕ ಕಳಶದ ಮೇಲೆ ಹಸ್ತಮಂ ನಿಳುಹಿ, ಶತಪತ್ರ ಕಮಲದೊಳಗಿಪ್ಪ ಮಹಾ ಲಿಂಗದ ಸತ್ಕಳೆಯಂ ತೆಗೆದು ಕ್ರಿಯಾ ಲಿಂಗದಲ್ಲಿ ಕುಳ್ಳಿರಿಸಿ, ಶಿಷ್ಯನ ಕರಸ್ಥಲದಲ್ಲಿ ಕೊಟ್ಟು, ಕರ್ಣದಲ್ಲಿ ಪಂಚಾಕ್ಷರಿಯನುಪದೇಶಿಸಿ, ಸರ್ವ ಭವಿ ಕುಲಮಂ ತೊಳೆದು, ಮಾಂಸ ಪಿಂಡಮಂ ಕಳೆದು ಮಂತ್ರ ಪಿಂಡಮಂ ಮಾಡುವುದು ಮಂತ್ರ ಶುದ್ಧಿ

*ಇಂತೀ ಪರಿಯಲ್ಲಿ ಕಾಯ ಶುದ್ಧಿ, ಜೀವ ಶುದ್ಧಿ, ಭೂತ ಶುದ್ಧಿ, ಆತ್ಮ ಶುದ್ಧಿ, ಮಂತ್ರ ಶುದ್ಧಿ, ಎಂಬ ಪಂಚ ಶುದ್ಧಿಯಂ ಸರ್ವ ಶುದ್ಧಿಯಂ* ಮಾಡಿ ಪುನರ್ಜಾತನಂ ಮಾಡುವುದು ಇದು ಸಹಜ ದೀಕ್ಷೆಯಯ್ಯಾ ಕೂಡಲಚನ್ನಸಂಗಯ್ಯ

೩೯ ಭವಿತನಕ್ಕೆ ಹೇಸಿ ಭಕ್ತನಾದೆನೆಂದೊಡೆ, ಆತನ ಪೂರ್ವಾಶ್ರಯವ ಕಳೆವ, ಭಕ್ತನ ಮಾಡುವ ಪರಿ ಎಂತೆಂದೊಡೆ, ಅವನ ಕಾಯವ ಶುದ್ಧವ ಮಾಡುವುದು ಜೀವವ ಶುದ್ಧವ ಮಾಡುವುದು ಆತ್ಮಗೂಡಿ ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯವೆಂಬ ಕರ್ಮೇಂದ್ರಿಯಂಗಳ ಶುದ್ಧವ ಮಾಡುವುದು ಆತನ ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕೆಂಬ ಜ್ಞಾನೇಂದ್ರಿಯಂಗಳ ಶುದ್ಧವ ಮಾಡುವುದು ಆತನ ಒಳಹೊರಗೆ ಸುತ್ತಿರ್ದ ಮಾಯಾಪಾಶದ ಪ್ರಪಂಚಮಂ ಬಿಡಿಸಿ, ಹಿಂದಣ ಭೂತ ಭಾವದಿಂದ ಜೀವ ಶಿವನೆಂಬ ಪರಿಯಾಯಮಂ ಕೆಡಿಸಿ, ಆ ಪರಶಿವನೇ ಇಷ್ಟ ಬ್ರಹ್ಮ, ಆ ಇಷ್ಟವೇ ನಿನ್ನ ಪ್ರಾಣ, ಆ ಪ್ರಾಣವೇ ಇಷ್ಟವೆಂದ ರುಹಿ, ಜೀವ ಶಿವನಲ್ಲಿ, ಆ ಶಿವನೆ ನಿನ್ನ ಜೀವವೆಂಬ ಪರಿಯಾಯಮಂ ತೋರಿಸಿ, ಆತನ ಜೀವ ಭಾವಮಂ ಕಳೆದು, ಶಿವಭಾವಿ ಎಂದೆನಿಸಿ, ಆತಂಗೆ ಪಂಚಭೂತಾದಿ ಅಧಿದೇವತೆಗಳ ತೋರಿಸಿ ಪಂಚವಕ್ತ್ರಂಗಳ ನೆಲೆಗೊಳಿಸಿ, ಪಂಚವರ್ಣಂಗಳನರುಹಿ, ಇದಕ್ಕೆ ಸಾಕ್ಷಿ, 'ಜೀವಾತ್ಮಂಚ' ಎಂಬ ಶ್ರುತಿಯಿಂದೆ ಆತನ ಆತ್ಮ ಶುದ್ಧತೆಯಿಂ ಆತನ ಸರ್ವಾಂಗವ ಶುದ್ಧವ ಮಾಡಿ ಆತನ ತಂದು ಗಣ ಪಙ್ತಿಯಲ್ಲಿ ಕುಳ್ಳಿರಿಸಿ, ಆ ದೀಕ್ಷಿ

ತನ ಜಿಹ್ವೆಯಲ್ಲಿ, ಶೃತಿಯ ನೋದಿಸಿ, ಸಾಕ್ಷಿ ಓಂ ಕರ್ಮಣಾಂ । ಮನಸಾ ವಾಚಾ ಗುರೂಣಾಂ ಭಕ್ತವತ್ಸಲಃ ॥ ಶರೀರಾರ್ಧಂ ಪ್ರಾಣಂಚ । ಸದ್ಗುರುಭ್ಯೋ ನಿವೇದಯೇತ್ ॥ ಎಂದು ಮಾನಸೋಚ್ಚರಣೆಯಂ ಮಾಡಿಸಿ, ಆ ತಚ್ಛಿಷ್ಯನ ಭವವಂ ಛೇದಿಸಿ, ಆಮೇಲೆ ಅವನ ಎಬ್ಬಿಸಿ ಚೌಕ ಮಧ್ಯದಲ್ಲಿ ಕುಳ್ಳಿರಿಸಿ ಶೃತಿ । 'ಓಂ ಮೇನಕಾ ಮೇನಕಾ' ಎಂಬ ಮಂತ್ರದಿಂದೆ ಅಘೋರೋದಕಮಂ ವಾಮ ಪ್ರದಕ್ಷಿಣವಾಗಿ ತಳಿದು, ಫಾಳದಲ್ಲಿ ವಿಭೂತಿಯ ಪಟ್ಟವಂ ಕಟ್ಟಿ, ಆತನ ಮಸ್ತಕದ ಮೇಲೆ ಹಸ್ತವನಿರಿಸಿ, ಶತಪತ್ರ ಕಮಲದೊಳಗಿರ್ದ ವಸ್ತುವನು ಮಾನಸೋಚ್ಚರಣೆಯಿಂದೆ ಪ್ರಾಣಲಿಂಗ ಪಂವರುಹಿ, ಜ್ಞಾನ ದೃಷ್ಟಿಗೆ ತಂದು, ಅದೇ ವಸ್ತುವನೆ ಬಹಿಷ್ಕರಿಸಿ ತಂದು, ಕುಮಾರ ಮೂರ್ತಿಯೊಳಗೆ ಪುದುಗಿಸಿ, ಅಷ್ಟವೆಲ್ಲ ಒಂದುಗೂಡಿದ ಮುದ್ರಿಯೇ ಇಷ್ಟಲಿಂಗವೆಂದು ತೋರಿಸಿ, ಕರಮನಭಾವದಲ್ಲಿ ನಿರ್ಧರಿಸೆಂಗು ಹೇಳಿ, ಆತ್ಮವೆ ಲಿಂಗವೆಂಬುದು ಮಾಣಿಸಿ, ಕರಕೆ ಕಂಕಣವ ಕಟ್ಟಿ, ನಿರ್ಧಾರದ ತಾಳಿಯಂ ಕಂಠದಲ್ಲಿ ಕಟ್ಟಿ, ಕಲಿಯಾಗು ಎಂದು ಎನ್ನ ಕೃತಾರ್ಥನ ಮಾಡಿದ ಶ್ರೀಗುರುವೇ, ಕೂಡಲ ಚನ್ನಸಂಗ ನಿಮ್ಮ ಶರಣ ಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

೪೦ ಗುರುವೆಂಬಾತನು ಸಕಲಾಗಮದ ಹೃದಯವನರಿದು, ಕ್ರಿಯಾಜ್ಞಾನಯುಕ್ತನಾಗಿ ತನ್ನ ತಾನರಿದು, ಸರ್ವಾಚಾರ ಸಂಪನ್ನತೆ ನೆಲೆಗೊಂಡು, ನಿರ್ಣಯದ ಗೋತ್ರನರಿದು ಉಪದೇಶವ ಮಾಡಬಹುದು ಉಪದೇಶವ ಮಾಡುವ ಪರಿ ಎಂತೆಂದೊಡೆ. ಬ್ರಾಹ್ಮಣನ ಮೂರು ವರುಷ ನೋಡಬೇಕು ಕ್ಷತ್ರಿಯನ ಆರು ವರುಷ ನೋಡಬೇಕು ವೈಶ್ಯನ ಒಂಬತ್ತು ವರುಷ ನೋಡಬೇಕು ಶೂದ್ರನ ಪನ್ನೆರಡು ವರುಷ ನೋಡಬೇಕು ಈ ಹೀಂಗೆ ನೋಡಿಪಲ್ಲಿವೆ, ದೀಕ್ಷೆಯ ಕೊಡಲಾಗದು. ಈ ಕ್ರಮವನರಿಯದೆ, ಉಪಾಧಿಪಿಡಿದು, ಉಪದೇಶವ ಕೊಂಬಾತ ಶಿಷ್ಯನಲ್ಲ ಇವರಿಬ್ಬರ ನಿಲಿವು ಒಂದೇ ಟಕ್ಕನ ಮನೆಗೆ ಟಕ್ಕ ಬಂದಂತೆ. ಈ ಗುರು ಶಿಷ್ಯರಿಬ್ಬರನು ರೌರವ ನರಕದಲ್ಲಿಕ್ಕುವ ನಮ್ಮ ಕೂಡಲಚನ್ನ ಸಂಗಮದೇವಾ

೪೧ ಗುರುವಿನ ಗುರು ಪರಮಗುರು ಪರಬ್ರಹ್ಮ ಜಂಗಮವೆನಿಸಿಕೊಂಡ ಬಳಿಕ ತಾನೇ ಗುರುವಾಗಿ ಉಪದೇಶವ ಮಾಡಲಾಗದು,

ಮುಂದೆ ಶಿಕ್ಷೆ ದೀಕ್ಷೆಗಳಿಂದೆ ಗುರು ಕರುಣವ ಪಡೆದವರಿಂದೆ, ದಾಸೋ-
ಹವ ಮಾಡಿಸಿಕೊಳ್ಳಲ್ಕರ್ತನಲ್ಲದೆ, ತನ್ನ ಪ್ರಾಣಲಿಂಗವ ಕೊಡಕರ್ತ-
ನಲ್ಲ ತನ್ನ ಪ್ರಾಣಲಿಂಗವ ಕೊಟ್ಟು ಗುರುವಾದ ಬಳಿಕ, ಜಂಗಮಸ್ಥಲಕ್ಕೆ
ಭಂಗಹೊಂದಿತ್ತು ಅದೆಂತೆಂದೊಡೆ, ಅವನು ತನ್ನ ಪೂರ್ವಾರ್ಜಿತವ
ತ್ಯಜಿಸಿ, ಗುರುಕರಜಾತನಾಗಿ, ನಿರ್ಧರಿಸಿ ನಿಲಲರಿಯ ಅಂತಪ್ಪ ಭವ
ಜೀವಿಗೆ ನಿಜ ಜಂಗಮವೇ? ಶಿವಯೋಗಿ ಎನಿಸಿಕೊಂಬ ರಾಜ ಕೃಪಾಳು
ತಾನೆ ಚರಲಿಂಗವಾಗಿ ಬಂದು ಆಚಾರ ಭ್ರಷ್ಟರಿಗೆ ಹಸ್ತಾನುಗ್ರಹವ
ಮಾಡಿದೊಡೆ ಜಂಗಮಸ್ಥಲಕ್ಕೆ ಅದೇ ಭಂಗವೆಂದುದು ನಮ್ಮ ಕೂಡಲ
ಚನ್ನಸಂಗಯ್ಯನ ವಚನ ಅದು ಕಾರಣವಾಗಿ ವೀರಶೈವ ಸಿದ್ಧಾಂತ
ದಲ್ಲಿ ಶಬ್ದಮುಗ್ಧವಾಗಿರಬೇಕು ಗುಹ್ಯಕ್ಕೆ ಗುಹ್ಯವಾಗಿರಬೇಕಯ್ಯಾ

## ೨೧ ದೀಕ್ಷೆಗಳು

೪೭. ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ ಮಲ
ತ್ರಯಂಗಳ ಕಳೆದು, ಆಜ್ಞಾದೀಕ್ಷೆ ಉಪಮಾದೀಕ್ಷೆ, ಸ್ವಸ್ತಿಕಾರೋಹಣ,
ಕಲಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ, ಈ ಏಳನು
ಕಾಯಕ್ಕುಪದೇಶವ ಮಾಡುವುದು ಸಮಯ, ನಿಸ್ಸಂಸಾರ, ನಿರ್ವಾಣ,
ತತ್ವದೀಕ್ಷೆ ಅಘಾತ್ರ್ಯ, ಅನುಗ್ರಹ, ಸತ್ಯಶುದ್ಧ ಈ ಏಳನು ಪ್ರಾಣಕ್ಕು
ಪದೇಶವ ಮಾಡುವುದು ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾ
ರ್ಪಿತ, ಅಹಿಂಸೆ, ಲಿಂಗನಿಜ, ಮನೋರ್ಲಯ, ಸಮ್ಯೋನಸ್ಮೃತಿ, ಈ ಏಳನು
ಮನಕ್ಕುಪದೇಶವ ಮಾಡುವುದು ಈ ಕ್ರಮವನರಿದು ಮಾಡುವುದು
ಕೂಡಲಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆಯಯ್ಯ

೪೮ ಅಯ್ಯ ವರಕುಮಾರ ದೇಶಿಕೇಂದ್ರನೇ ಕೇಳಾ, ಚಿನ್ಮಯ ಶರಣ
ಪ್ರಸಾದಲಿಂಗವಾಗಿ ನಿಂದ ನಿಜಾಚರಣೆಯ ನಿಲುಕಡೆಯ ಕಲ್ಯಾಣ ಪಟ್ಟ
ಣದ ಅನುಭವ ಮಂಟಪದ ಶೂನ್ಯಸಿಂಹಾಸನದಲ್ಲಿ ಬಸವ, ಚನ್ನಬ
ಸವ, ಸಿದ್ಧರಾಮ, ಅಕ್ಕಮಹಾದೇವಿ, ನೀಲಲೋಚನೆ, ಮೊದಲಾದ ಸಕಲ
ಪ್ರಮಥಗಣಂಗಳು ಮಹಾಪ್ರಭು ಸ್ವಾಮಿಗಳಿಗೆ ಅಭಿವಂದಿಸಿ ಹಸ್ತಾಂಜ

ಳಿತರಾಗಿ, ಎಲೇ ಮಹಾಪ್ರಭುವೇ, ನಿನ್ನ ಅನಾದಿ ಷಟ್ಸ್ಥಳ ನಿರಾಭಾರಿ ವೀರಶೈವ ಶರಣರ ನಿಜಾಚರಣೆಯ ನಿಲುಕಡೆಯ ದಯವಿಟ್ಟು ಕರುಣಿಸಬೇಕಯ್ಯ ಮಹಾಗುರುವೇ ಎಂದು ಬೆಸಗೊಂಡಲ್ಲಿ ಆಗ ಮಹಾಪ್ರಭುವು ಲಿಂಗಾಂಗಕ್ಕೆ ಭಿನ್ನವಿಲ್ಲದೆ ಹಸ್ತ ಮಸ್ತಕ ಸಂಯೋಗವ ಮಾಡಿ, ವೇಧಾ ಮಂತ್ರ ಕ್ರಿಯಾ ದೀಕ್ಷೆಯನಿತ್ತು, ಇಪ್ಪತ್ತೊಂದು ತೆರವ ವಿಚಾರವನರುಹಿ, ನೂರೊಂದುಸ್ಥಲದಾಚರಣೆ, ಇನ್ನೂರು ಹದಿನಾರು ಸ್ಥಲದ ಸಂಬಂಧವ ತೋರಿ, ಸರ್ವಾಚಾರ ಸಂಪತ್ತಿನ ವರ್ಣದ ಸ್ವರೂಪು ನಿಲುಕಡೆಯ ತೋರಿಸಿ ಸಾಕಾರ ನಿರಾಕಾರದ ನಿಜದ ನಿಲುಕಡೆಯನರುಪಿ ನಿಜ ಶಿವಯೋಗದ ನಿರ್ಣಯವ ಕರುಣಿಸಿ, ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪು ತಾವೆಂದರುಪಿದರು ನೋಡಾ ಇಂತು ಚನ್ನಬಸವೇಶ್ವರ ಸ್ವಾಮಿಗಳು ಬೆಸಗೊಂಡು ತಮ್ಮ ಚಿದಂಗ ಸ್ವರೂಪರಾದ ಚಿದ್ಘನ ಶರಣ ನಿರ್ಲಜ್ಜ ಶಾಂತಯ್ಯನೆಂಬ ಶಿವಶರಣನ ಮುಖದಲ್ಲಿ ಮೋಳಿಗಯ್ಯ ಮೊದಲಾದ ಸಕಲ ಪ್ರಮಥರ್ಗೆ ಬೋಧಿಸಿದರು ನೋಡಾ ಅದೇ ಮಹಾಪ್ರಸಾದವ ನಿನ್ನ ಶ್ರೋತ್ರ ಮುಖದಲ್ಲಿ ಮಹಾಮಂತ್ರ ಮೂರ್ತಿಯಾಗಿ ನೆಲೆಗೊಂಡಿಪ್ಪ ಪ್ರಸಾದಲಿಂಗ ಮುಖದಲ್ಲಿ ಅರುಹಿಸಿ ಕೊಟ್ಟೆವು ಕೇಳ ಮಹಾಲಿಂಗ ಮುಖದಲ್ಲಿ ಸಂತೃಪ್ತನಾಗಿ ಪರಿಣಾಮ ಪ್ರಸಾದದಲ್ಲಿ ಲೋಲುಪ್ತನಾಗಿ, ಆ ಎನ್ನಾಜ್ಞಾ ಮಂಟಪದಲ್ಲಿ ಮೂರ್ತಿಗೊಂಡಿರುವ ಸಂಗನಬಸವೇಶ್ವರನು.

ಅಯ್ಯಾ ಪ್ರಥಮದಲ್ಲಿ ಇಪ್ಪತ್ತೊಂದು ತೆರನ ದೀಕ್ಷೆಯ ಕರುಣಿಸಿಹೆವು ನೋಡು, ಅದರ ವಿಚಾರವೆಂತೆಂದೊಡೆ,

## ಕ್ರಿಯಾ ದೀಕ್ಷೆ

### ಆಜ್ಞಾದೀಕ್ಷೆ

೪೪ ಅಷ್ಟತನು ಅಷ್ಟಭೋಗಂಗಳಭಿಲಾಷೆಯ ನೀಗಿ, ಸರ್ವಸಂಗ ಪರಿತ್ಯಾಗದಿಂದ ನಿಜನೈಷ್ಠೆ ಕರಿಗೊಂಡು ಸಚ್ಚಿದಾನಂದದಿಂದ ನಿಂದ ನಿಜೋತ್ತಮಂಗೆ ಶ್ರೀಗುರುಲಿಂಗ ಜಂಗಮವು ಕೃಪಾದೃಷ್ಟಿಯಿಂದ ನೋಡಿ ಜನ್ಮ ಜರೆ ಮರಣಂಗಗಳಿಗಂಜಬೇಡವೆಂದು ಅಂಗ ಮನ ಪ್ರಾಣಂಗಳ ಮೇಲೆ ಉಭಯಹಸ್ತವಿತ್ತು ಸಂಸಾರ ಪ್ರಪಂಚಕ್ಕೊಳಗಾದ ಪಂಚಮಹಾ ಪಾತಕರಂತೆ ನಡೆಯಬಾರದೆಂದು ಪಾದಕ್ಕಾಜ್ಞೆಯ ಮಾಡಿದರಯ್ಯ

ಜಡ ಮರ್ತ್ಯರು ನುಡಿದಂತೆ ನುಡಿಯಬೇಡವೆಂದು ವಾಣಿಗೆ ಆಜ್ಞೆಯ
ಮಾಡಿದರಯ್ಯ ಪರದೈವ, ಪರದ್ರವ್ಯ ಪರಸ್ತ್ರೀಯರ ಮುಟ್ಟಬೇಡ
ವೆಂದು ಪಾಣಿಗೆ ಆಜ್ಞೆಯ ಮಾಡಿದರಯ್ಯ ಪರಸ್ತ್ರೀಯರ ಮುಟ್ಟಿದರೆ
ಅದರಲ್ಲಿ ಜನ್ಮ ತಪ್ಪದೆಂದು ಅದರಿಂದ ಬಿಟ್ಟು ಹುಳುಗೊಂಡವಿಲ್ಲವೆಂದು
ಪಾಣಿಗೆ ಆಜ್ಞೆಯ ಮಾಡಿದರಯ್ಯ ಇಂತು ಭವಿಮಾರ್ಗವನುಳಿದು, ಸತ್ಯ
ನಡೆ, ಸತ್ಯನುಡಿ, ಸತ್ಯಪಾಣಿ, ಸತ್ಯವಾಣಿಯಾದರೆ ನಿನ್ನ ಪಾದ ಮೊದ
ಲಾಗಿ ವಾಣಿಯೇ ಅಂತ್ಯವಾದ ಸರ್ವಾಂಗದಲ್ಲಿ ಚತುರ್ವಿಧಸಾರಾಯ
ಸ್ವರೂಪ ಗುರುಲಿಂಗ ಜಂಗಮ ಪ್ರಸಾದವಾಗಿ ಕ್ಷೀರದೊಳಗೆ ಘೃತವಡ
ಗಿದಂತೆ, ಏಕ ಸ್ವರೂಪಿಸಿಂದ ನಿಮಿಷಾರ್ಥವಗಲದ ನಿಜವಸ್ತು ಬೆರೆ
ದಿರ್ಪುದು ನೋಡಾ ಎಂದು ಅನುಭಾವ ಮಂಟಪದಲ್ಲಿ ಶ್ರೀಗುರು ನಿಃಕ
ಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜಶಾಂತಲಿಂಗದೇಶಿಕೋತ್ತಮಂಗೆ
ಗಣಸಾಕ್ಷಿಯಾಗಿ ಆಜ್ಞಾ ದೀಕ್ಷೆಯ ಮಾಡಿದರು ನೋಡಾ ಸಂಗನ
ಬಸವೇಶ್ವರಾ

## ಉಪಮಾದೀಕ್ಷೆ

೬೫ ಅಯ್ಯ ನಿನ್ನಿಷ್ಟ ತನುವಿನ ಮಧ್ಯದಲ್ಲಿ ಆ ಪರಬ್ರಹ್ಮ ನಿಜ
ವಸ್ತುವೇ ನಿನ್ನ ಪಾವನ ನಿಮಿತ್ತಾರ್ಥವಾಗಿ ಅಷ್ಟಾವರಣ ಸ್ವರೂಪಿ
ಸಿಂದ ನೆನೆದಿರ್ಪನು ನೋಡಾ ಅದರ ವಿಚಾರವೆಂತೆಂದೊಡೆ, ನಿನ್ನ
ಸ್ಥೂಲ ತನುವಿನ ಮಧ್ಯದಲ್ಲಿ ಅರುಹೇ ಗುರುವಾಗಿ ನೆಲಿಸಿರ್ಪರು ನೋಡಾ
ನಿನ್ನ ಸೂಕ್ಷ್ಮ ತನುವಿನ ಮಧ್ಯದಲ್ಲಿ ಸುಜ್ಞಾನವೇ ಲಿಂಗವಾಗಿ ನೆಲಿ
ಸಿರ್ಪರು ನೋಡಾ ನಿನ್ನ ಕಾರಣ ತನುವಿನ ಮಧ್ಯದಲ್ಲಿ ಸ್ವಾನುಭಾವ
ಜಂಗಮವಾಗಿ ನೆಲಿಸಿರ್ಪರು ನೋಡಾ ನಿನ್ನ ನಿರ್ಮಲ ತನುವಿನ ಮಧ್ಯ
ದಲ್ಲಿ ಕರುಣಾಮೃತಪಾದೋದಕನಾಗಿ ನೆಲಿಸಿರ್ಪರು ನೋಡಾ ನಿನ್ನ
ಆನಂದ ತನುವಿನ ಮಧ್ಯದಲ್ಲಿ ಕೃಪಾಪ್ರಸಾದವಾಗಿ ನೆಲಿಸಿರ್ಪರ ನೋಡಾ
ನಿನ್ನ ಚಿದ್ರೂಪ ತನುವಿನ ಮಧ್ಯದಲ್ಲಿ ಚಿತ್‌ಪ್ರಕಾಶ ಭಸಿತವಾಗಿ ನೆಲಿ
ಸಿರ್ಪರು ನೋಡಾ ನಿನ್ನ ಚಿನ್ಮಯ ತನುವಿನ ಮಧ್ಯದಲ್ಲಿ ಚಿತ್ಕಾಂತೆ
ರುದ್ರಾಕ್ಷಿಯಾಗಿ ನೆಲಿಸಿರ್ಪರು ನೋಡಾ ನಿನ್ನ ಚಿತ್ಪ್ರಕಾಶ ತನುವಿನ
ಮಧ್ಯದಲ್ಲಿ ಚಿದಾನಂದ ಮಂತ್ರವಾಗಿ ನೆಲಿಸಿರ್ಪರು ಇಂತು ನಿನ್ನ ಸರ್ವಾಂ
ಗದಲ್ಲಿ ಅಷ್ಟಾವರಣ ಸ್ವರೂಪಿಸಿಂದ ಪರಾತ್ಪರ ನಿಜವಸ್ತು ನೆರೆದಿರ್ಪುದು

ನಿನ್ನ ನಿರ್ಮಾಯ ಚಿತ್ತು ಮಹಾಜ್ಞಾನ ನಿಜದೃಷ್ಟಿಯಿಂದ ನಿನ್ನನೀ ತಿಳಿದುನೋಡಾ ಎಂದು ಗಣಸಾಕ್ಷಿಯಾಗಿ ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜಶಾಂತ ದೇಶಿಕೋತ್ತಮಂಗೆ ಇದೇ ಉಪಮಾ ದೀಕ್ಷೆ, ಇಂತುಟೆಂದು ನಿರೂಪಮಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ

## ಸ್ವಸ್ತಿಕಾರೋಹಣ ದೀಕ್ಷೆ

೪೬ ಅಯ್ಯಾ ಶ್ರೀಗುರುಲಿಂಗ ಜಂಗಮವೇ, ರುದ್ರ ಲೋಕದ ರುದ್ರ ಗಣಂಗಳಿಗೆ, ಶಾಂಭವಗಣಂಗಳಿಗ, ನಾಗಗಣಂಗಳಿಗ, ದೇವಗಣಂಗಳಿಗ, ಮರ್ತ್ಯಲೋಕದ ಮಹಾಗಣಂಗಳಿಗೆ ಅವರವರ ಮನ ಭಾವ ಕರಣಂಗಳು ಹೇಗುಂಟು ಹಾಗೆ ಪ್ರಸನ್ನತೆ ಪ್ರಸಾದವಾಗಿರ್ಪುದು ನೋಡಾ ಸ್ವರ್ಗ, ಮರ್ತ್ಯ, ಪಾತಾಳ ಲೋಕದಲ್ಲಿ ಚರಿಸುವ ಹರಿ ಸುರ ಬ್ರಹ್ಮಾದಿ ದೇವ ,ದಾನವ, ಮಾನವ ಮನು, ಮುನಿಗಳೆಲ್ಲ ಅತ್ಯತಿಷ್ಟದಶಾಂಗುಲವೆಂದು ಹೊಗಳುವ ಶ್ರುತಿ ಎಂತೋ, ಹಾಗೆ ಅವರವರ ಮನದಂತ ಮಹಾದೇವನಾಗಿ ಫಲ ಪದಗಳ ಕೊಟ್ಟು, ದುಷ್ಟ ನಿಗ್ರಹ ಶಿಷ್ಟಪರಿಪಾಲಕತ್ವದಿಂದ ಸರ್ವಲೋಕಂಗಳಿಗೆ ಸೂತ್ರಧಾರಿಗಳಾಗಿರ್ಪರು ನೋಡಾ ಇಂತು ಏಕಮೇವ ಪರಬ್ರಹ್ಮವೆಂಬ ಶ್ರುತಿಯು ದಿಟವ ಮಾಡಿ ಪರಮ ಸ್ವಸ್ತಿರ ಮಂಟಪದ ಮೇಲೆ ಶಿವಭಕ್ತಿ ಅಂಗಲಿಂಗವೆಂಬ ಉಭಯ ನಾಮವಳಿದು ಶಿಷ್ಯರೂಪಿನಿಂದ ಕುಳ್ಳಿರಿಸಿ ದೀಕ್ಷಾಪಾದೋದಕ ಮಿಶ್ರವಾದ ಗೋಮೂತ್ರದಿಂದ ಸಪ್ತಧಾತು ಸಂಬಂಧವಾದ ಸಪ್ತವ್ಯಸನ ಸಂಬಂಧವಾದ ಅಂಗ ಇಂತು ಲಿಂಗದ ಮಲಿನಭಾವ, ಲಿಂಗದ ಶಿಲಾಭಾವವ ಕಳೆದು ಕ್ಷೀರ ಘೃತ ರಂಭಾ ಇಕ್ಷು ಮಧು ಯುಕ್ತವಾದ ರಸ ಪಂಚಾಮೃತವ ಜಂಗಮ ಚರಣೋದಕ ಮಿಶ್ರದಿಂದ ಅಭಿಷೇಕವ ಮಾಡಿಸಿ, ಅದರಿಂ ಮೇಲೆ ಗುರುಪಾದೋದಕದಲ್ಲಿ ಶರಣಗಣಂಗಳ ಹಸ್ತೋದಕ ಮಂತ್ರೋದಕ ಪುಷ್ಪೋದಕ ಗಂಧೋದಕ ಪುಷ್ಪೋದಕವೆಂಬ ಪಂಚ ಪರಮಾನಂದ ಜಲದಿಂದ ಅಭ್ಯಂಗ ಸ್ನಾನವ ಮಾಡಿಸಿ ಹಿಂದ ಮುಂದಣ ಕಾಮಕಾಲರ ಭಯಕ್ಕಂಜಬೇಡೆಂದು ತ್ರಿವಿಧಂಗುಲ ಪ್ರಮಾಣವಾದ ದರ್ಭೆಯಂತು ಮಾಡಿ ತ್ರಿವಿಧ ಮಂತ್ರ ಸ್ಮರಣೆಯಿಂದ ಕಟಿಯಲ್ಲಿ ಧರಿಸಿದರಯ್ಯ ಅರಿವೈರಿಗಳಿಗೆ ಒಳಗಾಗಬೇಡವೆಂದು ಷಡಂಗುಲ ಪ್ರಮಾಣವಾದ ರಂಭಾಪಟ್ಟೆಯ ಕೌಪೀನವ ಮಾಡಿ ಷಡ

ಕ್ಷರ ಮಂತ್ರ ಸ್ಮರಣೆಯಿಂದ ಹರಿಯುಜದ್ವಾರಗಳ ಬಂಧಿಸಿದರಯ್ಯ ಆದ ರಿಂಮೇಲೆ ನಾರಂಗ ಶಾಖೆಯ ಪವಿತ್ರತೆಯಿಂ ಹೊದ್ದಿಸಿ, ಶ್ರೀಗುರು ದೇವನ ಚರಣಕಮಲಕ್ಕೆ ಅಷ್ಟಾಂಗ ಪ್ರಣತನ ಮಾಡಿಸಿ, ಶಿವಶರಣ ಭಕ್ತಮಾಹೇಶ್ವರರುಗಳಿಗೆಲ್ಲ ಹುಸಿ ನುಡಿಯ ನುಡಿಯದೆ ದಿಟವ ಬಿಡದೆ ಆತ ತ್ಮದಿಂದ ನಡೆನುಡಿ ಕೊಟ್ಟು ಕೊಂಬುವ ವಿಚಾರಗಳ ಕೃತ ಮಾಡಿದಲ್ಲಿ ಶ್ರೀಗುರುದೇವನು ಶರಣಗಣ ಒಪ್ಪಿಗೆಯಿಂದ ಶಿಷ್ಯನ ಮಸ್ತಕದ ಮೇಲೆ ಅಭಯ ಹಸ್ತವ ಇಟ್ಟು ಗುರುಶಿಷ್ಯ ಭಾವವಳಿದು ಗುರುವಿನ ಸೂತ್ರವ ಶಿಷ್ಯ ಹಿಡಿದು, ಶಿಷ್ಯನ ಸೂತ್ರವ ಗುರುವು ಹಿಡಿದು, ಅಂತರಂಗ ಬಹಿ ರಂಗವಲ್ಲಿ ಶಿವಯೋಗ ಸಂಧಾನದಿಂದ ಏಕರೂಪವಾಗಿ ಭೃತ್ಯರಿಂದ ಕಲಶಾರ್ಚನೆಯ ರಚಿಸಿ ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೊಡಗೂಡಿ ನವರತ್ನಖಚಿತವಾದ ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡಿರು ವಂಥ ಮಂತ್ರ ಮೂರ್ತಿ ನಿರಂಜನ ಜಂಗಮಕ್ಕೆ ವಿಭೂತಿ ವೀಳ್ಯ ಸ ವರ್ಣಕಾಣಿಕೆಮಾಂಗ ಘನಸಾರ ಪುಷ್ಪದ ಮೇಲೆ ವಸ್ತ್ರಾಭರಣ ಮೊದ ಲಾಗಿ ಸಮಸ್ತ ಪದಾರ್ಥಂಗಳ ಪ್ರಮಥಗಣಾರಾಧ್ಯಭಕ್ತಮಾಹೇಶ್ವರರ ಮಧ್ಯದಲ್ಲಿಟ್ಟು ಅಷ್ಟಾಂಗಯುಕ್ತರಾಗಿ ಸ್ಪಷ್ಟ ಧೃಢಚಿತ್ತದಿಂದ ಬಹು ಪರಾಕು ಭವರೋಗ ವೈದ್ಯನೇ ಎಂದು ತ್ರಿಕರಣ ಶುದ್ಧತೆಯಿಂದ ಅಭಿವಂದಿಸುವಂಥಾದ್ದೇ ಸ್ವಸ್ತಿಕಾರೋಹಣದೀಕ್ಷೆ ಇಂತುಟೆಂದು ಶ್ರೀಗುರು ನೀಲಕಂಠ ಮೂರ್ತಿ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತ ವೇಶಿ ಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ

## ಕಲಶಾಭಿಷೇಕ ದೀಕ್ಷೆ.

೪೭ ಅಯ್ಯ ಪರಮಸಚ್ಚಿದಾನಂದ ಮಂತ್ರಮೂರ್ತಿ ಜಂಗಮ ದೇವನು ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೊಪ್ಪಿಗೆಯಿಂದ ನಿರಂಜನ ಜಂಗಮಕ್ಕೆ ಉಪರಿ ಸಿಂಹಾಸನವ ಮಾಡಿ ಮೂರ್ತವ ಮಾಡಿದ ಮೇಲೆ ಷಡಕ್ಷರ ಮಂತ್ರ ಸ್ವರೂಪವಾದ ಪೂರ್ವ ಪಶ್ಚಿಮ ಉತ್ತರ ದಕ್ಷಿಣ ಮಧ್ಯ ದಲ್ಲಿ ಮೂರ್ತಗೊಂಡಿರುವ ಈಶಾನ್ಯ ಕಲಶ ಮೊದಲಾಗಿ ಪಂಚಕಲಶಂಗ ಳಿಗೆ ಜಂಗಮದೀಕ್ಷಾ ಪಾದೋದಕವ ತುಂಬಿ ಮಂಟಪ ಷಟ್ ಸಮ್ಮಾ ರ್ಜನೆ ಷಡ್ವಿಧ ವರ್ಣದ ರಂಗವ್ರೋಲೆ ನವಧಾನ್ಯ ನವಸೂತ್ರ ವಿಭೂತಿ ವೀಳ್ಯ ಸುವರ್ಣ ಕಾಣಿಕೆ ಪಂಚ ಮುದ್ರೆ ಅಷ್ಟವಿಧ ಷೋಡಶೋಪ

ಚಾರಂಗಳಿಂದೊಪ್ಪುವ ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯ ಕಲಶಮೂರ್ತಿಗಳ ಪಶ್ಚಿಮ ಭಾಗದಲ್ಲಿ ಜಂಗಮವಾದ ಸೋಂಕುವಂತೆ ಗುರುವು ಮೂರ್ತವ ಮಾಡಿ ಆ ಕಲಶಗಳ ಸೂತ್ರವ ತನ್ನ ಪಾದಕ್ಕೆ ಹಾಕಿ ರನ್ನಚಿನ್ಹೆಳಗಿನ ಮುಂದೆ ಮೂರ್ತಗೊಂಡಿರುವ ಕಲಶಗಳ ಪೂರ್ವ ಭಾಗದಲ್ಲಿ ಕರಿಯ ಕಂಬಳಿಯ ಗದ್ದುಗೆಯ ಮಾಡಿಸಿ ಹಸೆಯ ರಚಿಸಿ, ಆ ಗದ್ದುಗೆಯ ಮೇಲೆ ಶಿಷ್ಯೋತ್ತಮನ ಮೂರ್ತವ ಮಾಡಿಸಿ ಆತನಂಗಕ್ಕೆ ಗುರುಸೂತ್ರವ ಹಾಕಿಸಿ ಶಿಷ್ಯನಂಗದ ಮೇಲೆ ಮೂರ್ತಗೊಂಡಿರುವ ವೀರ ಶಿವಲಿಂಗವ ಗಣಸಾಕ್ಷಿಯಾಗಿ ಶ್ರೀಗುರುದೇವನು ತನ್ನ ಕರಸ್ಥಲದಲ್ಲಿ ಮೂರ್ತವ ಮಾಡಿಸಿ, ಆ ಲಿಂಗದ ಮಸ್ತಕದ ಮೇಲೆ ನಿರಂಜನ ಜಂಗಮದ ಪಾದವಿಡಿಸಿ, ಆ ಪಂಚಕಲಶಂಗಳಲ್ಲಿ ಶೋಭಿಸುವಂಥ ದೇವ ಗಂಗಾಜಲ ಸ್ವರೂಪವಾದ ಗುರುಪಾದೋದಕವನ್ನು ಒಂದು ಪಾತ್ರೆಯಲ್ಲಿ ಆ ಕಲಶಂಗಳೈದರಲ್ಲಿ ತೆಗೆದುಕೊಂಡು ಗುರುವಿನ ದಕ್ಷಿಣ ಭಾಗದಲ್ಲಿ ಮೂರ್ತಗೊಂಡಿರುವ ಪಾದೋದಕ ಕುಂಭದಲ್ಲಿ ಒಂದು ಬಿಂದುವ ತೆಗೆದುಕೊಂಡು ಆ ಪಾತ್ರೆಯಲ್ಲಿ ಹಾಕಿ, ಈ ಆರು ತೆರದ ಅಗ್ರೋದಕಗಳ ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೆಲ್ಲ ಆ ಗುರುವಿನ ಹಸ್ತಕಮಲದಲ್ಲಿರುವಂಥ ಉದಕವನ್ನು ತೆಗೆದುಕೊಂಡು ಆ ಶರಣಸತಿ ಲಿಂಗಪತಿಯಾಗಿ ಒಪ್ಪುವ ಶಿಷ್ಯೋತ್ತಮನ ಮಸ್ತಕದ ಮೇಲೆ ಮಂತ್ರ ಧ್ಯಾನದಿಂದ ಸಂಪ್ರೋಕ್ಷಣೆಯ ಮಾಡುವಂಥಾಪ್ಪೇ ಕಲಶಾಭಿಷೇಕ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ವಿಭೂತಿ ಪಟ್ಟದೀಕ್ಷೆ.

೪೨ ಅಯ್ಯ ಶ್ರೀಗುರುದೇವನು ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೊಡಗೂಡಿ ಪಂಚಾಭಿಷೇಕ ಮೊದಲಾದ ಪಾದೋದಕ ಕಡೆಯಾಗಿ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಇಷ್ಟಲಿಂಗದೇವಂಗೆ ಸಪ್ತವಿಧಾರ್ಚನೆಯ ಮಾಡಿ ತಮ್ಮ ಕುಮಾರ ಮೂರ್ತಿ ಎಂದು ಮಹಾ ಸಂತೋಷದಿಂದ ತೊಡೆಯ ಮೇಲೆ ಮೂರ್ತವ ಮಾಡಿಸಿಕೊಂಡು ಆಮೇಲೆ ಪ್ರಾಣಲಿಂಗಸ್ವರೂಪವಾದ ಉಭಯ ಹಸ್ತವನ್ನು ಸಪ್ತವಿಧಾರ್ಚನೆಯ ಮಾಡಿ ದಶಾಂಗುಲ ಮಧ್ಯದಲ್ಲಿ ದ್ವಾದಶ ಮಾಲಿ ಪ್ರಣ

ಮವ ಲಿಖಿಸಿ ಕುಮಾರರಾವ ಮಾಡಿ, ಆಮೇಲೆ ಭಾವಲಿಂಗ ಸ್ವರೂ
ಪಗೋಳಕಸ್ಥಾನವಾದ ಮಸ್ತಕವನ್ನು ಸಪ್ತವಿಧಾರ್ಚನೆಯ ಮಾಡಿ ದ್ವಾದಶ
ಮಹಾ ಪ್ರಣಮವ ಲಿಖಿಸಿ ಸರ್ವಾಂಗದಲ್ಲಿ ಕ್ರಿಯಾ ಪಾದೋದಕ ಸ್ವರೂಪ
ವಾದ ಚಿದ್ಭಸಿತ ಮಹಾಮಂತ್ರಸ್ಮರಣೆಯಿಂದ ಸ್ನಾನ ಧೂಳನ ಧಾರ
ಣವ ಮಾಡಿ ಲಲಾಟದಲ್ಲಿ ಅನಾದಿ ಪರಶಿವ ಲಿಖಿತವ ಲಿಖಿಸಿ ಸರ್ವಾ
ಚಾರ ಸಂಪನ್ನನಾಗೆಂದು ಆಶೀರ್ವಚನ ನೀಡುವಂಥಾದ್ದೇ ವಿಭೂತಿ
ಪಟ್ಟದೀಕ್ಷೆ ಇಂತಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು
ನಿರ್ಲಜ್ಜಶಾಂತ ಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿ
ರ್ದರು ನೋಡಾ ಸಂಗನಬಸವೇಶ್ವರಾ

## ಲಿಂಗಾಯುತ ದೀಕ್ಷೆ.

೪೯. ಅಯ್ಯ ಪರವೀರಶೈವ ಷಟ್‌ಸ್ಥಲಾಚಾರ್ಯ ಘನಲಿಂಗ
ಚಕ್ರವರ್ತಿಯಪ್ಪ ಶ್ರೀಗುರುಲಿಂಗದೇವರು ತನ್ನ ತೊಡೆಯ ಮೇಲೆ
ಮೂರ್ತಗೊಂಡಿರುವ ಇಷ್ಟಲಿಂಗದೇವಂಗೆ ಪ್ರಾಣಲಿಂಗ ಭಾವಲಿಂಗ
ಸ್ವರೂಪವಾದ ಶರಣನ ಚಿದಂಗವೇ ನಿನಗೆ ನಿಜ ಮೋಕ್ಷಮಂದಿ
ರವೆಂದು ಅರುಹಿದ ಮೇಲೆ ನಿಮಿಷಾರ್ಧವಗಲಿದರೆ ನಮ್ಮ ಪ್ರಮಥ
ಗಣಾಚಾರಕ್ಕೆ ಹೊರಗು ಮಾಡಿ ಭವಕ್ಕೆ ನೂಂಕುವೆವೆಂದು ಪ್ರತಿಜ್ಞ
ಯನಿತ್ತು ಆ ಶರಣನ ಕರಸ್ಥಲಕ್ಕೆ ಪ್ರಾಣ ಕಳಾ ಚೈತನ್ಯ ಮೂರ್ತಿ ಲಿಂಗ
ದೇವನ ಮೂರ್ತವ ಮಾಡಿಸಿ ಆ ಲಿಂಗದೇವಂಗೆ ಪ್ರಮಥಗಣಾರಾಧ್ಯ
ಭಕ್ತ ಮಾಹೇಶ್ವರರೆಲ್ಲ ಅಭಯ ಹಸ್ತವನಿತ್ತು, ಆ ಮೇಲೆ ಚಿದಂಗ ಸ್ವರೂ
ಪವಾದ ಶರಣಂಗೆ ಈ ಲಿಂಗದೇವನ ನಿಮಿಷಾರ್ಧವಗಲಿದರೆ, ನಿನಗೂ
ಅದೇ ಪ್ರತಿಜ್ಞೆ ಬಂದೀತೆಂದು ಆಜ್ಞಾಪನವ ಮಾಡಿ ಹೃದಯ ಕಮಲ
ಮಧ್ಯದಲ್ಲಾಡುವ ಸಹಸ್ರ ಹೆಡೆಯ ಕುಂಡಲಿ ಸರ್ಪಂಗೆ ಮುಸುಕಿರುವ
ಅಜ್ಞಾನ ಮಾಯಾ ಮರವೆಯನ್ನು ಅನಾಹತದ್ವಾರದಿಂದ ಅನಾದಿ ಮೂಲ
ಮಂತ್ರವನುಸುರಿ ಕುಂಡಲಿ ಸರ್ಪನ ಹೆಡೆ ಎತ್ತಿಸಿ ಚಿದಗ್ನಿಯ ಪುಟವ
ಮಾಡುವಂಥಾದ್ದೇ ಲಿಂಗಾಯುತ ದೀಕ್ಷೆ ಇಂತಟೆಂದು ಶ್ರೀಗುರು ನಿಃಕ
ಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತ
ಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಲಿಂಗಸ್ವಾಯತ ದೀಕ್ಷೆ

೫೦ ಅಯ್ಯಾ ಘನ ಮಹಾ ಇಷ್ಟಲಿಂಗವೇ ನಿನ್ನ ನಾದಬಿಂದು ಕಲೆಗಳಿಗೆ ಚೈತನ್ಯ ಸ್ವರೂಪು ನೋಡಾ ಈ ಲಿಂಗದ ವೃತ್ತದಲ್ಲಿ ಸಕಲ ಲೋಕಂಗಳು ಸಕಲ ನಾಮುಗಳು ಅಡಗಿರ್ಪವು ನೋಡಾ ಈ ಲಿಂಗವೇ ನಿನ್ನ ಕರಣ ಕಿರಣ ಚೈತನ್ಯ ಸ್ವರೂಪು ನೋಡಾ ಈ ಲಿಂಗವೇ ಸಂಜೀವನ ಕಾಮಧೇನು ಕಲ್ಪವೃಕ್ಷ ನೋಡಾ ಇಂತು ನಿನ್ನ ಕರಸ್ಥಲದಲ್ಲಿ ರಾಜಿಸುವ ಪರಶಿವಲಿಂಗದೇವಂಗೆ ಜಂಗಮ ಪಾದೋದಕ ಪ್ರಸಾದವೇ ಪರಮ ಚಿದೈಶ್ವರ್ಯ ನೋಡಾ. ಇಂತು ಜಂಗಮಕ್ಕೆ ಭೃತ್ಯಾಚಾರ ಮೂರ್ತಿಲಿಂಗದೇವನ ಒಕ್ಕುಮಿಕ್ಕ ಕರುಣಜಲ ಪ್ರಸಾದವೇ ನಿನಗರ್ಪಿತವಯ್ಯಾ ನಿನ್ನ ಪರಿಣಾಮ ಸಂತೋಷವೇ ಲಿಂಗಾರ್ಪಿತವಯ್ಯಾ ಇಂತಪ್ಪ ಲಿಂಗದೇವನ ನಿನ್ನ ಷಟ್‌ಸ್ಥಾನಂಗಳಲ್ಲಿ ಧರಿಸಿ, ಲಿಂಗವೇ ನಿನಗೆ ಪ್ರಾಣವಾಗಿ ನೀನು ಲಿಂಗಕ್ಕೆ ಪ್ರಾಣವಾಗಿ ಸತ್ಯದಿಂದ ಬಂದ ಪದಾರ್ಥವ ದಾಸೋಹಂ ಭಾವದಿಂದ ಸಮುದ್ರದುಕವ ಸಮುದ್ರಕ್ಕೆ ಅರ್ಪಿಸಿದಂತೆ ಧಾನ್ಯದ ರಾಶಿಯ ಒಳಗಣ ಧಾನ್ಯವ ತಂದು ಪಾಕವ ಮಾಡಿ ಮತ್ತಾ ರಾಶಿಗೆ ಅರ್ಪಿಸಿದಂತೆ ಆ ಲಿಂಗಜಂಗಮ ಪಾದೋದಕ ಪ್ರಸಾದವ ಮತ್ತಾ ಲಿಂಗಜಂಗಮಕ್ಕೆ ಅರ್ಪಿಸಿ ಆ ಲಿಂಗಜಂಗಮದ ಪರಿಣಾಮ ಪ್ರಸಾದದಲ್ಲಿ ನಿತ್ಯತೃಪ್ತನಾಗಿರುವಂಥಾದ್ದೇ ಲಿಂಗಸ್ವಾಯತ ದೀಕ್ಷೆ ಇಂತುಟೆಂದು, ಶ್ರೀಗುರು ನೀಲಕಂಠ ಚನ್ನಬಸವರಾಜೇಂದ್ರನು ನಿರ್ಲಜ್ಜಶಾಂತಲಿಂಗದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

ಇಂತು ಅನಾದಿ ಪರಶಿವಲಿಂಗವೇ ಪಾವನಾರ್ಥವಾಗಿ ದೀಕ್ಷಾಗುರು ಲೀಲೆಯ ಧರಿಸಿ ಜ್ಞಾನೋದಯವಾಗಿ ಅಡಿಗೆರಗಿ ಬಂದ ಶಿಷ್ಯೋತ್ತಮಂಗೆ ದಯಾನಂದ ಕರುಣ ಹುಟ್ಟಿ ಆತನ ಸ್ಥೂಲತನುವಿಗೆ ಇಷ್ಟಲಿಂಗ ಸಂಬಂಧವ ಮಾಡಿ, ಎಲೆ ಶಿಷ್ಯೋತ್ತಮನೇ ನಿನ್ನ ಸರ್ವಾಂಗವೆಲ್ಲ ಶುದ್ಧಪ್ರಸಾದವಾದ ಚಿಹ್ನವಮಯವೆಂದು ಅರುಪುವಂಥಾದ್ದೇ ಕ್ರಿಯಾದೀಕ್ಷೆ ನೋಡಾ ಇಂತು ಕ್ರಿಯಾದೀಕ್ಷೆಯಾದ ಮೇಲೆ, ಆ ದೀಕ್ಷಾಗುರುವೇ ಶಿಕ್ಷಾಗುರು ಲೀಲೆಯ ಧರಿಸಿ, ಆ ಕ್ರಿಯಾದೀಕ್ಷೆಯಿಂದ ಶಿಷ್ಯೋತ್ತಮಂಗೆ ಉಪದೇಶವ ಕರುಣಿಸುವ ಭೇದವೆಂತೆಂದೊಡೆ,

# ಮಂತ್ರದೀಕ್ಷೆ

## ಸಮಯದೀಕ್ಷೆ.

೫೧. ಏನಯ್ಯ ಬಸವ ಮೊದಲಾದ ಪ್ರಮಥಗಣಾರಾಧ್ಯರ ಸನ್ಮಾರ್ಗಾಚಾರಕ್ಕೆ ಧೃಡಚಿತ್ತದಿಂದ ನಿಂದು ನಿರಾಭಾರಿ ವೀರಶೈವ ಷಟ್ಸ್ಥಲ ಮಾರ್ಗದಲ್ಲಿ ಆಚರಿಸುವ ಶರಣಗಣಂಗಳಲ್ಲಿ ಪಂಚ ಸೂತಕಂಗಳ ಕಲ್ಪಿಸದ, ಭೃತ್ಯಾಚಾರ ಮುಂದುಗೊಂಡು ಅವರೊಕ್ಕುಮಿಕ್ಕುದ ಹಾರೈಸಿ, ನಿಜಭಕ್ತಿಯಲ್ಲಿ ನಿಂದು ಸನ್ಮಾರ್ಗಾಚಾರಕ್ಕೆ ಬಾರದಂಥ ಗುರುಚರ ಭಕ್ತಗಣ ಬಂಧುಬಳಕ ತಂದತಾಯಿ ಪುತ್ರಮಿತ್ರ ಕಳತ್ರ ಶಿಷ್ಯ ಮೊದಲಾಗಿ ತೃಣಕ್ಕೆ ಸಮಮಾಡಿ ತ್ಯಜಿಸಿ ಮನದ ಮಧ್ಯದಲ್ಲಿ ಹುಟ್ಟಿದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳ ಬಲಿಗೆ ಶಿಲ್ಕದೆ ತ್ರಿಕರಣ ಪವಿತ್ರತೆಯಿಂದ ಅಷ್ಟಾವರಣವ ಸ್ತೋತ್ರವ ಮಾಡುವಂಥಾದ್ದೇ ಸಮಯದೀಕ್ಷೆ ಇಂತೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ನಿಸ್ಸಂಸಾರ ದೀಕ್ಷೆ.

೫೨ ಅಯ್ಯ ನಿನ್ನ ಸ್ವಾತ್ಮ ಜ್ಞಾನದಿಂದ ಕೃತಿಗುರು ಸ್ವಾನುಭಾವವಿಡಿದು ನಿನ್ನ ತನು ಮನ ಕರಣ ಇಂದ್ರಿಯಂಗಳ ಪರಿಪಕ್ವಮಾಡಿ ಆ ತನುಮನ ಇಂದ್ರಿಯಂಗಳಾಶ್ರಯಿಸಿದ ಅರ್ಥ ಪ್ರಾಣಾಭಿಮಾನಂಗಳ ಶ್ರೀಗುರುಲಿಂಗ ಜಂಗಮ ಭಕ್ತಮಹೇಶ್ವರ ಶರಣ ಗಣಂಗಳಿಗರ್ಪಿತವ ಮಾಡಿ ನಿರ್ವಂಚಕ ಬುದ್ಧಿ ಮುಂದುಗೊಂಡು, ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂದ ಇಷ್ಟಲಿಂಗತೃಪ್ತಿಯ ಮಾಡಿ ಮಂತ್ರಧ್ಯಾನ ಜಪ ಸ್ತೋತ್ರಂಗಳಿಂದ ಪ್ರಾಣಲಿಂಗ ತೃಪ್ತಿಯ ಮಾಡಿ ಮನೋರ್ಲಯ ನಿರಂಜನ ಕ್ರಿಯೆಗಳಿಂದ ಭಾವಲಿಂಗ ತೃಪ್ತಿಯ ಮಾಡಿ ಗುರುಲಿಂಗ ಜಂಗಮ ಪಾದೋದಕ ಪ್ರಸಾದದಿಂದ ಮತ್ತಾ ಗುರುಲಿಂಗ ಜಂಗಮ ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯ ಮೊದಲಾದ ಮಹಾಪ್ರಮಥಗಣಂಗಳ ತೃಪ್ತಿಯ ಮಾಡಿ ತನಗೊಂದಾಶ್ರಯಂಗಳಿಲ್ಲದೆ ಚಿಪ್ಘನ ಮಹಾಲಿಂಗದಲ್ಲಿ ಅವಿರಳಾನಂದದಿಂದ ಕೂಟಸ್ಥನಾಗಿರುವಂಥಾದ್ದೇ ನಿಃಸಂಸಾರ ದೀಕ್ಷೆ

ಇಂತಪ್ಪಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ನಿರ್ವಾಣದೀಕ್ಷೆ.

೫೩ ಅಯ್ಯಾ, ಮರ್ತ್ಯದ ಮಧ್ಯದಲ್ಲಿ ಶ್ರೀಗುರು ಕರಜಾತನಾದ ಮೇಲೆ ಹೊನ್ನು ಹೆಣ್ಣು, ಮಣ್ಣು, ಅನ್ನ, ನೀರು, ವಸ್ತ್ರ, ಆಭರಣ, ವಾಹನ, ಪುತ್ರ, ಮಿತ್ರ, ದಾರಿದ್ರ್ಯ, ಚಿಂತೆ, ಶತೃತ್ವಂಗಳ ಸಮಾನಂಗಂಡು ಲಿಂಗಾಣತಿಯಿಂದ ಉಪವಾಸ ತೃಪ್ತಿಗಳು ಬಂದು ತಟ್ಟಿದಲ್ಲಿ ಸಂತೃಪ್ತ ನಾಗಿ ಆಧಿವ್ಯಾಧಿಗಳು ಬಂದು ತಟ್ಟಿದಲ್ಲಿ ಪಾದೋದಕ ಪ್ರಸಾದದಲ್ಲಿ ಕೂಡಿಸಿ ಸಮಭಾಜನವ ಮಾಡಿ ಅಂಗಭೋಗೋಪಭೋಗಿಯಾಗಿ ಅವಿ ರಳಾನಂದದಿಂದ ಹಿಂದಣ ಪಾಪ ಮುಂದಣ ಪುಣ್ಯಗಳಿಗೆ ಹೊರಗಾಗಿ ಅವನು ತನ್ನೊಳಗು ಮಾಡಿಕೊಂಡು ಮನಬಯಕೆಯು ನೀಗಿ ಕಾಲಹರ ಕರ್ಮಹರ ದುರಿತಹರ ಪಾಪಹರ ಲೀಲೆಯಿಂದ ಮರ್ತ್ಯದಲ್ಲಿರ್ದು ಇಲ್ಲ ದಂತೆ ಸಚ್ಚಿದಾನಂದನಾಗಿ ಆಚರಿಸುವಂತಹ ನಿಜನೈಷ್ಠೆಯೇ ನಿರ್ವಾಣ ದೀಕ್ಷೆ ಇಂತಪ್ಪಟೆಂದು ಶ್ರೀಗುರು ನಿಃಕಳಂಕ ಪರಮಾನಂದ ಮೂರ್ತಿ ಚಿಕ್ಕದಂಡನಾಥ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿ ಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸ ವೇಶ್ವರಾ

## ತತ್ವದೀಕ್ಷೆ.

೫೪ ಅಯ್ಯಾ, ಒಂದು ಅನಾದಿ ಮೂಲ ಪ್ರಣವವೇ ಸಾಕಾರ ಲೀಲೆಯ ಧರಿಸಿ ಚಿದಂಗ ಚಿದ್ಘನಲಿಂಗವಾಗಿ ಒಂದಂಗ ಲಿಂಗವೇ ತ್ರಿವಿ ಧಾಂಗ ತ್ರಿವಿಧ ಲಿಂಗವಾಗಿ, ಆ ತ್ರಿವಿಧಾಂಗ ಲಿಂಗಾಂಗವೇ ಷಡ್ವಿಧ ಲಿಂಗವಾಗಿ ಆ ಷಡ್ವಿಧ ಲಿಂಗಾಂಗವೇ ಮೂವತ್ತಾರು ಲಿಂಗಾಂ ಗವಾಗಿ, ಆ ಮೂವತ್ತಾರು ಲಿಂಗಾಂಗಗಳನೇ ಶ್ರದ್ಧಾದಿ ಮೂವತ್ತಾರು ಭಕ್ತಿಗಳಲ್ಲಿ ಕೂಟವ ಮಾಡಿ ಇಂತು ಲಿಂಗಾಂಗ ಭಕ್ತಿಗಳಿಗೆ ಸತ್ಕ್ರಿಯಾ, ಸಮ್ಯಜ್ಞಾನ, ಸತ್ಕಾಯಕ, ಸತ್ಪಾತ್ರ ಭಿಕ್ಷದಲ್ಲಿ ಸಮರಸ ಮಾಡಿ, ಆ ಮಹಾಜ್ಞಾನವ ಸಾಧಿಸಿ ಆ ಮಹಾಜ್ಞಾನದ ಬಲದಿಂದ ಪೃಥ್ವೀ ತತ್ವ ಸಂಬಂಧವಾದ ಕರ್ಮೇಂದ್ರಿಯಂಗಳು, ಅಪ್ಪು ತತ್ವ ಸಂಬಂಧವಾದ ಜ್ಞಾನೇಂದ್ರಿಯಂಗಳು, ಅಗ್ನಿತತ್ವ ಸಂಬಂಧವಾದ ವಿಷಯೇಂದ್ರಿಯಂಗಳು,

ವಾಯುತತ್ವ ಸಂಬಂಧವಾದ ಪ್ರಾಣವಾಯುಗಳು ಭಾನುತತ್ವ ಸಂಬಂಧ
ವಾದ ಉದರವೆಂಬ ಭೂತಗಳು, ಶಿವತತ್ವ ಸಂಬಂಧವಾದ ಶ್ವೇತವರ್ಣ
ಮೊದಲಾದ ವರ್ಣಂಗಳು, ಆತ್ಮತತ್ವ ಸಂಬಂಧವಾದ ಸಮಸ್ತನಾದಗಳು,
ಇಂತುಸಮಸ್ತ ತತ್ವಂಗಳು ಕೂಡಲಾಗಿ ನಾಲ್ವತ್ತು ತತ್ವವೆನಿಸುವವು ಈ
ತತ್ವಂಗಳ ಶಿವತತ್ವ, ಅನಾದಿ ಶಿವತತ್ವ, ನಿಃಕಲಪರಶಿವತತ್ವ, ಅನಾದಿ
ನಿಃಕಲ ಪರಾತ್ಪರ ಶಿವತತ್ವವೆಂಬ ಚತುರ್ವಿಧ ತತ್ವಸ್ವರೂಪ ಗುರುಲಿಂಗ
ಜಂಗಮವ ಕೂಡಿಸಿ ಆ ಮಹಾಜ್ಞಾನದಿಂದ ನೋಡಿದಲ್ಲಿ ೪೪ ತತ್ವ ಸ್ವರೂಪಿ
ನಿಂದ ಒಂದು ಚಿದಂಗವೆನಿಸುವುದಯ್ಯ ಆ ಚಿದಂಗ ಷಟ್‌ಚಕ್ರಂಗಳಲ್ಲಿ
ಶ್ರೀಗುರುಲಿಂಗ ಜಂಗಮ ಕೃಪೆಯಿಂದ ಮೂರ್ತಿಗೊಂಡಿರುವ ೫೩ ಪ್ರಣ
ವಂಗಳೇ ಸಾಕಾರ ಲೀಲೆಯ ಧರಿಸಿ ನಾನಾಕೃತಿ ಸಂಬಂಧವಾದ ಅನಾದಿ
ಮೂಲಪ್ರಣವವ ಕೂಡಿ ಏಕ ಸ್ವರೂಪಿನಿಂದ ೫೭ ಲಿಂಗಸ್ವರೂಪ ಪ್ರಣ
ವವನೊಳಕೊಂಡು ಒಂದು ಚಿದ್ಘನ ಲಿಂಗವೆನಿಸುವುದಯ್ಯ. ಇಂತು
ಅಂಗಲಿಂಗವೆಂಬ ನೂರೊಂದುಸ್ಥಲ ಕುಲಂಗಳ ವಿಚಾರಿಸಿ ಶರಣರೂಪಿಂದ
ತನ್ನಾದಿ ಮಧ್ಯಾವಸಾನವನು ತಿಳಿದು, ಕರ್ತೃ ಭೃತ್ಯತ್ವವ ವಿಚಾರವ
ರಿದು ದ್ವಾದಶಾಚಾರದ ಮರ್ಮವನರಿದು ಕರ್ತೃಭೃತ್ಯತ್ವ ಆಚಾರ
ಸದ್ಭಕ್ತಿ ಎಂಬ ನಿಜ ಸಮಾಧಿಯಲ್ಲಿ ನಿರವಯಲ ಕೂಡುವಂಥಾದ್ದೇ
ತತ್ವದೀಕ್ಷೆ ಇಂತೆಂಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು
ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು
ನೋಡಾ ಸಂಗನಬಸವೇಶ್ವರಾ

## ಅಧ್ಯಾತ್ಮದೀಕ್ಷೆ

೫೫ ಅಯ್ಯ, ನಿನ್ನ ಷಟ್‌ಚಕ್ರಂಗಳಲ್ಲಿ ಅನಾದಿ ನಿಃಕಳಂಕ
ಚಿದ್ಘನ ಇಷ್ಟಮಹಾಲಿಂಗವೇ ಷಡ್ವಿಧಲಿಂಗವಾಗಿ ನೆಲಸಿರ್ಪರು ನೋಡಾ
ಅದೆಂತೆಂದೊಡೆ, ಆಧಾರಚಕ್ರ ನಾಲ್ಕೆಸಳ ಮಧ್ಯದಲ್ಲಿ ನಕಾರ ಮಂತ್ರ
ಮೂರ್ತಿ ಆಚಾರಲಿಂಗವಾಗಿ ನೆಲಸಿರ್ಪರು ನೋಡಾ ಸ್ವಾಧಿಷ್ಠಾನ
ಚಕ್ರ ಆರೆಸಳ ಮಧ್ಯದಲ್ಲಿ ಮಕಾರ ಮಂತ್ರ ಮೂರ್ತಿ ಗುರುಲಿಂಗ
ವಾಗಿ ನೆಲಸಿರ್ಪರು ನೋಡಾ ಮಣಿಪೂರಕ ಚಕ್ರದ ಹತ್ತೆಸಳ ಮಧ್ಯ
ದಲ್ಲಿ ಶಿಕಾರ ಮಂತ್ರ ಮೂರ್ತಿ ಶಿವಲಿಂಗವಾಗಿ ನೆಲಸಿರ್ಪರು ನೋಡಾ
ಅನಾಹತ ಚಕ್ರದಲ್ಲಿ ಹನ್ನೆರಡೆಸಳಿನ ಮಧ್ಯವಲ್ಲಿ ವಕಾರಮಂತ್ರ ಮೂರ್ತಿ
ಚರಲಿಂಗವಾಗಿ ನೆಲಸಿರ್ಪರು ನೋಡಾ ವಿಶುದ್ಧಿ ಚಕ್ರ ಹದಿನಾರೆಸಳ

ಮಧ್ಯದಲ್ಲಿ ಯಕಾರ ಮಂತ್ರ ಮೂರ್ತಿ ಪ್ರಸಾದಲಿಂಗವಾಗಿ ನೆಲಸಿರ್ಪರು ನೋಡಾ ಆಜ್ಞಾ ಚಕ್ರದ ಎರಡೆಸಳ ಮಧ್ಯದಲ್ಲಿ ಓಂಕಾರಮಂತ್ರ ಮೂರ್ತಿ ಮಹಾಲಿಂಗವಾಗಿ ನೆಲಸಿರ್ಪರು ನೋಡಾ ಇಂತು ನಿನ್ನ ಷಟ್‌ಚಕ್ರ ಮಧ್ಯಂಗಳಲ್ಲಿ ನೆಲಸಿ ನಿನ್ನ ಷಡ್ವಿಧಯೋಗಂಗಳ ಕೈಕೊಂಡು ಆ ಪರಿಣಾಮವ ನಿನಗೆ ಸಂತೃಪ್ತಿಯ ಮಾಡಿ ಶರಣಪತಿ ಲಿಂಗಪತಿ ಭಾವದಿಂದೆ ಮೇಲುಗಿರಿ ಮಂಟಪದ ನವರತ್ನಖಚಿತ ಸಹಸ್ರದಳ ಪದ್ಮ ಯುಕ್ತವಾದ ಪರ್ಯಂಕದ ಮೇಲೆ ಲಿಂಗಾನುಭಾವ ರತಿಸುಖಾನಂದದಿಂ ಶೋಭಿಸುವಂಥಾದ್ದೇ ಅಧ್ಯಾತ್ಮದೀಕ್ಷೆ ಇಂತೆಂಬುದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಅನುಗ್ರಹದೀಕ್ಷೆ

೫೭ ಅಯ್ಯ ನಿನ್ನ ಚಿದಂಗದ ಷಟ್‌ಸ್ಥಾನಂಗಳಲ್ಲಿ ೨೫ ತತ್ವ ಗಳಡಗಿರ್ಪವಯ್ಯ ಚಿದ್ಘನಲಿಂಗದ ಷಟ್‌ಸ್ಥಾನಂಗಳಲ್ಲಿ ೧೮ ತತ್ವಂಗಳ ಡಗಿರ್ಪವಯ್ಯ ಆ ಚಿದಂಗ ಚಿದ್ಘನಲಿಂಗದ ಮಧ್ಯದಲ್ಲಿ ಬೆಳಗುವ ಅಖಂಡ ಜ್ಯೋತಿ ಪ್ರಣವದ ಷಟ್‌ಸ್ಥಾನದಲ್ಲಿ ಅಷ್ಟವಿಧ ತತ್ವಂಗಳಡಗಿರ್ಪವಯ್ಯ ಆ ತತ್ವಂಗಳ ವಿಭಾಗವೆಂತೆಂದರೆ, ಪೃಥ್ವಿತತ್ವ ೨೫, ಅಪ್ಪುತತ್ವ ೨೦, ಅಗ್ನಿತತ್ವ ೧೫, ವಾಯುತತ್ವ ೧೦, ಆಕಾಶತತ್ವ ೫ ಇಂತು ೭೫ ತತ್ವಂ ಗಳು ಆತ್ಮತತ್ವ ಒಂದರಲ್ಲಿ ಅಡಗಿ, ಇಂಥ ಅನಂತಾನಂತಾತ್ಮರು ಔದುಂ ಬರ ವೃಕ್ಷಕ್ಕೆ ಫಲ ತೊಂತಿದೋಪಾದಿಯಲ್ಲಿ ಆ ಚಿದಂಗಕ್ಕೆ ಅನಂತಾತ್ಮ ತತ್ವಂಗಳು ತೊಂತಿಕೊಂಡಿರ್ಪವು ನೋಡಾ ಅಂಥ ಚಿದಂಗವು ಪ್ರಣವ ರೂಪಿನಿಂದ ಚಿದ್ಘನಲಿಂಗವನಾಶ್ರಯಿಸಿರ್ಪರು ನೋಡಾ ಆ ಚಿದ್ಘನ ಲಿಂಗವು ಅಷ್ಟವಿಧಸಕೀಲಗಳಿಂದ ಅಖಂಡ ಮಹಾಜ್ಯೋತಿ ಪ್ರಣ ವವನಾಶ್ರಯಿಸಿರ್ಪುದು ನೋಡಾ ಇಂತು ನೂರೊಂದು ಸಕೀಲಂಗಳ ತತ್ವದ ರೂಪಿನಿಂದ ತಿಳಿದು, ಇಂತು ಅಂಗ ಲಿಂಗ ಸಂಗದಲ್ಲಿ ಅಡಗಿ ರುವ ನೂರೊಂದು ಸಕೀಲಂಗಳ ನೂರೊಂದು ಸ್ಥಲದಲ್ಲಿ ನೆಲೆಗೊಳಿಸಿ ಪರತತ್ವ ಲಿಂಗಲೀಲೆಯಿಂದ ನಿಂದ ನಿಲುಕಡೆಯೆ ಅನುಗ್ರಹ ದೀಕ್ಷೆ ಇಂತೆಂ ಬುದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತ ಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಸತ್ಯಶುದ್ಧದೀಕ್ಷೆ

೫೭ ಅಯ್ಯಾ ಸತ್ಯ ಚಿತ್ತಾನಂದ ನಿತ್ಯಪರಿಪೂರ್ಣವೆಂಬ ಪಂಚಾಂಗವನಂಗೀಕರಿಸಿಕೊಂಡಿರುತ್ತಿಹ ಪರಬ್ರಹ್ಮದಲ್ಲಿ ಸಮರಸ ಸಂಗದಿಂದ ಕೂಟವ ಮಾಡಿ ಅಪಿರಳ ಪರಂಜ್ಯೋತಿ ಸ್ವರೂಪ ಶರಣನ ನಿಲುಕಡೆ ಎಂತೆಂದೊಡೆ, ಅಣುಮಾತ್ರ ಸತ್ಯ ನಡೆನುಡಿ ತೊಲಗನಯ್ಯಾ ದೃಢ ಚಿತ್ತದಿಂದ ಕೊಟ್ಟ ಭಾಷೆಗಳ ಬಿಡನು ಮನದ ಸಂಗವ ಮಾಡಿ ಹುಸಿನುಡಿಯ ನುಡಿಯನಯ್ಯಾ ನಿಜ ನೈಷ್ಠಾ ಪರತ್ವದಿಂದ ಸತ್ಕಾಯಕ, ಸತ್ಪಾತ್ರಭಕ್ತಿ, ಸತ್ಕ್ರಿಯೆ ಜ್ಞಾನಾಚಾರಂಗಳ ಅವರಂತರದಲ್ಲಿ ನಿಂದೆ ಕುಂದು ದರಿದ್ರ ರೋಗ ರುಜೆ ವಿಪತ್ತು ಹಾಸ್ಯರೋಷಂಗಳು ಬಂದು ತಟ್ಟಿದಲ್ಲಿ ಶ್ರೀಗುರುಲಿಂಗ ಜಂಗಮದ ಕರುಣಾಕಟಾಕ್ಷೆಯಿಂದ ಬಂದ ಮಹಾಪ್ರಸಾದವೆಂದು ಲಿಂಗಭೋಗಿಯಾಗಿರುವನಲ್ಲದೆ ಶೈವ ಜಡಕರ್ಮ ಭೂತಪ್ರಾಣಿಗಳಂತೆ ಸತ್ಕಾಯಕ ಸತ್ಪಾತ್ರಭಕ್ತಿ ಸತ್ಕ್ರಿಯೆ ಜ್ಞಾನಾಚಾರಂಗಳ ನಿಮಿಷಾರ್ಧವಗಲುವನಲ್ಲ ನೋಡಾ ಕುಲಛಲಕ್ಕಾದೊಡೆ ಶಿವಶರಣರಲ್ಲಿ ಜಾತಿಸೂತಕವ ಬಳಸದೆ ದುಷ್ಟಕಾಯಕ ಅಪಾತ್ರಭಕ್ತಿ ಅಕ್ರಿಯಾಜ್ಞಾನ ಅನಾಚಾರಂಗಳನನುಕರಿಸಿ ಉದರಪೋಷಣಕ್ಕೆ ಲಾಂಛನದಿಚ್ಛೆಗೆ ನುಡಿದು ಸಮಪಙ್ತಿಯ ಮಾಡದೆ ಪರಮಾನಂದ ಸುಖಾಬ್ಧಿಯಲ್ಲಿ ಮುಳುಗಿ ಅಷ್ಟಾವಧಾನ ಎಚ್ಚರಗುಂದದೆ ಮನ ಪ್ರಾಣ ಲಿಂಗವಾದುದೀಗ ಸತ್ಯಶುದ್ಧದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

ಅಯ್ಯಾ, ಇಂತು ಶಿಕ್ಷಾ ಗುರುದೇವನು ಅನಾದಿ ಶಿಷ್ಯೋತ್ತಮನ ಸೂಕ್ಷ್ಮತನುವಿನಲ್ಲಿ ಓಂ ಪ್ರಣವ ಸ್ವರೂಪವಾದ ಪ್ರಾಣಲಿಂಗವ ಸಂಬಂಧಿಸಿ ಆ ಪ್ರಾಣಲಿಂಗಕ್ಕೆ ಹರಣಕಿರಣ ಚೈತನ್ಯ ಸ್ವರೂಪ ನಿಃಕಳಂಕ ಜಂಗಮವ ತೋರಿ ಆ ಜಂಗಮದ ಚರಣಸೋಂಕಿನಿಂ ಪವಿತ್ರವಾದ ಕ್ರಿಯಾಭಸಿತ ರುದ್ರಾಕ್ಷಿ ಮಹಾಮಂತ್ರಂಗಳನರುಹಿ, ದಶವಿಧಪಾದೋದಕ, ಏಕಾದಶ ಪ್ರಸಾದವ ಕರುಣಿಸಿ, ಎಲೋ ಶಿಷ್ಯೋತ್ತಮನೇ ನಿನ್ನ ಮನಮೊದಲಾದ ಕರಣಂಗಳೆಲ್ಲ ಸಿದ್ಧಪ್ರಸಾದವಾದ ಪ್ರಾಣಲಿಂಗಮಯವಾದುದೆಂದು ಅರುಪುವಂಥಾದ್ದೇ ಕ್ರಿಯಾದೀಕ್ಷೆಯ ಪಡೆದ ಚಿದಂಗ ಚಿದ್ಘನ ಇಷ್ಟಮಹಾಲಿಂಗದೊಳಗಣ ಚಿತ್ಪ್ರಾಣಾಂಗ, ಚಿತ್ಪ್ರಾಣ ಲಿಂಗಕ್ಕೆ ಮಂತ್ರ

ದೀಕ್ಷೆ ಇಂತುಟು ನೋಡಾ ಇಂತು ಕ್ರಿಯಾದೀಕ್ಷೆ ಮಂತ್ರದೀಕ್ಷೆ ತೀರಿದ ಮೇಲೆ ಆ ದೀಕ್ಷಾಗುರು ಶಿಕ್ಷಾಗುರುವೇ ಜ್ಞಾನಗುರುತ್ವದ ಲೀಲೆಯು ಧರಿಸಿ ಮತ್ತು ಶಿಷ್ಯೋತ್ತಮಂಗೆ ಉಪದೇಶವ ಕರುಣಿಸುವ ಭೇದವೆಂತೆಂದೊಡೆ:-

---

## ವೇಧಾದೀಕ್ಷೆ.

### ಏಕಾಗ್ರಚಿತ್ತದೀಕ್ಷೆ.

೫೮ ಪರಮಪತಿವ್ರತೆ ಹರಗಣ ಸಾಕ್ಷಿಯಾಗಿ ಕಂಕಣವ ಕಟ್ಟಿದ ಪುರುಷಂಗೆ ತನ್ನ ತನುಮನವ ಮೀಸಲು ಮಾಡಿ ತನ್ನ ಪಿತಮಾತೆ ಬಂಧುಬಳಗ ಒಡಹುಟ್ಟಿದವರು ಮೊದಲಾಗಿ ಪರಶಿವಲಿಂಗ ಜಂಗಮ ತೀರ್ಥಪ್ರಸಾದ ಪುತ್ರಮಿತ್ರರ ಸಂಗವ ಸೋಂಕದೆ ಅವರೊಡವೆಗಿಚ್ಛೈಸಿ ನಡೆನುಡಿಗಳಾಲಿಸದ ತನ್ನ ರಮಣನ ದ್ರವ್ಯಾಭರಣವ ಹಾರೈಸಿ ಆತನು ನುಡಿದ ನುಡಿಯೇ ಮಹಾಪ್ರಸಾದವೆಂದು ಪ್ರತಿನುಡಿಯ ನುಡಿಯದೆ ಸರ್ವಾವಸ್ಥೆಯಲ್ಲಿ ಆ ರಮಣನ ರತಿ ಸಂಯೋಗಾನುಸಂಧಾನದಿಂದ ಎರಡಳಿದಿರುವ ಸತ್ಯಾಂಗನೆಯಂತೆ ಶ್ರೀಗುರುವಿನ ಕರಗರ್ಭ ಮಧ್ಯದಲ್ಲಿ ಜನಿತವಾದ ಲಿಂಗಭಕ್ತಿ ಸತಿ ಸುತ ಪಿತ ಮಾತೆ ಬಂಧುಬಳಗ ಒಡ ಹುಟ್ಟಿದವರು ಮೊದಲಾಗಿ ಪರಶಿವಲಿಂಗ ಜಂಗಮತೀರ್ಥ ಪ್ರಸಾದ ಮಂತ್ರದಲ್ಲಿ ಮನಮುಳುಗಿ ಲೋಕದ ಶೈವ ಮಾರ್ಗಗಳಂತೆ ಹಲವು ಕ್ಷೇತ್ರ ಹಲವು ತೀರ್ಥ ಹಲವು ನೇಮ ವ್ರತಂಗಳಿಗೆ ಅಡಿ ಇಡದೆ ಕಾಯಕ ವಾಚಕ ಮಾನಸ ಮೊದಲಾದ ಸಮಸ್ತ ತತ್ವಂಗಳ ಸ್ವಪಾ ಕವ ಮಾಡಿ ನಿಃಕಳಂಕ ಪರಶಿವಲಿಂಗ ಜಂಗಮಕ್ಕೆ ಸಮರ್ಪಿಸಿ ಅವ ರೊಕ್ಕು ಮಿಕ್ಕ ಹರ್ಷಾನಂದ ಮಹಾಪ್ರಸಾದದಲ್ಲಿ ಸಂತೃಪ್ತನಾಗಿ ಇಷ್ಟ ಲಿಂಗ ಬಾಹ್ಯವಾದ ಜಡಶೈವ ನಡೆನುಡಿಗಳಾಲಿಸದಿರ್ಪುದೇ ಏಕಾಗ್ರ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

### ದೃಢವ್ರತ ದೀಕ್ಷೆ

೫೯ ಅಯ್ಯಾ, ಸತ್ಯ ಸದಾಚಾರ ಲಿಂಗವ ಧರಿಸಿದ ಲಿಂಗಭಕ್ತಂಗೆ ದೀಕ್ಷಾ ಗುರುವೇ ಕುಲದೈವ, ಶಿಕ್ಷಾಗುರುವೇ ಮನೆದೈವ, ಜ್ಞಾನ

ಗುರುವೇ ಮನ ಮಧ್ಯದಲ್ಲಿ ಬೆಳಗುವ ಪರಂಜ್ಯೋತಿರ್ಲಿಂಗವೆಂದು ಕುಲ ತುಂಬಿ ಮನೆ ತುಂಬಿ ಮನ ತುಂಬಿ ಮತ್ತೊಂದು ಇತರ ವಾದಿಗಳಂತೆ ಅನ್ಯಾರ್ಚನೆ ಅನ್ಯಶಾಸ್ತ್ರ ಅನ್ಯಮಂತ್ರ ಅನ್ಯಪಾಕವ ಮುಟ್ಟದೆ ಸ್ವಪಾಕವ ಮಾಡಿ ಹರಗಣ ಗುರು ಚರಪದಕ್ಕೆ ಸಮರ್ಪಿಸಿ ಬಂದ ಬರವ ನಿಂದ ನಿಲುಕಡೆಯು ತಿಳಿದು ತನುವೆಲ್ಲ ದೀಕ್ಷಾಗುರುವಿನ ದೀಕ್ಷಾ ಪಾದೋದಕ ಶುದ್ಧ ಪ್ರಸಾದವೆಂದರಿದ ನಿಜವೇ ಆದಿ ಪ್ರಸಾದಿಸ್ಥಲ ನೋಡಾ. ಮನವೆಲ್ಲ ಶಿಕ್ಷಾಗುರುವಿನ ಶಿಕ್ಷಾಪಾದೋದಕ ಸಿದ್ಧಪ್ರಸಾದವೆಂದರಿದ ನಿಜವೇ ಅಂತ್ಯ ಪ್ರಸಾದಿ ನೋಡಾ ಭಾವವೆಲ್ಲ ಜ್ಞಾನ ಗುರುವಿನ ಜ್ಞಾನ ಪಾದೋದಕ ಪ್ರಸಿದ್ಧ ಪ್ರಸಾದವೆಂದರಿದ ನಿಜನೈಷ್ಠೆಯೇ ಸೇವ್ಯ ಪ್ರಸಾದಿ ನೋಡಾ ಇಂತು ದೀಕ್ಷಾ ಗುರು ಶಿಕ್ಷಾಗುರು ಜ್ಞಾನಗುರು ಸ್ವರೂಪವಾದ ಲಿಂಗಜಂಗಮದ ಪಾದೋದಕ ಪ್ರಸಾದ ಒದವಿದಲ್ಲಿ ಆಚರಣೆ ಸಾಮಾನ್ಯದಲ್ಲಿ ಸಂಬಂಧವಿಟ್ಟುಕೊಂಡು ಕೊಟ್ಟು ಕೊಳಬಲ್ಲಾತನೇ ನಿಚ್ಚ ಪ್ರಸಾದಿಯಯ್ಯ ಲಿಂಗಜಂಗಮದ ಪ್ರಸನ್ನ ಪಾದೋದಕ ಪ್ರಸಾದವನುಳಿದು ಜಂಗಮಲಿಂಗದ ಪ್ರಸನ್ನ ಪಾದೋದಕ ಪ್ರಸಾದವ ದಿವಾರಾತ್ರಿಗಳೆನ್ನದೆ ಆಚರಣೆಯೇ ಪ್ರಾಣವಾಗಿ ಕೊಟ್ಟು ಕೊಳಬಲ್ಲಾತನೇ ಅಚ್ಚ ಪ್ರಸಾದಿಯಯ್ಯ ಇವರಿಬ್ಬರಲ್ಲಿ ಅತಿ ಭೃತ್ಯನಾಗಿ ಇವರಿಬ್ಬರಾಚರಣೆಯಲ್ಲಿ ದೃಢಚಿತ್ತದಿಂದ ಕೊಟ್ಟು ಕೊಳಬಲ್ಲಾತನೆ ಸಮಯ ಪ್ರಸಾದಿ ನೋಡಾ ಇಂತು ಸರ್ವಾಚಾರ ಸಂಪತ್ತಿನಾಚರಣೆಯ ಸಾಕಾರ ಲೀಲೆ ಅರ್ಪಿತಾವಧಾನ ಚೇತನ ಪರಿಯಂತರವು ಆಚರಿಸುವಂಥಾದ್ದೇ ದೃಢವ್ರತ ದೀಕ್ಷೆ ಇಂತೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಪಂಚೇಂದ್ರಿಯಾರ್ಪಿತ ದೀಕ್ಷೆ

೬೦ ಅಯ್ಯಾ, ಶರಣಸತಿ ಲಿಂಗಪತಿ ಭಾವದಿಂದ ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ ಸದ್ಭಾವ ನಿರುಪಾಧಿಕ ನಿಃಕಳಂಕ ನಿರಾಲಂಬವೆಂಬ ನವವಿಧ ಹಸ್ತಂಗಳಿಂದ ನವವಿಧ ಪದಾರ್ಥವನ್ನು ಇಷ್ಟ ಪ್ರಾಣಭಾವಲಿಂಗ ಆಚಾರ ಗುರುಲಿಂಗ ಜಂಗಮ ಪ್ರಸಾದಲಿಂಗ ಮಹಾಲಿಂಗವೆಂಬ ನವವಿಧ ಲಿಂಗಂಗಳಿಗೆ ಶ್ರದ್ಧಾಭಕ್ತಿ ಮೊದಲಾಗಿ ನವವಿಧ ಭಕ್ತಿಗಳಿಂದ ಸಮರ್ಪಿಸುವ ಕ್ರಮವೆಂತೆಂದೊಡೆ, ತನು ಸಂಬಂಧ

ವಾದ ರೂಪು ಪದಾರ್ಥವನ್ನು ಇಷ್ಟಲಿಂಗಕ್ಕೆ ಸಮರ್ಪಿಸಿ, ಮನಸಂಬಂಧ ವಾದ ರುಚಿಪದಾರ್ಥವನ್ನು ಪ್ರಾಣಲಿಂಗಕ್ಕೆ ಸಮರ್ಪಿಸಿ, ಧನಸಂಬಂಧ ವಾದ ತೃಪ್ತಿ ಪದಾರ್ಥವನ್ನು ಭಾವಲಿಂಗಕ್ಕೆ ಸಮರ್ಪಿಸಿ, ಸುಗಂಧ ಪದಾರ್ಥವನ್ನು ಆಚಾರಲಿಂಗಕ್ಕೆ ಸಮರ್ಪಿಸಿ, ಸುರಸ ಪದಾರ್ಥ ವನ್ನು ಗುರುಲಿಂಗಕ್ಕೆ ಸಮರ್ಪಿಸಿ, ಸುರೂಪ ಪದಾರ್ಥವನ್ನು ಶಿವ ಲಿಂಗಕ್ಕೆ ಸಮರ್ಪಿಸಿ, ಸುಸ್ಪರ್ಶನ ಪದಾರ್ಥವನ್ನು ಜಂಗಮಲಿಂಗಕ್ಕ ರ್ಪಿಸಿ, ಸುಶಬ್ದ ಪದಾರ್ಥವನ್ನು ಪ್ರಸಾದಲಿಂಗಕ್ಕೆ ಸಮರ್ಪಿಸಿ, ಸುತೃಪ್ತಿ ಪದಾರ್ಥವನ್ನು ಮಹಾಲಿಂಗಕ್ಕೆ ಸಮರ್ಪಿಸಿ, ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯಂಗಳು ಮೊದಲಾದ ಸಮಸ್ತ ಮುಖಂಗಳಲ್ಲಿ ಬರುವ ಪದಾರ್ಥಂಗಳ ಸಮಸ್ತಲಿಂಗಂಗಳಿಗೆ ಮಿಶ್ರಾ ಮಿಶ್ರಂಗಳೊಡನೆ ಸಮರ್ಪಿಸಿ, ಆ ಲಿಂಗಂಗಳ ಸಂತೃಪ್ತಿ ಪರಿಣಾಮ ಪ್ರಸಾ ದದಲ್ಲಿ ಲೋಲುಪ್ತರಾಗಿ ಇರುವಂಥಾದ್ದೇ ಪಂಚೇಂದ್ರಿಯಾರ್ಪಿತ ದೀಕ್ಷೆ ಇಂತೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಅಹಿಂಸಾ ದೀಕ್ಷೆ.

೬೧ ಅಯ್ಯಾ, ಶ್ರೀಗುರುಲಿಂಗ ಜಂಗಮದ ಕರುಣಾಕಟಾಕ್ಷ ಯಿಂದುತ್ಪತ್ತ್ಯವಾಗಿ ನಿರ್ಮಾಯ ಕಂಥೆಯ ಧರಿಸಿದ ಶಿವಶರಣಂಗೆ ಅನಂತ ಲೀಲೆಯಲ್ಲಿ ಬೆಂಬತ್ತಿ ಒಂದ ಮಹಾಪಾಪವೇ ಒಂದು ರೂಪಾಗಿ ಮಾಯಾ ಜಡ ಜೀವ ಶರೀರವ ಧರಿಸಿ ಪರಿಪರಿಯಿಂದ ನಿಂದೆ ಕುಂದು ಅಪಮೃತ್ಯಗಳು ಬಂದು ತಟ್ಟಿದಲ್ಲಿ ಅರ್ಪಿತಾವಧಾನ ಸುಖ ದುಃಖಗಳು ಬಂದು ಸೋಂಕಲೊಡನೆ ಶಿವಶರಣನು ತನ್ನ ಸ್ವಾತ್ಮ ಜ್ಞಾನದಿಂದರಿದು ನೋಡಿದಲ್ಲಿ, ಈ ಮಾಯಾ ಜಡ ಜೀವಾತ್ಮರಿಗೆ ಸೂತ್ರ ಧಾರಿ ಶಿವನು ಕಪಟನಾಟಕ ಲೀಲೆಯ ಧರಿಸಿ ಸಕಲ ಜೀವಾತ್ಮರ ಮಧ್ಯದಲ್ಲಿ ಅಣುವಿಗಣುವಾಗಿ, ಮಹತ್ತಿಂಗೆ ಮಹತ್ತಾಗಿ ಆ ಜೀವನೆಂಬ ವಿಧಿಗೆ ಸ್ವತಿನಿಂದೆ ಪುಣ್ಯಪಾಪ ಸಂಕಲ್ಪವಿಕಲ್ಪವೆಂಬ ಕುಟಿಲ ವ್ಯವಹಾ ರವ ಕಲ್ಪಿಸಿ ಆ ಜೀವನಿಂದ ಭಕ್ತಗಣಂಗಳಲ್ಲಿ ಅಷ್ಟಾವರಣದ ನಿಷ್ಠಾ ಪರತ್ವವ ನೋಡಬೇಕೆಂದು ಅನಂತ ಬಾಧೆಗಳಿಂದ ಬಾಧಿಸಿದಲ್ಲಿ ಶಿವಶ ರಣ ಗಣಂಗಳು ಆ ಬಾಧೆಗೆ ಅಳುಕದೆ ಚಿಂತಿಸದೆ ಅಷ್ಟಾವರಣಭರಿತ

ರಾಗಿ ದೇಹಾಭಿಮಾನದ ಹಸಿವು ತೃಷೆ ನಿದ್ರೆ ಆಲಸ್ಯ ಸಂಗವೆಂಬ ಕಾಲ ಕಾಮರ ಪಾಶದಲ್ಲಿ ಬೀಳದೆ ಭವಿಭಕ್ತನೆಂಬ ವಿಚಾರವನರಿಯದ ದುಷ್ಟರ ಕಂಡರೆ ದೂರದಲ್ಲಿರಬೇಕೆಂಬ ಗುರುವಾಕ್ಯವ ತಿಳಿದು ಅವರ ಸಂಭಾಷಣೆ ಸಂಸರ್ಗವ ಮಾಡದೆ ಅವರ ಸ್ತುತಿ ನಿಂದ್ಯಾದಿಗಳನಾಲಿಸದೆ ನಿಃಕಳಂಕ ಪರಬ್ರಹ್ಮ ಪರಶಿವಲಿಂಗದಲ್ಲಿ ಸದಾ ಸನ್ಮಾರ್ಗಿಯಾಗಿ ಸುಸಂಗಿಗಳಿಂದ ಶ್ರದ್ಧಾತುರ ಪರಿಣಾಮದಲ್ಲಿ ಬಂದು ತಟ್ಟಿದ ಪರಿಣಾಮ ಪಾದೋದಕ ಪ್ರಸಾದದಲ್ಲಿ ಲೋಲುಪ್ತರಾಗಿ ತಮ್ಮ ನಡೆನುಡಿಗಳ ಸ್ವಾತ್ಮಜ್ಞಾನದಿಂದ ವಿಚಾರಿಸಿ ಪಕ್ವಮಾಡುವಂಥ ನಿಂದ ನಿಲುಕಡೆಯು ಅಹಿಂಸಾ ದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಲಿಂಗನಿಷ್ಠಾ ದೀಕ್ಷೆ

೬೨ ಅಯ್ಯ, ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ ಪರಮಾರಾಧ್ಯ ವೀರಶೈವಾಚಾರ ಷಟ್‌ಸ್ಥಲ ಪ್ರತಿಪಾದಕ ಶ್ರೀಗುರುಲಿಂಗ ಜಂಗಮ ಕರುಣಾ ಕಟಾಕ್ಷೆಯಿಂದ ಅಂಗ ಮನ ಭಾವಂಗಳೆಲ್ಲ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಸ್ವರೂಪವಾದ ಇಷ್ಟ ಪ್ರಾಣ ಭಾವಲಿಂಗವಾದ ಮೇಲೆ ಭೃಂಗಿ ಕೀಡೆಯೋಪಾದಿಯಲ್ಲಿ ಗುರು ಲಿಂಗ ಜಂಗಮ ಬೇರೆ, ನಾನು ಬೇರೆಂಬ ಭಿನ್ನಭಾವವಳಿದು ಗುರು ಮಾರ್ಗಾಚಾರದಲ್ಲಿ ಪ್ರೇಮವುಳ್ಳಾತನಾಗಿ, ಜ್ಞಾತೃ ಜ್ಞಾನ ಜ್ಞೇಯ ವೆಂಬ ಅಷ್ಟಾಂಗಯೋಗ ಭ್ರಮಿತರಾದ ಜಡಕರ್ಮ ಶೈವ ಮಾರ್ಗ ದಲ್ಲಿ ಸಾಕ್ಷಾತ್ ಶಿವನೇ ಇಷ್ಟಲಿಂಗಧಾರಕನಾಗಿ ಗುರು ರೂಪವ ಧರಿಸಿ ಭವಿಭಕ್ತ ಮಾರ್ಗವ ತೋರವೆ ಇಚ್ಛೆಯ ನುಡಿದು ಉದರವ ಹೊರೆವ ವೇಷವ ಕಂಡು ಶರಣೆಂದು ಮನ್ನಣೆಯ ಕೊಡದೆ ಭೂತ ಸೋಂಕಿದ ಮನುಜನೋಪಾದಿಯಲ್ಲಿ ತನ್ನ ಪವಿತ್ರ ಸ್ವರೂಪ ಪರತತ್ವ ಮಾರ್ಗ ಧ್ಯಾನದಿಂದ ಚಿದ್ಘನ ಲಿಂಗದೊಳಗೆ ತಾನಾಗಿ ತನ್ನೊಳಗೆ ಚಿದ್ಘನಲಿಂಗ ವಾಗಿ ಸಪ್ತಧಾತು ಸಪ್ತ ವ್ಯಸನಂಗಳಲ್ಲಿ ಕೂಡದೆ ಲಿಂಗವೇ ತಾನಾದ ಸ್ವಸ್ವರೂಪ ನಿಲುಕಡೆಯೇ ಲಿಂಗ ನಿಷ್ಠಾದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಮನೋಲಯದೀಕ್ಷೆ

೬೩ ಅಯ್ಯ ಸತ್ಯ, ಸದಾಚಾರ, ಸದ್ಭಕ್ತಿ, ಜ್ಞಾನ, ವೈರಾಗ್ಯ, ಸತ್ಕ್ರಿಯೆ, ಸತ್ಕಾಯಕ, ಸತ್ಪಾತ್ರ ಭಿಕ್ಷೆಯ ಧರಿಸಿ ಲೋಕಪಾವನಾರ್ಥವಾಗಿ ಇಷ್ಟೆಯ ನುಡಿಯುವ ನಡೆನುಡಿ ಹೀನರಾದ ಸೂತಕ ಪಾತಕರ ಸಂಗವ ಹೊದ್ದದೆ ಗುರುಮಾರ್ಗಾಚಾರಕ್ಕೆ ಕುಂದುಕೊರತೆಗಳ ತಾರದೆ, ಸನ್ಮಾರ್ಗದಲ್ಲಾಚರಿಸಿ ಗುರು ಲಿಂಗ ಜಂಗಮ ಸದ್ಭಕ್ತಿ ಚರಿತ್ರವುಳ್ಳ ಶಿವಶರಣಗಣಂಗಳಲ್ಲಿ ಕುಂದು ನಿಂದ್ಯಾದಿಗಳ ಕಲ್ಪಿಸದೆ ಎಚ್ಚರವಪ್ಪಿದಲ್ಲಿ ಒಡುಪರಾಕು ಸ್ವಾಮಿ ಶರಣಗಣಂಗಳು ಹೋದಮಾರ್ಗ ವಿಹಿತವೆಂದು ಭೃತ್ಯಭಕ್ತಿಯಿಂದ ಹೇಳಿ, ಅಜ್ಞಾನ ಅಕ್ರಿಯೆ ಅನಾಚಾರವೆಂಬ ಮಾಯಾ ಶರಧಿಯಲ್ಲಿ ಮುಳುಗಿ ಹೋಗುವ ಇಷ್ಟಲಿಂಗಧಾರಕ ಭಕ್ತಗಣಂಗಳ ಕಂಡು ಅಸಗ ತನ್ನ ಮಡಿವೈಲಿಗೆಯ ಹೊರುವ ಕತ್ತೆಯು ಜಪ್ಪಾಲಿಂಪಟ ಗುಪ್ಪಾಲಿಂಪಟವೆಂದ ಹೋಗಿ ಹಳ್ಳಕೊಳ್ಳ ಕೆರೆಭಾವಿಯೊಳಗ ಬಿದ್ದು ಹೋಗುವುದ ಕಂಡು ಕಿವಿಯ ಹಿಡಿದು ಎಳೆದು ಕೊಂಡೊಯ್ವೋಪಾದಿಯಲ್ಲಿ ಹಸ್ತಪಾದ ಒಡಹಿಡಿದು ಉಡಿಗೆಳೆದು ಶ್ರುತಿಗುರು ಸ್ವಾನುಭಾವವ ತೋರಿ ಮತ್ತದರ ಕರುಣವ ಪಡೆದು ಏಕಮಾರ್ಗದಲ್ಲಾಚರಿಸಿ ನಿಃಕಲ ಪರಶಿವಲಿಂಗದಲ್ಲಿ ಶಿಖಿ ಕರ್ಪೂರದಂತೆ ರತಿಸಂಯೋಗವುಳ್ಳಂಥಾದ್ದೇ ಮನೋಲಯದೀಕ್ಷೆ ಇಂತೆಂದು ಶ್ರೀಗುರು ನಿಃಕಳಂಕ ಮೂರ್ತಿ ಚನ್ನಬಸವರಾಜೇಂದ್ರನು ಸರ್ವಜ್ಞ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ

## ಸದ್ಯೋನ್ಮುಕ್ತಿದೀಕ್ಷೆ

೬೪ ಅಯ್ಯಾ, ಶ್ರೀಗುರು ಲಿಂಗ ಜಂಗಮದ ಕರುಣಾಕಟಾಕ್ಷೆಯಿಂದ ಶ್ರುತಿಗುರು ಸ್ವಾನುಭಾವಹಿಡಿದು ಒಡಂಬಡದ ಸನ್ಮಾರ್ಗಾಚಾರ ಕ್ರಿಯೆಗಳಲಿ ಅಪಮೃತ್ಯು ಒಂದು ತಪ್ಪಿ ಪ್ರಾಣತ್ಯಾಗವ ಮಾಡಿದಡೂ ಅಂಜಿ ಅಳುಕದ ಪರಮ ಪತಿವ್ರತತ್ವದಿಂದ ಒಂದು ಮುಂದಣ ಪುಣ್ಯಪಾಪವನೆಣಿಸದೆ ಇಂತು ಶ್ರೀಗುರುವಾಕ್ಯ ನಿಜ ನೈಷ್ಠೆಯಿಂದಿರ್ದು ನಿಜವೀರಶೈವ ಸತ್ಕ್ರಿಯಾಚಾರ ಲಿಂಗ ಮುಖದಿಂದ ಒಂದ ಶ್ವಪಾಕನಾದರೂ ಸರಿಯೇ ಭಕ್ತಾಶ್ರಯದಲ್ಲಿ ಶ್ವಪಾಕನ ಮಾಡಿ ಸಂಬಂಧಾಚರಣೆಗಳಿಂದ ಪವಿತ್ರ

ಸ್ವರೂಪ ಪಾದೋದಕ ಪ್ರಸಾದವೆನಿಸಿ ನಿರ್ವಂಚಕತ್ವದಿಂದ ಸಂಚಲ ಚಿತ್ತವನಳಿದು ಮಂತ್ರಸ್ಮರಣೆಯಿಂದ ಸರ್ವಾಚಾರ ಸಂಪತ್ತಿನಾಚರಣೆಯನೊಳಕೊಂಡು ಸಮಸ್ತಲೋಕ ಪಾವನ ಮೂರ್ತಿ ನಿಃಕಲ ಪರಶಿವ ಲಿಂಗ ಜಂಗಮಕ್ಕೆ ಕೊಂಬ ಸದ್ಭಕ್ತ ಜಂಗಮದ ಚರಣಕಮಲ ಧೂಳನವೇ ದ್ವಿತೀಯ ಕೈಲಾಸ ಶಿವಮಂದಿರವೆಂದು ಹಿಂದು ಮುಂದಣ ಆಶೆ ಆಮಿಷದ ಭ್ರಾಂತು ಭ್ರಮೆಗಳನುಳಿದು, ಧ್ಯಾನ, ಮೌನ, ನೇಮ, ನಿತ್ಯ, ಸತ್ಯ, ಸದ್ಭಾವವೆಂಬ ಷಡ್ಗುಣೈಶ್ವರ್ಯ ಸಂಪದವ ನಿಃಕಲ ಪರತತ್ವ ಮೂರ್ತಿ ತಾನಾದ ನಿಜಮೋಕ್ಷದಿರವೇ ಸದ್ಯೋನ್ಮುಕ್ತಿದೀಕ್ಷೆ ಇಂತುಟೆಂದು ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮಂಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

೬೫ ಅಯ್ಯಾ ಇಂತು ಅನಾದಿ ವಸ್ತುವೇ ಗುರುಶಿಷ್ಯ, ಭಕ್ತಜಂಗಮ, ಅಂಗಲಿಂಗ, ಶರಣಸತಿ ಲಿಂಗಪತಿಯೆಂಬ ಸಾಕಾರ ಲೀಲೆಯ ಧರಿಸಿ ಅಪಿರಳಾನಂದ ವೇಧಾ ಮಂತ್ರ ಕ್ರಿಯಾದೀಕ್ಷೆಯುಕ್ತವಾದ ತ್ರಿದೀಕ್ಷೆಯ ಭಿನ್ನವಿಲ್ಲದೆ ಸದ್ಗುರು ಮುಖದಿಂದರಿದು ಆಚರಿಸಬಲ್ಲಡೆ ಸಹಜದೀಕ್ಷೆಯುಳ್ಳ ಶ್ರೀಗುರುಲಿಂಗಜಂಗಮ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ನಿರವಯಮೂರ್ತಿ ಎಂಬೆನಯ್ಯ ಕೂಡಲ ಚನ್ನಸಂಗನಲ್ಲಿ ಇಂತು ನಿರ್ಲಜ್ಜ ಶಾಂತಲಿಂಗದೇಶಿಕೋತ್ತಮಂಗೆ ಪರಮ ನಿರಾಭಾರಿ ವೀರಶೈವ ಷಟ್‌ಸ್ಥಲಾಚಾರ್ಯ ಚಿಕ್ಕದಂಡ ಪ್ರಮಧರು ಬೋಧಿಸಿದಂಥ ಮಹಾಪ್ರಸಾದವ ನಿನಗೆ ಹರದನಹಳ್ಳಿ ಸ್ಥಾಪನಾಚಾರ್ಯ ಶಿವಲಿಂಗಶಕ್ತಿವಲ್ಲಭನಾದ ಪರಮಾರಾಧ್ಯ ಬಸವಲಿಂಗ ಸಾಕ್ಷಿಯಾಗಿ ಅರುಹಿಸಿ ಕೊಟ್ಟೆವು ನೋಡಾ ಸಂಗನಬಸವೇಶ್ವರಾ

## ತಾಮಸ ದೀಕ್ಷೆಗಳನ್ನು ನಿರಾಕರಿಸುವುದು

೬೬ ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ, ರಂಜನೆಯಲ್ಲದೆ, ಅದರ ಗಂಜಳ ಬಿಡದಣ್ಣಾ ಮಣ್ಣಾ ಪೃಥ್ವಿಯ ಮಾಣದೆ ಜಲದಲ್ಲಿ ತೊಳೆದರೆ, ಪಿಚ್ಚ ಕೆಸರಲ್ಲದೆ, ಅದರಚ್ಚುಗ ಬಿಡದಣ್ಣಾ ಲೋಕದ

ಮಾನವಂಗೆ ಶಿವದೀಕ್ಷೆಯ ಕೊಟ್ಟರೆ, ಕೊಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ?

೬೭ ಕುಂಬಳದ ಕಾಯಿಗೆ ಕಬ್ಬಿನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ, ಬಲುಹಾಗಬಲ್ಲುದೇ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ, ಭಕ್ತಿ ಎಂತಹುದೋ? ಮುನ್ನಿನಂತೆ ಕೂಡಲಸಂಗಯ್ಯ ಮಾನಹೀನನ ಮೀಸಲ ಕಾಯ್ದಿರಿಸಿದಂತೆ

೬೮ ತನ್ನ ಪುತ್ರಂಗೆ ತಾನೆ ಗುರುವಾದೆನೆಂಬ ಗುರುದ್ರೋಹಿಯ ಮಾತು ಕೇಳಲಾಗದು. ಎನಗೆ ಎನ್ನ ತಂದೆಯೇ ಗುರುವೆನ್ನುವ ದ್ರೋಹಿಯ ಮುಖವ ನೋಡಲಾಗದು ಅವರಿಬ್ಬರೊಳಗೆ ಗುರುಶಿಷ್ಯ ಸಂಬಂಧವನಾಚರಿಸಿದೊಡೆ, ಅವರಿಬ್ಬರ ಶಿಕ್ಷಿಸಿ, ಕಟ್ಟಿ, ಹೊತ್ತಿಸಿ, ನೋಂದಿಸಿ, ಸುಡುವ ನಮ್ಮ ಕೂಡಲಚನ್ನಸಂಗಮದೇವಾ

೬೯ ತನ್ನ ಮನೆಯ ಹೊಗದ ಗುರುವಿನರಸಿಕೊಂಡು ಹೋಗುವ ಶಿಷ್ಯನಲ್ಲವಯ್ಯಾ ತಾ ಹೋಗದ ಮನೆಗೆ ಉಪದೇಶವ ಮಾಡುವಾತ ಗುರುವಲ್ಲವಯ್ಯಾ ಅಂಗವ ಮಾರಿಕೊಂಡುಂಬ ಶಿಷ್ಯ ಗುರುದ್ರೋಹಿ ಲಿಂಗವ ಮಾರಿಕೊಂಡುಂಬ ಗುರು ಶಿವದ್ರೋಹಿ ಈ ಗುರುಶಿಷ್ಯರಿಬ್ಬರಿಗೆಯೂ ದೇವಭಕ್ತನೆಂದೊಡೆ ನಾಯಕ ನರಕವಯ್ಯಾ ಕೂಡಲಚನ್ನಸಂಗಮದೇವಾ

೭೦ ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ ತನ್ನ ಪ್ರಾಣಲಿಂಗವ ಕೊಟ್ಟು ಕರ್ಣದಲ್ಲಿ ಮಂತ್ರವ ನಿಕ್ಷೇಪಿಸಿ, ಬಳಿಕ ಆವ ಬಂದು ಶಿಷ್ಯನ ಮನೆಯ ಹೊಗಲೊಲ್ಲದ ಅಕ್ಕಿಪಡಿಯ ತರಿಸಿಕೊಂಡು ಹೊಸ ಬಳಿಕೆ ಎಂದು ಮಾಡಿಸಿಕೊಂಡುಂಬವಂಗೇನೆಂಬೆನಯ್ಯಾ? ಅವನ ಧನಕ್ಕೆ ತಂದೆಯಾವನಲ್ಲದ ಅವನಿಗೆ ತಂದೆಯಾದುದಿಲ್ಲ ಇದು ಕಾರಣವಾಗಿ ಕೂಡಲಚನ್ನಸಂಗಯ್ಯ ಲಿಂಗವ ಮಾರಿಕೊಂಡುಂಬ ಭಂಗಗಾರರ ಕಂಡು ನಾಚಿ ಬೆರಗಾದನಯ್ಯಾ

೭೧ ಗುರು ಲಿಂಗ ಜಂಗಮದ ಹೆಸರಿನಿಂದ ಕಾಯಕವ ಮಾಡಿ ಗುರುಚರಕೆ ವಂಚಿಸಿ, ತಂದೆ, ತಾಯಿ, ಬಂಧುಬಳಗ, ಹೆಂಡಿರು,

ಮಕ್ಕಳು, ಒಡಹುಟ್ಟಿದವರು, ಎಂದು ಸಮಸ್ತ ಪದಾರ್ಥವ ಭಾಗವ ಮಾಡುವನೊಬ್ಬ ಭಕ್ತದ್ರೋಹಿ ಕೂಡಲಸಂಗಮದೇವಾ.

೭೨ ಪರದೈವ ಪರಧನ ಪರಸ್ತ್ರೀ ಪರನಿಂದೆ ಪರಹಿಂಸೆಯಲ್ಲಿ ಚರಿಸುವ ಹೊಲೆಯರಿಗೆ ಕ್ರಿಯಾದೀಕ್ಷೆ ಮಾಡುವನೊಬ್ಬ ಗುರುದ್ರೋಹಿ ನೋಡಾ ಕಲಿದೇವದೇವಾ

೭೩ ಕ್ರಿಯಾದೀಕ್ಷೆ ಹೀನರಿಗೆ ಮಂತ್ರೋಪದೇಶವ ಹೇಳುವನೊಬ್ಬ ಮಂತ್ರದ್ರೋಹಿ ನೋಡಾ ಕೂಡಲಚನ್ನಸಂಗಮದೇವಾ

೭೪ ಕ್ರಿಯಾದೀಕ್ಷೆ ಮಂತ್ರದೀಕ್ಷೆ ವೇಧಾದೀಕ್ಷೆಹೀನರಿಗೆ ಜಂಗಮ ಪಾದೋದಕ ಪ್ರಸಾದವ ಕೊಡುವನೊಬ್ಬ ಜಂಗಮದ್ರೋಹಿ ನೋಡಾ ಗುಹೇಶ್ವರಾ

೭೫ ಅಚ್ಚಪ್ರಸಾದ ನಿಚ್ಚಪ್ರಸಾದ ಸಮಯಪ್ರಸಾದವನರಿಯದ ಮೂರ್ಖರಿಗೆ ಷಡ್ವಿಧ ಲಿಂಗಾಂಗ ಪ್ರಸಾದ ಪಾದೋದಕವ ಹೇಳುವವನೊಬ್ಬ ಪಾದೋದಕ ದ್ರೋಹಿ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೭೬ ಷಡ್ವಿಧ ಲಿಂಗಾಂಗ ಸಕೀಲವನರಿಯದ ಜಡಜೀವಿಗೆ ದಶ ವಿಧ ಪಾದೋದಕ, ಏಕಾದಶ ಪ್ರಸಾದಸಕೀಲ ಸಂಬಂಧವ ಹೇಳುವವನೊಬ್ಬ ಪ್ರಸಾದದ್ರೋಹಿ ನೋಡಾ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜುನಾ

೭೭ ಅಂತರಂಗ ಬಹಿರಂಗದಲ್ಲಿ ಸದಾಚಾರ ಸಂಪತ್ತಿನ ಆಚರಣೆಯನರಿಯದ ಮೂರ್ಖಾತ್ಮಂಗೆ ಲಿಂಗಾಂಗಸಾಮರಸ್ಯವ ಹೇಳಿ ಸರ್ವಾಂಗ ಸ್ನಾನ ಧೂಳನ, ಆಲ ಸ್ಥಾನಂಗಳಲ್ಲಿ ಕ್ರಿಯಾಭಸಿತವ ಧರಿಸುವ ನಿರ್ಣಯವ ಹೇಳಿ, ಅಂತರಂಗ ಜಪವ ಹೇಳುವನೊಬ್ಬ ಆಚಾರ ದ್ರೋಹಿ ನೋಡಾ ರಾಮನಾಥಾ

೭೮ ವಿಭೂತಿ ರುದ್ರಾಕ್ಷಿ ಮಂತ್ರವ ಹೇಳುವನೊಬ್ಬ ಗಣ ದ್ರೋಹಿ ನೋಡಾ ಉರಿಲಿಂಗದೇವಪ್ರಿಯವಿಶ್ವೇಶ್ವರಾ

೭೯. ಇಂತೀ ಅಷ್ಟಾವರಣದ್ರೋಹಿ, ಗಣಭಕ್ತದ್ರೋಹಿಗಳ ಬೆರಸದೆ, ನಿಃಕಳಂಕ ಮಹಾಘನಲಿಂಗ ಗರ್ಭದಲ್ಲಿ ಆಚರಿಸುವುದು ಸಂಗನಬಸವೇಶ್ವರಾ

## ದೀಕ್ಷೆಯಾದವನಿಗೆ ಜಾತಿಭೇದವಿಲ್ಲ ೧

೮೦ ಗುರು ಸ್ವಾಮಿ ಶಿಷ್ಯನ ಅನುಗ್ರಹವ ಮಾಡುವ ಪರಿ ಎಂತೆಂದೊಡೆ, ಅರಿವು ಆಚಾರಸಹಿತವಾಗಿ ಶಿಕ್ಷೆ ದೀಕ್ಷೆಯ ಮುಖದಿಂದೆ ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿ ಸ್ಥಲವೆಂದು ವಿವರವ ಮಾಡಿ ಕರುಣಿಸುವುದೇ ಗುರುತತ್ವ ಈ ಕ್ರಮವನರಿದು ಮಹಾಪ್ರಸಾದವೆಂದು ಕೈಕೊಂಬುವುದೇ ಶಿಷ್ಯತ್ವ ಇಂತಹ ಗುರುಮಾರ್ಗಾಚಾರವನು ಮಹಾಪ್ರಸಾದವೆಂದು ಕೈಕೊಂಡ ಬಳಿಕ ಪರವಾಕಂಗಳ ಬಿಡಬೇಕು ಒಡಲ ಕಕ್ಕುಲಿತೆಗೆ ಭಕ್ತನ ದಾಕ್ಷಿಣ್ಯಕ್ಕೆ ಅನ್ಯಜಜನ ಭವಿ ಮಿಶ್ರವಾದವರ ಮನೆಯಲ್ಲಿ ನೇಮಸ್ಥರುಗಳು ಹೊಕ್ಕು ಲಿಂಗಾರ್ಚನೆಯ ಮಾಡಿದಡೆ ಅನ್ನಪಾಕಾದಿಗಳ ಕೊಂಡೊಡೆ ನಾಯಕ ನರಕ ತಪ್ಪದಯ್ಯಾ ಕೂಡಲಚನ್ನಸಂಗಮದೇವಾ

೮೧ ಕರ್ಮಜಾತನ ಕಳೆದು ಶ್ರೀಗುರು ಲಿಂಗವ ಕೊಟ್ಟು ಪುಣ್ಯ ಜಾತನ ಮಾಡಿದ ಬಳಿಕ, ಆತಂಗೆ ಶಿವಕುಲವಲ್ಲದೆ, ಬೇರೆ ಮತ್ತೊಂದು ಕುಲ ಉಂಟೇ ಅಯ್ಯಾ?॥ ಸಾಕ್ಷಿ ॥ ಶಿವಜಾತಕುಲೀ ಧರ್ಮಂ। ಪ್ರನರ್ಜನ್ಮ ವಿವರ್ಜಿತಂ। ಉಮಾ ಮಾತಾ ಪಿತಾ ರುದ್ರಾ। ಈಶ್ವರಂ ಕುಲಮೇವ ಚ। ಎಂದುದಾಗಿ, ಕೂಡಲಚನ್ನಸಂಗಯ್ಯ ನಿಮ್ಮ ಭಕ್ತರ ಮಾಹೇಶ್ವರರ ಕುಲಕ್ಕೆ ಪ್ರತಿಗಾಣೆನು

೮೨ ಎಂತವನಾದೊಡೇನು? ಲಿಂಗಮುಟ್ಟಿದವನೇ ಕೀಳುಜಾತಿ. ಕುಲವಹುದು ತಪ್ಪದು ಲಿಂಗವ ಮುಟ್ಟಲೊಡನೆ ಶಿವಕುಲವಹುದು

---

೧ ಈ ವಿಷಯದ ಮೇಲೆ ವಚನಶಾಸ್ತ್ರಸಾರ ೧ನೇ ಭಾಗದಲ್ಲಿ 'ಜಾತಿಭೇದ' ಈ ಶಿರೋಲೇಖದ ಕೆಳಗೆ ಅನೇಕ ವಚನಗಳಿವೆ ಅವುಗಳನ್ನು ನೋಡಬೇಕು

ತಪ್ಪದು ಪರುಷ ಮುಟ್ಟಲೊಡನೆ ಕಬ್ಬುನ ಹೊನ್ನಹುದು ತಪ್ಪದು ಕೂಡಲಸಂಗಮದೇವನೊಲ್ಲ ಸರ್ವ ಸಂದೇಹಿಗಳ.

೮೩ ಪಟ್ಟವ ಕಟ್ಟಿದ ಬಳಿಕ, ಲಕ್ಷಣವನರಸುವರೇ ? ಲಿಂಗದೇವನ ಪೂಜಿಸಿ ಕುಲವನರಸುವರೇ ಅಯ್ಯಾ ? ಕೂಡಲಸಂಗಮದೇವ ಭಕ್ತಕಾಯ ಮಮಕಾಯವೆಂದುದಾಗಿ

೮೪ ಏಕ ಪಙ್ತಿಯಲ್ಲಿ ತಾ ಭೋಜನಭೇದ ಮಾಡಬಾರದು ಭೋಜನ ಭೇದ ಮಾಡಿದರೆಯೂ ತಾನೆಣಿಸಬಾರದು ,ತಾನೆಣಿಸಿದಲ್ಲಿಯೂ ಅನ್ಯರಿಗೆಯು ತಿಳಿಯಬಾರದು ಅನ್ಯರಿಗೆ ತಿಳಿದರೆಯೂ ಮನೆ ಬೇರಾಗಬಾರದು ಮನೆ ಬೇರಾದರೆಯೂ ಮನ ಬೇರಾಗಬಾರದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

## ಲಿಂಗ ಹೋದರೆ ಆತ್ಮಘಾತ ಮಾಡಿಕೊಳ್ಳಬೇಡ ೧

೮೫ ಲಿಂಗ ಹೋಯಿತ್ತೆಂದು ಅಂಗವ ಬಿಡುವವನ ನೋಡಿ ಎನ್ನಂಗ ನಡುಗಿತ್ತಯ್ಯ. ಲಿಂಗ ಹೋದರೆ ನಿನ್ನ ಪ್ರಾಣಂಗಳುಳಿವವೇ? ಲಿಂಗ ಪ್ರಾಣ, ಪ್ರಾಣ ಲಿಂಗ, ಎಂಬುದು ಹುಸಿಯೇ ಅಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೮೬ ತೆರಹಿಲ್ಲದ ಮಹಾಘನ ಪರಿಪೂರ್ಣ ಲಿಂಗವು ಬೀಳಲಿಕ್ಕೆ ತೆರಹುಂಟೇ ? ಅರಿಯುದರಿಯದು ಪ್ರಾಣಲಿಂಗದ ನೆಲೆಯನು ಅರಿಯದೆ ಅಜ್ಞಾನದಲ್ಲಿ ಕುರುಹು ಬಿದ್ದಿತ್ತೆಂದು ಪ್ರಾಣ ಘಾತಕವ ಮಾಡಿಕೊಂಡು ಸಾವ ಅಜ್ಞಾನಿಗಳ ನೋಡಾ. ಅರಿದು ಕೂಡಿ ಸ್ವಯವಾಗಿರ್ದ ಲಿಂಗವು ಓಸರಿಸಿತ್ತೆಂದು ಆ ಲಿಂಗದೊಡನೆ ಸಾವ ಅಜ್ಞಾನಿಗಳಿಗೆ ಅಘೋರ ನರಕ ತಪ್ಪದು ಕಾಣಾ ಕೂಡಲಚನ್ನಸಂಗಮದೇವಾ

---

೧ ಈ ವಿಷಯದ ಬಗ್ಗೆ ವಚನಶಾಸ್ತ್ರಸಾರ ಭಾಗ ೧ ಇದರಲ್ಲಿ ಅನೇಕ ಉಕ್ತಿಗಳಿವೆ ಅವುಗಳನ್ನು ವಾಚಕರು ನೋಡಬೇಕು

೮೭. ಸೂತ್ರವ ಬಿಟ್ಟಿತ್ತೆಂದು ಸಂದೇಹಗೊಳ್ಳದಿರಾ ಮರಳು ಮನುಜರಿರಾ ಸೂತ್ರವಿದ್ದಲ್ಲಿ ನಿಮ್ಮಂಗ ಸೂತ್ರವಾದನಯ್ಯಾ ಲಿಂಗ ಮೂರ್ತಿಯು. ಸೂತ್ರ ತಪ್ಪಿತ್ತೆಂಬಲ್ಲಿ ಸೂತ್ರ ತಪ್ಪಿಲ್ಲ ನಿಮ್ಮ ಮನೋ ಸೂತ್ರವೇ ಭಿನ್ನವಾಯಿತ್ತಯ್ಯಾ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

೮೮ ಅಂಗದೊಳಗೆ ಮಹಾಲಿಂಗವಿರಲು ಕೆಯ್ಯ ಲಿಂಗವು ಬಿದ್ದಿತೆಂದು ನೆಲದೊಳಗಂಗವ ಹೂಣುವರು ಭಂಗಬಡುವರಲ್ಲಾ ಗುಹೇಶ್ವರಾ ಲಿಂಗವನರಿಯದ ಜಡರುಗಳು!

೮೯ ಲಿಂಗವ ಪೂಜಿಸಿ ಅಂಗವ ನಿರ್ವಯಲ ಮಾಡಿಹೆನೆಂಬವನ ಮುಖವ ನೋಡಲಾಗದು ಕುರುಹಿಟ್ಟು ಪೂಜಿಸುವ ಲಿಂಗ ತಾನುಳಿವುದು ಭೂಮಿಯಲ್ಲಿ ಲಿಂಗವ ಧರಿಸಿದ ದೇಹವು ನಿರ್ವಯಲಹುದು ಲಿಂಗ ಪೂಜೆಯಲ್ಲಿ ಹುರುಳಿಲ್ಲ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

## ದೀಕ್ಷೆಯಲ್ಲಿ ಅಷ್ಟಾವರಣಗಳೆಲ್ಲವನ್ನು ಕೊಡುವುದು

೯೦ ಲಿಂಗ ಹೊರತಾಗಿ ವಿಭೂತಿ ರುದ್ರಾಕ್ಷಿಯ ಕೊಟ್ಟು ಗುರುವಾಗಬಹುದೇ ಅಯ್ಯಾ? ಬೀಜವಿಲ್ಲದೆ ಅಂಕುರವಾಗಬಲ್ಲುದೇ? ಗಂಡನಿಲ್ಲದ ಮುಂಡೆಗೆ ಗರ್ಭ ನಿಂದಡೆ, ಅವಳಾರಿಗೆ ಯೋಗ್ಯ? ಆ ಉಭಯವು ಕೇಡಾಯಿತ್ತು ಇದನರಿತು ಮಾಡಿ ಸದಾಶಿವಮೂರ್ತಿ ಲಿಂಗವನರಿವುದಕ್ಕೆ

೯೧ ಲಿಂಗಪ್ರಾಣಿಯು ಲಿಂಗವಂತನ ಉದರದಲ್ಲಿ ಒಂದು ಲಿಂಗ ನಿಂದು ಉದಿಸಿದಡೆ, ಆ ಕ್ಷಣವೇ ಲಿಂಗ ಸ್ವಾಯತವ ಮಾಡಿ, ಆ ಶಿಸುವ ತನ್ನ ಶಿಸುವೆಂದು ಮುಖವ ನೋಡುವುದು ಸದಾಚಾರವಲ್ಲದೆ, ಬರಿಯ ವಿಭೂತಿಯ ಪಟ್ಟವ ಕಟ್ಟಿ, ಗುರು ಕಾರುಣ್ಯವಾಯಿತ್ತೆಂದು ಅನುಸರಣೆಯಲ್ಲಿ ಆಡಿಕೊಂಬ ಪ್ರಪು ಕ್ರಮವಲ್ಲ ಅದೇನು ಕಾರಣವೆಂದಡೆ, ಈ ಲಿಂಗವೇದಿಯಾದುದಕ್ಕೆ ಕುರುಹು ಲಿಂಗವುಳ್ಳವರು ತನ್ನವರೆಂದೆನಬೇಕಲ್ಲದೆ, ಲಿಂಗವಿಲ್ಲದವರ ತನ್ನವರೆಂದರೆ ತನ್ನ ಸದಾಚಾ

ರಕ್ಕೆ ದ್ರೋಹ ಬಹುದು ಸಮಯಾಚಾರಕ್ಕೆ ಸಲ್ಲರು ಇದು ಕಾರಣ ಲಿಂಗ ಸ್ವಾಯತವಾಗಿಪ್ಪುದೇ ಪಥವಯ್ಯ ನಾಗಪ್ರಿಯಚನ್ನರಾಮೇಶ್ವರಾ

೯೨ ತನ್ನ ಮನೆಯ ಹೊಗದ ಗುರುವನರಸುವಾತ ಶಿಷ್ಯನಲ್ಲ ತಾ ಹೊಗದ ಮನೆಯಲುಪದೇಶವ ಮಾಡುವಾತ ಗುರುವಲ್ಲ. ಲಿಂಗವ ಮಾರಿಕೊಂಡುಂಬ ಗುರು ಶಿವದ್ರೋಹಿ. ಅಂಗವ ಮಾರಿಕೊಂಡುಂಬ ಶಿಷ್ಯ ಗುರುದ್ರೋಹಿ ಇವರಿಬ್ಬರನು ಭಕ್ತರೆಂಬುವರ ಕೂಡಲಚನ್ನ ಸಂಗಯ್ಯ ನಾಯಕ ನರಕದಲ್ಲಿಕ್ಕುವ.

## ಲಿಂಗಧಾರಣ ಸ್ಥಾನಗಳು

೯೩ ಅಂತರಂಗದಲ್ಲಿ ಲಿಂಗಧಾರಣವಾಯಿತ್ತೆಂದರೆ, ಬಹಿರಂಗದಲ್ಲಿ ಅಂಗದ ಮೇಲೆ ಇಷ್ಟಲಿಂಗ ಧಾರಣವಿಲ್ಲದೆ ಇರಬಹುದೇ? ಇರಬಾರದು ಅದು ವೀರ ಮಾಹೇಶ್ವರರ ಆಚರಣೆ ಅಲ್ಲದ ಕಾರಣ ಎಷ್ಟು ಅರುಹಾದರೂ ಅಂಗದ ಮೇಲೆ ಲಿಂಗಧಾರಣವಿಲ್ಲದಂದು ಅರುಹಲ್ಲ ಅದು ನಮ್ಮ ಪುರಾತನರ ಮತವಲ್ಲ ಸಾಕ್ಷಾತ್ ಪರಮೇಶ್ವರನು ಆದರೂ ಆಗಲಿ, ಅಂಗದ ಮೇಲೆ ಲಿಂಗ ಧಾರಣವಿಲ್ಲದಿರ್ದರೆ, ಆತನ ಮುಖವ ನೋಡಲಾಗದು ಕಾಣಾ ಅದೇನು ಕಾರಣವೆಂದರೆ ಅದು ಶಿವಾಚಾರದ ಪಥವಲ್ಲದ ಕಾರಣ ಗುರು ಕರುಣವಂ ಪಡೆದು ಲಿಂಗವ ಕಕ್ಷೆ, ಕರಸ್ಥಲ, ಉರ, ಉತ್ತಮಾಂಗ, ಮುಖಸೆಜ್ಜೆ, ಅಮಳೋಕ್ಯ, ಸ್ಥಾನಂಗಳಲ್ಲಿ ಧರಿಸುವುದೇ ಸತ್ಪಥವು ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ

೯೪ ಕಾಂಚನಕ್ಕೆ ಕಯ್ಯಾನದಿರ್ದಡೆ ಕರಸ್ಥಲದಲ್ಲಿ ಧರಿಸುವುದಯ್ಯ ಶಿವಲಿಂಗವ. ಕಾಂಕ್ಷೆ ಇಲ್ಲದಿರ್ದಡೆ ಕಕ್ಷೆಯಲ್ಲಿ ಧರಿಸುವುದಯ್ಯ ಶಿವಲಿಂಗವ ಅಪ್ಯಾಯನವಿಲ್ಲದಿರ್ದಡೆ ಉರಸೆಜ್ಜೆಯಲ್ಲಿ ಧರಿಸುವುದಯ್ಯ ಶಿವಲಿಂಗವ ಅನ್ನಪಾನಾದಿಗಳಿಗೆ ಬಾಯ್ದೆರೆಯದಿರ್ದಡೆ, ಅಮಳೋಕ್ಯದಲ್ಲಿ ಧರಿಸುವುದಯ್ಯ ಶಿವಲಿಂಗವ ಭಿನ್ನ ಶಬ್ದವಿಲ್ಲದಿರ್ದಡೆ, ಮುಖಸೆಜ್ಜೆಯಲ್ಲಿ ಧರಿಸುವುದಯ್ಯ ಶಿವಲಿಂಗವ ಲೋಕಕ್ಕೆರಗದಿರ್ದಡೆ ಉತ್ತ

ಮಾಂಗದಲ್ಲಿ ಧರಿಸುವುದಯ್ಯ ಶಿವಲಿಂಗವ ನಾಭಿಯಿಂದ ಕೆಳಯಿಕ್ಕೆ ಧರಿಸಲಾಗದು ಅದೇನು ಕಾರಣವೆಂದಡೆ, ಅದು ಹೇಯಸ್ಥಾನವಾದುದಾಗಿ ಕೂಡಲಚೆನ್ನಸಂಗಯ್ಯ

೯೪ ಸುಜ್ಞಾನೋದಯವಾಗಿ ಸಕಲ ಪ್ರಪಂಚ ನಿವೃತ್ತಿಯ ಮಾಡಿ ಶ್ರೀಗುರು ಕಾರುಣ್ಯವ ಹಡೆದು ಅಂಗದ ಮೇಲೆ ಲಿಂಗಧಾರಣವಾದ ಶಿವಶರಣನು ಷಟ್‌ಸ್ಥಾನದಲ್ಲಿ ಲಿಂಗವ ಧರಿಸುತಿರ್ದನದೆಂತೆಂದೊಡೆ, ಕರಸ್ಥಲವೆಂಬ ಪೃಥ್ವೀತತ್ವದಲ್ಲಿ ಆಚಾರ ಲಿಂಗವ ಸ್ವಾಯತವ ಮಾಡಿ, ಕಕ್ಷೆ ಎಂಬ ಅಪ್ಪು ತತ್ವದಲ್ಲಿ ಗುರುಲಿಂಗವ ಸ್ವಾಯತವ ಮಾಡಿ, ಹೃದಯವೆಂಬ ತೇಜತತ್ವದಲ್ಲಿ ಶಿವಲಿಂಗ ಸ್ವಾಯತವ ಮಾಡಿ, ಕಂಠವೆಂಬ ವಾಯುತತ್ವದಲ್ಲಿ ಜಂಗಮ ಲಿಂಗವ ಸ್ವಾಯತವ ಮಾಡಿ, ಉತ್ತಮಾಂಗವೆಂಬ ಆಕಾಶ ತತ್ವದಲ್ಲಿ ಪ್ರಸಾದ ಲಿಂಗವ ಸ್ವಾಯತವ ಮಾಡಿ, ಅವಳೋಕ್ಯವೆಂಬ ಆತ್ಮತತ್ವದಲ್ಲಿ ಮಹಾಲಿಂಗವ ಸ್ವಾಯತವ ಮಾಡಿ, ಇದಲ್ಲದೆ ಆಪಾದ ಮಸ್ತಕದ ಪರಿಯಂತರವು ಸರ್ವಾಂಗ ಲಿಂಗಮಯವಾಗಿ, ಆವ ವೇಷ ಧರಿಸಿದರೆಯೂ ಸರ್ವರಲ್ಲಿಯೂ ಶಿವಶರಣ ಅವರವರಂತೆ ಇರ್ಪುದಯ್ಯಾ, ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬಲಿಂಗ ನಿರ್ಮಾಯ ಪ್ರಭುವೇ

೯೫ ಕಕ್ಷೆಯಲ್ಲಿ ಲಿಂಗವ ಧರಿಸಿಕೊಂಡಾತ ಭಕ್ತನು ಕರಸ್ಥಲದಲ್ಲಿ ಲಿಂಗವ ಧರಿಸಿಕೊಂಡಾತ ಮಹೇಶ್ವರನು, ಉತ್ತಮಾಂಗದಲ್ಲಿ ಲಿಂಗವ ಧರಿಸಿಕೊಂಡಾತನು ಪ್ರಸಾದಿ ಉರಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತ ಪ್ರಾಣಲಿಂಗಿ ಕಂಠಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತ ಶರಣ ಅವಳೋಕ್ಯದಲ್ಲಿ ಲಿಂಗವ ಧರಿಸಿಕೊಂಡಾತ ಐಕ್ಯ ಇಂತೀ ಷಟ್‌ಸ್ಥಲದವರಿಲ್ಲಿ. ಲಿಂಗವ ಧರಿಸಿ ನಿತ್ಯ ಲಿಂಗಾಂಗ ಸಂಬಂಧಿಗಳಾಗಿ ಲಿಂಗಾವಧಾನಿಗಳಾಗಿ ಇಪ್ಪರಯ್ಯ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ಶರಣರು.

# ಗುರುಶಿಷ್ಯ ಸಂಬಂಧ

೯೬ ಗುರು ಶಿಷ್ಯ ಸಂಬಂಧವನೇನೆಂದುಪಮಿಸುವೆನಯ್ಯಾ? ಜ್ಯೋತಿಯಿಂದೊಗೆದ ಜ್ಯೋತಿಯಂತಿರಬೇಕು ದರ್ಪಣದೊಳಗಡಗಿದ ಪ್ರತಿಬಿಂಬದಂತಿರಬೇಕು ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ಮರೀಚಿಕಾಜಲದಂತಿರಬೇಕು

೯೭ ಗುರುಶಿಷ್ಯಭಾವದಿಂದ ಪ್ರಶ್ನೋತ್ತರವಾಗಿ ಕೇಳುವಾತ ಶಿಷ್ಯನು ಜ್ಞಾನದ್ವಾರದಿಂದ ಹೇಳುವಾತ ಗುರು ಪೂರ್ವಪಕ್ಷಬೋಧದಿಂದ ಶರೀರಾದಿ ಸಮಸ್ತ ಲೋಕವನು ತೋರಿಸಿ, ಉತ್ತರಪಕ್ಷ ಬೋಧದಿಂದ ಶರೀರಾದಿ ವಿಶ್ವವು ಲಿಂಗದಲ್ಲಿ ಲೀಯ್ಯವಾದ ನಿಲವ ತೋರಿದ ಗುರು ಸರ್ವಾಚಾರ ಜ್ಞಾನಪರನು ಶಿವಾನುಭೂತ ಸಂಯುಕ್ತನು ಶಿಷ್ಯನ ಸಂಶಯವ ಛೇದಿಸಿ ನಿಜವ ತೋರಿದ ಆ ಗುರುವಿನ ಶ್ರೀಪಾದಕ್ಕೆ ನಮೋ ನಮೋ ಎಂಬೆನು ಕಾಣಾ ನಿಜಗುರು ಸ್ವತಂತ್ರ ಶಂಭುಲಿಂಗೇಶ್ವರಾ

೯೮ ಗಂಡಗಿಂದಲು ಮುನ್ನ ಹೆಂಡತಿ ಹುಟ್ಟಿ ಗಂಡಗಿಂದಲು ಕಿರಿಯಳಾದಳು. ಆ ಹೆಂಡತಿ ಒಡಹುಟ್ಟಿದಳಾದಳೆಂಬುದ ಕೇಳಿ ಆ ಗಂಡ ಸಂಗವ ಮಾಡಿದರೆ ಇಬ್ಬರಿಗೊಬ್ಬ ಮಗ ಹುಟ್ಟಿತ್ತಲ್ಲಾ ಹುಟ್ಟಿದ ಮಗುವ ತಾಯಿ ಮುದ್ದಾಡಿಸಿದಡೆ ತಾಯ ತಕ್ಕೈಸಿತ್ತಿದೇನು ಹೇಳಾ? ತಾ ಎದ್ದು ಪತಿಭಕ್ತಿಯ ಮಾಡಿತ್ತ ಕಂಡು ಗುಹೇಶ್ವರ ಲಿಂಗಕ್ಕೆ ಜಕ್ಕಿ ಪರಿಣಾಮವಾಯಿತ್ತು

ಟೀಕು:– ಗುರುವೇ ಪತಿಯಾಗಿ ಶಿಷ್ಯನೇ ಸತಿಯಾದ ಕಾರಣ ಗಂಡಹೆಂಡಿರು ಎಂಬ ಶಬ್ದಕ್ಕರ್ಥ ಆ ಗುರುವಿನಿಂದ ಮುನ್ನ ಶಿಷ್ಯಂಗೆ ಜ್ಞಾನೋದಯವಾಗಿ ಸಂಸಾರ ಪಾಶವ ಛೇದನವ ಮಾಡಿದ ಬಳಿಕ ಬಂದು ಗುರುವನಾಶ್ರಯಿಸಿದ ಕಾರಣ ಗಂಡನಿಂದ ಮುನ್ನ ಹೆಂಡತಿ ಹುಟ್ಟಿದಳೆಂಬ ಶಬ್ದಕ್ಕರ್ಥ ಆ ಗುರುವಿನಿಂದ ಮುನ್ನ ಶಿಷ್ಯನಾದಡೆಯೂ 'ನ ಗುರೋರಧಿಕಂ ನ ಗುರೋರಧಿಕಂ' ಎಂಬುವನರಿದು ಗುರುಪುತ್ರನಾಗಿ ಶುಶ್ರೂಷೆಯ ಮಾಡ್ಪ ಗುಣದಿಂದ ಗಂಡಗಿಂದ ಕಿರಿಯಳಾದಳು ಎಂಬ ಶಬ್ದಕ್ಕರ್ಥ ಆ ಶಿಷ್ಯನ ಗುರುತತ್ವದಿಂ ಭಿನ್ನವಿಲ್ಲದೆ ಆ ಗುರುತತ್ವವೊಡನೆಯೇ ಜನಯುಪಾವನೆಂಬುದೀಗ ಹೆಂಡತಿ

ಒಡಹುಟ್ಟಿದಳಾದಳೆಂಬ ಶಬ್ದಕ್ಕರ್ಥ ಆ ಶಿಷ್ಯನಲ್ಲಿ ಆ ಶ್ರೀಗುರು ಅವಿರಳ ಸಂಬಂಧವ ಮಾಡಲಾಗಿ ಲಿಂಗವೆಂಬ ಶಿಷ್ಯ ಹುಟ್ಟಿತ್ತೆಂಬುದೀಗ ಇವರಿಗೊಬ್ಬ ಮಗ ಹುಟ್ಟಿದನೆಂಬ ಶಬ್ದಕ್ಕರ್ಥ ಅಂತು ಉದಿಸಿದ ಇಷ್ಟಲಿಂಗಕ್ಕೆ ಶಿಷ್ಯನೇ ಮಾತೃಸ್ಥಾನವಾದ ಭಕ್ತಾಂಗನೆ ಎನಿಸಿಕೊಂಡು ಲಿಂಗಭಕ್ತಿಯ ಮಾಡುತ್ತಿರ್ದನೆಂಬುದೀಗ ಹುಟ್ಟಿದ ಮಗುವ ತಾಯಿ ಮುದ್ದಾಡಿಸಿದಡೆ ಎಂಬ ಶಬ್ದಕ್ಕರ್ಥ ಅಂತು ಇಷ್ಟಲಿಂಗದಲ್ಲಿ ಭಕ್ತಿ ನೆಲೆಗೊಂಡ ಸದ್ಭಕ್ತನ ಅಂಗ ಪ್ರಾಣ ಸರ್ವೇಂದ್ರಿಯಂಗಳಲ್ಲಿ ಲಿಂಗವೇ ಪ್ರವೇಶಿಸಿತ್ತೆಂಬುದೀಗ ತಾಯ ತರ್ಕೈಸಿತ್ತಿದೇನು ಹೇಳಾ ಎಂಬ ಶಬ್ದಕ್ಕರ್ಥ ಅಂತು ಲಿಂಗವೇ ಪ್ರವೇಶಿಸಿ ಸರ್ವಾಂಗ ಲಿಂಗವಾದ ಕಾರಣ ಈ ಲಿಂಗಪದವು ಗುರೂಪದೇಶದಿಂದಾಯಿತ್ತೆಂದು ಗುರುಭಕ್ತಿಯ ಬಿಡದೆ ಮಾಡುತ್ತಿರ್ದನೆಂಬುದೀಗ ತಾಯೆದ್ದು ಪತಿಭಕ್ತಿಯ ಮಾಡಿ ಎಂಬ ಶಬ್ದಕ್ಕರ್ಥ ಅಂತಪ್ಪ ಗುರುಭಕ್ತಿಯ ಮಾಡಿ ಪರಶಿವನನರಿದು ಪರಮ ಹರುಷಿತನಾದನೆಂಬುದೀಗ ಪತಿಭಕ್ತಿಯ ಮಾಡಿತ್ತ ಕಂಡು ಗುಹೇಶ್ವರ ಲಿಂಗಕ್ಕೆ ಭಕ್ತಿಪರಿಣಾಮವಾಯಿತ್ತೆಂಬ ಶಬ್ದಕ್ಕರ್ಥ

೯೯ ಆಚಾರವಿಲ್ಲದವನ್ನ ಗುರುವು ಕಂಡರೆ ವಿಚಾರಿಸಿ ನೋಡನು ಜ್ಞಾನಾಜ್ಞಾನವಲ್ಲಿ ಆಚಾರವಿಲ್ಲದ ಗುರುವು, ಆಚಾರವಿಲ್ಲದ ಶಿಷ್ಯ, ಇವರೀರ್ವರು ಚರಿಸಿ ಬಿಡಗಿನ ಭವಕ್ಕೆ ಗುರಿಯಾದರು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವೆ

## ಶಿಷ್ಯೋಪದೇಶ

೧೦೦. ಗುರುಶಿಷ್ಯ ಸಂಬಂಧವೆಂತೆಂದೊಡೆ, ಹೇಳಿಹೆ ಕೇಳಿರೋ ಸದ್ಭಕ್ತ ಶರಣಜನಂಗಳೆಲ್ಲರು ಶ್ರೀಗುರು ಶಿಷ್ಯಗೆ ಉಪದೇಶವ ಮಾಡುವ ಕಾಲದಲ್ಲಿ, ಶಿಷ್ಯನ ಸ್ಥೂಲತನು ಸೂಕ್ಷ್ಮತನು ಕಾರಣ ತನುವೆಂಬ ತನುತ್ರಯಂಗಳಲ್ಲಿ ಮುಸುಕಿದ ಆಣವಮಲ ಮಾಯಾಮಲ ಕಾರ್ಮಿಕ ಮಲವೆಂಬ ಮಲತ್ರಯಂಗಳ ಕಳೆದು ಮಾಯಾ ಪ್ರಕೃತಿ ಕಾಯದ ಪೂರ್ವಾಶ್ರಯವಲ್ಲಿ ಚಿದಗ್ನಿಯಿಂದ ಸುಟ್ಟು ಚಿತ್ಕಾಯವೆಂದೆನಿಸಿ, ಆ ಚಿತ್ಕಾಯ

ಸ್ವರೂಪಾದ ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸಿ ॥ಶ್ಲೋ॥ ಯಥಾಕಾಲ ಸ್ತಥಾಭಾವೋ ಯಥಾ ಭಾವಸ್ತಥಾ ಮನಃ ॥ ಯಥಾಮನಸ್ತಥಾ ತೃಪ್ತಿ ದೃಷ್ಟಿಸ್ತಥಾಸ್ಥಲಂ ॥ ಎಂಬ ಆಗಮೋಕ್ತವಾಗಿ, ಆ ಶಿಷ್ಯನ ಪಶ್ಚಿಮ ದೇಶದಲ್ಲಿ ಬೆಳಗುತ್ತಿರ್ದ ನಿತ್ಯನಿರಂಜನ ಪರಮ ಕಳೆಯನ್ನು ಧ್ಯಾನಿಸಿ ಭಾವ ಸ್ಥಲಕ್ಕೆ ತಂದು, ಆ ಭಾವಸ್ಥಲದಿಂದ ಮನಸ್ಥಲಕ್ಕೆ ತಂದು, ಆ ಮನಸ್ಥಲದಿಂದ ದೃಷ್ಟಿ ಸ್ಥಲಕ್ಕೆ ತಂದು, ಆ ದೃಷ್ಟಿ ಸ್ಥಲದಿಂದ ಕರ ಸ್ಥಲಕ್ಕೆ ತಂದು, ಆ ಕರಸ್ಥಲದಿಂದ ಸಾಕಾರ ಮೂರ್ತಿಯಲ್ಲಿ ಮೂರ್ತಿಗೊಳಿಸಿ, ಆ ಲಿಂಗಕ್ಕೆ ಜಂಗಮಪಾದತೀರ್ಥ ಪ್ರಸಾದವನೇ ಪ್ರಾಣಕಳೆ ಎಂದರ್ಪಿಸಿ, ಮತ್ತು ಇಷ್ಟಲಿಂಗವೇ ಅನಿಷ್ಟ ಪಂಚಕಂಕಳೆದು ಕತ್ತಲೆಯ ನೋಡಿಸುವುದಕ್ಕೆ ಚತುರನೆಂದು ನಂಬುಗೆಗೊಳಿಸಿ, ಮತ್ತಮಾ ಇಷ್ಟಲಿಂಗದಲ್ಲಿ, ವೃತ್ತ, ಕಟಿ, ವರ್ತುಲ, ಗೋಮುಖ, ನಾಳ ಗೋಳಕವೆಂಬ ೬ ಸ್ಥಲಂಗಳ ತೋರಿ, ಆ ಆರು ಸ್ಥಲಂಗಳಲ್ಲಿ ನಕಾರ, ಮಕಾರ, ಶಿಕಾರ ವಕಾರ, ಯಕಾರ, ಓಂಕಾರವೆಂಬ ಆರು ಪ್ರಣವಂಗಳನ್ನು ಬೋಧಿಸಿ, ಆ ಆರು ಪ್ರಣವುಗಳನ್ನೇ ಆಚಾರಲಿಂಗ, ಗುರು ಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂಬ ಆರು ಲಿಂಗಗಳೆಂದರುಪಿ, ಆರು ಲಿಂಗಂಗಳಿಗೆ ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯಂಗಳೆಂಬ ಆರು ಇಂದ್ರಿಯಂಗಳನ್ನೇ ಆರು ಮುಖಗಳೆಂದು ತಿಳುಪಿ, ಆ ಮುಖಂಗಳಿಗೆ ಗಂಧ, ರುಚಿ, ರೂಪು, ಸ್ಪರ್ಶನ, ತೃಪ್ತಿ ಎಂಬಾರು ಪದಾರ್ಥಗಳನ್ನು, ಶ್ರದ್ಧಾ, ನೈಷ್ಠಿಕಾ, ಸಾವಧಾನ, ಅನುಭಾವ, ಸಮರಸವೆಂಬಾರು ಭಕ್ತಿಗಳಿಂದರ್ಪಿಸಿ, ಸಕೀಲವ ತೋರಿಸಬಲ್ಲಾತನೇ ಗುರುವು ಆ ಗುರುವಿನ ಕಾರುಣ್ಯದಿಂದ ಪಡೆದಂಥ ಇಷ್ಟಲಿಂಗವನ್ನು ಕರ, ಮನ, ಭಾವ, ಮಂಟಪದಲ್ಲಿ ಮೂರ್ತಿಗೊಳಿಸಿ ಸಗುಣಪೂಜೆ, ನಿರ್ಗುಣಪೂಜೆ, ಕೇವಲ ನಿರ್ಗುಣ ಪೂಜೆಯನ್ನು ಮಾಡಿ ಆ ಲಿಂಗದ ಮಹಾ ಬೆಳಗಿನೊಳಗೆ ತನ್ನಂಗದ ಕಳೆಯನಡಗಿಸಿ, ಉರಿ ಕರ್ಪುರ ಸಂಯೋಗದಂತೆ, ಅವಿರಳ ಸಮರಸವಾಗಿರ್ಪಾತನೇ ಶಿಷ್ಯನು ಇಂತೀ ಅರುಹು ಆಚಾರ ಸನ್ನಿಹಿತ ಗುರುಶಿಷ್ಯರಿಬ್ಬರು ಬಯಲು ಬಯಲ ಬೆರೆದಂತೆ ನಿರವಯ ಬ್ರಹ್ಮದಲ್ಲಿ ನಿಷ್ಪತ್ತಿಯನೈದಿಪ್ಪರು ನೋಡಾ ಇಂತೀ ಅರುಹಿನ ವಿಚಾರವನರಿಯದೆ ಮಾಡುವ ಮಾಟವೆಲ್ಲ ಅಜ್ಞಾನಗಡಣವೊಳಗು ಈ ಅಜ್ಞಾನಿ

ಗುರುಶಿಷ್ಯರ ವಿಧಿ ಎಂತಾಯಿತ್ತೆಂದರೆ, ಹುಟ್ಟು ಗುರುಡನ ಕೈಯ್ಯ ಕೆಟ್ಟ ಗಣ್ಣಾವ ಪಿಡಿದು ಬಟ್ಟೆಯ ಕಾಣದೆ, ಕಮರಿಬಿದ್ದು ಸತ್ತಂತಾಯಿತ್ತು ಕಾಣಯ್ಯ ಅಖಂಡೇಶ್ವರಾ

೧೦೧. ಮಹಾಜ್ಞಾನ ತಲೆದೋರೆ, ಸರ್ವಸಂಗ ಪರಿತ್ಯಾಗವ ಮಾಡಿ ಗುರೂಪಾವಸ್ಥೆಯ ಮಾಡಿದ ಶಿಷ್ಯೋತ್ತಮಂಗೆ ಸೇವ್ಯರ ಭೃತ್ಯರಿಂದ ಪಂಚ ಕಲಶಂಗಳ ಸ್ಥಾಪಿಸಿ, ಸೂತ್ರವ ಹಾಕಿಸಿ, ಅಷ್ಟವಿಧಾರ್ಚನೆ ಷೋಡಶೋಪಚಾರಗಳ ಮಾಡಿಸಿ, ತಮ್ಮ ಕೃಪಾ ಹಸ್ತವನಿಟ್ಟು, ಜಂಗಮ ಮೂರ್ತಿಗಳ ಸಿಂಹಾಸನದ ಮೇಲೆ ಮೂರ್ತವ ಮಾಡಿಸಿ, ಶ್ರೀಗುರುಲಿಂಗವು ಎದ್ದು ಪ್ರಮಥರೊಡಗೂಡಿ ಕುಮಾರರಾವ ಮಾಡಿದಂಗ ಲಿಂಗವ ತನ್ನ ಚರಣತಳಕ್ಕೆ ಸೂತ್ರವ ಹಿಡಿಸಿ, ಗುರುಶಿಷ್ಯತ್ವವೆಂಬ ಉಭಯ ಭೇದವಳಿದು ಏಕರೂಪವಾಗಿ ನಿರಂಜನ ಮೂರ್ತಿಗೆ ಅಭಿವಂದಿಸಿ, ಅಷ್ಟಾಂಗ ಪ್ರಣತರಾಗಿ ಅಪ್ಪಣೆಯ ಬೆಸಗೊಂಡು, ಆ ನಿರಂಜನ ಮೂರ್ತಿಗೆ ಪ್ರತಿ ಸಿಂಹಾಸನವ ಮಾಡಿಸಿ, ಗುರುಶಿಷ್ಯವಭಿಮುಖವಾಗಿ ಗುರುವಿನ ದೃಕ್ಕು ಶಿಷ್ಯನ ಮಸ್ತಕದಲ್ಲಿ ಸೂಸೆ, ಆ ಶಿಷ್ಯನ ದೃಕ್ಕು ಗುರುವಿನ ಚರಣಕಮಲದಲ್ಲಿ ಸೂಸೆ ಏಕಲಿಂಗ ನಿಷ್ಠೆಯಿಂದ ಸಾವಧಾನ ಭಕ್ತಿ ಕರಿಗೊಂಡು, ಆ ಲಿಂಗಾಂಗದ ಭಾಳದ ಪೂರ್ವ ಲಿಖಿತವ ಜಂಗಮ ಚರಣೋದ್ಧೂಳನದಿಂದ ತೊಡೆದು, ಲಿಂಗಕ್ಕೆ ಶಿವ ಪೂಜೆಯ ಮಾಡಿಸಿ, ಲಿಂಗಕ್ಕೆ ಲಿಂಗವ ತೋರಿ, ಪಾಣಿಗ್ರಹಣವ ಮಾಡಿ, ಮಂತ್ರ ವರ್ಣದಲ್ಲಿ ಉಸುರಿ ಪ್ರಮಥರೊಡಗೂಡಿ, ಸೇಸೆಯನೆರೆದು, ಕಂಕಣವ ಕಟ್ಟಿ, ನಿಮಿಷಾರ್ಧವಗಲಬೇಡೆಂದು ಅಭಯ ಹಸ್ತವನಿಟ್ಟು ಸರ್ವಾಂಗದಲ್ಲಿ ಚಿಹ್ನನ ಲಿಂಗವನಿತ್ತುದೇ ಪ್ರಥಮದಲ್ಲಿ ಗುರು ಪ್ರಸಾದ ನೋಡಾ ಅದರಿಂ ಮೇಲೆ ಕ್ರಿಯಾಮಂತ್ರವ ಹೇಳಿ, ದಶವಿಧ ಪಾದೋದಕ ಏಕಾದಶ ಪ್ರಸಾದವ ರುಣಿಸಿದುದೇ ದ್ವಿತೀಯದಲ್ಲಿ ಲಿಂಗ ಪ್ರಸಾದ ನೋಡಾ. ಅದರಿಂ ಮೇಲೆ ಲಿಂಗಾಂಗ ಷಟ್‌ಸ್ಥಲಂಗಳಲ್ಲಿ ಅಷ್ಟವಿಧ ಶೀಲ ಮೊದಲಾದ ಸಮಸ್ತ ಶೀಲ ಮರ್ಮವ ಕರುಣಿಸಿದುದೇ ತೃತೀಯದಲ್ಲಿ ಜಂಗಮ ಪ್ರಸಾದ ನೋಡಾ ಅದರಿಂದತ್ತ ಲಿಂಗಾಂಗವೆರಡಳಿದು ಸರ್ವಾಚಾರ ಸಂಪತ್ತಿನ ಆಚರಣೆಯ ತೋರಿ, ಮಹಾಪ್ರಸಾದ ಶಿವಾನುಭವ ಸ್ವರೂಪವ ಬೋಧಿಸಿ ಶ್ರೀಗುರು ಲಿಂಗಜಂಗಮರ ಅಂತರಂಗದಲ್ಲಿ ಬೆಳಗುವ ಚಿಜ್ಜ್ಯೋತಿ ದರ್ಶನವೇ ಚತುರ್ಥದಲ್ಲಿ ನಿಜ ಪ್ರಸಾದ

ನೋಡಾ ಈ ಚತುರ್ವಿಧ ಪ್ರಸಾದ ಸ್ವರೂಪವೇ ನೀನೆಂದರಿದು ಇನ್ನಾವ ಭಯಕ್ಕೆ ಹೆದರಬೇಡವಯ್ಯಾ ಪ್ರಮಥರಾಚರಿಸಿದ ಆಚಾರ ಕ್ರಿಯಾ ಜ್ಞಾನಾಚರಣೆಯ ಸಂಬಂಧಕ್ಕೆ ಬಂದುದ ಕೊಂಡು ಬಾರದುದನುಳಿದು ಚಿದ್ಘನ ಮಹಾಲಿಂಗದಲ್ಲಿ ಏಕವಾಗಿ ಬಾರಾ ಸಂಗನಬಸವೇಶ್ವರಾ

೧೦೨ ಗುರುವೇ ನಮೋ ನಮೋ ಶರಣಾಗತ ರಕ್ಷಕರ ಗುರುವೇ ನಮೋ ನಮೋ ಜೀಡಿಕುಂಡಲಿಯುಪದೇಶದಂತೆ ಎನ್ನ ನಿಮ್ಮಂತೆ ಮಾಡಿದ ಗುರುವೇ ನಮೋ ನಮೋ ಸಕಲದೊಳಹೊರಗೆ ಎನ್ನ ವ್ಯಾಪಕವ ಮಾಡಿ ತೋರಿದ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ಗುರುವೇ ನಮೋ ನಮೋ

## ಗುರುಶಿಷ್ಯ ಸಾಮರಸ್ಯವು.

೧೦೩ ಶ್ರೀಗುರುವು ಮಾಡಿದ ಗುರುತ್ವವು ಉಪಮಾತೀತವಯ್ಯ ನೇತ್ರದಲ್ಲಿ ತನ್ನ ರೂಪ ತುಂಬಿ, ನೇತ್ರವನು ಗುರುವ ಮಾಡಿದ ಶ್ರೋತ್ರದಲ್ಲಿ ಮಹಾಮಂತ್ರವ ತುಂಬಿ ಶ್ರೋತ್ರವ ಗುರುವ ಮಾಡಿದ ಘ್ರಾಣದಲ್ಲಿ ಗುರುಪಾದ ಪದ್ಮದಲ್ಲಿಯ ಮಹಾಗಂಧವನು ತುಂಬಿ, ಘ್ರಾಣವನು ಗುರುವ ಮಾಡಿದ ಜಿಹ್ವೆಯಲ್ಲಿ ತನ್ನ ಕರುಣ ಪ್ರಸಾದವ ತುಂಬಿ, ಜಿಹ್ವೆಯನು ಗುರುವ ಮಾಡಿದ ಕಾಯವನು ಭಕ್ತಕಾಯ ಮಮಕಾಯವೆಂದು ಪ್ರಸಾದಕಾಯವೆಂದೆನಿಸಿ, ಕಾಯವನು ಗುರುವ ಮಾಡಿದ ಪ್ರಾಣವನು ಲಿಂಗಪ್ರಾಣ ಸಂಬಂಧವ ಮಾಡಿ, ಪ್ರಾಣವನು ಗುರುವ ಮಾಡಿದ ಆತು ಅಂತರಂಗ ಬಹಿರಂಗವನು ಗುರುವ ಮಾಡಿ ಸರ್ವಾಂಗವನು ಗುಪ್ತವ ಮಾಡಿದ ಮಹಾಗುರುವಿಂಗೆ ನಾನಿನ್ನೇನ ಮಾಡುವೆನಯ್ಯ ' ಗುರು ಪೂಜೆಯಂ ಮಾಡಲು ಆವಾವ ದ್ರವ್ಯಂಗಳನು ಆವಾವ ಪದಾರ್ಥಂಗಳನು ಆವಾವ ಪುಷ್ಪಾದಿಗಳನು ವಿಚಾರಿಸಿ ನೋಡಿದಡೆ ಆವಾವೂ ಗುರುತ್ವವಿಲ್ಲ ಸರ್ವದ್ರವ್ಯ ಮೂಲವು, ಸರ್ವಪದಾರ್ಥ ಮೂಲವು, ಸರ್ವರಸ ಪುಷ್ಪ ಫಲಾದಿಗಳೆಲ್ಲಕ್ಕೆಯು ಮೂಲಗಮನವು ಗುರುತ್ವವುಳ್ಳುದು ಎನ್ನ ಶಿವನು ಶ್ರೀಗುರುವಿನ ವರ್ಣನವ ಮಾಡಿ ಸಬಿಯಪ್ಪನಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೧೦೪ ಯಥಾ ಬೀಜಂ ತಥಾಂಕುರಂ ತಪ್ಪದು ಕಲ್ಪವೃಕ್ಷದಿಂದಾದ ಬೀಜ ಕಲ್ಪವೃಕ್ಷವಪ್ಪುದು ತಪ್ಪದು ದಿವ ದಿವ ತಪ್ಪದು ನೋಡಾ. ಕಾಮಧೇನುವಿನ ಶಿಶು ಕಾಮಧೇನುವಪ್ಪುದು ತಪ್ಪದು ನೋಡಾ ಸದ್ಗುರುವಿನಿಂದಾದ ಶಿಷ್ಯನು ಸದ್ಗುರುವಪ್ಪುದು ತಪ್ಪದು ನೋಡಾ 'ಯಥಾಬೀಜಂ ತಥಾ ಕುರಂ' ಎಂಬ ವಾಕ್ಯ ತಪ್ಪದು ತಪ್ಪದು ಶಿವಒಲ್ಲಿ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೧೦೫ ಜ್ಯೋತಿಯ ಸಂಗದಿಂದ ಕರ್ಪುರ ಜ್ಯೋತಿಯಪ್ಪಂತೆ, ಅಪ್ಪುವಿನ ಸಂಗದಿಂದ ಉಪ್ಪು ಅಪ್ಪುವಪ್ಪಂತೆ, ಶ್ರೀಗುರುವಪ್ಪುದು ತಪ್ಪದು ಶಿವನಾಣೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ

೧೦೬ ಗುರುಶಿಷ್ಯ ಸಂಬಂಧವಾದುದಕ್ಕಾವುದು ಕುರುಹಯ್ಯಾ? ಹಿಂದ ಬಿಟ್ಟು ಮುಂದೆ ಹಿಡಿಯಲೇ ಬೇಕು ಕೂಡಲಸಂಗಮದೇವಯ್ಯ ಕಿಚ್ಚಿನೊಳಗ ಕೋಲ ಬಯಚ್ಚಿಟ್ಟಂತೆ ಇರಬೇಕು

೧೦೭ ಗುರುವಿಗೆ ಲಿಂಗ ಬಂದು ಗುರುವಾದುದನರಿದು, ಮತ್ತರಿಯದ ಕೆಟ್ಟನಲ್ಲಾ ಶಿಷ್ಯನೆಂದು ಆ ಲಿಂಗವೇ ಗುರುವೆಂಬುದನರಿಯದೆ, ನಾ ಶಿಷ್ಯನೆಂದು ಕೆಟ್ಟಿದನಲ್ಲಾ ಆ ಲಿಂಗವ ಆವ ಬೀಜವ ಬಿತ್ತಿದಡೂ ಆ ಬೀಜವಪ್ಪುದಲ್ಲದೆ ಬೇರಪ್ಪುದೇ? ಜ್ಯೋತಿ ಜ್ಯೋತಿಯ ಮುಟ್ಟಿದಂತೆ ಇದಿರಡೆ ಇಲ್ಲದ ಗುರುಕರಜಾತನ ಮಾಡಬೇಕು ನಾನು ಕರ್ತು ಆವನು ಭೃತ್ಯನೆಂದಲ್ಲಿ ಗುರುವಾದನಲ್ಲದ, ಅಘಹರ ಶ್ರೀಗುರುವಾದುದಿಲ್ಲ ಸದ್ಯೋಜಾತ ಲಿಂಗಕ್ಕೆ

೧೦೮ ಗುರುವ ತಲೆಯಲ್ಲಿ ಹೊತ್ತು ನಡೆವ ಶಿಷ್ಯನಲ್ಲಿ ಗುರುವಡಗಿ, ಶಿಷ್ಯ ಗುರುವಾದ ಪರಿಯ ಬಲ್ಲವರಾರಯ್ಯ? ಗುರುವಿನ ಗುರುತ್ವ ಶಿಷ್ಯಂಗಾಯಿತ್ತು ಶಿಷ್ಯನ ಶಿಷ್ಯತ್ವ ಎಲ್ಲಿ ಹೋಯಿತ್ತೆಂದರಿಯಬಾರದು ಗುರುವಿಲ್ಲದ ಶಿಷ್ಯಂಗೆ ಪರವಿಲ್ಲ ಪರವಿಲ್ಲದ ಶಿಷ್ಯ ಸ್ವಯವಾದನೆಂಬುದ ನಿಮ್ಮ ಶರಣರ ಅನುಭಾವದಲ್ಲಿ ಕಂಡೆನು ಕಾಣಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ

೧೦೯ ತಂದೆಯ ಸಾಮರ್ಥ್ಯದಿಂದ ಹುಟ್ಟಿದ ಮಗನಿಗೆ ತಂದೆಯ ಸ್ವರೂಪಲ್ಲದೆ ಬೇರೊಂದು ರೂಪೆಂದು ತಿಳಿಯಲುಂಟೇ? ಶಿವ ತಾನೆ ತನ್ನ ಸಾಮರ್ಥ್ಯವೇ ಒಂದೆರಡಾಗಿ, ಗುರುವೆಂದು ಶಿಷ್ಯನೆಂದು ಆಯಿತ್ತೆಂದರೆ,

ಆ ಗುರುವಿಂಗೆ ಶಿಷ್ಯಂಗೆ ಬೇರಿಟ್ಟು ನುಡಿಯಲಾಗದಯ್ಯ ಗುರುವಿನ ಅಂಗ ಶಿಷ್ಯ, ಶಿಷ್ಯನ ಲಿಂಗ ಗುರು ಗುರುವಿನ ಪ್ರಾಣ ಶಿಷ್ಯ, ಶಿಷ್ಯನ ಪ್ರಾಣ ಗುರು. ಗುರುಶಿಷ್ಯ ಸಂಬಂಧವಾದ ಗುರುಶಿಷ್ಯರೆಂದು ಬೇರಿಟ್ಟು ನುಡಿವ ಭ್ರಷ್ಟರನೇನೆಂಜೆನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ?

೧೮೦ ಒಳಗು ಹೊರಗು ಎಂಬ ಉಭಯ ಸಂದೇಹದಿಂದ ಗುರುಶಿಷ್ಯರೆಂದು ನುಡಿದುಕೊಂಡು ನಡೆಯಬೇಕಾಯಿತ್ತಲ್ಲದೆ, ಒಳ ಹೊರಗೆಂಬ ಉಭಯುವಳಿದು, ಜೀವಪರಮರೆಂಬ ಉಭಯವು ಪರಮ ನೊಬ್ಬನೇ ಎಂದು ತಿಳಿದು, ಗುರುವೇ ಶಿಷ್ಯ, ಶಿಷ್ಯನೇ ಗುರುವಾದುದ ನೇನೆಂಬನಯ್ಯ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ?

೧೮೧ ಶಿಷ್ಯನ ಗುರುತ್ವವನು, ಗುರುವಿನ ಮಹತ್ವವನು, ಆರಯ್ಯ ಬಲ್ಲವರು? ಗುರು ಶಿಷ್ಯನಾದ ಪರಿಯನು ಶ್ರೀಪಂಚಾಕ್ಷರಿಯ ಉಚ್ಚಾರಣೆಯ ವಿಶ್ವಾಸದ ಮಥನದಿಂದ ವಶಿಷ್ಠ ವಾಮದೇವ ಮೊದಲಾದ ಸಮಸ್ತ ಋಷಿಗಳಿಗೆ ಹಿರಿದಪ್ಪ ಶಿಷ್ಯ ಗುರುವಾದ ಪರಿಯನು ಆರಯ್ಯ ಬಲ್ಲವರು? ವಾಙ್ಮನಾತೀತ ಉಪಮಿಸಬಾರದ ಘನವು ಮಹಾಕ್ರಿಯನು ಭಕ್ತಿಯಿಂದ ಗುರುಭಕ್ತಿ ವತ್ಸಲನಾಗಿ ಶಿಷ್ಯನಾದ ಪರಿಯನು ಆ ಬೀಜವೃಕ್ಷನ್ಯಾಯ ದಂತೆ ಅವಿನಾಭಾವವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೧೮೨ ಗುರುಶಿಷ್ಯ ಸಂಬಂಧದನುಭಾವವ ಕೇಳಿರಯ್ಯ ಗುರು ವೆಂಬ ಪರಾಪರ, ಗುರುವೆಂಬ ಪರಮಾರ್ಥ, ಶಿಷ್ಯನೆಂಬ ಏಕಾರ್ಥ, ಗುರುವೆಂಬವನಲ್ಲಿ ಶಿಷ್ಯನೆಂಬವನೆಂತೋ? ಶಿಷ್ಯನೆಂಬವನಲ್ಲಿ ಗುರು ವೆಂಬವನೆಂತೋ? ಸಿದ್ಧಸೋಮನಾಥನಲ್ಲಿ ಶಬ್ದಕ್ಕೆಂಬಿಲ್ಲ

೧೮೩ ಗುರುಶಿಷ್ಯ ಸಂಬಂಧವನೇನೆಂದುಪಮಿಸುವೆನಯ್ಯ ? ಜ್ಯೋತಿಯಿಂದೊದಗಿದ ಜ್ಯೋತಿಯಂತಿರಬೇಕು ದರ್ಪಣದೊಳಡಗಿದ ಪ್ರತಿಬಿಂಬದಂತಿರಬೇಕು ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಮರೀಚಿಕಾಜಲದಂತಿರಬೇಕು

೧೮೪ ಗುರುಶಿಷ್ಯ ಸಂಬಂಧವನರಿಯಲೆಂದು ಹೋದರೆ ತಾನೇ ಗುರುವಾದ, ತಾನೇ ಶಿಷ್ಯನಾದ, ತಾನೇ ಲಿಂಗವಾದ, ಗುಹೇಶ್ವರಾ

ಶಿಷ್ಯ ಶರಣನ ಕಾಯುವ ಕೈಯಲ್ಲಿ ಲಿಂಗವ ಕೊಟ್ಟರೆ ಭಾವ ಒತ್ತಲೆ ಯಾಯಿತ್ತು

೧೧೫ ಗುರುಶಿಷ್ಯ ಸಂಬಂಧದಿರವನಿನ್ನಾರು ಬಲ್ಲರಯ್ಯಾ ? ನೆರೆದ ನೆರವಿಂಗೆ ಹೇಳಲುಂಟೆ ? ಈ ಮಾತು ಸ್ತ್ರೀ ಪುರುಷರು ಕೂಡಿದ ಕೂಟವ ಮತ್ತೊಬ್ಬರಿಗರುಹಬಾರದು. ಗುರು ಶಿಷ್ಯ ಸಂಬಂಧವ ಇನ್ನಾರು ಬಲ್ಲರಯ್ಯ ಕಲಿದೇವಯ್ಯ ?

೧೧೬ ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ, ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು, ಏನೆಂಬೆನೇನೆಂಬೆ ? ಎರಡಿಲ್ಲದ ಘನವ ಏನೆಂಬೆನೇನೆಂಬೆ ? ಉಭಯವೊಂದಾದುದ ಏನೆಂಬೆನೇನೆಂಬೆ ? ಕೂಡಲಚನ್ನಸಂಗನಲ್ಲಿ ಗುರುಶಿಷ್ಯಸಂಬಂಧವಪೂರ್ವ

೧೧೭ ಒಂದೆಂಬೆನೆ ? ಎರಡಾಗಿದೆ. ಎರಡೆಂಬೆನೆ ? ಒಂದಾಗಿದೆ. ಒಂದೆರಡೆಂಬ ಸಂದೇಹವದೇನೋ ? ಅಗಲಿಲ್ಲದ ಕೂಟಕ್ಕೆ ಬಿಚ್ಚಿ ಬೇರಾಗದ ಉಪದೇಶ. ಗುರುಶಿಷ್ಯರೆಂಬ ಭಾವಕ್ಕೆ ಭೇದ ಉಂಟೇ ಗುಹೇಶ್ವರಾ ?

೧೧೮ ಜ್ಯೋತಿಯೊಳಗಿರ್ದ ಕರ್ಪುರಕ್ಕೆ, ಅಪ್ಪುವಿನೊಳಗಿಪ್ಪ ಉಪ್ಪಿಂಗೆ, ಶ್ರೀಗುರುವಿನೊಳಗಿಪ್ಪ ಶಿಷ್ಯಂಗೆ, ಬೇರೆ ಬೇರೆ ಕ್ರಿಯಾವರ್ತನೆಯುಂಟೇ ಗುಹೇಶ್ವರಾ ?

೧೧೯ ಗುರುವಿನ ಹಿರಿ ವಿಪರೀತವಾಯ್ತು ಭ್ರಮರ ಕೀಟನ್ಯಾಯವಂತಾಯಿತ್ತು. ಗುರು ತನ್ನ ನೆನಹನ್ನುಬರ ಎನ್ನನು ಗುರುವ ಮಾಡಿದನು. ಇನ್ನು ಶಿಷ್ಯನಾಗಿ ಶ್ರೀಗುರುವ ಪೂಜಿಸುವವರಾರು ಹೇಳಾ ಗುಹೇಶ್ವರಾ ?

೧೨೦ ಅರಿವನರಿದಿಹೆನೆಂಬರೆ ಮರವೆ. ಮರವ ಮರೆದಿಹೆನೆಂಬುದ ಮರವೆ. ಸಾಕಾರ ನಷ್ಟ, ನಿರಾಕಾರ ದೃಷ್ಟವೆಂಬುದು ಭಾವದ ಬಳಕ. ಗುರುವೆಂಬುದು ಶಿಷ್ಯನೆಂಬಲ್ಲಿಯೇ ಹೋಯಿತ್ತು. ಶಿಷ್ಯನೆಂಬುದು ಗುರುವೆಂಬಲ್ಲಿಯೇ ಹೋಯಿತ್ತು. ನಿರ್ಣಯದಲ್ಲಿ ನಿಜೈಕ್ಯನಾದೆನೆಂಬರೆ, ಎಚ್ಚರಿಕೆಯಲ್ಲಿ ತಪ್ಪಿತ್ತು. ಸಹಜ ಸಂಬಂಧಕ್ಕೆ ಗುರು ಉಂಟೇ ? ಗುಹೇಶ್ವರಲಿಂಗದಲ್ಲಿ ಪರವೆಂದಲ್ಲಿ ಗುರು ಉಂಟಿಲ್ಲದೆ, ಸ್ವಯವೆಂದಲ್ಲಿ ನುಡಿಯಲಿಲ್ಲ

೧೯೧ ದರ್ಪಣದೊಳಗಣ ರೂಹಿಂಗೆ ಆ ದರ್ಪಣವೇ ಉತ್ಪತ್ತಿ ಸ್ಥಿತಿ ಲಯವಲ್ಲದೆ ಮರ್ತ್ಯಲೋಕದ ಪ್ರಕೃತಿಯುಲಿಲ್ಲವೇಕಯ್ಯ? ಆ ಲೋಕದೊಳಗೆ ಉತ್ಪತ್ತಿ ಸ್ಥಿತಿ ಲಯ ಇದೆಂತಹ ದೇಹ ಕರ್ಮಬದರು? ಒಂದರ ಪರಿ ಒಂದಕ್ಕಿಲ್ಲಿ ಕಂಡಿರೇ ದೃಷ್ಟವ ಗುರುಹಸ್ತದೊಳಗಣ ಸದ್ಭಕ್ತಂಗೆ ಅಲ್ಲಿಯೇ ಉತ್ಪತ್ತಿ ಸ್ಥಿತಿ ಲಯ ಇದೆಂತಹ ಪರಿಯೋ? ಮತ್ತಾವ ಪರಿಯೂ ಇಲ್ಲಿ ಲಿಂಗದ ಪರಿಯ ಮಾಡಿದ ಗುಹೇಶ್ವರಾ

ಅರ್ಥ:—ಕನ್ನಡಿಯೊಳಗಣ ಪ್ರತಿಬಿಂಬ ಅಲ್ಲಿಯೇ ತೋರಿ ಅಲ್ಲಿಯೇ ಅಳಿವಂತೆ ಶ್ರೀಗುರುವಿನೊಳಗೆ ಉದಿಸಿದ ಶರಣನು ಆ ಶ್ರೀಗುರುವಿನೊಳಗೆ ಅಳಿವನಲ್ಲದೆ ಲೋಕದ ಸಂಸಾರಿಗಳ ಹಾಗೆ ಸಾವನಲ್ಲವೆಂಬುದೀ ವಚನದ ತಾತ್ಪರ್ಯಾರ್ಥ

# ಲಿಂಗ.

## ಲಿಂಗದ ಸ್ವರೂಪ

೧ ಕಟೆದ ಕಲ್ಲು ಲಿಂಗವೆಂದೆನಿಸಿತ್ತು ಕಟೆಯದ ಕಲ್ಲು ಕಲ್ಲೆನಿಸಿತ್ತು ಪೂಜಿಸಿದ ಮಾನವ ಭಕ್ತನೆನಿಸಿದನು ಪೂಜಿಸದ ಮಾನವ ಮಾನವನೆನಿಸಿದನು ಕಲ್ಲಾದರೇನು? ಪೂಜೆಗೆ ಫಲವಾಯಿತ್ತು. ಮಾನವನಾದರೇನು? ಭಕ್ತಿಗೆ ಕಾರಣಿಕನಾದನು ಕಲ್ಲು ಲಿಂಗವಲ್ಲ ಲಿಂಗ ಕಲ್ಲಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೨ ಆಕಾರವಿಲ್ಲದ ಮೂರ್ತಿಯ ಸಾಕಾರಕ್ಕೆ ತಂದು ಪೂಜಿಸಿದೆ ನೋಡಾ ಮನವೇ ಆಕಾರದ ಮೂರ್ತಿಯ ನಿರಾಕಾರಕ್ಕೆ ತಂದು ಪೂಜಿಸಲರಿಯ ನೋಡಾ ಮನವೇ 'ಯದ್ದೃಷ್ಟಂ ತನ್ನಷ್ಟಂ' ಎಂದ ಬಳಿಕ ನಿರಾಕಾರ ನಿಜ ನಿರ್ವಯಲಿದೆ ಸ್ಥಿರವೆಂದು ನಂಬು ಮನವೇ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ

೩ ಕಲ್ಲು ಹಿಡಿದು ಅಲ್ಲಮನ ನೋಡುವೆವೆಂಬವರ ಮುನ್ನಮನು ಜರಿಂಬೆ ಕಲ್ಲು ಹಿಡಿದವರೆಲ್ಲ ಅಲ್ಲಮನಾಗಲು ಭವಬೀಜ ಇನ್ನೆಲ್ಲಿಯದಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೪ ಸಂತೆಯೊಳಿದ್ದ ಕಲ್ಲುಗಳೆಲ್ಲ ಲಿಂಗವೇನೋ ಅಯ್ಯಾ? ಪರ್ವತ ವಾರಣಾಸಿ ಬದರಿಕಾ ಕ್ಷೇತ್ರಗಳಲ್ಲಿದ್ದ ಕಲ್ಲುಗಳೆಲ್ಲ ಲಿಂಗವೇನೋ ಅಯ್ಯಾ? ಅಂತಕಾಂತಕ ಶ್ರೀಗುರುಮೂರ್ತಿಯು ತನ್ನರೂಪಿನ ರೂಪುಮಿಂತೆಂದು ತೋರಿದ ನಿಜ ಕಲ್ಲೇ ನಿಜಲಿಂಗ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೫ ಗಟ್ಟಿಹಿಡಿದು ಗೊತ್ತು ಮುಟ್ಟಬಾರದಯ್ಯ ನೀರಲ್ಲಿಯ ಕ್ರೀಡೆ ಕುಂಬಳಕಾಯಿಗಲ್ಲದೆ ದೊಡ್ಡ ಬಂಡೆಗುಂಟೇನಯ್ಯಾ? ಚರಿಸುವ ಜೀವಿಗೆ ನಿರ್ವಯಲು ಪರವಸ್ತು ಲಿಂಗವಲ್ಲದೆ ಪಾಷಾಣವು ಲಿಂಗವೇ ಅಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ?

೬ ವೇದ ವೇದಿಸಲರಿಯದೆ ಅಭೇದ್ಯಲಿಂಗವೆಂದು ನಡುನಡುಗಿತು ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯ ಲಿಂಗವೆಂದು ಸಾರುತಿದಾವೆ

ತರ್ಕ ತರ್ಕಿಸಲರಿಯದೆ ಅತರ್ಕ್ಯ ಲಿಂಗವೆಂದು ಮೌನಗೊಂಡವು ಆಗಮ ಅಗಮ್ಯಲಿಂಗವೆಂದು ಗಮಿಸಲರಿಯದೆ ಹೋದವು ನರರು ಸುರರು ಅಂತುವ ಕಾಣರು ನಿಮ್ಮ ಕೂಡಲಸಂಗಮದೇವನ ಪ್ರಮಾಣವ ಶರಣ ಬಲ್ಲ

೭ ಮಹಾಲಿಂಗದ ಸ್ಥಾನಂಗಳು ಮಹಾಲಿಂಗದ ಹೆಸರಲ್ಲದೆ ಲಿಂಗ ಬೇರೆ ರೂಪ ನಿರೂಪವಲ್ಲ ಲಿಂಗ ಬೇರೆ ಕಾಯ ಸಂಬಂಧಿಯಲ್ಲ ಲಿಂಗ ಬೇರೆ ಮಹಾಘನದಿಂದತ್ತತ್ತ ಕೂಡಲಸಂಗಮದೇವರ ನಿಲವು ಅರಿಗೆಯೂ ಅಳವಡದು

೮ ಹಸಿದು ಎಕ್ಕೆಯ ಕಾಯ ಮೆಲಬಹುದೇ? ನೀರಡಿಸಿ ವಿಷವ ಕುಡಿಯಬಹುದೇ? ಸುಣ್ಣ ತುಯ್ಯಲ ಬಣ್ಣ ಒಂದೆಂದರೆ ನಂಟುತನಕ್ಕೆ ಉಣಬಹುದೇ? ಲಿಂಗಸಾರಾಯ ಸಜ್ಜನರಲ್ಲದನರ ಕೂಡಲಸಂಗಮದೇವರೆಂತೊಲಿವ?

೯ ಅಹಂಕಾರ ಮನವನಿಂಬುಗೊಂಡಲ್ಲಿ, ಲಿಂಗ ತಾನೆಲ್ಲಿಪ್ಪುದೋ? ಅಹಂಕಾರಕ್ಕೆ ಎಡೆಗುಡದೆ, ಲಿಂಗ ತನುವಾಗಿರಬೇಕು ಅಹಂಕಾರ ರಹಿತನಾದಲ್ಲಿ ಸನ್ನಿಹಿತ ಕಾಣಾ ಕೂಡಲಸಂಗಮದೇವಾ

೧೦ ಬೆಳಗಿನೊಳಗಣ ಮಹಾ ಬೆಳಗು ಶಿವಶಿವ ಪರಮಾತ್ಮ ಯಮೇ ತಾನಾಗಿ ಶತಪತ್ರಕಮಳ ಕರ್ಣಿಕಾವ ಥ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪ ನಮ್ಮ ಕೂಡಲಸಂಗಮದೇವ

೧೧ ಚೌಪೀಠದ ಮಂಟಪದಲ್ಲಿ ಗುರು ಕುಳ್ಳಿರ್ದು ದ್ವಿದಳ ಮಂಟಪದಲ್ಲಿ ಶಿಷ್ಯಂಗೆ ತ್ರಿಕೂಟ ಸ್ಥಾನದ ಲಿಂಗವನುಪದೇಶಿಸಿ ತೋರಿದ ಗುರು ಲಿಂಗದೊಳಗಾದನು ಇದು ಕರ ಚೋದ್ಯ ನೋಡಾ ಶಿಷ್ಯ ಲಿಂಗವ ಗ್ರಹಿಸಿ ಲಿಂಗವಾದ ಪರಿಯನು ಇತರರ್ಗೆ ಅರಿಯಬಹುದೇ? ಜ್ಞಾನೋಪದೇಶದ ಬಗೆಯನು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ನಿಮ್ಮ ಶರಣ ಬಲ್ಲನು

೧೨ ಕಾಯವೆಂಬ ಪುರವನಾಳುವ ಜೀವನೆಂಬರಸು ನಿಜ ಬಲದಿಂ ಕರ್ಮವೆಂಬ ರಾಜ್ಯದಲ್ಲಿ ಸಂಪಾದಿಸಿದ ಸುಕೃತ ದುಷ್ಕೃತಗಳೆಂಬ ದ್ರವ್ಯವನ್ನು ಮನವೆಂಬ ಬೊಕ್ಕಸದೊಳಗಿಟ್ಟು, ಅಲ್ಲಿ ಭೋಗಂಗಳನ್ನು ಅನುಭವಿಸುತಿರ್ದು ಕೋಟಲೆಗಲಿಸಿ, ವೇದಾಂತ ಸಮುದ್ರದಲ್ಲಿ ಮುಳುಗಿ, ಅಲ್ಲಿರ್ದ ಜ್ಞಾನವೆಂಬ ಮುಕ್ತಿರತ್ನವಂ ಕೊಂಡು, ಪರತತ್ವದೇಶದಲ್ಲಿ ಪರಿಪಾಲಿಸುತ್ತಿರ್ದ ಗುರುವೆಂಬ ಮಹಾರಾಜಂಗೆ ಕಾಣಿಕೆಯಂ ಕೊಟ್ಟು,

ಲಿಂಗವೆಂಬಕ್ಷಯ ನಿಧಾನವಂ ಪಡೆದು, ಅದನ್ನು ಮನೋ ಭಂಡಾರದೊಳಿಟ್ಟು, ಅತಿ ಜಾಗರೂಕತೆಯಿಂ ತಾನೇ ಕಾಪಾಡುತ್ತಿರಲು, ಕತಿಪಯ ಕಾಲಕ್ಕೆ ಕಾಲದೂತರು ಬಂದು, ಅಂಗಪುರ ಭಂಗಮಂ ಮಾಡಲು, ತತ್ಪುರವಾಸಿಗಳಾದ ರುದ್ರರು ಕಾಲದೂತರಂ ತರಿದು, ಯಮನಂ ಪರಿದು, ಲಿಂಗ ನಿಧಾನಬಲದಿಂ ಮೋಕ್ಷ ಸಾಮ್ರಾಜ್ಯಮಂ ಸಂಪಾದಿಸುತ್ತ ಬಾಳುವ ನಿತ್ಯ ಸುಖವನ್ನು ನನಗೆ ಕೊಟ್ಟು ಸಲಹಾ ಮಹಾಘನ ದೊಡ್ಡ ದೇಶಿಕಾರ್ಯ ಗುರುಪ್ರಭುವೇ

---

## ಲಿಂಗ ಭಕ್ತರ ಪರಸ್ಪರ ಸಂಬಂಧ.

೧೩ ತನುವಿನೊಳಗೆ ಲಿಂಗ, ಲಿಂಗದೊಳಗೆ ಪ್ರಾಣವಾಗಿರ್ದು ಬೇರಿಟ್ಟು ನುಡಿವ ಭಿನ್ನ ಜ್ಞಾನಿಗಳಿಗೆ ಲಿಂಗವೆಲ್ಲಿಯದೋ? ಲಿಂಗವಿಲ್ಲಾಗಿ ಪ್ರಸಾದವಿಲ್ಲ ಪ್ರಸಾದವಿಲ್ಲಾಗಿ ಮುಕ್ತಿ ಇಲ್ಲ ನೋಡಾ ಇದು ಕಾರಣ ಭಿನ್ನ ಭಾವವಳಿದು ನಿನ್ನೊಳಡಗಿದನು ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ

೧೪ ದೇವಭಕ್ತರ ಬಗೆಯು ಬೇರೆಂದರೆ, ಭಕ್ತಿಯು ಬೀಜದ ಅಂಕುರವೇ? ಸತಿಪತಿಯು ಬೇರಾದರೆ, ಪಿಂಡದಂಕುರವೇ? ಭೂಮಿ ಬೀಜ ಬೇರಾದರೆ, ವೃಕ್ಷದಂಕುರವೇ? ಇದು ಕಾರಣ ದೇವಭಕ್ತರಲ್ಲಿ ಬೇರೆಂಬ ಬಗೆಯುದೆಂತು ಹೇಳಾ ಕೂಡಲಚೆನ್ನಸಂಗಮದೇವಾ?

೧೫ ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದ್ಯವಾಗಿ, ಮನಸ್ಥಲದ ಲಿಂಗ ಮಹಾಸ್ಥಲಕ್ಕೆ ವೇದ್ಯವಾಗಿ, ಮಹಾಸ್ಥಲವೇ ಎನ್ನ ಸರ್ವಾಂಗ ವೇದ್ಯವಾದ ಬಳಿಕ, ಇನ್ನು ಭಿನ್ನ ಭಾವಕ್ಕೆ ತೆರಹುಂಟೇ ಹೇಳಾ? ಗುಹೇಶ್ವರನೆಂಬ ಪ್ರಾಣಲಿಂಗವು ಬೆರಸಿ ಸಮಘಾತುವಾದ ಬಳಿಕ ಎರಡೆಂಬುದಿಲ್ಲ ನೋಡಾ ಚೆನ್ನಬಸವಣ್ಣ

೧೬ ಅಳವುತ್ತಳವುತ್ತ ಒಲುವದನ್ನದೆ ಕೊಂಗ ಬಲುವದೇ? ನಡೆವುತ್ತ ನಡೆವುತ್ತ ಒಲುವದನ್ನದ, ಒಪ್ಪ ಒಳಲುವದೇ? ಕ್ರಮವ ಮಾಡುತ್ತ ಮಾಡುತ್ತ ಬಲುವದನ್ನದ, ಕೋಲು ಒಳಲುವದೇ? ನಿಜವ ನರಿಯುವ ಭಕ್ತ ಒಲುವದನ್ನದೆ, ಲಿಂಗ ಒಲುವದೇ? ಕೂಡಲಸಂಗಮದೇವ ಅರಸಿಯುವ ಬಿಡಿಸೋ

## ಲಿಂಗಾಯುತ, ಲಿಂಗಸ್ವಾಯುತ, ಲಿಂಗಸನ್ನಿಹಿತ

೧೭. ಅಂಗದಲ್ಲಿ ಆಯುತವಾಯಿತ್ತು, ಮನದಲ್ಲಿ ಸ್ವಾಯುತವಾಯಿತ್ತು, ಭಾವದಲ್ಲಿ ಸನ್ನಿಹಿತವಾಯಿತ್ತು. ಆಯುತವಾದುದೇ ಸ್ವಾಯುತವಾಗಿ, ಸ್ವಾಯುತವಾದುದೇ ಸನ್ನಿಹಿತವಾಗಿ, ಸನ್ನಿಹಿತ ಸಮಾಧಾನವಾಗಿ ನಿಂದುದು ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರನೇ ತಾನಾಗಿ

೧೮ ಶ್ರೀಗುರು ಕೊಟ್ಟ ಲಿಂಗ ತನ್ನ ನಚ್ಚಿನ ಲಿಂಗ ಆಯುತವಾಯಿತ್ತಯ್ಯ ಪ್ರಾಣನ ನಚ್ಚಿನಿಂದ ಸ್ವಾಯುತವಾಯಿತ್ತಯ್ಯ ಉಭಯದ ನಚ್ಚಿನಿಂದ ಸಂಗವಾಯಿತ್ತು ಕೂಡಲಚನ್ನಸಂಗಾ ನಿಮ್ಮಲ್ಲಿ

ಅರ್ಥ:— ಶಿಷ್ಯನ ಅಂತರಂಗದ ಚಿತ್ಕಳೆಯನೆ ಇಷ್ಟ ಲಿಂಗವ ಮಾಡಿ ಗುರು ಕರಸ್ಥಲಕ್ಕೆ ತಂದು ಕೊಟ್ಟಲ್ಲಿ ಗುರು ಕೊಟ್ಟುದೇ ಲಿಂಗವೆಂಬ ವಿಶ್ವಾಸ ಒಂದು, ತನ್ನ ಪ್ರಾಣ ಕಳೆಯೇ ಇಷ್ಟ ಲಿಂಗವಾಯಿತ್ತೆಂಬ ವಿಶ್ವಾಸ ಒಂದು ಇಂತು ಉಭಯ ವಿಶ್ವಾಸದಿಂದ ನಚ್ಚಿದ ನಿಶ್ಚಯ ಭಾವದಿಂದ ಆತ್ಮನೆಂಬ ಅಂಗಕ್ಕೆ ಲಿಂಗದಲ್ಲಿ ಹಿಂಗಿದ ಕೂಟವಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ

## ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ.

೧೯ ಹೃದಯ ಕಮಲದಲ್ಲಿ ವಾಸವಾಗಿರುವಾತನೊಬ್ಬನು. ಮನದ ಕೊನೆಯಲ್ಲಿ ಇರುವಾತನೊಬ್ಬನು, ಚಿದಾಕಾರದಲ್ಲಿರುವಾತನೊಬ್ಬನು, ಇವರೆಲ್ಲರಲ್ಲಿ ಇರುವಾತನೊಬ್ಬನು ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನು

೨೦ ಸ್ಥೂಲ ತನು, ಸೂಕ್ಷ್ಮ ತನು, ಕಾರಣ ತನು ಸ್ಥೂಲ ತನುವಿನ ಮೇಲೆ ಇಷ್ಟಲಿಂಗ ಪ್ರತಿಷ್ಠೆ ಸೂಕ್ಷ್ಮ ತನುವಿನ ಮೇಲೆ ಪ್ರಾಣಲಿಂಗ ಪ್ರತಿಷ್ಠೆ ಕಾರಣ ತನುವಿನ ಮೇಲೆ ಭಾವಲಿಂಗ ಪ್ರತಿಷ್ಠೆ ಇಂತೀ ಸ್ಥೂಲ ಸೂಕ್ಷ್ಮ ಕಾರಣವೆಂಬ ಮುಖವು ಆ ಮುಖದ ಹೃದಯದಲ್ಲಿ ಕೊನೆದೋರುತಿರ್ಪ ಜ್ಯೋತಿಯು ನಮ್ಮ ಶರಣರ ಸರ್ವಾಂಗದಲ್ಲುಂಟು ನೋಡಯ್ಯ ಕೂಡಲಚನ್ನಸಂಗಮದೇವಾ

ವಿನ ಕಲೆಯುಂಟೇ? ಇದಕ್ಕೆ ದೃಷ್ಟವ ಕಂಡಡೆ, ಇಷ್ಟಪ್ರಾಣಲಿಂಗಸಂ
ಬಂಧಕ್ಕೆ ಕಟ್ಟು. ಅದು ಅಚೇತನವಪ್ಪುದೊಂದು ಸಾವಯವ, ಚೇತನವ
ಪ್ಪುದೊಂದು ನಿರವಯವ ಸಾವಯವ ನಿರವಯವದೊಳಡಗಿ ಕುರು
ಹಾದ ಭೇದ ಆ ಕಾಯದ ಒಳಹೊರಗಿನ ನೋವಿನ ಭೇದದಂತೆ ಉಭ
ಯವನರಿದಾತ್ಮ ಒಂದೇಯಾಗಿ, ಕಾಯದ ಇಷ್ಟವೆಂದ, ಆತನ ಅರಿ
ವೆಂದು ಎರಡೆನಿಸುವ ಲಿಂಗವೆಂಬುದೊಂದು ಕುರುಹಿಲ್ಲ ಅದು ಏಕ
ಮೇವ ಸ್ವರೂಪು, ಅದು ಚಿದ್ಘನ ಸ್ವರೂಪು ಅದು ಘಟಮಠದೊಳಗೆ ಗ್ರಹಿ
ಸಿಪ್ಪ ಬಯಲಿನ ಇರವಿನ ಪರಿಯಂತೆ ಎನ್ನಯ್ಯಪ್ರಿಯ ಇಮ್ಮಡಿ ನಿಷ್ಕ
ಳಂಕ ಮಲ್ಲಿಕಾರ್ಜುನಲಿಂಗವು ಅತ್ಯತಿಷ್ಠದ್ದಶಾಂಗುಲನಾಗಿಪ್ಪನು

೨೮ ಇಷ್ಟಲಿಂಗ ಪ್ರಾಣಲಿಂಗವೆಂದು ವಿಭೇದಿಸುವಲ್ಲಿ, ಕುಸು
ಮದ ಗಿಡುವಿಂಗೆ ವಾಸನೆಯುಂಟೇ, ಕುಸುಮಕ್ಕಲ್ಲದೆ? ಅದು ಗಿಡುವಿ
ಡಿದಾದ ಕುಸುಮವೆಂದರಿದು, ಗಿಡುವಿನ ಪಚ್ಚಗ ಕುಸುಮದ ನಲವು,
ಸುಗಂಧದ ಬೆಳೆ ಭಕ್ತಿಗೆ ಕ್ರಿಯೆ, ಕ್ರಿಗೆ ಶ್ರದ್ಧೆ ಶ್ರದ್ಧೆಗ ಪೂಜೆ, ಪೂಜೆಗೆ
ವಿಶ್ವಾಸ, ವಿಶ್ವಾಸಕ್ಕೆ ವಸ್ತು, ತನ್ಮಯವಾಗಿಪ್ಪುದು ಇದು ತಥಾರ್ಥ
ಭಕ್ತಿಯ ಇರವು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ
ಲಿಂಗವ ಮೆಲ್ಲಮೆಲ್ಲನೆ ಕೂಡುವ ಕೂಟ

೨೯ ಅಯ್ಯ ಕಾಯ ಲಿಂಗವೋ? ಕಾಯದಲ್ಲಿ ಸಾರಿಪ್ಪ ಲಿಂಗ
ಲಿಂಗವೋ? ಪ್ರಾಣ ಲಿಂಗವೋ? ಪ್ರಾಣದಲ್ಲಿ ಸಾರಿಪ್ಪ ಲಿಂಗ ಲಿಂಗವೋ?
ಜ್ಞಾನ ಲಿಂಗವೋ? ಜ್ಞಾನದ ಮೊನೆಯಲ್ಲಿ ಜಗುವ ಲಿಂಗ ಲಿಂಗವೋ?
ಲಿಂಗ ಪ್ರಾಣ, ಪ್ರಾಣ ಲಿಂಗವೆಂತೆಂದರಿಯರು ನಿಮ್ಮ ಕಾಯದ ಕರ
ಸ್ಥಲವ ಸಾರಿದ ಲಿಂಗ ಪ್ರಾಣದೊಳಗೆ ವೇದ್ಯವಾದ ಪರಿಯನುಪದೇಶಿಸಿ
ಕೃಪೆ ಮಾಡಾ ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಾ.

೩೦ ಸುಗುಣವೇ ಲಿಂಗ ಪ್ರಾಣಿಯಯ್ಯ ದುರ್ಗುಣವೇ ಮಾಯಾ
ಪ್ರಾಣಿಯಯ್ಯ ಸುಗುಣ ನಿರ್ಗುಣವೆಂಬುಭಯವನತಿಗಳೆದು ಸುಖ
ದುಃಖಾದಿಗಳ ಸಮಾನಗಂಡು, ಹಾಸ್ಯ, ವಿಸ್ಮಯ, ವಿರಹ, ಕರುಣ ಹೇಸಿಕೆ
ಇಂತೀ ಪ್ರಾಣದ ವಿಷಯ ಭ್ರಾಂತಿಗಳನತಿಗಳೆದು, ಪ್ರಾಣದ ಪೂರ್ವಾಶ್ರಯ
ವನಳಿದು, ಲಿಂಗವ ನೆನೆಹು ಸಂಬಂಧಿಸಿ, ಲಿಂಗವೇ ಪ್ರಾಣವಾಗಿರಬಲ್ಲಡೆ,
ಪ್ರಾಣಲಿಂಗಿಸ್ಥಲವೆಂಬೆನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ

# ಲಿಂಗದ ಸ್ಥಾನಗಳು.

## ದೇಹದಲ್ಲಿಯ ಚಕ್ರಗಳಲ್ಲಿ

೩೧ ಇಷ್ಟ ಮಹಾಲಿಂಗವೇ ಅನಾದಿಶರಣನ ಆಧಾರ ಚಕ್ರದಲ್ಲಿ ನಕಾರ ಮಂತ್ರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ ಸ್ವಾಧಿಷ್ಠಾನ ಚಕ್ರದಲ್ಲಿ ಮಕಾರ ಮಂತ್ರ ಮೂರ್ತಿಯಾಗಿ ನೆಲಸಿರ್ಪುದು ನೋಡಾ ಆ ಮಹಾಲಿಂಗವೇ ಮಣಿಪೂರಕ ಚಕ್ರದಲ್ಲಿ ಶಿಕಾರ ಮಂತ್ರಮೂರ್ತಿ ಯಾಗಿ ನೆಲಸಿರ್ಪುದು ನೋಡಾ ಅನಾಹತ ಚಕ್ರದಲ್ಲಿ ವಕಾರ ಮಂತ್ರ ಮೂರ್ತಿಯಾಗಿ ನೆಲಿಸಿರ್ಪುದಯ್ಯ ವಿಶುದ್ಧಿ ಚಕ್ರದಲ್ಲಿ ಯಕಾರ ಮಂತ್ರ ಮೂರ್ತಿಯಾಗಿ ನೆಲಿಸಿರ್ಪುದಯ್ಯ ಆ ಮಹಾಲಿಂಗವೇ ಆಜ್ಞಾಚಕ್ರದಲ್ಲಿ ಓಂಕಾರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ ಬ್ರಹ್ಮರಂಧ್ರದಲ್ಲಿ ಹಂಕಾರ ಮೂರ್ತಿಯಾಗಿ ನೆಲಿಸಿರ್ಪುದಲ್ಲಿ ಶಿಖಾಚಕ್ರದಲ್ಲಿ ಕ್ಷಕಾರ ಮಂತ್ರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ ಪಶ್ಚಿಮ ಚಕ್ರದಲ್ಲಿ ವ್ಯಂಜನ ವಿಲ್ಲದ ಹಕಾರ ಮಂತ್ರ ಮೂರ್ತಿಯಾಗಿ ನೆಲಸಿರ್ಪುದು ನೋಡಾ

ಈ ಪ್ರಕಾರದಿಂದ ಅನಾದಿ ಶರಣನ ಸರ್ವಾಂಗದಲ್ಲಿ ಕಿಷ್ಕಿಂಧಮಯ ವಾಗಿ ತುಂಬಿಕೊಂಡಿರ್ಪುದು ನೋಡಾ ಇಂತಪ್ಪ ಪರಂಜ್ಯೋತಿ ಚಿಪ್ಘನ ಲಿಂಗವು ಪ್ರಮಾಣಿಸಿ ನೋಡಿಹೆನೆಂದವರಿಗೆ ಅತ್ಯತಿಷ್ಠದ್ದಶಾಂಗುಲನಾಗಿ ರ್ಪನು ನೋಡಾ ಸಂಗನಬಸವೇಶ್ವರಾ

## ಇಷ್ಟಲಿಂಗದಲ್ಲಿ.

೩೨ ಪೀಠದಲ್ಲಿ ಆಚಾರಲಿಂಗ, ಕಟಿಯಲ್ಲಿ ಗುರುಲಿಂಗ, ವರ್ತು ಳದಲ್ಲಿ ಶಿವಲಿಂಗ, ಗೋಮುಖದಲ್ಲಿ ಜಂಗಮಲಿಂಗ, ನಾಳಯಲ್ಲಿ ಪ್ರಸಾದ ಲಿಂಗ, ಮಸ್ತಕದಲ್ಲಿ ಮಹಾಲಿಂಗವು. ಆಚಾರಲಿಂಗದರಿವು ಗಂಧ, ಗುರು ಲಿಂಗದರಿವು ರಸ, ಶಿವಲಿಂಗದರಿವು ಸ್ಪರ್ಶನ, ಪ್ರಸಾದಲಿಂಗದರಿವು ಶಬ್ದ, ಮಹಾಲಿಂಗದರಿವು ಸರ್ವೇಂದ್ರಿಯವು ಇಂತು ಇಷ್ಟಲಿಂಗದಲ್ಲಿ ಆರು ಸ್ಥಾನಂಗಳಿರ್ಪವು

## ಲಿಂಗಪೂಜೆಯ ತತ್ವಗಳು.

೩೩ ಲಿಂಗವೆಂದು ಪೂಜಿಸಿದೊಡೆ ಅಂಗದೊಡನುಳಿಯಿತ್ತು ಅಂಗ ದೊಡನುಳಿವ ಲಿಂಗವ ಹಿಂಗಿ ಪೂಜಿಸಬೇಕು ಹಿಂಗದ ಪೂಜೆಯನರಿ ದೊಡೆ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಲಿಂಗೈಕ್ಯನೆನಿಸುವನು

೩೪ ಪೂಜಿಸುವನ್ನಕ್ಕರ ಫಲದಾಯಕ ಕಂಡಯ್ಯಾ ಸಹಜ ಸಂಬಂಧದರಿವು ಹುಟ್ಟದನ್ನಕ್ಕರ ಎರಡನಿಸುವುದು ಗಮನ ನಿರ್ಗಮನ ವಾಗಿ ಆಶೆ ಆಮಿಷವಳಿಯದನ್ನಕ್ಕರ ಲಿಂಗದ ಪೂಜೆ ಎಲ್ಲಿಹುದೋ? ಘಟದೊಳಗೆ ದಿಟವಾಗಿರ್ದ ಪಂಚಭೂತದ ಹಂಗಳಿದಲ್ಲದೆ ನಮ್ಮ ಕೂಡಲ ಚನ್ನಸಂಗಯ್ಯನ ಮುಟ್ಟಬಾರದು

೩೫ ಮಾತುಕಲಿತು ಮಂಡೆಯ ಬೋಳಿಸಿಕೊಂಡಡೇನು, ವೇಷ ಲಾಂಛನ ಉದರಪೋಷಕನಲ್ಲದೆ? ಶಿವಾನುಭಾವದ ಸುವಿಚಾರದ ಸುಯಿ ಧಾನದ ಹೊಲಬನರಿಯರು ಅರುಹು ಆಚಾರ ಏಕವಾದುದೇ ಇಷ್ಟ ಆಚಾರ ಹೀನವಾದುದರಿಂದೆ, ಅಷ್ಟವಿಧಾರ್ಚನೆ ಷೋಡಶೋಪಚಾರಾದಿ ಭಜನೆ ಪೂಜಾ ಕ್ರಿಯೆಗಳಿಗೆ ಸಲ್ಲದ ಕಾರಣ, ಅದು ಸೀಮೆಯ ಕಲ್ಲು ಅನ್ಯರ ಬೋಧಿಸಿ ತಂದುದರವ ಹೊರೆದ ವೇಷಡಂಭಕ ಗುರು ಶಿಷ್ಯರ ಮೆಚ್ಚುವರೇ ಕೂಡಲಚನ್ನಸಂಗಮದೇವ?

೩೬ ಶಿವಶಿವಾ, ಶಿವಶಿವಾ, ಶಿವಶಿವಾ, ಎಂದೊಮ್ಮೆ ಶಿವನಾಗಿ ಶಿವನ ಪೂಜಿಸು ಮನವೇ ಹರಹರಾ, ಹರಹರಾ, ಹರಹರಾ, ಎಂದೊಮ್ಮೆ ಹರನಾಗಿ ಪುರಹರನ ಪೂಜಿಸು ಮನವೇ ಲಿಂಗವೇ, ಲಿಂಗವೇ, ಎಂದೊಮ್ಮೆ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವ ಪೂಜಿಸಿ, ಲಿಂಗವಾಗು ಮನವೇ

೩೭ ಮಾಡಬೇಕು, ಮಾಡಬೇಕು ಮನ ಒಲಿದು ಲಿಂಗಪೂಜೆಯ ನೋಡಬೇಕು, ನೋಡಬೇಕು ಮನ ಒಲಿದು ಲಿಂಗಸಂಭ್ರಮವ ಹಾಡ ಬೇಕು, ಹಾಡಬೇಕು ಮನ ಒಲಿದು ಲಿಂಗಸ್ತೋತ್ರವ ಕೂಡಬೇಕು, ಕೂಡ ಬೇಕು ಕಪಿಲಸಿದ್ಧಮಲ್ಲಿಕಾರ್ಜುನ ಎನ್ನ ಗುರು ಚನ್ನಬಸವಣ್ಣ ಕೊಟ್ಟ ಇಷ್ಟಲಿಂಗದ ಅಡಿಯಲ್ಲಿ.

೩೮ ಶರಣನ ಪೂಜೆಯದು ಮರಣವ ಕೇಡು ನೋಡಿರಯ್ಯ ಶರಣನ ಪೂಜೆಯದು ಶಿವನ ಕರುಣಾರಸ ನೋಡಿರಯ್ಯ ಶರಣನ ಪೂಜೆಯದು ಕಪಿಲಸಿದ್ಧಮಲ್ಲಿಕಾರ್ಜುನನ ಪೂಜೆ ನೋಡಿರಯ್ಯ?

೩೯ ನಾ ಮಾಡಿದ ಪೂಜಾ ಫಲ ಅಂಶಿಂತಲ್ಲ ಬಾಣ ಪೂಜಿಸಿದ ಫಲ ಬಾಗಿಲ ಕಾಯಲ್ಲಿ ಹೋಯಿತ್ತು ಮಯೂರ ಪೂಜಿಸಿದ ಫಲ ವಿದ್ಯಾದಾನದಲ್ಲಿ ಹೋಯಿತ್ತು ಹನುಮಂತ ಪೂಜಿಸಿದ ಫಲ ವಜ್ರದೇಹದಲ್ಲಿ ಹೋಯಿತ್ತು ನಾ ಪೂಜಿಸಿದ ಫಲ ಕೊಟ್ಟು ಕೊಟ್ಟು ತೀರದೆ ನಿಂದಿತ್ತು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೪೦ ಒಲಿದು ಮೋಕ್ಷವ ಕೊಡಲಿ ಕೊಡದೆ ಭವಕ್ಕೆ ಬೀಜ ಮಾಡಲಿ ಬಿಡ ಬಿಡೆನಯ್ಯ ನಿಮ್ಮ ಪೂಜೆಯ ಬಿಡೆ ಬಿಡೆನಯ್ಯ ನಿಮ್ಮ ದಾಸೋಹವ ಅದರ ಮಾನಾಪಮಾನವು ನಿಮ್ಮದು ನೋಡಯ್ಯ, ಎಲೆ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಪರಮಪವಿತ್ರ ಇಷ್ಟಲಿಂಗವೇ

೪೧ ಬ್ರಹ್ಮನ ಪೂಜಿಸಿ ಸೃಷ್ಟಿಗೊಳಗಾಗುವುದ ಬಲ್ಲೆ ರುದ್ರನ ಪೂಜಿಸಿ ಲಯಕ್ಕೊಳಗಾಗುವುದ ಬಲ್ಲೆ ನಿಮ್ಮಿಷ್ಟಲಿಂಗ ಮೂರ್ತಿಯ ಪೂಜಿಸಿ ಲಿಂಗವಾಗಿ ಸರ್ವವಹುದ ಒಲ್ಲೆ ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ

೪೨ ಲಿಂಗಪೂಜೆಯ ಮಾಡಿ, ಲಿಂಗದ ಕರುಣ ಪಡೆಯಿರೆಂದು ಹೇಳುವರಲ್ಲದೆ, ನೀ ನಾ ಲಿಂಗಾಗೆಂದು ಹೇಳುವರಿಲ್ಲ, ನೋಡಯ್ಯ ಲಿಂಗ ನೀನೆಂದು ಹೇಳುವರಲ್ಲದ ಲಿಂಗದ ಲೀಲೆ ಹೇಳುವರಿಲ್ಲ ನೋಡಯ್ಯ ಲಿಂಗದ ಲೀಲೆ ಹೇಳುವರಲ್ಲದ ಲಿಂಗ ತಾನಾದವರಿಲ್ಲ ನೋಡಯ್ಯ ಲಿಂಗ ತಾವಾದವರು ಇಹರಲ್ಲದ ಲಿಂಗ ಶಬ್ದ ಮುಗ್ಧವಾದವರು ಒಬ್ಬರೂ ಇಲ್ಲ ಕಪಿಲಸಿದ್ಧಮಲ್ಲಯ್ಯ

೪೩. ಕೆಲವರು ಲಿಂಗವ ಪೂಜಿಸಿ ಪಡೆದರು ಗತಿಯ ಕೆಲವರು ಲಿಂಗವ ಪೂಜಿಸಿ ಪಡೆದರು ಮತಿಯ ನಮ್ಮ ಕಪಿಲಸಿದ್ಧನ ಪೂಜಿಸಿ ಪಡೆಯಲಿಲ್ಲವನ ಜ್ಯೋತಿಯ

೪೪ ನೋಡುವರುಳ್ಳರೆ ಮಾಡುವೆ ದೇಹಾರವ ಎನಗೊಂದು ನಿಜವಿಲ್ಲ ಎನಗೊಂದು ನಿಷ್ಠೆ ಇಲ್ಲ ಲಿಂಗವ ತೋರಿ ಉದರವ ಹೊರೆವ ಭಂಗಗಾರ ನಾನು ಕೂಡಲಸಂಗಮದೇವಾ

# ಇಷ್ಟ ಪ್ರಾಣ ಭಾವಲಿಂಗಗಳ ಪೂಜೆ.

೪೫ ಇಷ್ಟಲಿಂಗದ ಪೂಜೆಯಾವುದು, ಪ್ರಾಣಲಿಂಗದ ಪೂಜೆ ಯಾವುದು, ಭಾವಲಿಂಗದ ಪೂಜೆಯಾವುದು, ಹೇಳಿಹೆ ಕೇಳಿರಯ್ಯ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಮಾಡುವುದು ಅದು ಇಷ್ಟಲಿಂಗದ ಪೂಜೆ ಆ ಲಿಂಗವ ಮನಸಿನಲ್ಲಿ ಧ್ಯಾನಿಸಿ ಮನೋಮಧ್ಯದಲ್ಲಿಪ್ಪ ನಿಷ್ಕಲ ಬ್ರಹ್ಮ ವನು ಧ್ಯಾನವೆಂಬ ಹಸ್ತದಲ್ಲಿ ಹಿಡಿದು ಕರಸ್ಥಲದಲ್ಲಿಪ್ಪ ಲಿಂಗದ ಗೊತ್ತಿ ನಲ್ಲಿ ಕಟ್ಟಿ ನೆರಿಪುದೀಗ ಪ್ರಾಣಲಿಂಗದ ಪೂಜೆ ಮನಸ್ಸು ತಲ್ಲಿಂಗ ದಲ್ಲಿ ಲೀಯವಾಗಿ ನಚ್ಚು ಮಚ್ಚು ಅಚ್ಚೊತ್ತಿ ಅಗಲದಿಪ್ಪುದೀಗ ಭಾವ ಲಿಂಗದ ಪೂಜೆ ಇವು ಮೂರು ಲಿಂಗದ ಅರ್ಚನೆ, ಮೂರು ಲಿಂಗದ ಉಪಚಾರ, ಶಿವಾರ್ಚಕರಾದ ವೀರಶೈವರುಗಳು ಮಾಡುವ ಲಿಂಗಾರ್ಚ ನೆಯ ಕ್ರಮವು, ಮಹಾಲಿಂಗ ಗುರು ಶಿವ ಸಿದ್ಧೇಶ್ವರಪ್ರಭುವೇ

೪೬ .ಲಿಂಗಾಂಗಸಂಬಂಧದ ಭೇದವನರಿಯದ ಲಿಂಗಾಂಗಸಂಬಂಧಿ ಗಳೆಂದು ಅಂದಚಂದವಾಗಿ ನುಡಿದುಕೊಂಬ ಕ್ರಿಯಾಭ್ರಾಂತರು ನೀವು ಕೇಳಿರಿ, ಲಿಂಗಾಂಗಸಂಬಂಧದ ಉತ್ತರೋತ್ತರ ನಿರ್ಣಯವ ಹೊರಗಣ ಹೂವನೇ ತಂದು ಸ್ಥೂಲ ತನುವಿನ ಮೇಲಿಪ್ಪ ಆಚಾರಲಿಂಗಮಂ ಪೂಜೆಯ ಮಾಡಿ ತನುವ ಸಮರ್ಪಿಸಿ ಬೇಡಿಕೊಂಡು, ಹೊರಗಣ ಹೊನ್ನು ಹೆಣ್ಣು ಮಣ್ಣು ಷಟ್ಕರ್ಮಂಗಳಂ ಬಿಟ್ಟಡೆ ಇಷ್ಟಲಿಂಗದ ಪೂಜೆ ಒಳಗಣ ಹೂವ ತಂದು ಸೂಕ್ಷ್ಮತನುವಿನ ಮೇಲಿಪ್ಪ ಜಂಗಮಲಿಂಗಮಂ ಪೂಜೆಯ ಮಾಡಿ ಮನವ ಸಮರ್ಪಿಸಿ ಉಪಾವಸ್ಥೆಯಂ ಮಾಡಿ, ಒಳ ಗಣ ಅಂತಃಕರಣಂಗಳ ಸುಟ್ಟುದೇ ಪ್ರಾಣಲಿಂಗದ ಪೂಜೆ ಮನೋ ಮಧ್ಯದೊಳಗಿಪ್ಪ ಪ್ರಭಾವ ಪುಷ್ಪವನೇ ತಂದು ಕಾರಣ ತನುವಿನ ಮೇಲಿಪ್ಪ ತೃಪ್ತಿಲಿಂಗಮಂ ಪೂಜೆಯಂ ಮಾಡಿ ಸಂತೋಷಮಂ ಸಮ ರ್ಪಿಸಿ ದೈನ್ಯಂ ಬಿಟ್ಟು ಜ್ಞಾನ ಕ್ರಿಯೆಗಳುಮುಡೇ ಭಾವಲಿಂಗದ ಪೂಜೆ ಈ ಪ್ರಕಾರದ ಲಿಂಗಾಂಗದ ಸಾಧಕತ್ವಮಂ ಶಿವರಾತ್ರಿಯ ಸಂಕಣ್ಣಂಗೊಲಿ ದಂತೆ ಎನಗೊಲಿದು ಕರುಣಿಸಯ್ಯ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ

೪೭ ಎನ್ನಂತರಂಗದಲ್ಲಿ ಕುಮಂತ್ರ ಕುಡಿವರಿದ ಭೇದವ ನಿನ್ನೊ ಡನೆ ವರೆ ಇಪ್ಪಿದೆ ಆಡುತಿಪ್ಪೆನಯ್ಯ ಒಡೆಯನೇ ಜಾಗ್ರಾವಸ್ಥೆಯಲ್ಲಿ

ಲೋಕೋಪಚಾರವಿಡಿದು ಜಿಹ್ವಾಲಂಪಟತನ ಉಡುಗದು ಸುಖದುಃಖಕ್ಕೆ ಎನ್ನ ಮನ ಅಳುತ್ತ ನಗುತ್ತ ಇದ್ದ ಬಳಿಕ ಎನಗೆ ಇಷ್ಟಲಿಂಗದ ಪೂಜೆ ಎಲ್ಲಿಯದೋ? ಸ್ವಪ್ನಾವಸ್ಥೆಯಲ್ಲಿ ಬ್ರಹ್ಮಾಂಡದೊಳಗುಳ್ಳ ಕಡೆ ಮೊದಲಿಲ್ಲದ ದುರ್ವಿಕಾರ ಸ್ವಪ್ನದಲ್ಲಿ ಹರಿದಾಡುವ ಜೀವಂಗೆ ಪ್ರಾಣಲಿಂಗದ ಪೂಜೆ ಎಲ್ಲಿಯದೋ? ಸುಷುಪ್ತಾವಸ್ಥೆಯಲ್ಲಿ ಲಿಂಗವ ಕೂಡಿ, ವೈಮರೆವಿರೆ ಕನಸಿನ ಸ್ತ್ರೀಯ ಕೂಡಿ, ಇಂದ್ರಿಯಂಗಳ ಬಿಟ್ಟು ಆನಂದಿಸುವ ಕಾಮವಿಕಾರಿಗೆ ಭಾವಲಿಂಗದ ಪೂಜೆ ಎಲ್ಲಿಯದೋ? ಈ ಪ್ರಕಾರದ ದುರ್ಗುಣಂಗಳ ನಾನು ಮರೆಮಾಡಿಕೊಂಡು, ಶರಣರ ವಚನಗಳ, ಹಾಡಿದ ಗೀತಂಗಳ, ಬೆಳಗಿನ ಸಿರಿಯ, ಕಂಡು ನಾಯಿ ಹರುಷಗೊಂಡು ಬೊಗಳಿದಂತಾಯಿತ್ತು ಅದೇನು ಕಾರಣವೆಂದಡೆ, ನೀ ಎನ್ನ ಅಂಗದ ಮೇಲೆ ಬಂದಿಹೆ ಎಂಬ ಸಂತೋಷಕ್ಕೆ ಉಬ್ಬಿಕೊಬ್ಬಿ ಅಹಂಕರಿಸಿ ಹಾಡಿದೆನಲ್ಲದೆ, ನುಡಿದಂತೆ ನಡೆಯಲಿಲ್ಲ, ನಡದಂತೆ ನುಡಿಯಲಿಲ್ಲ ಇದು ಕಾರಣ ಎನ್ನ ಮನದ ಕಾಳಿಕೆಯಂ ಕರುಣದಿಂದೆ ಕಳೆದು ಅವಸ್ಥಾತ್ರಯಂಗಳಲ್ಲಿ ನಿನ್ನ ಅಪ್ಪಿ ಅಗಲದಂತೆ ಎನ್ನ ಪರಮ ಕಾಷ್ಠೆಯ ಮಾಡಯ್ಯ, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

೬೮ ಮುಕ್ತಿಗೆ ಸದಾ ಸಂಧಾನದಲ್ಲಿ ಇರಬೇಕೆಂದು ಶಿವಶರಣರು ನುಡಿವುತಿಪ್ಪರು ಆ ಸಂಧಾನದ ಹೊಲಬ ನಾನರಿಯೆ ಎನಗೆ ಮುಕ್ತಿ ಇಲ್ಲ ಇನ್ನೇನೆಂದು ಕಂಬನಿದುಂಬಿ ಕರಗುತಿಪ್ಪ ಮನವೇ ಗುರು ಕೊಟ್ಟ ಸಂಧಾನವೇ ಕರಕಮಲದಲ್ಲಿ ಪ್ರಸನ್ನ ಪ್ರಸಾದವಂ ಪ್ರತ್ಯಕ್ಷವಾಗಿ ತೋರುತ್ತಿದ ಗುರುಕೊಟ್ಟ ಸಂಧಾನವೇ ಎಂಟೆಸಳಿನ ಚೌದಳದ ಮಧ್ಯದಲ್ಲಿ ಹೊಂಗಳಸದಂತೆ ಘಳ ಘಳನೆ ಹೊಳೆವುತ್ತಿದೆ ಗುರು ಕೊಟ್ಟ ಸಂಧಾನವೇ ಮುಪ್ಪುರದ ಮಧ್ಯದಲ್ಲಿ ರತ್ನ ಮಿಂಚಿನಂತೆ ಕುಡಿವರಿದು ಉರಿವುತ್ತಿದ ಗುರು ಕೊಟ್ಟ ಸಂಧಾನವೇ ಪಂಚಪತ್ರದ ಮಧ್ಯದಲ್ಲಿ ಬೆಳ್ದಿಂಗಳ ಲತೆಯಂತೆ ಬೀದಿವರಿದು ಬೆಳಗುಬೀರುತ್ತಿದೆ ಈ ಪ್ರಕಾರದ ಜೀನಿಗೇ ಮುಕ್ತಿಗೆ ಸಂಧಾನವಾಗಿ ಒಪ್ಪುತ್ತಿಪ್ಪುದು ಇದನೆ ಕಣ್ದುಂಬಿ ನೋಡಾ ಇದನೆ ಮನ ದಣಿವಂತೆ ಹಾಡು ಇದನೆ ಅಪ್ಪಿ ಅಗಲದಿಪ್ಪುದೇ ನಿಜಮುಕ್ತಿ ಇದಕ್ಕೆ ತಪ್ಪದು ನೀ ಸಂಜಬೇಡ ಗುರುಕೊಟ್ಟ ಸಂಧಾನವಂ ಮರೆದು ಭಿನ್ನವಿಟ್ಟ ಲಕ್ಷಿಸರ ಸಂಧಾನವೆಲ್ಲ ಭವಸಂಧಾನವಯ್ಯ, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ

೪೯ ಕಾಯದ ಕರದಲ್ಲಿ ಲಿಂಗವ ಧರಿಸಿ ಲಿಂಗಾರ್ಚನೆಯ ಮನ ಮುಟ್ಟಿ ಮಾಡುತ್ತಿದ್ದರೆ, ಮನ ಲಿಂಗದಲ್ಲಿ ತರಹರವಾಯಿತ್ತು ಮನ ಲಿಂಗದಲ್ಲಿ ತರಹರವಾದ ಮತ್ತೆ ಮನದ ಮೇಲೆ ಲಿಂಗ ನೆಲೆಗೊಂಡಿತ್ತು ಮನದ ಮೇಲಣ ಲಿಂಗವ ಭಾವ ಭಾವಿಸಿ ಭಾವ ಒಲಿದಲ್ಲಿ ಭಾವದ ಕೊನೆಯಲ್ಲಿ ನಿಂದಿತ್ತಾಗಿ ಭಾವ ಬಯಲಾಗಿ ನಿರ್ಭಾವವಾಯಿತ್ತು, ನಿಜ ಗುರುಸ್ವತಂತ್ರಸಿದ್ಧಲಿಂಗೇಶ್ವರಾ ನಿಮ್ಮ ಶರಣಂಗೆ.

೫೦ ಎಲ್ಲರಿಗಿಂತಲೂ ಶಿವಭಕ್ತರಧಿಕರೆಂಬ ಕಾರಣವೇನಯ್ಯಾ? ನಿತ್ಯ ಲಿಂಗಾರ್ಚನೆ ಮೂರು ವೇಳೆ, ಲಿಂಗಾರ್ಚನೆಗೊಮ್ಮೆ ಲಿಂಗತ್ರಯ ಪೂಜೆ, ಪೂಜೆಗೊಮ್ಮೆ ಮಹಾಪ್ರಣಮಂಗಳ ಜಪ, ಜಪಕ್ಕೊಮ್ಮೆ ನಿಜ ಧ್ಯಾನ, ಧ್ಯಾನಕ್ಕೊಮ್ಮೆ ಚಿತ್ತಿನ ಲಯ ನೋಡಾ ಕಪಿಲಸಿದ್ಧಮಲ್ಲಿ ಕಾರ್ಜುನಾ

೫೧ ಹಸಿವು ತೃಷೆಯಳಿದಡೇನು? ಭಕ್ತನಪ್ಪನೇ? ಅಲ್ಲಲ್ಲ ಅಷ್ಟ ಮಹಾಸಿದ್ಧಿಯುಳ್ಳೊಡೇನು? ಭಕ್ತನಪ್ಪನೇ? ಅಲ್ಲಲ್ಲ ತನು ಬಯಲಾಗಿ ಚತುರ್ವಿಧ ಪದಸ್ಥನಾಗಿ ಕೈಲಾಸದಲ್ಲಿದ್ದಡೇನು? ಭಕ್ತನಪ್ಪನೇ? ಅಲ್ಲಲ್ಲ ಗಿಡಗಳ ತಿಂದ ಬಳಿಕ ಹಸಿವು ತೃಷೆದೋರದು. ಯೋಗವಂಗವಾದ ಬಳಿಕ ಸ್ವೇಚ್ಛಾಚಾರ ಬಿಡದು ಅಘೋರ ತಪವ ಮಾಡಿದ ಬಳಿಕ ಮಹಾ ಸಿದ್ಧಿ ಗಳು ಬಿಡವು ಒಂದೊಂದರಿಂದೊಂದು ಸಿದ್ಧಿ ಅಂಗ ಮೂರರಲ್ಲಿ ಲಿಂಗ ಸಂಬಂಧವಾಗಿ, ಲಿಂಗ ಮೂರರಲ್ಲಿ ವಸ್ತುತ್ರಯುವ ಪೂಜಿಸಿ, ತತ್ಪ್ರಸಾದ ಗ್ರಾಹಕ ಭಕ್ತನಲ್ಲದೆ ಬಾಲ ಬ್ರಹ್ಮಿಗೆ ಭಕ್ತನೆನ್ನಬಹುದೇನಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಾ?

೫೨ ಅಕಾರವದು ಇಷ್ಟಲಿಂಗ, ಉಕಾರವದು ಪ್ರಾಣಲಿಂಗ, ಮಕಾರವದು ಭಾವಲಿಂಗ ಭಕ್ತಂಗಾಗಲಿ, ಷಟ್‌ಸ್ಥಲ ಬ್ರಹ್ಮಿಯಾದ ವಂಗೆ ಆಗಲಿ, ಲಿಂಗತ್ರಯ ಪೂಜೆಯೇ ಬೇಕು ಲಿಂಗತ್ರಯ ಪೂಜೆಯ ರಿತು ಮಾಡದವರ ಮನದೆರೆದು ಮಾತಾಡೆಯಯ್ಯ ಕಪಿಲಸಿದ್ಧಮಲ್ಲಿ ಕಾರ್ಜುನ ಲಿಂಗವೇ

೫೩. ಇಷ್ಟಲಿಂಗ ಪೂಜೆಯದು ಅಷ್ಟೈಶ್ವರ್ಯ ಪ್ರದವಾಯಿತ್ತು ಪ್ರಾಣಲಿಂಗ ಪೂಜೆಯದು ಅಖಂಡ ಚಿದೈಶ್ವರ್ಯಪ್ರದವಾಯಿತ್ತು ಭಾವ ಲಿಂಗ ಪೂಜೆಯದು ನಿರ್ಭಾವ ನಿಜಾನಂದ ವಸ್ತು ಸ್ವರೂಪವಾಯಿತ್ತು ಕೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ

# ಪ್ರಾಣಲಿಂಗ ಪೂಜೆ.

೫೪ ದೇಹವೇ ದೇಗುಲ, ಕಾಲೇ ಕಂಭ, ಶಿರಸ್ಸೇ ಶಿಖರ ನೋಡಾ. ಹೃದಯಕಮಲ ಕರ್ಣಿಕಾವಾಸವೇ ಸಿಂಹಾಸನ ಮಹಾಘನ ಪರತತ್ವವೆಂಬ ಪ್ರಾಣಲಿಂಗ ಮೂರ್ತಿಗೊಳಿಸಿ ಪರಮಾನಂದಾಮೃತ ಜಲದಿಂದ ಮಜ್ಜನಕ್ಕೆರೆದು ಮಹಾವಳ ಪದ್ಮದಲ್ಲಿ ಪೂಜಿಸಿ ಪರಮ ಪರಿಣಾಮವೆಂಬ ನೈವೇದ್ಯವ ಗಡಣಿಸಿ ಪ್ರಾಣಲಿಂಗಕ್ಕೆ ಪ್ರಾಣಸಂಬಂಧವಾದ ಪೂಜೆಯ ಮಾಡುತಿರ್ದೆನು ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ

೫೫ ಲಿಂಗಕ್ಕು ಪ್ರಾಣಕ್ಕು ಭೇದವಿಲ್ಲೆಂದರಿದು ಶಿವಲಿಂಗಾರ್ಚನೆಯ ಮಾಡಿ ಈ ಪ್ರಕಾರದಲ್ಲಿ ಆಚರಿಸಲಾಗಿ ಷಟ್‌ಪ್ರಕಾರವಪ್ಪ ಲಿಂಗವು ಕ್ರಮತಪ್ಪದ ಸಾಧ್ಯವಪ್ಪುದು ಸಂಕಲ್ಪವಿಕಲ್ಪವಿಲ್ಲದೆ ಹೀಗೆಂದರಿಯಲು ಆ ಪ್ರಾಣದ ಮಹಾಲಿಂಗದ ಪ್ರಭೆಯೊಳಗೆ ಓಲಾಡುತಿರ್ಪುದಯ್ಯಾ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ

೫೬ ನಮ್ಮ ಶರಣ ಅಂತರಂಗದ ಅಷ್ಟವಿಧಾರ್ಚನೆಯಂ ಮಾಡಿ ಸುಜ್ಞಾನ ದೃಷ್ಟಿಯಿಂ ನೋಡಲು, ಆ ಜ್ಯೋತಿರ್ಲಿಂಗ ಒಂದೆರಡಾಯಿತ್ತು ಎರಡು ಮೂರಾಯಿತ್ತು ಮೂರಾರಾಯಿತ್ತು ಆರು ಒಂಬತ್ತಾಯಿತ್ತು ಒಂಬತ್ತು ಹದಿನೆಂಟಾಯಿತ್ತು ಹದಿನೆಂಟು ಮೂವತ್ತಾರಾಯಿತ್ತು ಆ ಮೂವತ್ತಾರೇ ಇನ್ನೂರು ಹದಿನಾರಾಯಿತ್ತು ಇನ್ನೂರು ಹದಿನಾರೇ ಸಾವಿರದ ಏಳುನೂರು ಇಪ್ಪತ್ತೆಂಟು ಆಯಿತ್ತು ಆ ಲಿಂಗಂಗಳೇ ಶರಣನ ರೋಮದ ಕುಳಿಯಲ್ಲಿ ನಿಂದು ಸರ್ವಾಂಗ ಲಿಂಗವಾಯಿತ್ತು ಆ ಲಿಂಗ ಶರಣಂಗೆ ಚೈತನ್ಯವಾಯಿತ್ತು ಆ ಶರಣನೇ ಲಿಂಗಕ್ಕೆ ಚೈತನ್ಯವಾಗಲು ಶರಣಸತಿ ಲಿಂಗಪತಿ ಎಂಬೆರಡು ಅಳಿದು ಒಬ್ಬ ಶರಣನೇ ಉಳಿಯಲು ಆ ಶರಣನ ಪಾದೋದಕವೇ ಲಿಂಗಕ್ಕೆ ಅಭಿಷೇಕವಾಯಿತ್ತು ಆ ಶರಣನ ಪಾದಕ್ಕರ್ಪಿಸಿದ ಕುಸುಮವೇ ಪ್ರಸಾದ ಪುಷ್ಪವಾಯಿತ್ತು. ಆ ಶರಣನ ಪಾದಕ್ಕರ್ಪಿಸಿದ ಗಂಧಾಕ್ಷತೆಯೇ ತಾಂಬೂಲವೇ ಲಿಂಗ ಪ್ರಸಾದಗಳಾದವು ಆ ಶರಣನ ಪಾದಸನ್ನಿಧಿಯಲ್ಲಿ ಪ್ರಕಾಶನಾಗಿ ಧೂಪದೀಪಂಗಳೇ ಲಿಂಗ ದ್ರವ್ಯಗಳಾಗಿ ಆ ಶರಣನ ಪಾದ ಪೂಜಾದ್ರವ್ಯವೇ ಲಿಂಗ ಪೂಜಾ ದ್ರವ್ಯವಾಗಿ ಆಚರಿಸುತ್ತಿರ್ದಲ್ಲಿ ಶರಣಸತಿ ಲಿಂಗಪತಿ ಎಂಬ

ನ್ಯಾಯ ಹಿಂದಾಯಿತ್ತು ಲಿಂಗ ಹಿರಿದು ಅಂಗ ಕಿರಿದು ಎಂಬ ನ್ಯಾಯ ಇಲ್ಲದೇ ಹೋಯಿತ್ತು ಅದೆಂತೆಂದೊಡೆ, ದೀಪದಿಂದ ದೀಪ ಹುಟ್ಟಿದಲ್ಲಿ ಆವ ಆವ ದೀಪ ಮೊದಲೆಂಬುದು ಕಾಣದಂತೆ, ಸರ್ಪ ಕಚ್ಚಿದ ಮನುಷ್ಯನ ಅಂಗ ವಿಷ ಒಂದು ಠಾವಿನಲ್ಲಿ ಇದೆ ಎಂದು ಕುರುಹಿಡಬಾರದಂತೆ ಲಿಂಗಪ್ರಾಣನಾದ ಶರಣನು ಶರಣ ಪ್ರಾಣವಾದ ಲಿಂಗಕ್ಕೆ ಭೇದವಿಲ್ಲ ಹರಗುರು ವಾಕ್ಯದಲ್ಲಿ ಶರಣ ಲಿಂಗದಾಚರಣೆ ಇಂತಿಹುದು ಈ ಶರಣ ಲಿಂಗ ದೂಷಣೆಯ ಮಾಡುವ ದ್ರೋಹಿಗಳಿಗೆ ನಾಯಕನರಕ ತಪ್ಪದು ತಪ್ಪದು ಕೂಡಲ ಚನ್ನಸಂಗಮದೇವಾ

೫೭. ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಂ ಮಾಡುವುದು ಇಷ್ಟಲಿಂಗದ ಪೂಜೆ ಆ ಲಿಂಗವನು ಮನಸ್ಸಿನಲ್ಲಿಯೇ ಧ್ಯಾನಿಸುವುದೇ ಪ್ರಾಣಲಿಂಗ ಪೂಜೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ

೫೮ ಉದಕದಿಂದ ಅಭಿಷೇಕಂಗೈವಡೆ ಒದವಿದವು ನೋಡಾ ನಿನ್ನುತ್ತಮಾಂಗದಲ್ಲಿ ಅರುವತ್ತೆಂಟು ಕೋಟಿ ನದಿಗಳು ಪುಷ್ಪವ ಧರಿಸುವಡೆ ಚಂದ್ರಕಲಾ ಪ್ರಕಾಶ ಉಂಟು ನೋಡಾ ಜಟಾಗ್ರದಲ್ಲಿ ನೀರಾಜನವೆತ್ತುವಡೆ ಸೂರ್ಯ ಚಂದ್ರಾಗ್ನಿ ನೇತ್ರ ನೋಡಾ ಸ್ತೋತ್ರವ ಮಾಡುವಡೆ, ವೇದಂಗಳು ಹೊಗಳಿ ಹೊಗಳಿ ಮೂಗುವಟ್ಟವು ನೋಡಾ ನಿನ್ನ ಮುಂಭಾಗದಲ್ಲಿ ನಾಟ್ಯವನಾಡುವಡೆ ಅಮರಿದವು ನೋಡಾ ಅಜಾಂಡಗಳು ನಿನ್ನ ಪಾದ ಸ್ಪರ್ಶನದಿಂದ ಚಾಮರ ಬೀಸುವಡೆ ನೋಡಾ ಹನ್ನೊಂದು ಕೋಟಿ ರುದ್ರಕನ್ನಿಕೆಯರ ಕೈತಾಳ ಧ್ವನಿಯು ಚಂದನವ ಧರಿಸುವಡೆ ನೋಡಾ, ಮಲಯಾಚಲ ನಿವಾಸಿ ವಸ್ತ್ರವ ಧರಿಸುವಡೆ ನೋಡಾ, ವ್ಯಾಘ್ರಾಸುರ ಗಜಾಸುರ ಚರ್ಮವಾಸಿ ಭಸ್ಮವ ಧರಿಸುವಡೆ ನೋಡಾ ಕಾಮನ ದಗ್ಧ ಭಸ್ಮ ಅಂಗದಲ್ಲಿ ಅಕ್ಷತೆಯ ಧರಿಸುವಡೆ ನೋಡಾ ಅಜಾಂಡಂಗಳ ದಾಟಿದ ಮಸ್ತಕ ಅಂತಪ್ಪ ವಿಗ್ರಹವ ಪೂಜಿಸುವಡೆನ್ನಳವೇ? ಶರಣನ ಮುಖದಿಂದ ಬಂದ ಪದಾರ್ಥವ ಕೈಕೊಂಡು ಪೂಜಾಪ್ರೀತನಾಗಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ

೫೯ ಕಾಯವೇ ಪೀಠಿಕೆ, ಪ್ರಾಣವೇ ಲಿಂಗವಾಗಿರಲು, ಬೇರೆ ಮತ್ತೆ ಕುರುಹು ಏಕಯ್ಯಾ? ಕುರುಹುವಿಡಿದು ಕೂಡುವ ನಿರವಯ

ಉಂಟೇ ಜಗದೊಳಗೆ? ನಷ್ಟವ ಕೈಯ್ಯಲ್ಲಿ ಹಿಡಿದು ದೃಷ್ಟವ ಕಂಡಿಹೆನೆಂಬರೆ ಕಪಿಲಸಿದ್ಧಮಲ್ಲಿನಾಥಯ್ಯನು ಸಾಧ್ಯವಹ ಪರಿಯ ಹೇಳಾ ಪ್ರಭುವೇ?

೬೦ ಅಂಗದ ಮೇಲೆ ಲಿಂಗಸಂಬಂಧಿಯಾದ ಬಳಿಕ, ಸರ್ವಾಂಗದಲ್ಲಿ ತೋರುವ ವಿಕಾರವಳಿಯಬೇಕು. ಆ ಅಂಗವ ಸೋಂಕಿದ ಲಿಂಗಕ್ಕೆ ತ್ರಿಕರಣ ಶುದ್ಧವಾದುದೇ ನಿಷ್ಠೆ ಶಿವಾಚಾರ ಈ ತ್ರಿವಿಧವ ಮುಟ್ಟಿ ಲಿಂಗಾರ್ಚನೆಯ ಮಾಡಬೇಕು. ಅಂಗ ಲಿಂಗ ಸಂಬಂಧಕ್ಕೆ ಇದೇ ಕ್ರಮವಯ್ಯಾ ಕೂಡಲಚೆನ್ನಸಂಗಮದೇವಾ

## ಭಾವಲಿಂಗ ಪೂಜೆ

೬೧ ಹೊತ್ತಾರೆ ಎದ್ದು, ಹೂ ಪತ್ರೆಯ ಕೊಯಿದು ತಂದು, ಹೊರ ಉಪಚಾರವ ಮಾಡುವುದಲ್ಲ. ಒಳಿಯ ಭಾವದ ಬೆಳಕೆ ನೋಡಾ. ಅಳಿಸದ ಬೆಳಸದ ಆಕಾಶಸಂಚದ ಬೆಳಗಿನ ಜ್ಯೋತಿಯ ಬೆಳಗಿನ ಕಳೆಯ ಕಮಲದ ಪುಷ್ಪವಿಲ್ಲ ಚರಣಾಂಗ ಬೆಳಗಾಗಿ ಎದ್ದು ಪೂಜಿಸುವೆನೆಂಬ ಶಿವಭಕ್ತರನೇನು ಹೇಳಾ ಮಹಾಲಿಂಗ ಗುರು ಶಿವಸಿದ್ಧೇಶ್ವರಪ್ರಭುವೇ?

೬೨ ಕಾಯದ ಮೇಲಣ ಲಿಂಗವ ಧರಿಸಿ ದೇವರ ಪೂಜೆಯ ಮಾಡಿ, ಕಾಯವಳಿದು ಮತ್ತೆ ಭೋಗವನಪ್ಪುದೆಂಬ ಗಾವಿಲರ ಎನಗೊಮ್ಮೆ ತೋರದಿರಯ್ಯಾ. ಕಾಯವನು ಜೀವವನು ಲಿಂಗದಲ್ಲಿರಿಸಬಲ್ಲರೆ ಮಹಾದೇವನೆಂದು ಬೇರುಂಟೇ? ಆ ಮಹೇಶ್ವರಂಗೆ ನಮೋ ನಮೋ ಎಂಬೆನು ಕಾಣಾ ಮಹಾಲಿಂಗ ಗುರು ಶಿವಸಿದ್ಧೇಶ್ವರಪ್ರಭುವೇ

೬೩ ಉಪ್ಪು ಉದಕವ ಬೆರಸಿದಂತೆ, ಆಣಿಕಲ್ಲು ನೀರಿಯ ಬೆರಸಿದಂತೆ, ಕರ್ಪೂರ ಅಗ್ನಿಯ ಬೆರಸಿದಂತೆ, ಮನ ಲಿಂಗದಲಿ ಲೀಯ್ಯವಾಗಿಹುದು ಭಾವಲಿಂಗ ಪೂಜೆ ನೋಡಾ, ಅಪ್ರಮಾಣ ಕೂಡಲಸಂಗಮದೇವಾ

೬೪ ಭಾವಲಿಂಗದಿಂದ ಇಷ್ಟಲಿಂಗವ ಧ್ಯಾನಿಸ ಹೋದರೆ ಇಷ್ಟ ಲಿಂಗವೇ ಭಾವಲಿಂಗವಾಯಿತ್ತು ಭಾವಲಿಂಗದಿಂದ ತ್ರಿವಿಧವನರಿದಿ ಹೆನೆಂದರೆ, ಭಾವಲಿಂಗವೇ ಮಹಾಲಿಂಗವಾಗಿ ಅಳವಡಿಸಿದನು, ಎನ್ನ ಗುರು ಚನ್ನಬಸವಣ್ಣನು ಕಾಣಾ ಕಪಿಲಸಿದ್ಧಮಲ್ಲೇಶಾ

## ಇಷ್ಟ ಪ್ರಾಣ ಭಾವಲಿಂಗಗಳಲ್ಲಿ ಇಷ್ಟ ಪ್ರಾಣ ಭಾವಲಿಂಗಗಳ ಪೂಜೆ

೬೫ ವಿಭೂತಿ, ರುದ್ರಾಕ್ಷಿ ಧಾರಣಾಲಂಕಾರವೇ ಇಷ್ಟಲಿಂಗದ ಪೂಜೆ ಪೂಜಾವಿಧಾನವೇ ಇಷ್ಟಲಿಂಗದಲ್ಲಿ ನ್ಯಸ್ತವಾದ ಪ್ರಾಣಲಿಂಗದ ಪೂಜೆ, ಶ್ರದ್ಧಾಭಕ್ತಿಯೇ ಇಷ್ಟಲಿಂಗದಲ್ಲಿ ನ್ಯಸ್ತವಾದ ಭಾವಲಿಂಗದ ಪೂಜೆ ಬಹು ಪೂಜಾಕ್ರಮವ ಅಂತರಂಗದಲ್ಲಿ ಅಳವಡಿಸಿ ಮಾಡು ವುದೇ ಪ್ರಾಣಲಿಂಗದ ಪೂಜೆ, ಮಾನಸ ಮಂತ್ರೋಚ್ಚಾರಣವೇ ಪ್ರಾಣ ಲಿಂಗದಲ್ಲಿ ನೆಲಸಿದ ಇಷ್ಟಲಿಂಗದ ಪೂಜೆ ಧ್ಯಾನಾರೂಢವೇ ಪ್ರಾಣ ಲಿಂಗಸಂಬಂಧವಾದ ಭಾವಲಿಂಗದ ಪೂಜೆ ಮನೋಲಯವೇ ಭಾವ ಲಿಂಗದ ಪೂಜೆ, ಸುಜ್ಞಾನವೇ ಭಾವಲಿಂಗದೊಳಗಣ ಇಷ್ಟಲಿಂಗದ ಪೂಜೆ, ಪರಿಣಾಮವೇ ಭಾವಲಿಂಗದಲ್ಲಿ ಕೂಡಿದ ಪ್ರಾಣಲಿಂಗದ ಪೂಜೆ

## ಷಡ್ಲಿಂಗ ಪೂಜೆ.

೬೬ ಈ ಪ್ರಕಾರದಲ್ಲಿ ಗುರುವಿನ ಹಸ್ತದಲ್ಲಿ ಹುಟ್ಟಿ ಲಿಂಗವೇದಿ ಎನಿಸಿಕೊಂಡ ಜ್ಞಾತ ಪುರುಷನು ತನ್ನ ಜ್ಞಾನ ಸ್ವರೂಪವನು ಅರಿಯ ಬೇಕಯ್ಯ. ಆ ಜ್ಞಾನವೇ ಆರು ತೆರನಾಗಿಪ್ಪುದು ಅವು ಆವವೆಂದೊಡೆ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂದು ಆರು ತೆರನಾಗಿಪ್ಪುದು. ಈ ಷಡ್ವಿಧ ವ್ರತವನರಿದು ಆಚರಿಸುವ ಕ್ರಮವೆಂತುಂಟಯ್ಯ ಎಂದೊಡೆ,

ಆಧಾರ ಚಕ್ರಸ್ಥಾನದಲ್ಲಿ ನಾಲ್ಕೆಸಳ ಕಮಲದ ವ, ಶ, ಷ, ಸ, ಎಂಬ ನಾಲ್ಕು ಬೀಜಾಕ್ಷರದ ಪೃಥ್ವೀ ತತ್ವ, ಕೆಂಪುವರ್ಣದ ರೇಖೆಯು

ನರಿಯಬೇಕಯ್ಯ ಸ್ವಾಧಿಷ್ಠಾನ ಚಕ್ರದ ಆರೆಸಳ ಕಮಲದ ಬ, ಭ, ಮ, ಯ, ರ ಲ ಎಂಬ ಆರು ಬೀಜಾಕ್ಷರ ಯುಕ್ತವಾದ ಅಪ್ಪು ತತ್ವದ ನೀಲ ವರ್ಣದ ನೆಲೆಯನರಿಯಬೇಕಯ್ಯ ಮಣಿಪೂರಕ ಚಕ್ರ ಸ್ಥಾನದಲ್ಲಿ ಹತ್ತೆಸಳ ಕಮಲದ ಡ, ಢ, ಣ, ತ, ಥ, ದ, ಧ, ನ, ಪ, ಫ, ಎಂಬ ಹತ್ತು ಬೀಜಾಕ್ಷರ ಸ್ವಾಯತವಪ್ಪ ಅಗ್ನಿ ತತ್ವವದು ಕುಂಕುಮ ವರ್ಣದ ನೆಲೆಯನರಿಯಬೇಕಯ್ಯ ಅನಾಹತ ಚಕ್ರಸ್ಥಾನ ದಲ್ಲಿ ಹನ್ನೆರಡೆಸಳ ಕಮಲದ ಕ ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಎಂಬ ಹನ್ನೆರಡಕ್ಷರಯುಕ್ತವಾಗಿಪ್ಪ ವಾಯು ತತ್ವದ ಪೀತ ವರ್ಣದ ನೆಲೆಯನರಿಯಬೇಕಯ್ಯ ವಿಶುದ್ಧಿ ಚಕ್ರಸ್ಥಾನದಲ್ಲಿ ಹದಿನಾರೆಸಳ ಕಮಲದ ಅ, ಆ, ಇ, ಈ, ಉ, ಊ, ಋ, ೠ, ಌ, ೡ, ಏ ಐ, ಓ ಔ, ಅಂ ಅಃ, ಎಂಬ ಹದಿನಾರಕ್ಷರ ಸ್ವಾಯ ತವಾಗಿಪ್ಪ ಆಕಾಶ ತತ್ವದ ಸ್ಫಟಿಕ ವರ್ಣದ ನೆಲೆಯನರಿಯಬೇಕಯ್ಯ ಆಜ್ಞಾ ಚಕ್ರಸ್ಥಾನದಲ್ಲಿ ಎರಡೆಸಳ ಕಮಲದ ಹಂ ಸ ಎಂಬೆರಡು ಬೀಜಾ ಕ್ಷರಯುಕ್ತವಾಗಿರ್ದ ಆತ್ಮತತ್ವದ ಮಾಣಿಕ್ಯ ವರ್ಣದ ನೆಲೆಯನರಿಯ ಬೇಕಯ್ಯ ಇವೆಲ್ಲಕ್ಕೆ ಮೂಲ ತತ್ವವೆನಿಸುವ ಬ್ರಹ್ಮರಂಧ್ರದಲ್ಲಿ ಸಾಸಿ ರೆಸ ಮಲ ಸಾಸಿರ ಬೀಜಾಕ್ಷರ ಸರ್ವತೋಮುಖವಾಗಿರ್ದ ಭೇದವ ಹೇಳಿಹೆನು,

ಆಧಾರಚಕ್ರದ ನಾಲ್ಕೆಸಳ ಕಮಲ ಮಧ್ಯದಲ್ಲಿ ಆಚಾರಲಿಂಗ ಸ್ವಾಯತವ ಮಾಡಿ, ಸ್ವಾಧಿಷ್ಠಾನ ಚಕ್ರದ ಆರೆಸಳ ಕಮಲಮಧ್ಯದಲ್ಲಿ ಗುರುಲಿಂಗವ ಮೂರ್ತಿಗೊಳಿಸಿ, ಮಣಿಪೂರಕ ಚಕ್ರದ ಹತ್ತೆಸಳ ಕಮಲ ಮಧ್ಯದಲ್ಲಿ ಶಿವಲಿಂಗವ ಸಂಬಂಧಿಸಿ, ಅನಾಹತ ಚಕ್ರದ ಹನ್ನೆರಡೆಸಳ ಕಮಲದ ಮಧ್ಯದಲ್ಲಿ ಜಂಗಮಲಿಂಗವ ನೆಲೆಗೊಳಿಸಿ, ವಿಶುದ್ಧಿ ಚಕ್ರದ ಹದಿನಾರೆಸಳ ಕಮಲದ ಮಧ್ಯದಲ್ಲಿ ಪ್ರಸಾದ ಲಿಂಗವ ಮೂರ್ತಿಗೊ ಳಿಸಿ, ಆಜ್ಞಾಚಕ್ರದ ಎರಡೆಸಳ ಕಮಲದ ಮಧ್ಯದಲ್ಲಿ ಮಹಾ ಲಿಂಗವ ನೆಲೆಗೊಳಿಸಿ,

ಘ್ರಾಣದಲ್ಲಿ ಆಚಾರಲಿಂಗವ ಸಂಬಂಧಿಸಿ, ಜಿಹ್ವೆಯಲ್ಲಿ ಗುರುಲಿಂಗವ ಸಂಬಂಧಿಸಿ, ನೇತ್ರದಲ್ಲಿ ಶಿವಲಿಂಗವ ಸಂಬಂಧಿಸಿ, ತ್ವಕ್ಕಿನಲ್ಲಿ ಜಂಗಮ ಲಿಂಗವ ಸಂಬಂಧಿಸಿ, ಶ್ರೋತ್ರದಲ್ಲಿ ಪ್ರಸಾದಲಿಂಗವ ಸ್ವಾಯತವ ಮಾಡಿ, ಭಾವದಲ್ಲಿ ಮಹಾಲಿಂಗವ ಮೂರ್ತಿಗೊಳಿಸಿ, ಬ್ರಹ್ಮದಲ್ಲಿರ್ದ ಪರಿಪೂರ್ಣ

ಲಿಂಗವು ಸರ್ವಾಂಗದಲ್ಲಿ ಸ್ವಾಯತವಾಗಲು, ಅಂಗಸಂಗಗಳೆಲ್ಲವು ಲಿಂಗ ಸಂಗಗಳಾಗಿ ಲಿಂಗದೃಕ್ಕೇ ನಿರಂತರ ಪ್ರಕಾಶಿಸುತ್ತಿರ್ಪುದಯ್ಯ, ಲಿಂಗ ಪ್ರಭೆಯೊಳಗೆ ಶಿವಶಿವ ಎನುತಿರ್ಪನಯ್ಯ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ.

## ನವಲಿಂಗ ಪೂಜೆ.

೬೭ ನವನಾಳವ ಬಲಿದು ಶಿವಧ್ಯಾನದಲ್ಲಿ ಕುಳಿರ್ದು ಭವದ ದುಃಖದಿಂದ ನವಲಿಂಗವ ನೋಡಿ ಪೂಜಿಸಿ ಕೂಡುವ ಭೇದವೆಂತೆಂದೊಡೆ,

### ಆಚಾರಲಿಂಗ

ಆಧಾರ ಚಕ್ರವೆಂಬ ರಂಗಮಂಟಪದಲ್ಲಿ ಮೂರ್ತಿಗೊಂಡಿದ್ದ ಆಚಾರಲಿಂಗಕ್ಕೆ ಶಿವಾನಂದ ಜಲ ಮಜ್ಜನಕ್ಕೆರೆದು, ಪೃಥ್ವೀನಿವೃತ್ತಿಯಾದ ಗಂಧವ ಧರಿಸಿ ಚಿತ್ತ ಸುಚಿತ್ತವಾದ ಅಕ್ಷತೆಯನಿಟ್ಟು, ಅಲ್ಲಿಹ ಚತುರ್ದಳಂಗಳನೆ ಪುಷ್ಪಮಾಲೆ ಎಂದು ಧರಿಸಿ, ಅಲ್ಲಿ ಕಮಲ ಸದ್ವಾಸನೆಯು ಧೂಪವ ಬೀಸಿ, ಅಲ್ಲಿರ್ಪ ಪೀತವರ್ಣವನೇ ಕರ್ಪುರದ ಜ್ಯೋತಿಯಿಂದ ಬೆಳಗಿ, ಅಲ್ಲಿಹ ಜಾಗ್ರದವಸ್ಥೆ ಎಂಬ ನವೀನ ವಸ್ತ್ರವ ಹೊದ್ದಿಸಿ, ನಿಃಕಾಮವೆಂಬ ಆಭರಣವ ತೊಡಿಸಿ, ಸುಗಂಧವೆಂಬ ನೈವೇದ್ಯವನರ್ಪಿಸಿ, ತೃಪ್ತಿ ಎಂಬ ತಾಂಬೂಲವನಿತ್ತು, ಇಂತು ಆಚಾರ ಲಿಂಗವ ಅಷ್ಟವಿಧಾರ್ಚನೆಯು ಮಾಡಿ, ಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ ಆಚಾರ ಲಿಂಗವನ್ನು ಕಂಗಳು ತುಂಬಿ ನೋಡಿ, ಸಂತೋಷಬಟ್ಟು ಆಚಾರಲಿಂಗದ ಪೂಜೆಯು ನಿರ್ಮಾಲ್ಯವ ಮಾಡದೆ ಓಂ, ನಾಂ ನಾಂ ನಾಂ ನಾಂ ನಾಂ ನಾಂ ಎಂಬ ನಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ ಆಚಾರ ಲಿಂಗವನೇ ಕೂಡಿ ಎರಡಳಿದು,

### ಗುರುಲಿಂಗ

ಆ ಲಿಂಗದ ಮುಂದಕ್ಕೆ ಹೋಗಿ ಸ್ವಾಧಿಷ್ಠಾನವೆಂಬ ರಂಗ ಮಂಟಪದಲ್ಲಿ ಮೂರ್ತಿಗೊಂಡಿರ್ಪ ಗುರುಲಿಂಗಕ್ಕೆ ಪರಿಣಾಮವೆಂಬ ಜಲದಿಂದ ಮಜ್ಜನಕ್ಕೆರೆದು, ಅಪ್ಪು ನಿವೃತ್ತಿಯಾದ ಗಂಧವ ಧರಿಸಿ, ಬುದ್ಧಿ ಸುಬು

ಧಿಯಾದಕ್ಷತೆಯನಿಟ್ಟು, ಅಲ್ಲಿಹ ಷಡುದಳಂಗಳನೇ ಪುಷ್ಪಮಾಲೆಯ ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪಮಂ ಬೀಸಿ, ಅಲ್ಲಿಹ ನೀಲವರ್ಣವನ್ನೇ ಕರ್ಪುರದ ಜ್ಯೋತಿ ಎಂದು ಬೆಳಗಿ, ಅಲ್ಲಿಹ ಸ್ವಪ್ನಾವಸ್ಥೆ ಎಂಬ ವಸ್ತ್ರವ ಹೊದ್ದಿಸಿ ನಿಃಕ್ರೋಧವೆಂಬ ಆಭರಣವ ತೊಡಿಸಿ, ಸುರುಚಿ ಎಂಬ ನೈವೇದ್ಯವನರ್ಪಿಸಿ, ನೈಷ್ಠೆ ಎಂಬ ತಾಂಬೂಲವನರ್ಪಿಸಿ, ಇಂತೀ ಗುರುಲಿಂಗದ ಅಷ್ಟವಿಧಾರ್ಚನೆಯಂ ಮಾಡಿಕೊಂಡು, ಕೋಟಿಸೂರ್ಯ ಪ್ರಭೆಯಂತೆ ಬೆಳಗುವ ಗುರುಲಿಂಗವನ್ನು ಕಂಗಳು ತುಂಬಿ ನೋಡಿ, ಮನಸ್ಸಂತೋಷಂಗೊಂಡು ಆ ಗುರುಲಿಂಗ ಪೂಜಾ ಸಿವಾರ್ಚನೆಯ ಮಾಡದ, ಓಂ, ಮಾಂ ಮಾಂ ಮಾಂ ಮಾಂ ಮಾಂ ಮಾಂ ಎಂಬ ಮಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ ಆ ಗುರುಲಿಂಗವನ್ನು ಕೂಡಿ ಎರಡಳಿದು,

## ಶಿವಲಿಂಗ

ಆ ಲಿಂಗದ ಮುಂದಕ್ಕೆ ಹೋಗಿ, ಮಣಿಪೂರಕ ಚಕ್ರ ರಂಗ ಮಂಟಪದಲ್ಲಿ ಮೂರ್ತಿಗೊಂಡಿರ್ದ ಶಿವಲಿಂಗಕ್ಕೆ ಪರಮಾನಂದವೆಂಬ ಮಜ್ಜನಕ್ಕೆರೆದು ಅಗ್ನಿ ನಿವೃತ್ತಿಯಾದ ಗಂಧವ ಧರಿಸಿ, ಅಹಂಕಾರವೆಂಬ ಅಕ್ಷತೆಯನಿಟ್ಟು ಅಲ್ಲಿಹ ದಶದಳಂಗಳನೇ ಪುಷ್ಪಮಾಲೆಯ ಧರಿಸಿ ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಕೆಂಪು ವರ್ಣವೇ ಕರ್ಪೂರದ ಜ್ಯೋತಿ ಎಂದು ಬೆಳಗಿ, ಅಲ್ಲಿಹ ಸುಷುಪ್ತಾವಸ್ಥೆ ಎಂಬ ವಸ್ತ್ರವ ಹೊದ್ದಿಸಿ, ನಿರ್ಲೋಭವೆಂಬ ಆಭರಣವ ತೊಡಿಸಿ, ಸುರೂಪು ಎಂಬ ನೈವೇದ್ಯವಂ ಸಮರ್ಪಿಸಿ, ಸಾವಧಾನವೆಂಬ ತಾಂಬೂಲವನಿತ್ತು, ಶಿವಲಿಂಗದಷ್ಟವಿಧಾರ್ಚನೆಯಂ ಮಾಡಿ ಕೋಟಿಸೂರ್ಯ ಪ್ರಭೆಯಂತೆ ಬೆಳಗುವ ಶಿವಲಿಂಗವ ಕಂಗಳು ತುಂಬಿ ನೋಡಿ, ಮನದಲ್ಲಿ ಸಂತೋಷಂಗೊಂಡು ಶಿವಲಿಂಗ ಪೂಜಾ ಶಿವಾರ್ಚನೆಯ ಮಾಡದ ಓಂ, ಶೀಂ ಶೀಂ ಶೀಂ ಶೀಂ ಶೀಂ ಶೀಂ ಎಂಬ ಶಿಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ, ಆ ಶಿವಲಿಂಗವನ್ನು ಕೂಡಿ ಎರಡಳಿದು,

## ಜಂಗಮಲಿಂಗ

ಅಲ್ಲಿಂದ ಮುಂದಕ್ಕೆ ಹೋಗಿ, ಮೂರ್ತಿಗೊಂಡಿರ್ದ ಆ ಜಂಗಮ ಲಿಂಗಕ್ಕೆ ಶಾಂತಿ ಎಂಬ ಜಲದಿಂದ ಮಜ್ಜನಕ್ಕೆರೆದು, ವಾಯು ನಿವೃತ್ತಿಯಾದ

ಗಂಧವ ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಮಾಂಜಿಷ್ಟ ವರ್ಣವೇಕರ್ಪೂರದ ಜ್ಯೋತಿ ಎಂದು ಬೆಳಗಿ, ಅಲ್ಲಿಹ ತೂರ್ಯಾವಸ್ಥೆ ಎಂಬ ವಸ್ತ್ರವಂ ಸಮರ್ಪಿಸಿ, ನಿರ್ಮೋಹವೆಂಬ ಆಭರಣವ ತೊಡಿಸಿ ಸುಸ್ಪರ್ಶನವೆಂಬ ನೈವೇದ್ಯವನರ್ಪಿಸಿ ಅನುಭಾವವೆಂಬ ತಾಂಬೂಲವನಿತ್ತು, ಇಂತು ಜಂಗಮಲಿಂಗದ ಅಷ್ಟವಿಧಾರ್ಚನೆಯಂ ಮಾಡಿ ಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ ಜಂಗಮ ಲಿಂಗವನ್ನು ಕಂಗಳ ತುಂಬಿ ನೋಡಿ, ಮನದಲ್ಲಿ ಸಂತೋಷಂಗೊಂಡು, ಆ ಜಂಗಮ ಲಿಂಗವ ಪೂಜೆಯ ನಿರ್ಮಾಲ್ಯವ ಮಾಡದೆ ಓಂ, ವಾಂ ವಾಂ ವಾಂ ವಾಂ ವಾಂ ವಾಂ ಎಂಬ ವಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ, ಆ ಜಂಗಮ ಲಿಂಗವನ್ನೇ ಕೂಡಿ ಎರಡಳಿದು,

## ಪ್ರಸಾದಲಿಂಗ

ಅಲ್ಲಿಂದ ಮುಂದಕ್ಕೆ ಹೋಗಿ, ಸಿದ್ಧಿ ಚಕ್ರವೆಂಬ ರಂಗಮಂಟಪದಲ್ಲಿ ಮೂರ್ತಿಗೊಂಡಿರ್ಪ ಪ್ರಸಾದಲಿಂಗಕ್ಕೆ ಕೃಪೆ ಎಂಬ ಜಲದಿಂದ ಮಜ್ಜನಕ್ಕೆರೆದು, ಗಗನ ನಿವೃತ್ತಿಯಾದ ಗಂಧವ ಧರಿಸಿ, ಜ್ಞಾನ ಸುಜ್ಞಾನವಾದ ಅಕ್ಷತೆಯನಿಟ್ಟು ಅಲ್ಲಿಹ ಷೋಡಶದಳಂಗಳನೆ ಪುಷ್ಪದ ಮಾಲೆಯ ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಕೃಷ್ಣವರ್ಣವೇ ಕರ್ಪೂರದ ಜ್ಯೋತಿಯಂ ಬೆಳಗಿ, ಅಲ್ಲಿಹ ತೂರ್ಯಾತೀತಾವಸ್ಥೆ ಎಂಬ ನವೀನ ವಸ್ತ್ರವ ಧರಿಸಿ, ನಿರ್ಮಲವೆಂಬ ಆಭರಣವನಿಟ್ಟು ಸುರಬ್ದವೆಂಬ ನೈವೇದ್ಯವನರ್ಪಿಸಿ ಆನಂದವೆಂಬ ತಾಂಬೂಲವನಿತ್ತು ಇಂತು ಪ್ರಸಾದಲಿಂಗದ ಅಷ್ಟವಿಧಾರ್ಚನೆಯಂ ಮಾಡಿಕೊಂಡು ಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ ಪ್ರಸಾದ ಲಿಂಗವನ್ನು ಕಂಗಳ ತುಂಬಿ ನೋಡಿ ಮನಸ್ಸಂತೋಷಂಗೊಂಡು ಆ ಪ್ರಸಾದಲಿಂಗದ ಪೂಜೆಯಂ ನಿರ್ಮಾಲ್ಯವ ಮಾಡದೆ, ಓಂ, ಯಾಂ ಯಾಂ ಯಾಂ ಯಾಂ ಯಾಂ ಯಾಂ ಎಂಬ ಯಕಾರ ಷಡ್ವಿಧದಿಂದ ಮಂತ್ರವ ಸ್ಮರಿಸಿ ಆ ಪ್ರಸಾದ ಲಿಂಗವನೊಡಗೂಡಿ ಎರಡಳಿದು,

## ಮಹಾಲಿಂಗ

ಅಲ್ಲಿಂದ ಮುಂದಕ್ಕೆ ಹೋಗಿ, ಆಜ್ಞಾಚಕ್ರವೆಂಬ ರಂಗಮಂಟಪಕ್ಕೆ ಹೋಗಿ, ಅಲ್ಲಿ ಮೂರ್ತಿಗೊಂಡಿರ್ದ ಮಹಾಲಿಂಗಕ್ಕೆ ಸಂತೋಷವೆಂಬ ಜಲದಿಂದ ಮಜ್ಜನಕ್ಕೆರೆದು ಆತ್ಮನಿವೃತ್ತಿಯಾದ ಗಂಧವ ಧರಿಸಿ,

ಘಾವಸದ್ಭಾವನಕ್ಷತೆಯನಿಟ್ಟು, ಅಲ್ಲಿಹ ದ್ವಿದಳಂಗಳ ಪುಷ್ಪ ಮಾಲೆಯ ಧರಿಸಿ ಅಲ್ಲಿಹ ಕಮಲ ಸದ್ವಾಸನೆಯ ಧೂಪವಂ ಬೀಸಿ, ಅಲ್ಲಿಹ ಮಾಣಿಕ್ಯ ವರ್ಣವೇ ಕರ್ಪೂರ ಜ್ಯೋತಿ ಎಂಬ ಬೆಳಗಿ, ಅಲ್ಲಿಹ ನಿರ ವಸ್ಥೆ ಎಂಬ ವಸ್ತ್ರವ ಪೊದಿಸಿ, ನಿರ್ಮಲವೆಂಬ ಆಭರಣವ ತೊಡಿಸಿ, ಸುತೃಪ್ತಿ ಎಂಬ ನೈವೇದ್ಯವ ಧರಿಸಿ, ಸಮರಸವೆಂಬ ತಾಂಬೂಲವ ನಿತ್ತು, ಇಂತು ಮಹಾಲಿಂಗನ ಅಷ್ಟ ವಿಧಾರ್ಚನೆಯಂ ಮಾಡಿ, ಕೋಟಿ ಸೂರ್ಯ ಪ್ರಭೆಯಂತ ಬೆಳಗುವ ಮಹಾಲಿಂಗವ ಕಂಗಳ ತುಂಬಿ ನೋಡಿ, ಮನಸ್ಸಂತೋಷಗೊಂಡು ಆ ಮಹಾಲಿಂಗದ ಪೂಜೆಯ ನಿರ್ಮಾ ಲ್ಯವ ಮಾಡದ, ಓಂ ಓಂ ಓಂ ಓಂ ಓಂ ಓಂ ಎಂಬ ಓಂಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ, ಆ ಮಹಾಲಿಂಗವನೊಡಗೊಂಡು ಎರಡಳಿದು,

## ನಿಷ್ಕಲಲಿಂಗ

ಅಲ್ಲಿಂದ ಮುಂದಕ್ಕೆ ಹೋಗಿ ಬ್ರಹ್ಮರಂಧ್ರವೆಂಬ ಸಹಸ್ರದಳ ಮಂಟಪದಲ್ಲಿ ಮೂರ್ತಿಗೊಂಡಿರ್ದ ನಿಷ್ಕಲ ಲಿಂಗಕ್ಕೆ ಅನುಪಮವೆಂಬ ಜಲದಿಂದ ಮಜ್ಜನಕ್ಕೆರೆದು ಅನಾದಿ ಎಂಬ ಗಂಧವ ಧರಿಸಿ, ಅಗಮ್ಯ ವೆಂಬ ಅಕ್ಷತೆಯನಿಟ್ಟು, ಅಪಾರವೆಂಬ ಪುಷ್ಪದ ಮಾಲೆಯಂ ಧರಿಸಿ, ಅಪ್ರಮಾಣವೆಂಬ ಧೂಪವ ಬೀಸಿ, ಅಖಂಡವೆಂಬ ಜ್ಯೋತಿಯ ಬೆಳಗಿ, ಸತ್ಯವೆಂಬ ವಸ್ತ್ರವ ಹೊದಿಸಿ, ಸದಾನಂದವೆಂಬ ಆಭರಣವ ತೊಡಿಸಿ, ನೈವೇದ್ಯವನರ್ಪಿಸಿ, ಪರುಷವೆಂಬ ತಾಂಬೂಲವನಿತ್ತು, ಇಂತು ನಿಷ್ಕಲ ಲಿಂಗವ ಅಷ್ಟ ವಿಧಾರ್ಚನೆಯಂ ಮಾಡಿ, ಅನಂತ ಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ ನಿಷ್ಕಲ ಲಿಂಗದ ಪೂಜೆಯ ನಿರ್ಮಾಲ್ಯವ ಮಾಡದೆ, ಅಗಣಿತವೆಂಬ ನಮಸ್ಕಾರವ ಮಾಡಿ ನಿಷ್ಕಳ ಲಿಂಗವನೊಡಗೂಡಿ ಎರಡಳಿದು,

## ಶೂನ್ಯಲಿಂಗ

ಅಲ್ಲಿಂದ ಮುಂದಕ್ಕೆ ಹೋಗಿ ಶಿಖಾಚಕ್ರವೆಂಬ ತ್ರಿದಳ ಮಂಟ ಪದಲ್ಲಿ ಮೂರ್ತಿಗೊಂಡಿರ್ದ ಶೂನ್ಯ ಲಿಂಗಕ್ಕೆ ನಿರ್ಭಾವವೆಂಬ ಜಲ ದಿಂದ ಮಜ್ಜನಕ್ಕೆರೆದು, ನಿಜಾನಂದವೆಂಬ ಗಂಧವ ಧರಿಸಿ, ನಿಜಗೂಢ ವೆಂಬ ಅಕ್ಷತೆಯನಿಟ್ಟು, ನಿರ್ದ್ವಂದ್ವವೆಂಬ ಪುಷ್ಪದ ಮಾಲೆಯಂ ಧರಿಸಿ,

ನಿರ್ಲಜ್ಜವೆಂಬ ಧೂಪವ ಬೀಸಿ, ನಿರಾಧಾರವೆಂಬ ಜ್ಯೋತಿಯ ಬೆಳಗಿ
ನಿರಾಮಯವೆಂಬ ವಸ್ತ್ರವ ಪೊದಿಸಿ, ನಿಸ್ಪೃಹವೆಂಬ ಆಭರಣವ ತೊಡಿಸಿ,
ನಿರಾಳವೆಂಬ ತಾಂಬೂಲವನಿತ್ತು, ಇಂತು ಶೂನ್ಯಲಿಂಗದ ಅಷ್ಟವಿಧಾ
ರ್ಚನೆಯಂ ಮಾಡಿ, ಅಗಣಿತ ಕೋಟಿ ಸೂರ್ಯ ಪ್ರಕಾಶದಂತೆ ಬೆಳ
ಗುವ ಶೂನ್ಯಲಿಂಗವನ್ನು ಕಂಗಳ ತುಂಬಿ ನೋಡಿ, ಮನಸ್ಸಂತೋಷಂ
ಗೊಂಡು, ಆ ಶೂನ್ಯಲಿಂಗದ ಪೂಜೆಯ ನಿರ್ವಾಣ್ಯವ ಮಾಡದೆ, ನಿರ್ಭೇ
ದ್ಯವೆಂಬ ನಮಸ್ಕಾರವಂ ಮಾಡಿ ಆ ಶೂನ್ಯಲಿಂಗವನೊಡಗೂಡಿ
ಎರಡಳಿದು,

## ನಿರಂಜನಲಿಂಗ

ಅಲ್ಲಿಂದ ಮುಂದಕ್ಕೆ ಹೋಗಿ, ಪಶ್ಚಿಮ ಚಕ್ರವೆಂಬ ಏಕದಳ
ಮಂಟಪದಲ್ಲಿ ಮೂರ್ತಿಗೊಂಡಿರ್ದ ನಿರಂಜನ ಲಿಂಗಕ್ಕೆ ನಿರ್ನಾಮ
ವೆಂಬ ಜಲದಿಂದ ಮಜ್ಜನಕ್ಕೆರೆದು ನಿಃಕರುಣವೆಂಬ ಗಂಧವ ಧರಿಸಿ,
ನಿಸ್ಸಂಗವೆಂಬ ಅಕ್ಷತೆಯನಿಟ್ಟು ನಿರ್ನಾಮವೆಂಬ ಪುಷ್ಪದ ಮಾಲೆಯ ಧರಿಸಿ,
ನಿರುಪಾಧಿಕವೆಂಬ ಧೂಪವ ಬೀಸಿ, ನಿಶ್ಶಂಕವೆಂಬ ಜ್ಯೋತಿಯ
ಬೆಳಗಿ, ನಿಷ್ಕಲವೆಂಬ ವಸ್ತ್ರವ ಪೊದಿಸಿ, ನಿರ್ವಾಸನೆ ಎಂಬ ಆಭರ
ಣವ ತೊಡಿಸಿ, ನಿರ್ದ್ವಂದ್ವವೆಂಬ ನೈವೇದ್ಯವ ಸಮರ್ಪಿಸಿ, ನಿರವಯ
ತಾಂಬೂಲವನಿತ್ತು ಇಂತು ನಿರಂಜನ ಲಿಂಗದ ಅಷ್ಟವಿಧಾರ್ಚನೆಯಂ
ಮಾಡಿ ತೆರಹಿಲ್ಲದ ಬೆಳಗಿನ ಬೆಳಗು ಮಹಾ ಬೆಳಗನೊಳಕೊಂಡು ಬೆಳ
ಗುವ ನಿರಂಜನ ಲಿಂಗವ ಕಂಗಳ ತುಂಬಿ ನೋಡಿ ಮನದಲ್ಲಿ ಸಂತೋ
ಷದಿಂದ ನಿರಂಜನ ಲಿಂಗದ ಪೂಜೆಯ ನಿರ್ವಾಣ್ಯವ ಮಾಡದೆ, ನಿರ್ಭೇ
ದ್ಯವೆಂಬ ನಮಸ್ಕಾರವ ಮಾಡಿ, ಆ ನಿರಂಜನ ಲಿಂಗವನೊಡಗೂಡಿ
ಎರಡಳಿದು,

## ಬಯಲು

ಅಲ್ಲಿಂದ ಮುಂದೆ ನೋಡಲು ಬರಿಯ ಬಯಲು ಇಪ್ಪುದ ಕಂಡು
ಆ ಬಯಲೇ ತನ್ನ ನಿಜವಾಸವೆಂದು ತಿಳಿದು, ಆ ನಿಜವಾಸದಲ್ಲಿ ತಾನಿದ್ದು,
ತನ್ನಿಂದ ಕೆಳಗಣ ನವಚಕ್ರಂಗಳಲ್ಲಿರ್ದ ನವಲಿಂಗಂಗಳ ಪೂಜೆಯ
ನಿರಂತರದಲ್ಲಿ ಮಾಡುವ ಶಿವಯೋಗಿಗೆ ಭವಬಂಧನವಿಲ್ಲ ಆ ಭವಬಂಧನ

ವಿಲ್ಲವಾಗಿ ಜೀವಕಲ್ಪಿತವು ಮುನ್ನವೇ ಇಲ್ಲವಾಗಿ ಆತನು ಪರಿಪೂರ್ಣ
ವಾಗಿ, ಪರಾತ್ಪರನಾಗಿ, ಪರಾಪರ ಶಿವಬ್ರಹ್ಮವೇಯಾಗಿರ್ಪನಯ್ಯ
ಅಖಂಡೇಶ್ವರಾ

## ೨ನೇ ವಚನ

### ಆಚಾರಲಿಂಗ

೬೮ ಅಯ್ಯ ತಾರಕಾಸ್ಕೃತಿ, ನಕಾರ ಪ್ರಣವ, ವೇಣುನಾದ, ಆಧಾ
ರಚಕ್ರ, ಪೀತವರ್ಣ, ಭಕ್ತಸ್ಥಲ, ಸ್ಥೂಲತನು, ಸುಚಿತ್ತಹಸ್ತ, ಆಚಾರ
ಲಿಂಗ, ಘ್ರಾಣಮುಖ ಶ್ರದ್ಧಾಭಕ್ತಿ, ಗಂಧಪದಾರ್ಥ, ಸುಗಂಧ ಪ್ರಸಾದ,
ಬ್ರಹ್ಮಪೂಜಾರಿ, ಬ್ರಹ್ಮನಧಿದೇವತೆ, ಕರ್ಮಸಾದಾಖ್ಯ, ಸತ್ತುವೆಂಬ
ಲಕ್ಷಣ, ಪರವೆಂಬ ಸಂಜ್ಞೆ, ಪೂರ್ವದಿಕ್ಕು, ಋಗ್ವೇದ, ಪೃಥ್ವಿಯೇ ಅಂಗ,
ಜೀವಾತ್ಮ ಕ್ರಿಯಾಶಕ್ತಿ, ನಿವೃತ್ತಿಕಲೆ, ಇಂತು ೨೪ ಸಕೀಲಂಗಳನೊಳ
ಕೊಂಡು ಎನ್ನಾಧಾರ ಚಕ್ರವೆಂಬ ಶ್ರೀಶೈಲ ಕ್ಷೇತ್ರದಲ್ಲಿ ಮೂರ್ತಿಗೊಂ
ಡಿರ್ಪ ಪಂಚಾಚಾರ ಸ್ವರೂಪನಾದ ಆಚಾರಲಿಂಗವೇ ಮಲ್ಲಿಕಾರ್ಜುನ
ಲಿಂಗವೆಂದು ತನುತ್ರಯವ ಪ್ರಸಿಯಾಡಿ ಶಿವಾನಂದ ಜಲದಿಂ ಮಜ್ಜನ
ಕ್ಕೆರೆದು ಪೃಥ್ವಿ ನಿವೃತ್ತಿಯಾದ ಗಂಧವ ಧರಿಸಿ, ಚಿತ್ತ ಸುಚಿತ್ತವಾದ ಅಕ್ಷ
ತೆಯನಿಟ್ಟು ಅಲ್ಲಿಹ ಚತುರ್ದಳಗಳನೆ ಪುಷ್ಪದ ಮಾಲೆ ಎಂದು ಧರಿಸಿ,
ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಪೀತವರ್ಣವ
ಕರ್ಪೂರದ ಜ್ಯೋತಿ ಎಂದು ಬೆಳಗಿ, ಅಲ್ಲಿಹ ಜಾಗ್ರಾವಸ್ಥೆ ಎಂಬ
ನವೀನ ವಸ್ತ್ರವ ಹೊದ್ದಿಸಿ, ನಿಶಾವುಂಬೆಂಬಾಭರಣವ ತೊಡಿಸಿ, ಸುಗಂಧ
ವೆಂಬ ನೈವೇದ್ಯವನರ್ಪಿಸಿ, ಕೃಷ್ಣೆ ಎಂಬ ತಾಂಬೂಲವನಿತ್ತು, ಇಂತು
ಪಂಚಾಚಾರ ಮೂರ್ತಿ ಆಚಾರಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡಿ,
ಕೋಟಿಸೂರ್ಯ ಪ್ರಭೆಯಂತೆ ಬೆಳಗುವ ಆಚಾರಲಿಂಗವನ್ನು ಕಂಗಳು
ತುಂಬಿ ನೋಡಿ, ಮನದಲ್ಲಿ ಸಂತೋಷಗೊಂಡು, ಆಚಾರ ಲಿಂಗದ
ಪೂಜೆಯ ಸಮಾಪ್ತವ ಮಾಡಿ ಓಂ ನಾಂ ನಾಂ ನಾಂ ನಾಂ ನಾಂ ನಾಂ
ಎಂಬ ನಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ, ಆ ಲಿಂಗವೇ ತಾನೆಂ
ದರಿದು ಕೂಡಿ ಎರಡೆಂಬ ಸಿದ್ಧಿರಿಂದ ಆಚರಿಸಬಲ್ಲಾತನೇ ಶ್ರದ್ಧಾ
ಭಕ್ತಿಯುಳ್ಳ ಸದ್ಭಕ್ತ ನೋಡಾ ಸಂಗನಬಸವೇಶ್ವರಾ

## ಗುರುಲಿಂಗ

೧೯ ಅಯ್ಯ ದಂಡಕಾಕೃತಿ ಮಕಾರಪ್ರಣವ, ಘಂಟಾನಾದ, ಸ್ವಾಧಿಷ್ಠಾನಚಕ್ರ, ಶ್ವೇತವರ್ಣ, ಮಹೇಶ್ವರಸ್ಥಲ, ಸೂಕ್ಷ್ಮತನು, ಸುಬುದ್ಧಿಹಸ್ತ, ಗುರುಲಿಂಗ, ಜಿಹ್ವೆಮುಖ, ನೈಷ್ಠಿಕಾಭಕ್ತಿ, ರಸಪದಾರ್ಥ, ಸುರಸಪ್ರಸಾದ, ವಿಷ್ಣುಪೂಜಾರಿ, ವಿಷ್ಣುವಧಿದೇವತೆ, ಕರ್ತೃಸಾದಾಖ್ಯ, ಚಿತ್ತವೆಂಬ ಲಕ್ಷಣ, ಗೂಢನೆಂಬ ಸಂಜ್ಞೆ, ಪಶ್ಚಿಮದಿಕ್ಕು, ಯಜುರ್ವೇದ, ಅಪ್ಪುವೇ ಅಂಗ, ಅಂತರಾತ್ಮ, ಜ್ಞಾನಶಕ್ತಿ, ಪ್ರತಿಷ್ಠಾಕಲೆ, ಇಂತು ೨೪ ಸಕೀಲಗಳನೊಳಕೊಂಡು ಎನ್ನ ಸ್ವಾಧಿಷ್ಠಾನ ಚಕ್ರವೆಂಬ ಸೇತುಬಂಧ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ಪ ಮಂತ್ರ ಮೂರ್ತಿ ಸ್ವರೂಪವಾದ ಗುರುಲಿಂಗ ಸ್ವರೂಪವನೆ ರಾಮೇಶ್ವರನೆಂದು ಮನತ್ರಯುವ ಮಡಿ ಮಾಡಿ ಪರಿಣಾಮವೆಂಬ ಜಲದಿಂ ಮಜ್ಜನಕ್ಕೆರೆದು, ಅಪ್ಪು ನಿವೃತ್ತಿಯಾದ ಗಂಧವ ಧರಿಸಿ, ಬುದ್ಧಿ ಸುಬುದ್ಧಿಯಾದ ಅಕ್ಷತೆಯನಿಟ್ಟು, ಅಲ್ಲಿ ಷಡ್ಥಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಶ್ವೇತ ವರ್ಣವೇ ಕರ್ಪೂರದ ಜ್ಯೋತಿ ಎಂದು ಬೆಳಗಿ, ಅಲ್ಲಿಹ ಸ್ವಪ್ನಾವಸ್ಥೆ ಎಂಬ ವಸ್ತ್ರವ ಹೊದ್ದಿಸಿ, ನಿಃಕ್ರೋಧವೆಂಬ ಆಭರಣವ ತೊಡಿಸಿ, ಸುರುಚಿ ಎಂಬ ನೈವೇದ್ಯವನರ್ಪಿಸಿ, ನೈಷ್ಠೆ ಎಂಬ ತಾಂಬೂಲವನಿತ್ತು, ಕೋಟಿಸೂರ್ಯರ ಪ್ರಭೆಯಂತೆ ಬೆಳಗುವ ಗುರುಲಿಂಗ ಮೂರ್ತಿಯನು ಕಂಗಳ ತುಂಬಿ ನೋಡಿ ಮನದಲ್ಲಿ ಸಂತೋಷಂಗೊಂಡು ಆ ಗುರುಲಿಂಗ ಪೂಜೆಯ ಸಮಾಪ್ತಿಯ ಮಾಡಿ, ಓಂ, ಮಾಂ ಮಾಂ ಮಾಂ ಮಾಂ ಮಾಂ ಮಾಂ ಎಂಬ ಮಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ ಆ ಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿಶ್ಚಿಂತದಿಂದ ಬೆರಸಬಲ್ಲಾತನೇ ನೈಷ್ಠಿಕಾ ಭಕ್ತಿಯನುಳ್ಳ ವೀರ ಮಹೇಶ್ವರ ನೋಡಾ ಸಂಗನಬಸವೇಶ್ವರಾ

## ಶಿವಲಿಂಗ

೨೦ ಅಯ್ಯ ಕುಂಡಲಾಕೃತಿ, ಶಿಕಾರ ಪ್ರಣವ, ಭೇರೀನಾದ, ಮಣಿಪೂರಕಚಕ್ರ, ಹರಿತ ವರ್ಣ, ಪ್ರಸಾದಿಸ್ಥಲ, ಕಾರಣತನು, ನಿರಹಂಕಾರ ಹಸ್ತ, ಶಿವಲಿಂಗ, ನೇತ್ರವೆಂಬ ಮುಖ, ಸಾವಧಾನಭಕ್ತಿ,

ರೂಪು ಪದಾರ್ಥ, ಸುರೂಪು ಪ್ರಸಾದ, ರುದ್ರಪೂಜಾರಿ, ರುದ್ರನಧಿದೇ
ವತೆ, ಮೂರ್ತಿಸಾದಾಖ್ಯ, ಆನಂದವೆಂಬ ಲಕ್ಷಣ, ಶರೀರಸ್ಥನೆಂಬ
ಸಂಜ್ಞೆ, ಉತ್ತರದಿಕ್ಕು, ಸಾಮವೇದ, ಅಗ್ನಿಯೇ ಅಂಗ, ಪರಮಾತ್ಮ,
ಇಚ್ಛಾಶಕ್ತಿ, ವಿದ್ಯಾಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ
ಮಣಿಪೂರಕ ಚಕ್ರವೆಂಬ ಪಂಪಾಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ, ನಿರೀ
ಕ್ಷಣ ಸ್ವರೂಪನಾದ, ಶಿವಲಿಂಗವೇ ಶ್ರೀವಿರೂಪಾಕ್ಷಲಿಂಗವೆಂದು ಆತ್ಮತ್ರ
ಯವ ಮಡಿಮಾಡಿ, ಪರಮಾನಂದವೆಂಬ ಜಲದಿಂ ಮಜ್ಜನಕ್ಕೆರೆದು,
ಅಗ್ನಿನಿವೃತ್ತಿಯೆಂದ ಗಂಧವ ಧರಿಸಿ, ಅಹಂಕಾರ ನಿರಹಂಕಾರವಾದಕ್ಷ
ತೆಯನಿಟ್ಟು, ಅಲ್ಲಿಹ ದಶ ದಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ,
ಅಲ್ಲಿಹ ಕಮಲ ಪದ್ಮಾಸನೆಯ ಧೂಪವ ಬೀಸಿ, ಅಲ್ಲಿಹ ಹರಿತ ವರ್ಣವೇ
ಕರ್ಪೂರಜ್ಯೋತಿ ಎಂದು ಬೆಳಗಿ, ಅಲ್ಲಿಹ ಸುಷುಪ್ತಾವಸ್ಥೆ ಎಂಬ ವಸ್ತ್ರವ
ಹೊದ್ದಿಸಿ, ನಿರ್ಲೋಭವೆಂಬ ಆಭರಣವ ತೊಡಿಸಿ ಸುರೂಪು ಎಂಬ
ನೈವೇದ್ಯವನರ್ಪಿಸಿ, ಸಾವಧಾನವೆಂಬ ತಾಂಬೂಲವನಿತ್ತು, ಇಂತೀ
ಪರಶಿವಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಕೋಟಿ ಸೂರ್ಯ
ಪ್ರಭೆಯಂತೆ ಬೆಳಗುವ ಪರಶಿವಲಿಂಗವನ್ನು ಕಂಗಳು ತುಂಬಿ ನೋಡಿ,
ಮನದಲ್ಲಿ ಸಂತೋಷಂಗೊಂಡು ಆ ಪರಶಿವಲಿಂಗ ಪೂಜೆಯ ಸಮಾ
ಪ್ತವ ಮಾಡಿ ಓಂ ಶೀಂ ಶೀಂ ಶೀಂ ಶೀಂ ಶೀಂ ಶೀಂ ಎಂಬ ಶಿಕಾರ
ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ, ಆ ಪರಶಿವಲಿಂಗವೇ ತಾನೆಂದ
ರಿದು ಕೂಡಿ ಎರಡಳಿದು ನಿಃಕಳಂಕನಾಗಿ ಆಚರಿಸಬಲ್ಲಾತನೇ ಸಾವ
ಧಾನ ಭಕ್ತಿಯ ನಿಜ ಪ್ರಸಾದಿ ನೋಡಾ ಸಂಗನಬಸವೇಶ್ವರಾ

ಜಂಗಮಲಿಂಗ

೭೧ ಅಹಾ ಅರ್ಧಚಂದ್ರಾಕೃತಿ, ನಕಾರ ಪ್ರಣವ, ಮೇಘನಾದ,
ಅನಾಹತಚಕ್ರ, ಮಾಂಜಿಷ್ಟವರ್ಣ, ಪ್ರಾಣಲಿಂಗಿಸ್ಥಲ, ನಿರ್ಮಲತನು,
ಸುಮನಹಸ್ತ ಜಂಗಮಲಿಂಗ ತ್ವಕ್ಕೆಂಬ ಮುಖ, ಅನುಭಾವಭಕ್ತಿ,
ಸ್ಪರ್ಶನ ಪದಾರ್ಥ, ಸುಸ್ಪರ್ಶನ ಪ್ರಸಾದ, ಈಶ್ವರ ಪೂಜಾರಿ, ಈಶ್ವರನ
ಧಿದೇವತೆ, ಅಮೂರ್ತಿಸಾದಾಖ್ಯ, ನಿತ್ಯವೆಂಬ ಲಕ್ಷಣ, ಲಿಂಗಕ್ಷೇತ್ರನೆಂಬ
ಸಂಜ್ಞೆ, ದಕ್ಷಿಣದಿಕ್ಕು, ಅಥರ್ವಣವೇದ, ವಾಯುವೇ ಅಂಗ, ನಿರ್ಮ
ಲಾತ್ಮ, ಆದಿಶಕ್ತಿ, ಶಾಂತಿಕಲೆ, ಇಂತು ೨೪ ಸಕೀಲಂಗಳನೊಳಕೊಂಡು

ಎನ್ನ ಅನಾಹತ ಚಕ್ರವೆಂಬ ಹಿಮವತ್ಕೇದಾರ ಕ್ಷೇತ್ರದಲ್ಲಿ ಮೂರ್ತಿ
ಗೊಂಡಿರ್ದ ಯಜನ ಸ್ವರೂಪವಾದ ಜಂಗಮಲಿಂಗವೇ ಹಿಮಗಿರೀಶ್ವರ
ನೆಂದು ಪ್ರಾಣತ್ರಯವ ಮಡಿ ಮಾಡಿ ಶಾಂತಿ ಎಂಬ ಮಜ್ಜನಕ್ಕೆರೆದು
ವಾಯು ನಿವೃತ್ತಿಯಾದ ಗಂಧವ ಧರಿಸಿ ಮನ ಸ ಮನವಾದ ಅಕ್ಷತೆಯನಿಟ್ಟು
ಅಲ್ಲಿಹ ದ್ವಾಪರ ದಳಂಗಳನೇ ಪುಷ್ಪದ ಮಾಲೆ ಎಂದು ಧರಿಸಿ, ಅಲ್ಲಿಹ
ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಮಾಂಜಿಷ್ಟ ವರ್ಣವೇ
ಕರ್ಪೂರದ ಜ್ಯೋತಿ ಎಂದು ಬೆಳಗಿ, ಅಲ್ಲಿಹ ತೂರ್ಯಾವಸ್ಥೆ ಎಂಬ
ವಸ್ತ್ರವ ಹೊದ್ದಿಸಿ, ನಿರ್ಮೋಹವೆಂಬ ಆಭರಣವ ತೊಡಿಸಿ, ಸುಸ್ಪರ್ಶನ
ವೆಂಬ ನೈವೇದ್ಯವನರ್ಪಿಸಿ, ಅನುಭಾವವೆಂಬ ತಾಂಬೂಲವನಿತ್ತು,
ಇಂತೀ ಜಂಗಮಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಕೋಟಿ ಸೂರ್ಯ
ರಂತೆ ಬೆಳಗುವ ಜಂಗಮಲಿಂಗವನ್ನು ಕಂಗಳು ತುಂಬಿ ನೋಡಿ, ಮನ
ದಲ್ಲಿ ಸಂತೋಷಂಗೊಂಡು, ಆ ಜಂಗಮಲಿಂಗವ ಪೂಜೆಯ ಸಮಾಪ್ತವ
ಮಾಡಿ ಓಂ, ವಾಂ ವಾಂ, ವಾಂ, ವಾಂ, ವಾಂ, ವಾಂ, ಎಂಬ ವಕಾರ
ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ ಆ ಜಂಗಮಲಿಂಗವೇ ತಾನೆಂದ
ರಿಮು ಕೂಡಿ ಎರಡಳಿದು ನಿಃಪ್ರಪಂಚಿಯಾಗಿ ಚರಿಸಬಲ್ಲಾತನೇ ಅನು
ಭಾವ ಭಕ್ತಿಯನುಳ್ಳ ಲಿಂಗಪ್ರಾಣಿ ನೋಡಾ ಸಂಗನಬಸವೇಶ್ವರಾ

## ಪ್ರಸಾದಲಿಂಗ

೬೭ ಅಯ್ಯ, ದರ್ಪಣಾಕೃತಿ, ಯಕಾರ ಪ್ರಣವು, ಪ್ರಣವನಾದ
ವಿಶುದ್ಧಿ ಚಕ್ರ ಕಪೋತ ವರ್ಣ, ಶರಣಸ್ಥಲ, ಆನಂದ ತನುವು, ಸುಜ್ಞಾನ
ಹಸ್ತ ಪ್ರಸಾದಲಿಂಗ, ಶ್ರೋತ್ರ ಮುಖ, ಆನಂದ ಭಕ್ತಿ ಶಬ್ದ ಪದಾರ್ಥ,
ಸುಶಬ್ದ ಪ್ರಸಾದ, ಸದಾಶಿವ ಪೂಜಾರಿ, ಸದಾಶಿವನಧಿದೇವತೆ, ಶಿವಸಾ
ದಾಖ್ಯ, ಪರಿಪೂರ್ಣನೆಂಬ ಲಕ್ಷಣ, ಅನಾದಿಪಿತ್ ಎಂಬ ಸಂಜ್ಞೆ, ಊರ್ಧ್ವ
ದಿಕ್ಕು, ಅಜಪವೇದ, ಅಕಾರವೇ ಅಂಗ, ಉದ್ವೃತ್ತ, ಪರಾಶಕ್ತಿ, ಶಾಂತಾ
ತೀತ ಕಲೆ, ಇಂತು ೨೫ ಸಕೀಲಿಂಗನೊಂ ಕೂಡು ಎನ್ನ ವಿಶುದ್ಧಿ
ಚಕ್ರವೆಂಬ ಅವಿಮುಕ್ತ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಈಶಾನ ಸ್ವರೂ
ಪವಾದ ಪ್ರಸಾದಲಿಂಗವೇ ವಿಶ್ವನಾಥ ಲಿಂಗವೆಂದು ಭಾವತ್ರಯವ ಮಡಿ
ಮಾಡಿ ಕ್ಷಮೆ ಎಂಬ ಜಲದಿಂದ ಮಜ್ಜನಕ್ಕೆರೆದು ಗಗನ ನಿವೃತ್ತಿಯಾದ
ಗಂಧವ ಧರಿಸಿ, ಜ್ಞಾನ ಸುಜ್ಞಾನವಾದಕ್ಷತೆಯನಿಟ್ಟು, ಅಲ್ಲಿಹ ಷೋಡಶ

ದಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಕರ್ಪೋತ ವರ್ಣವೇ ಕರ್ಪೂರದ ಜ್ಯೋತಿ ಎಂದು ಬೆಳಗಿ, ಅಲ್ಲಿಹ ತೂರ್ಯಾತೀತಾವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ, ನಿರ್ಮಲವೆಂಬ ಆಭರಣವ ತೊಡಿಸಿ, ಸುಶಬ್ದವೆಂಬ ನೈವೇದ್ಯವನರ್ಪಿಸಿ, ಆನಂದವೆಂಬ ತಾಂಬೂಲವನಿತ್ತು, ಇಂತೀ ಪ್ರಸಾದಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಕೋಟಿ ಸೂರ್ಯ ಪ್ರಭೆಯಂತೆ ಬೆಳಗುವ ಪ್ರಸಾದಲಿಂಗವನ್ನು ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಂಗೊಂಡು ಆ ಪ್ರಸಾದಲಿಂಗದ ಪೂಜೆಯ ಸಮಾಪ್ತವ ಮಾಡಿ, ಓಂ ಯಾಂ ಯಾಂ ಯಾಂ ಯಾಂ ಯಾಂ ಯಾಂ ಎಂಬ ಯಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ ಆ ಪ್ರಸಾದಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿರ್ಮೋಹಿಯಾಗಿ ಆಚರಿಸಬಲ್ಲಾತನೇ ಆನಂದ ಭಕ್ತಿಯನುಳ್ಳ ಶಿವಶರಣ ನೋಡಾ ಸಂಗನಬಸವೇಶ್ವರಾ

## ಮಹಾಲಿಂಗ.

೭೩ ಅಯ್ಯಾ, ಜ್ಯೋತಿರಾಕೃತಿ, ಓಂಕಾರ ಪ್ರಣವ ಸಿಂಹನಾದ, ಆಜ್ಞಾಚಕ್ರ, ಮಾಣಿಕ್ಯ ವರ್ಣ, ಐಕ್ಯಸ್ಥಲ, ಶುದ್ಧ ತನು, ಸದ್ಭಾವ ಹಸ್ತ, ಮಹಾಲಿಂಗ, ಹೃದಯವೆಂಬ ಮುಖ, ಸಮರಸ ಭಕ್ತಿ ತೃಪ್ತಿ ಪದಾರ್ಥ, ಸುತೃಪ್ತಿ ಪ್ರಸಾದ, ಮಹಾದೇವ ಪೂಜಾರಿ, ಮಹಾದೇವನಧಿದೇವತೆ, ಮಹಾಸಾದಾಖ್ಯ, ಅಖಂಡವೆಂಬ ಲಕ್ಷಣ ಮಹವಂಬ ಸಂಜ್ಞೆ, ಪಾತಾಳ ದಿಕ್ಕು, ಗಾಯತ್ರೀವೇದ, ಆತ್ಮನೇ ಅಂಗ ಶಾಂತಿ ನಾತ , ಚಿತ್‌ಶಕ್ತಿ, ಶಾಂತ್ಯಾತೀತೋತ್ತರ ಕಲೆ ಇಂತು ೩೬ ಸತ್ತ್ವಲಿಗಳು ರೂಪುಗೊಂಡು, ಎನ್ನ ಆಜ್ಞಾ ಚಕ್ರವೆಂಬ ತ್ರಿಕೂಟ ಸಂಗಮ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಬೋಧಾಸ್ವರೂಪವಾದ ಮಹಾಲಿಂಗವೇ ಸಂಗನೇಶ್ವರ ಲಿಂಗವೆಂದು ಅವಸ್ವಾತ್ರಯದ ಮಡಿ ಮಾಡಿ, ಸಂತೋಷವೆಂಬ ಜಲದಿಂ ಮಜ್ಜನಕ್ಕೆರದು ಆತ್ಮನಿವೃತ್ತಿಯಾದ ಗಂಧವ ದಿವ್ಯ ಭಾವ ಸದ್ಭಾವಾದಕ್ಷತೆಯನಿಟ್ಟು, ಅಲ್ಲಿಹ ದ್ವಿದಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಹ ಮಾಣಿಕ್ಯ ವರ್ಣವೇ ಕರ್ಪೂರ ಜ್ಯೋತಿ ಎಂದು ಬೆಳಗಿ, ಅಲ್ಲಿಹ ನಿರವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ, ನಿರ್ಮಲವೆಂಬಾಭರಣವ ತೊಡಿಸಿ, ಸುತೃಪ್ತಿ ನೈವೇದ್ಯವನರ್ಪಿಸಿ, ಸಮರಸವೆಂಬ ತಾಂಬೂಲವನಿತ್ತು, ಇಂತೀ ಮಹಾಲಿಂಗಕ್ಕೆ

ಅಷ್ಟವಿಧಾರ್ಚನೆಯಂ ಮಾಡಿ, ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ವ ಹಾಲಿಂಗವ ಕಂಗಳು ತುಂಬಿ ನೋಡಿ, ಮನದಲ್ಲಿ ಸಂತೋಷಂಗೊಂಡು, ಆ ಮಹಾಲಿಂಗ ಪೂಜೆಯ ಸಮಾಪ್ತವಂ ಮಾಡಿ, ಓಂ ಓಂ ಓಂ ಓಂ ಓಂ ಓಂ ಎಂಬ ಓಂಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ, ಆ ಮಹಾಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿತ್ಯತೃಪ್ತನಾಗಿ ಆಚರಿಸಬಲ್ಲಾತನೇ ಸಮರಸ ಭಕ್ತಿಯನುಳ್ಳ ಲಿಂಗೈಕ್ಯ ನೋಡಾ ಸಂಗನಬಸವೇಶ್ವರಾ

## ನಿಃಕಳಲಿಂಗ.

೭೪ ಅಯ್ಯಾ, ನಿಃಕಲಾಕೃತಿ, ಓಂಕಾರ ಪ್ರಣವ, ಭ್ರಮರನಾದ, ಬ್ರಹ್ಮಚಕ್ರ, ನಿಶಿಜ್ಯೋತಿ ವರ್ಣ, ನಿಃಕಳಂಕಸ್ಥಲ, ಚಿದ್ರೂಪತನು, ಸ್ವತಂತ್ರ ಹಸ್ತ, ನಿಃಕಳಲಿಂಗ, ಬ್ರಹ್ಮರಂಧ್ರಮುಖ, ಸದ್ಭಾವಭಕ್ತಿ, ಪರಮಾನಂದ ಪದಾರ್ಥ, ಪರಮಾನಂದ ಪ್ರಸಾದ, ಶ್ರೀಗುರುಪೂಜಾರಿ, ಶ್ರೀಗುರು ಅಧಿದೇವತೆ, ಅಗಮ್ಯವೆಂಬ ಲಕ್ಷಣ, ಅಪ್ರಮಾಣವೆಂಬ ಸಂಜ್ಞೆ, ಕೃತ್ತಿವಾಲ ದಿಕ್ಕು, ಧನುರ್ವೇದ, ಚಿತ್ಸೂರ್ಯನೆಂಬ ಅಂಗ, ಮಹಾ ಆತ್ಮ, ಅನಾಮಯ ಶಕ್ತಿ, ನಿಷ್ಪಂಚಕ ಕಲೆ, ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಬ್ರಹ್ಮರಂಧ್ರ ಚಕ್ರದ ರಜತಾದ್ರಿ ಎಂಬ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ಪ ಶಿವದೀಕ್ಷಾ ಸ್ವರೂಪನಾದ ನಿಃಕಲಲಿಂಗವೇ ರಜತೇಶ್ವರ ಲಿಂಗವೆಂದು ಗುಣತ್ರಯವ ಮುಡಿ ಮಾಡಿ, ಸ್ವತಂತ್ರವೆಂಬ ಜಲದಿಂ ಮಜ್ಜನಕ್ಕರೆದು, ಸೂರ್ಯ ನಿವೃತ್ತಿಯಾವ ಗಂಧವ ಧರಿಸಿ, ಪರತಂತ್ರವಳಿದು ಸ್ವತಂತ್ರವಾದಕ್ಷತೆಯನಿಟ್ಟು ಅಲ್ಲಿಹ ಸಹಸ್ರದಳಂಗಳನೇ ಪುಷ್ಪದ ಮಾಲೆ ಎಂದು ಧರಿಸಿ, ಅಲ್ಲಿಹ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಹ ಜ್ಯೋತಿ ವರ್ಣವೇ ಕರ್ಪೂರ ಜ್ಯೋತಿಯ ಬೆಳಗಿ ಅಲ್ಲಿಹ ನಿಃಕಳಂಕಾವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ, ನಿರಾಭಾರವೆಂಬ ಆಭರಣವ ತೊಡಿಸಿ, ಪರಮಾನಂದವೆಂಬ ನೈವೇದ್ಯವನರ್ಪಿಸಿ ಸದ್ಭಾವವೆಂಬ ತಾಂಬೂಲವನಿತ್ತು, ಇಂತೀ ನಿಃಕಳಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಪರಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ನಿಃಕಳಲಿಂಗವನು ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಂಗೊಂಡು ಆ ನಿಃಕಳಲಿಂಗ ಪೂಜೆಯ ಸಮಾಪ್ತವ ಮಾಡಿ, ಕ್ರಿಯಾ ಜಪವೆಂಬ ದ್ವಾದಶ ಪ್ರಣವ ಮಂತ್ರಂಗಳಿಂದೆ ನಮ

ಸ್ಥರಿಸಿ, ಆ ನಿಃಕಳಲಿಂಗವೇ ತಾನೆಂದರಿದು ಕೂಡಿ, ಎರಡಳಿದು ಸ್ವತಂತ್ರ ನಾಗಿ ಆಚರಿಸಬಲ್ಲಾತನೇ ಸದ್ಭಾವ ಭಕ್ತಿಯನುಳ್ಳ ನಿಃಕಳಂಕ ನೋಡಾ ಸಂಗನಬಸವೇಶ್ವರಾ

## ಶೂನ್ಯಲಿಂಗ

೭೫ ಅಯ್ಯಾ, ನಿಃಶೂನ್ಯಾಕೃತಿ, ಕ್ಷಕಾರ ಪ್ರಣವು, ದಿವ್ಯನಾದ, ಶಿಖಾಚಕ್ರ, ಮಹಾಜ್ಯೋತಿ ವರ್ಣ, ನಿರಾಲಂಬಸ್ಥಲ, ಚಿನ್ಮಯ ತನು, ನಿರಾಳ ಹಸ್ತ, ಶೂನ್ಯಲಿಂಗ, ಉನ್ಮನಿ ಮುಖ, ನಿರಹಂಕಾರ ಭಕ್ತಿ, ಪರಿಪೂರ್ಣ ಪದಾರ್ಥ, ಪರಿಪೂರ್ಣ ಪ್ರಸಾದ ಪರಶಿವನಧಿದೇವತೆ, ಅವಿರಳ ಸಾದಾಖ್ಯ ಅಗಸ್ತ್ಯವೆಂಬ ಲಕ್ಷಣ ನಿರ್ವಾಣಯನೆಂಬ ಸಂಜ್ಞೆ, ದಿವ್ಯನಾದ, ಘೋಷ ದಿಕ್ಕು, ಮನೋಲಯ ವೇದ, ಚಿತ್ಚಂದ್ರನೆಂಬ ಅಂಗ, ದಿವ್ಯಾತ್ಮ, ನಿಭ್ರಾಂತಿ ಶಕ್ತಿ, ಅನಂತಕಲೆ ಇಂತು ೨೪ ಸಕೀಲವನೊಳಕೊಂಡು ಎನ್ನ ಶಿಖಾಚಕ್ರವೆಂಬ ಹೇಮಾದ್ರಿ ಎಂಬ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಶಿವಮಂತ್ರ, ಶಿಕ್ಷಾಕರ್ತೃ ಸ್ವರೂಪವಾದ ಶೂನ್ಯಲಿಂಗವೇ ಹಿರಣ್ಯೇಶ್ವರ ಲಿಂಗವೆಂದು ಕರಣತ್ರಯವ ಮಡಿ ಮಾಡಿ, ಅನುಪಮ ಜಲದಿಂ ಮಜ್ಜನಕ್ಕೆರೆದು ಚಂದ್ರ ನಿಸ್ವೃತ್ತಿಯಾದ ಗಂಧವ ಧರಿಸಿ, ಅವಿರಳದಕ್ಷತೆಯನಿಟ್ಟು ಅಲ್ಲಿಹ ತ್ರಿದಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ, ಅಲ್ಲಿಹ ಕಮಳಸದ್ವಾಸನೆಯ ಧೂಪವ ನರ್ಚಿಸಿ, ಅಲ್ಲಿಹ ಮಹಾಜ್ಯೋತಿ ವರ್ಣವೇ ಕರ್ಪುರದ ಜ್ಯೋತಿ ಎಂದು ಬೆಳಗಿ ಅಲ್ಲಿಹ ನಿಃಸಂಸಾರಾವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ, ಸದಾನಂದವೆಂಬ ಆಭರಣವ ತೊಡಿಸಿ, ಪರಿಪೂರ್ಣವೆಂಬ ನೈವೇದ್ಯವನರ್ಪಿಸಿ, ನಿರಹಂಕಾರವೆಂಬ ತಾಂಬೂಲವನಿತ್ತು ಇಂತೀ ಶೂನ್ಯಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಶತ ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ಶೂನ ಲಿಂಗವನು ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಂಗೊಂಡು, ಆ ಶೂನ್ಯಲಿಂಗದ ಪೂಜೆಯ ಸಮಾಪ್ತಿಯ ಮಾಡಿ ಜ್ಞಾನ ಜಪವೆಂಬ ದ್ವಾದಶ ಪ್ರಣವ ಮಂತ್ರಂಗಳಿಂದ ನಮಸ್ಕರಿಸಿ ಆ ಶೂನ್ಯಲಿಂಗವೇ ತಾನೆಂದು ಕೂಡಿ, ಎರಡಳಿದು ನಿಃಸಂಸಾರಿಯಾಗಿ ಆಚರಿಸಬಲ್ಲಾತನೇ ನಿರಹಂಕಾರ ಭಕ್ತಿಯನುಳ್ಳ ನಿರಾತಂಕ ನೋಡಾ ಸಂಗನಬಸವೇಶ್ವರಾ

## ನಿರಂಜನಲಿಂಗ

೭೬ ಅಯ್ಯಾ, ನಿರಂಜನಾಕೃತಿ, ವ್ಯಂಜನ ಹಕಾರ ಪ್ರಣವ, ಮಹಾನಾದ, ಪಶ್ಚಿಮಚಕ್ರ, ಅಖಂಡ ಮಹಾಜ್ಯೋತಿರ್ವರ್ಣ, ನಿರಾತಂಕ

ಸ್ಥಲ, ನಿರ್ಮುಕ್ತಿ ತನು, ನಿರ್ಮಾಯ ಹಸ್ತ, ನಿರಂಜನ ಲಿಂಗ, ಪಶ್ಚಿಮ ಮುಖ, ಅಪ್ರಮಾಣ ಭಕ್ತಿ, ಅವಿರಳ ಪದಾರ್ಥ, ಅವಿರಳಪ್ರಸಾದ, ಪರಮೇಶ್ವರ ಪೂಜಾರಿ, ಪರಮೇಶ್ವರನಧಿದೇವತೆ, ನಿಷ್ಕಲ ಸಾದಾಖ್ಯ, ನಿರ್ವಂಚಕವೆಂಬ ಲಕ್ಷಣ, ಅವಿರಳವೆಂಬ ಸಂಜ್ಞೆ, ನಿರಾಳದಿಕ್ಕು, ಅಗಮ್ಯ ವೇದ, ಶಿವಯೋಗಿಯೇ ಅಂಗ, ಚಿನ್ಮಯಾತ್ಮ, ನಿರವಯ ಶಕ್ತಿ, ಅನಂತ ಕಲೆ, ಇಂತು ೨೪ ಸಕೀಲಂಗಳನೊಳಕೊಂಡು, ಎನ್ನ ಪಶ್ಚಿಮ ಚಕ್ರವಾದ ಮಹಾಮೇರು ಪರ್ವತವೆಂಬ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ನಿಜ ಮೋಕ್ಷ ಕರ್ತೃ ಸ್ವರೂಪನಾದ ನಿರಂಜನ ಲಿಂಗವೇ ಶಾಂಭವ ಮೂರ್ತಿಲಿಂಗವೆಂದು ಹಂಸ ತ್ರಯದ ಮಡಿ ಮಾಡಿ, ನಿರ್ಭಾವ ಜಲದಿಂ ಮಜ್ಜನಕ್ಕೆರೆದು, ನಿರ್ಜಾತನೆಂಬ ಗಂಧವ ಧರಿಸಿ, ನಿರ್ಜಡವೆಂಬ ಅಕ್ಷತೆಯನಿಟ್ಟು, ನಿರ್ದ್ವಂದ್ವವೆಂಬ ಪುಷ್ಪದ ಮಾಲೆಯ ಧರಿಸಿ, ನಿರ್ಲಜ್ಜ ಎಂಬ ಧೂಪವ ಬೀಸಿ, ನಿರಾಲಂಬ ಜ್ಯೋತಿಯ ಬೆಳಗಿ, ನಿರವಯವೆಂಬ ವಸ್ತ್ರವ ಹೊದ್ದಿಸಿ, ನಿಸ್ಸ್ಪೃಹವೆಂಬ ಆಭರಣವ ತೊಡಿಸಿ, ನಿರಾಳವೆಂಬ ನೈವೇದ್ಯವನರ್ಪಿಸಿ, ನಿರ್ವಾಣವೆಂಬ ತಾಂಬೂಲವನಿತ್ತು, ಇಂತೀ ನಿರಂಜನಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ, ಸಹಸ್ರ ಕೋಟಿ ಸೂರ್ಯರ ಪ್ರಭೆಯಂತ ಬೆಳಗುವ ನಿರಂಜನ ಲಿಂಗವನು ಕಂಗಳು ತುಂಬಿ ನೋಡಿ, ಮನದಲ್ಲಿ ಸಂತೋಷಂಗೊಂಡು ಆ ನಿರಂಜನಲಿಂಗದ ಪೂಜೆಯ ಸಮಾಪ್ತವ ಮಾಡಿ, ಮಹಾಜ್ಞಾನ ಜಪವೆಂಬ ದ್ವಾದಶ ಪ್ರಣವ ಮಂತ್ರಂಗಳಿಂದ ನಮಸ್ಕರಿಸಿ, ಆ ನಿರಂಜನ ಲಿಂಗವೇ ತಾನೆಂದರಿದು ಕೂಡಿ, ಎರಡಳಿದು, ನಿಜಾಂತರ್ಯಾಮಿಯಾಗಿ ಆಚರಿಸಬಲ್ಲಾತನೇ ಅಪ್ರಮಾಣ ಭಕ್ತಿಯನುಳ್ಳ ನಿಜಮೋಕ್ಷ ಸ್ವರೂಪ ನೋಡಾ ಸಂಗನಬಸವೇಶ್ವರಾ

## ಅಣುಲಿಂಗ.

೭೭ ಅಯ್ಯಾ, ತಾರಕಾಕೃತಿ ಮೊದಲಾದ ನಾನಾಕೃತಿಗಳು, ನಕಾರ ಪ್ರಣವ ಮೊದಲಾಗಿ ನವನಾದಗಳು, ಆಧಾರ ಚಕ್ರ ಮೊದಲಾಗಿ ನವಚಕ್ರಗಳು, ಪೀತವರ್ಣ ಮೊದಲಾಗಿ ನವವರ್ಣಗಳು, ಭಕ್ತಸ್ಥಲ ಮೊದಲಾಗಿ ನವಸ್ಥಲಗಳು, ಸ್ಥೂಲತನು ಮೊದಲಾಗಿ ನವತನುಗಳು, ಸುಚಿತ್ತಹಸ್ತ ಮೊದಲಾಗಿ ನವಹಸ್ತಗಳು, ಆಚಾರಲಿಂಗ ಮೊದಲಾಗಿ ನವಲಿಂಗಗಳು, ಘ್ರಾಣಮುಖ ಮೊದಲಾಗಿ ನವಮುಖಗಳು, ಶ್ರದ್ಧಾ

ಭಕ್ತಿ ಮೊದಲಾಗಿ ನವಭಕ್ತಿಗಳು, ಗಂಧಪದಾರ್ಥ ಮೊದಲಾಗಿ ನವ ಪದಾರ್ಥಗಳು, ಸುಗಂಧ ಪ್ರಸಾದ ಮೊದಲಾಗಿ ನವಪ್ರಸಾದಗಳು, ಬ್ರಹ್ಮ ಪೂಜಾರಿ ಮೊದಲಾಗಿ ನವಪೂಜಾರಿಗಳು, ಬ್ರಹ್ಮನಧಿದೇವತೆ ಮೊದ ಲಾಗಿ ನವಅಧಿದೇವತೆಗಳು, ಕರ್ಮಸಾದಾಖ್ಯ ಮೊದಲಾಗಿ ನವಸಾದಾಖ್ಯ ಗಳು, ಸತ್ಪುಲಕ್ಷಣ ಮೊದಲಾಗಿ ನವಲಕ್ಷಣಗಳು, ಪರವೆಂಬ ಸಂಜ್ಞೆ ಮೊದಲಾಗಿ ನವಸಂಜ್ಞೆಗಳು, ಪೂರ್ವದಿಕ್ಕು ಮೊದಲಾಗಿ ನವದಿಕ್ಕು ಗಳು, ಋಗ್ವೇದ ಮೊದಲಾಗಿ ನವವೇದಗಳು, ಚಿತ್‌ಪೃಥ್ವಿ ಮೊದಲಾಗಿ ನವಲಿಂಗಗಳು, ಜೀವಾತ್ಮ ಮೊದಲಾಗಿ ನವ ಆತ್ಮರು, ಕ್ರಿಯಾಶಕ್ತಿ ಮೊದಲಾಗಿ ನವಶಕ್ತಿಯರು, ನಿವೃತ್ತಿಕಲೆ ಮೊದಲಾಗಿ ನವಕಲೆಗಳು ಇಂತು ೮೪ ಸಕೀಲಂಗಳು ನವವಿಧತರದಿಂದ ೭೨೯ ಸಕೀಲ ಮೊದಲಾದ ಸಮಸ್ತಕ್ಷೇತ್ರಂಗಳನೊಳಕೊಂಡು, ಎನ್ನ ಅಣುಚಕ್ರವೆಂಬ ಪರಮಕೈಲಾಸ ಚಿದಾಕಾಶ ಮಂಡಲದ ವರ ಚೌಕ ಮಂಟಪದ ನವರತ್ನಖಚಿತ ಶೂನ್ಯ ಸಿಂಹಾಸನ ಪೀಠದಲ್ಲಿ ಮೂರ್ತಿಗೊಂಡಿರ್ದ ಪರಾತ್ಪರ ನಿಜಜಂಗಮ ಲಿಂಗಸ್ವರೂಪ ಸರ್ವಚೈತನ್ಯಾಧಾರ ಸ್ವರೂಪನಾದ ಅಣುಲಿಂಗ ಜಂಗ ಮವೇ ಪರತತ್ವ ನಿಃಕಲ ಪರಬ್ರಹ್ಮ ಮೂರ್ತಿ ಲಿಂಗಜಂಗಮ ಪ್ರಸಾದ ವೆಂದು ತನುತ್ರಯ, ಮನತ್ರಯ, ಭಾವತ್ರಯ, ಆತ್ಮತ್ರಯ, ಪ್ರಾಣ ತ್ರಯ, ಗುಣತ್ರಯ, ಅವಸ್ಥಾತ್ರಯ, ತತ್ವತ್ರಯ, ಹಂಸತ್ರಯಂಗಳ ಪೂರ್ಣ ಮಡಿ ಮಾಡಿ, ನಿರ್ನಾಮವೆಂಬ ಜಲದಿಂದ ಮಜ್ಜನಕ್ಕೆರೆದು ನಿರಾಕಾರ ನಿಃಕಾರವೆಂಬ ಗಂಧವ ಧರಿಸಿ, ನಿಃಸಂಗವೆಂಬ ಅಕ್ಷತೆಯ ನಿಟ್ಟು, ನಿಃಪರಿಪೂರ್ಣವೆಂಬ ಪುಷ್ಪವ ಮಾಲೆಯ ಧರಿಸಿ, ನಿರುಪಾಧಿಕ ವೆಂಬ ಧೂಪವ ಬೀಸಿ, ನಿಃಕಳವೆಂಬ ಜ್ಯೋತಿಯ ಬೆಳಗಿ ನಿರಾಳ ವೆಂಬ ವಸ್ತ್ರವ ಹೊದ್ದಿಸಿ, ಪರಮನಿಜಾಭರಣವ ತೊಡಿಸಿ, ಶೂನ್ಯವೆಂಬ ನೈವೇದ್ಯವನರ್ಪಿಸಿ, ನಿರವಯವೆಂಬ ತಾಂಬೂಲವನಿತ್ತು, ಇಂತೀ ಅಣು ಲಿಂಗಜಂಗಮ ಪ್ರಸಾದಕ್ಕೆ ಅಷ್ಟವಿಧಾರ್ಚನೆಯ ಮಾಡಿ, ಅನಂತಕೋಟಿ ಸೂರ್ಯ ಚಂದ್ರಾಗ್ನಿ ಪ್ರಭೆಯಂತ ಬೆಳಗುವ ಅಣುಲಿಂಗಜಂಗಮ ಪ್ರಸಾದವನ್ನೇ ಅನಿಮಿಷ ದೃಷ್ಟಿಯಿಂ ನಿರೀಕ್ಷಿಸಿ, ಮನ್ನಸಂಗ್ರಹದಲ್ಲಿ ಸಂತೋ ಷಂಗೊಂಡು, ಆ ಅಣುಲಿಂಗ ಜಂಗಮಪ್ರಸಾದ ಪೂಜೆಯು ಸಮಾಪ್ತಿಯ ಮಾಡಿ, ಅನಂತಕೋಟಿ ಮಹಾಮಂತ್ರಂಗಳಿಂದ ನಮಸ್ಕರಿಸಿ, ಆ ಅಣು ಲಿಂಗ ಜಂಗಮಪ್ರಸಾದವೇ ತಾನೆಂದರಿದು ಏಕತತ್ವದಿಂ ನಿಶ್ಚಲ ಚಿತ್ತ ದೊಳ್ಗೂಡಿ, ಉಭಯವಳಿದು, ಇಹಪರಂಗಳ ಹೊದ್ದದೆ, ಕನ್ನಡಿಯ

ಪ್ರತಿಬಿಂಬದಂತೆ ಸರ್ವಸಂಗ ಪರಿತ್ಯಾಗನಾಗಿ, ನಿಜಾಚರಣೆಯಲ್ಲಿ ಆಚ
ರಿಸಬಲ್ಲಾತನೇ ದಶವಿಧ ಲಿಂಗಜಂಗಮ ಸಂಗ ಭಕ್ತಿ ಪ್ರಸಾದವುಳ್ಳ ಅನಾದಿ
ಅಖಂಡ ಚಿಜ್ಜ್ಯೋತಿ ಸಚ್ಛಕ್ತಿ ಜಂಗಮ, ನೋಡಾ ಸಂಗನಬಸವೇಶ್ವರಾ

## ನಿಜಚಿದ್ಬೆಳಗು.

೭೮ ಅಯ್ಯಾ, ಇಂತು ಬೆಳಗುವ ನಿಜವಸ್ತುವ ಲಿಂಗ ಲಿಂಗ
ವೆಂಬ ಪ್ರತಿದೋರದೆ ತನ್ನ ನಿಜಚಿದ್ಬೆಳಗ ತಾನೇ ನೋಡಿ ಕೂಡಿ,
ಅರ್ಚಿಸುವ ವಿಚಾರವಂತೆಂದೂಡೆ, ಅಯ್ಯಾ ಬಿಳಿಯ ಮುಗಿಲಿನ ಕರಿಯ
ನಕ್ಷತ್ರದಲ್ಲಿ ಉರಿಯ ಅಂಕುರ ಉಂಟು ಒಂದೆರಡೊಂಬತ್ತು ಉರಿವು
ತ್ತಿದ ಕೊಸ್ತಿಲ ಜ್ಯೋತಿಯಂತೆ ಒಳಗು ಹೊರಗು ಬೆಳಗುತಿದೆ ಅದು
ನೋಡಿದರೆ ಘನ, ನೋಡದಿದ್ದರ ಸಹಜ ಈ ಭೇದವನು ಗುಹೇಶ್ವರ
ಲಿಂಗದಲ್ಲಿ ಚನ್ನಬಸವಣ್ಣನೇ ಬಲ್ಲ ಬೆಸಗೊಂಬೆ ಬಾರಾ ಶಿವಯೋಗಿ
ಸಿದ್ಧರಾಮಯ್ಯ ಎಂದು ಶೂನ್ಯಸಿಂಹಾಸನದಲ್ಲಿ ಪ್ರಭುಸ್ವಾಮಿಗಳು ನಿರೂ
ಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ

## ಸರ್ವಾಂಗಲಿಂಗ.

**ವಿವರಣೆ**— ಹಿಂದಿನ ವಿವರಣೆಗಳಲ್ಲಿ ಹೇಳಿದ ಆಚರಣೆಗಳ
ಮೂಲಕ ವೀರಶೈವನು ಸರ್ವಾಂಗಲಿಂಗಸ್ಥಿತಿಯನ್ನು ಹೊಂದುವನು
ಇದರ ಸ್ವರೂಪು ಕೆಳಗಿನ ವಚನಗಳಲ್ಲಿ ಹೇಳಲ್ಪಟ್ಟಿವ

೭೯ ಶ್ರೀಗುರು ಕರುಣಿಸಿ ಅಂಗದ ಮೇಲೆ ಲಿಂಗವ ಧರಿಸಿದ
ಕಾರಣ ಸರ್ವಾಂಗವು ಲಿಂಗವಾಯಿತ್ತು ಅದಂತೆಂದೊಡೆ ಅಗ್ನಿಯಿಂದ
ತಪ್ತವಾದ ಲೋಹದ ಪುತ್ಥಳಿಯಂತೆ, ಒಳಗು ಹೊರಗು ಲಿಂಗವಾಗಿ,
ಲಿಂಗವೇ ಬೆಳಗುತ್ತಿದ್ದ ಕಾರಣ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ
ನಿಮ್ಮ ಶರಣ ಸರ್ವಾಂಗಲಿಂಗಿಯಾದನು

೮೦ ಅಂಗೇಂದ್ರಿಯ ಕರಣ ಹರಣದಲ್ಲಿ ಲಿಂಗವ ಧರಿಸಿ ಲಿಂಗಾಂ
ಗಿಯಾದನಯ್ಯಾ ನಿಮ್ಮ ಶರಣ. ಅದೆಂತೆಂದೂಡೆ, ಘ್ರಾಣದಲ್ಲಿ ಲಿಂಗವ

ಧರಿಸಿದನಾಗಿ, ಜಿಹ್ವಾಲಿಂಗವ ಜಿಹ್ವೆಯಾಯಿತ್ತು ನೇತ್ರವಲ್ಲಿ ಲಿಂಗವ
ಧರಿಸಿದನಾಗಿ, ನೇತ್ರಲಿಂಗವ ನೇತ್ರವಾಯಿತ್ತು ತ್ವಕ್ಕಿನಲ್ಲಿ ಲಿಂಗವ
ಧರಿಸಿದವನಾಗಿ ತ್ವಕ್‌ಲಿಂಗವ ತ್ವಕ್ಕಾಯಿತ್ತು ಶ್ರೋತ್ರದಲ್ಲಿ ಲಿಂಗವ
ಧರಿಸಿದನಾಗಿ ಶ್ರೋತ್ರಲಿಂಗವ ಶ್ರೋತ್ರವಾಯಿತ್ತು ಮನದಲ್ಲಿ ಲಿಂಗವ
ಧರಿಸಿದನಾಗಿ, ಮನ ಲಿಂಗವಾಯಿತ್ತು ಸರ್ವಾಂಗದಲ್ಲಿ ಲಿಂಗವ ಧರಿಸಿ
ದನಾಗಿ, ಸರ್ವಾಂಗ ಲಿಂಗವಾಯಿತ್ತು ನಿಜಗುರು ಸ್ವತಂತ್ರ ಸಿದ್ಧ
ಲಿಂಗೇಶ್ವರಾ ನಿಮ್ಮ ಶರಣಂಗೆ

೮೧ ಅತ್ತಲಿತ್ತ ಹರಿವ ಮನವ ನಿಲಿಸಿ ಸ್ವಸ್ಥಾನಂಗೊಳಿಸಿ ತತ್ವಾ
ನುಭಾವದ ರಹಸ್ಯದ ಕೀಲವನರಿದು, ತತ್ವಮಸಿ ವಾಕ್ಯದ ಮೇಲಣ
ಷಟ್ ಸ್ಥಲಾಂಗವ ತಿಳಿದು, ಆ ಲಿಂಗಕ್ಕೆ ಷಟ್‌ಸ್ಥಲಾಂಗವನಾಗಿ
ಮಾಡಿ, ಆ ಲಿಂಗವನು ಲಿಂಗ ಮುಖವ ಮಾಡಬಲ್ಲಡೆ ಸರ್ವಾಂಗ
ಲಿಂಗಿಯು ಮತ್ತವು ಈ ಗುಣವುಳ್ಳ ಷಟ್‌ಸ್ಥಲ ಲಿಂಗಾಂಗಿಯೇ ನಿಜ
ಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ತಾನೆ ಬೇರಿಲ್ಲ

೮೨ ನೀಲ ವರ್ಣದ ಮಾಣಿಕಕ್ಕೆ ಐದು ಹೊನ್ನು ಕೊಟ್ಟೆ
ಕಾಚ ವರ್ಣದ ಮಾಣಿಕಕ್ಕೆ [illegible] ಹೊನ್ನು ಕೊಟ್ಟೆ ಶ್ವೇತ ವರ್ಣದ
ಮಾಣಿಕಕ್ಕೆ ಐದು ಹೊನ್ನು ಕೊಟ್ಟೆ ಮುತ್ತಿನ ವರ್ಣದ ಮಾಣಿಕಕ್ಕೆ
ಐದು ಹೊನ್ನು ಕೊಟ್ಟೆ ರಕ್ತ ವರ್ಣದ ಮಾಣಿಕಕ್ಕೆ ನಾಲ್ಕು ಹೊನ್ನು
ಕೊಟ್ಟೆ ಅಗ್ನಿ ವರ್ಣದ ಮಾಣಿಕಕ್ಕೆ ಒಂದು ಹೊನ್ನು ಕೊಟ್ಟೆ ಸೂರ್ಯ
ಪ್ರಕಾಶದ ಮಾಣಿಕಕ್ಕೆ ಮರ್ತ್ಯ ಲೋಕವ ಕೊಟ್ಟೆ ಚಂದ್ರ ಕಾಂತಿಯ
ಮಾಣಿಕಕ್ಕೆ ಸ್ವರ್ಗ ಲೋಕವ ಕೊಟ್ಟೆ ಅಗ್ನಿ ಕಾಂತಿ ಮಾಣಿಕಕ್ಕೆ
ಪಾತಾಳ ಲೋಕವ ಕೊಟ್ಟೆ ಇಂತೀ ರತ್ನವ ಕೊಂಡು ಮನೆಯ ಸುಟ್ಟು
ಒಡಿಯ ಧರಿಸಿ, ಕಾಯಕವ ಮಾಡುತಿರ್ದ ನಿಮ್ಮ ಶರಣ ಕಾಡಿನೊಳ
ಗಾದ ಚೆನ್ನ ಕದಂಬ ಲಿಂಗ ನಿರ್ಮಾಯ ಪ್ರಭುವೇ

ಅರ್ಥ:— ಶಿವಜ್ಞಾನೋದಯವಾಗಿ ಶ್ರೀಗುರು ಕಾರುಣ್ಯವ ಪಡೆದು
ಲಿಂಗಾಂಗ ಸಂಬಂಧಿಯಾದ ಜ್ಞಾನ ಕಲಾತ್ಮನು ಸರ್ವಾಂಗದಲ್ಲಿ ಲಿಂಗ
ಧಾರಣ ಮಾಡುವ ಪರಿಯ ಹೇಳ್ವೆ ಅದೆಂತೆಂದೊಡೆ, ಆಧಾರಚಕ್ರದ
ನಾಲ್ಕೆಸಳಿನ ಮಧ್ಯದಲ್ಲಿರುವ ನಕಾರ ಪ್ರಣವ ಪೀಠದಲ್ಲಿ ನೀಲವರ್ಣದ
ಪ್ರಕಾಶದಿಂ ಬೆಳಗುವ ಆಚಾರಲಿಂಗವನು ಪೃಥ್ವೀ ತತ್ವದಲ್ಲಿ ಸ್ವಾಯತ

ಮಾಡಿ, ಆ ಪೃಥ್ವೀ ತತ್ವಾಂಶಿಕವಾದ, ವಾಕ್, ಪಾಣಿ, ಪಾದ, ಗುದ, ಗುಹ್ಯವೆಂಬ ಪಂಚ ಕರ್ಮೇಂದ್ರಿಯಂಗಳ ನಷ್ಟ ಮಾಡಿ ಎಂಬು ದೀಗ ನೀಲವರ್ಣದ ಮಾಣಿಕಕ್ಕೆ ಐದು ಹೊನ್ನ ಕೊಟ್ಟೆನೆಂಬ ಶಬ್ದ ಕ್ಕರ್ಥ ಅಂತಪ್ಪ ಆಚಾರಲಿಂಗ ಸಂಬಂಧಿಯಾದ ಶಿವಶರಣನು ಸ್ವಾಧಿಷ್ಠಾನ ಚಕ್ರದಲ್ಲಿ ಆರೆಸಳ ಮಧ್ಯದಲ್ಲಿರುವ ಮಕಾರ ಪ್ರಣವು ಪೀಠದಲ್ಲಿ ಪಚ್ಚ ವರ್ಣದ ಪ್ರಕಾಶದಿಂ ಬೆಳಗುವ ಗುರುಲಿಂಗವನು ಅಪ್ಪು ತತ್ವದಲ್ಲಿ ಸ್ವಾಯತವ ಮಾಡಿ ಅಪ್ಪು ತತ್ವಾಂಶಿಕವಾದ ಶಬ್ದ, ಸ್ಪರ್ಶ, ರೂಪು, ರಸ, ಗಂಧವೆಂಬ ಪಂಚ ವಿಷಯ ಪದಾ ರ್ಥವನು ನಷ್ಟವ ಮಾಡಿ, ಎಂಬುದೀಗ ಪಚ್ಚವರ್ಣದ ಮಾಣಿಕಕ್ಕೆ ಐದು ಹೊನ್ನ ಕೊಟ್ಟೆನೆಂಬ ಶಬ್ದಕ್ಕರ್ಥ. ಅಂತಪ್ಪ ಗುರುಲಿಂಗ ಜಂಗಮ ಸಂಬಂಧಿಯಾದ ಶಿವಶರಣನು ಮಣಿ ಪೂರಕ ಚಕ್ರದ ಹತ್ತೆ ಸಳ ಮಧ್ಯದಲ್ಲಿರುವ ಶಿಕಾರ ಪ್ರಣವು ಪೀಠದಲ್ಲಿ ಶ್ವೇತ ವರ್ಣದ ಪ್ರಕಾ ಶದಿಂ ಬೆಳಗುವ ಶಿವಲಿಂಗವನು ತೇಜತತ್ವದಲಿ ಸ್ವಾಯತವ ಮಾಡಿ, ಆ ತೇಜ ತತ್ವಾಂಶಿಕವಾದ ಕಾಮಾಗ್ನಿ, ಕ್ರೋಧಾಗ್ನಿ, ಮಂದಾಗ್ನಿ, ಶೋಕಾಗ್ನಿ, ಒಡಬಾಗ್ನಿ ಎಂಬ ಪಂಚ ತಾಪತ್ರಯಾಗ್ನಿಗಳ ನಷ್ಟವ ಮಾಡಿ, ಎಂಬುದೀಗ ಶ್ವೇತವರ್ಣದ ಮಾಣಿಕಕ್ಕೆ ಐದು ಹೊನ್ನ ಕೊಟ್ಟೆನೆಂಬ ಶಬ್ದಕ್ಕರ್ಥ. ಅಂತಪ್ಪ ಶಿವಲಿಂಗ ಸಂಬಂಧಿಯಾದ ಶಿವ ಶರಣನು ಅನಾಹತ ಚಕ್ರದ ದ್ವಾದಶ ಎಸಳ ಮಧ್ಯದಲ್ಲಿರುವ ವಕಾರ ಪ್ರಣವು ಪೀಠದಲ್ಲಿ ಮುತ್ತಿನ ವರ್ಣದ ಪ್ರಕಾಶದಿಂ ಬೆಳಗುವ ಜಂಗಮ ಲಿಂಗವನು ವಾಯು ತತ್ವದಲ್ಲಿ ಸ್ವಾಯತವ ಮಾಡಿ, ಆ ವಾಯು ತತ್ವಾಂಶಿಕವಾದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂಬ ಪಂಚಪ್ರಾಣ ವಾಯುಗಳ ನಷ್ಟವ ಮಾಡಿ, ಎಂಬುದೀಗ ಮುತ್ತಿನ ವರ್ಣದ ಮಾಣಿಕಕ್ಕೆ ಐದು ಹೊನ್ನ ಕೊಟ್ಟೆನೆಂಬ ಶಬ್ದಕ್ಕರ್ಥ ಅಂತಪ್ಪ ಜಂಗಮಲಿಂಗ ಸಂಬಂಧಿಯಾದ ಶಿವಶರಣನು ವಿಶುದ್ಧಿ ಚಕ್ರದ ಷೋಡಶ ಎಸಳುಗಳ ಮಧ್ಯದಲ್ಲಿರುವ ಯಕಾರ ಪ್ರಣವು ಪೀಠದಲ್ಲಿ ರಕ್ತ ವರ್ಣದ ಪ್ರಕಾಶದಿಂ ಬೆಳಗುವ ಪ್ರಸಾದ ಲಿಂಗವನು ಆಕಾಶ ತತ್ವ ದಲಿ ಸ್ವಾಯತವ ಮಾಡಿ, ಆ ಆಕಾಶ ತತ್ವಾಂಶಿಕವಾದ ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಕರಣ ಚತುಷ್ಟಯಂಗಳ ನಷ್ಟವ ಮಾಡಿ, ಎಂಬುದೀಗ ರಕ್ತವರ್ಣದ ಮಾಣಿಕಕ್ಕೆ ನಾಲ್ಕು ಹೊನ್ನ ಕೊಟ್ಟೆನೆಂಬ

ಶಬ್ದಕ್ಕರ್ಥ ಅಂತಪ್ಪ ಪ್ರಸಾದಲಿಂಗ ಸಂಬಂಧಿಯಾದ ಶಿವಶರಣನು ಅಗ್ನಿ ಚಕ್ರದ ಅಷ್ಟದಳದ ಮಧ್ಯದಲ್ಲಿರುವ ಓಂಕಾರ ಪ್ರಣವ ಪೀಠದಲ್ಲಿ ಅಗ್ನಿ ವರ್ಣದ ಪ್ರಕಾಶದಿಂ ಬೆಳಗುವ ಮಹಾಲಿಂಗವನು ಆತ್ಮ ತತ್ವದಲಿ ಸ್ವಾಯತವ ಮಾಡಿ, ಆ ಆತ್ಮ ತತ್ವಾಂಶಿಕವಾದ ಮನವೊದಲಾಗಿ ಅರವತ್ತಾರು ಕೋಟಿ ಕರಣಂಗಳು ಆತ್ಮೋಹಂ ಪರಬ್ರಹ್ಮಂ ವೆಂಬ ಮೂಲಾಹಂಕಾರದಲ್ಲಿ ಪುಟ್ಟಿವವು ಅಂತಪ್ಪ ಮೂಲಾಹಂಕಾರವನು ಜ್ಞಾನಾಗ್ನಿಯಲ್ಲಿ ನಷ್ಟವ ಮಾಡಿವನೆಂಬುದೀಗ ಅಗ್ನಿ ವರ್ಣದ ಮಾಣಿಕಕ್ಕೆ ಒಂದು ಹೊನ್ನ ಕೊಟ್ಟೆನೆಂಬ ಶಬ್ದಕ್ಕರ್ಥ ಅಂತಪ್ಪಾತ್ಮನಲ್ಲಿ ಮಹಾಲಿಂಗ ಸಂಬಂಧಿಯಾದ ಶಿವಶರಣನು ಸೂರ್ಯನೆಂದಡೆ ಇಷ್ಟ ಲಿಂಗವು ಅದೆಂತೆಂದೊಡೆ, ಸೂರ್ಯನು ಪ್ರಾತಃಕಾಲದಲ್ಲಿ ಉದಯವಾಗಲು ರಾತ್ರಿಯಲ್ಲಿ ಮುಸುಕಿದ ಮಹಾ ಕಾವಳವು ಪಲಾಯನವಾಗಿ ಮಹಾಬೆಳಗನು ತೋರುವುದು ಹಾಗೆ ಚಿತ್ ಸೂರ್ಯನೆಂಬ ಇಷ್ಟ ಬ್ರಹ್ಮವು ಸುಜ್ಞಾನೋದಯ ಕಾಲಕ್ಕೆ ಗುರು ಮುಖದಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಬರಲು ಅಜ್ಞಾನವೆಂಬ ಮಾಯಾ ತಾಮಸ ಕಾವಳವು ಪಲಾಯನವಾಗಿ ಆ ಶಿವಶರಣಂಗೆ ಮಹಾಜ್ಞಾನ ಪ್ರಕಾಶಮಯವಾಗಿ ತೋರುವುದಾದ ಕಾರಣ, ಇಷ್ಟಲಿಂಗಕ್ಕೆ ಸೂರ್ಯನೆಂಬ ನಾಮವಾಯಿತ್ತು ಅಂತಪ್ಪ ಇಷ್ಟಲಿಂಗ ಬ್ರಹ್ಮವು ಬ್ರಹ್ಮ ಚಕ್ರದ ಸಹಸ್ರದಳ, ಶತದಳ, ಪಂಚದಳ, ತ್ರಿದಳ ಮಧ್ಯದಲ್ಲಿರುವ ಸಕಲ ಪ್ರಣವವೆಂಬ ಅಕಾರ ಪ್ರಣವ ಪೀಠದಲ್ಲಿ ಅನಂತ ಕೋಟಿ ಸೂರ್ಯ ಪ್ರಕಾಶದಿಂ ಬೆಳಗುತ್ತಿರ್ಪುದು ಅಂತಪ್ಪ ಇಷ್ಟಲಿಂಗವನು ಸ್ಥೂಲ ತನುವಿನಲ್ಲಿ ಸ್ವಾಯತವ ಮಾಡಿ, ಆ ಸ್ಥೂಲ ತನುವಿನ ಅಂಶಿಕವಾದ ಉಂಡಿಹೆ, ಉಟ್ಟಿಹೆ, ಕೊಟ್ಟಿಹೆ, ಭೋಗಿಸಿಹೆನೆಂಬ ಕರಣವಿಷಯಂಗಳ ಸತ್ಕ್ರಿಯಾ ಪ್ರಕಾಶದಲ್ಲಿ ನಷ್ಟವ ಮಾಡಿ ಎಂಬುದೀಗ ಸೂರ್ಯ ಪ್ರಕಾಶದ ಮಾಣಿಕಕ್ಕೆ ಮರ್ತ್ಯ ಲೋಕವ ಕೊಟ್ಟೆನೆಂಬ ಶಬ್ದಕ್ಕರ್ಥ ಅಂತಪ್ಪ ತನುವಿನ ಇಷ್ಟಲಿಂಗ ಸಂಬಂಧಿಯಾದ ಶಿವಶರಣನು ಶಿವಚಕ್ರದ ತ್ರಿದಳ ಮಧ್ಯದಲ್ಲಿರುವ ಶೂನ್ಯ ಪ್ರಣವವೆಂಬ ಉಕಾರ ಪ್ರಣವ ಪೀಠದಲ್ಲಿ ಅಗಣಿತ ಕೋಟಿ ಚಂದ್ರಕಾಂತಿಯನೊಳಕೊಂಡು ಬೆಳಗುವ ಪರಮ ಕಾಂತಿ ಜ್ಞಾನ ಪ್ರಕಾಶವನುಳ್ಳ ಪ್ರಾಣಲಿಂಗವನು ಸೂಕ್ಷ್ಮ ತನುವಿನಲ್ಲಿ ಸ್ವಾಯತವ ಮಾಡಿ ಆ ಸೂಕ್ಷ್ಮ ತನುವಿನ ಅಂಶಿಕವಾದ ಆಶೆ, ರೋಷ,

ಹರುಷವೆಂಬ ಕರಣ ವಿಷಯಂಗಳ ಸುಜ್ಞಾನ ಪ್ರಕಾಶದಲ್ಲಿ ನಷ್ಟವ ಮಾಡಿ, ಎಂಬುದೀಗ ಚಂದ್ರಕಾಂತಿ ಮಾಣಿಕಕ್ಕೆ ಸ್ವರ್ಗ ಲೋಕವ ಕೊಟ್ಟೆನೆಂಬ ಶಬ್ದಕ್ಕರ್ಥ ಅಂತಪ್ಪ ಮನದಲ್ಲಿ ಪ್ರಾಣಲಿಂಗ ಸಂಬಂಧಿಯಾದ ಶಿವಶರಣನು ಪಶ್ಚಿಮ ಚಕ್ರದ ಏಕದಳದ ಮಧ್ಯದಲ್ಲಿರುವ ನಿರಂಜನ ಪ್ರಣವುವೆಂಬ ಮಕಾರ ಪ್ರಣವು ಪೀಠದಲ್ಲಿ ಅತಿಶಯ ಕೋಟಿ ಸೂರ್ಯ ಚಂದ್ರರ ಪ್ರಕಾಶವ ಕೀಳ್ಪಡಿಸುವಂಥ ಮಹಾಜ್ಞಾನ ಪ್ರಕಾಶದಿಂ ಬೆಳಗುವ ಭಾವಲಿಂಗವನು ಕಾರಣ ತನುವಿನಲ್ಲಿ ಸ್ವಾಯತವ ಮಾಡಿ, ಆ ಕಾರಣ ತನುವಿನಂಶಿಕವಾದ ಅಹಂಕಾರ ಮಮಕಾರವೆಂಬ ಕಾರಣ ವಿಷಯಂಗಳ ಮಹಾಜ್ಞಾನ ಪ್ರಕಾಶದಲ್ಲಿ ನಷ್ಟವ ಮಾಡಿ, ಎಂಬುದೀಗ ಅಗ್ನಿಕಾಂತಿ ಮಾಣಿಕಕ್ಕೆ ಪಾತಾಳ ಲೋಕವ ಕೊಟ್ಟೆನೆಂಬ ಶಬ್ದಕ್ಕರ್ಥ ಇಂತೀ ತ್ರಿವಿಧ ಷಡ್ವಿಧಾಂಗದಲ್ಲಿ ನವರತ್ನವೆಂಬ ನವಲಿಂಗವ ಸ್ವಾಯತನಾದ ಶಿವಜ್ಞಾನ ಶರಣನು ಆ ಲಿಂಗದ ಮಹಾಜ್ಞಾನದ ಪ್ರಕಾಶದಲ್ಲಿ ಸರ್ವಾಂಗವನು ದಹನ ಮಾಡಿ, ಆ ಜ್ಞಾನ ಭಸ್ಮವನು ಅವಧರಿಸಿ ತಾರಕದ ಮಧ್ಯದಲ್ಲಿ ಪ್ರಪಂಚವನಾಚರಿಸುತಿರ್ದ ಪರಶಿವ ಲಿಂಗದಲ್ಲಿ ಬೆಂದ ಜ್ಞಾನ ಕಲಾತ್ಮನು ಎಂಬುದೀಗ ಇಂತೀ ರತ್ನವ ಕೊಂಡು ಮನೆಯ ಸುಟ್ಟು ಬೂದಿಯ ಧರಿಸಿ ಕಾಯಕವ ಮಾಡುತಿರ್ದ ನಿಮ್ಮ ಶರಣನೆಂಬ ಶಬ್ದಕ್ಕರ್ಥ

೮೩ ಎನ್ನ ಸರ್ವಾಂಗದಲ್ಲಿ ಲಿಂಗವಿದ್ದಾನೆ ಐದಾನೆ ಮನವರಿಯದೆ ಕೆಟ್ಟೆ, ಕಟ್ಟ ಎನ್ನಂತರಂಗ ಬಹಿರಂಗವೆಂದೆನ್ನದ ಲಿಂಗವಿದ್ದಾನೆ ಮನವರಿಯದ ಕಷ್ಟಿ, ಕಷ್ಟಿ ಮನವು ಅವಿಶ್ವಾಸದಿಂದ ಗ್ರಹಿಸಲೊಲ್ಲದೆ ಕೆಟ್ಟೆ ಕೆಟ್ಟೆನಯ್ಯಾ ಎನ್ನ ಮನ ವಿಶ್ವಾಸದಿಂದ ಗ್ರಹಿಸಿದ, ಸತ್ಯನಹೆ, ನಿತ್ಯನಹೆ, ಮುಕ್ತನಹೆ, ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ

೮೪ ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದ್ಯವಾಗಿ, ಮನಸ್ಥಲದ ಲಿಂಗವೆನ್ನ ಸರ್ವಾಂಗದಲ್ಲಿ ವೇದ್ಯವಾದ ಬಳಿಕ, ಇನ್ನು ಭಿನ್ನ ಭಾವಕ್ಕೆ ತೆರಹುಂಟೇ? ಗುಹೇಶ್ವರನೆಂಬ ಲಿಂಗವ ಬೆರಸಿ ಸಮರಸವಾದ ಬಳಿಕ ಎರಡೆಂಬುದಿಲ್ಲ ನೋಡಾ ಚನ್ನಬಸವಣ್ಣ

# ಷಟ್‌ಸ್ಥಲಯುಕ್ತ ಲಿಂಗ ಪೂಜಾವಿಧಿ.

**ವಿವರಣೆ:—** ಈ ವರೆಗೆ ಲಿಂಗ ಪೂಜೆಯ ತಾತ್ವಿಕ ವಿಚಾರಗಳು ಹೇಳಲ್ಪಟ್ಟವು ಮುಂದೆ ವೀರಶೈವನ ದೈನಿಕ ಕ್ರಿಯೆಯಾದ ಲಿಂಗ ಪೂಜೆಯ ಕ್ರಮಗಳು ವಿವರಿಸಲ್ಪಟ್ಟಿವೆ

## ೧ನೇ ವಚನ.

## ಭಕ್ತಸ್ಥಲ.

೮೫ ಶಿವಶರಣನು ಶಿವಯೋಗ ನಿದ್ರಾ ಮುದ್ರೆಯಲ್ಲಿ ಪವಡಿಸಿದ್ದು 'ಬ್ರಾಹ್ಮೀ ಮುಹೂರ್ತೇ ಚೋತ್ಥಾಯ' ಎಂದು ಹೇಳುತ್ತಿಹುದಾದ ಕಾರಣ, ಬ್ರಾಹ್ಮೀ ಮುಹೂರ್ತದಲ್ಲಿ ಶಿವಧ್ಯಾನದಿಂದೆದ್ದು, ಶಿವಮಂತ್ರೋಚ್ಚಾರಣೆ ಶಿವಲಿಂಗನಿರೀಕ್ಷಣೆಯಂ ಮಾಡಿ, ಸ್ಥೂಲ ಶೌಚಾಚಮನಂಗಳಿಗೆ ಹೋಗಿ ಬಂದು, ಕರಚರಣ ಮುಖ ಪ್ರಕ್ಷಾಳನಂಗೈದು, ದಂತಧಾವನವಂ ಮಾಡಿ, ಸ್ನಾನಂಗೈದು ಕುಸುಮಂಗಳಂ ಕೊಯ್ಯಿಸಿಕೊಂಡು ಪಾವುಗೊರಡವುಂ ಹಿಡಿದುಕೊಂಡು ಬಂದು, ಪಶ್ಚಿಮಸ್ಥಲ ಸುಖಾಸನವೆಂದು ಹೇಳುತ್ತಿಹುದಾದ ಕಾರಣ ಉನ್ನತಾಸನದ ಗದ್ದುಗೆಯ ಮೇಲೆ ಸುಖಾಸನದಲ್ಲಿ ಮುಹೂರ್ತವ ಮಾಡಿಕೊಂಡು, ಶ್ರೀ ವಿಭೂತಿ ರುದ್ರಾಕ್ಷಿಗಳನ್ನು ಜಲ ಪತ್ರ ಪುಷ್ಪಂಗಳಿಂದರ್ಚಿಸಿ, ತತ್ತತ್ ಸ್ಥಾನಂಗಳಲ್ಲಿ ಅತ್ಯಂತ ವಿಶ್ವಾಸದಿಂದ ಅಲಂಕರಿಸಿಕೊಂಬುವುದೇ ಶ್ರದ್ಧಾಭಕ್ತಿಯುಳ್ಳ ಭಕ್ತಸ್ಥಲವಾಗುವುದು.

## ಮಾಹೇಶ್ವರಸ್ಥಲ.

ತದನಂತರದಲ್ಲಿ ಪರಶಿವನ ಧ್ಯಾನಾಭ್ಯಾಸದಿಂದ ಮೂಲಪಂಚಾಕ್ಷರೀ ಮಂತ್ರವನ್ನು ಮಾನಸ, ವಾಚಕ, ಉಪಾಂಶುಕವೆಂಬ ತ್ರಿಕರಣಂಗಳಲ್ಲಿ ಅತ್ಯಂತ ನೈಷ್ಠೆಯಿಂದ ಪುನಶ್ಚರಣ ಜಪಂಗೈವುದೇ ನೈಷ್ಠಿಕಾಭಕ್ತಿಯುಳ್ಳ ಮಾಹೇಶ್ವರಸ್ಥಲವಾಗಿರ್ಪುದು

## ಪ್ರಸಾದಿಸ್ಥಲ.

ತದನಂತರದಲ್ಲಿ ನಿಜ ವಸ್ತ್ರಂಗಳಲ್ಲಿಷ್ಟ ಶಿವಲಿಂಗ ಮೂರ್ತಿಯನ ಒಂದಾನೊಂದು ಸೊಪ್ಪಿಯು ನಿಷ್ಪದ ಬರಿವ ಹಾಗೆ ಅದ್ದು ಮೇಲೆ

ರೇತ್ ' ॥ ಟೀಕು: — ಗೋವಿನ ಗೋಮಯು, ಗೋರೋಜನ, ಮೂತ್ರ, ಮೊಸರು, ಕ್ಷೀರ, ತುಪ್ಪ, ಈ ಆರು ಸನ್ನಾಹಗಳಿಂದ ನೆಲಸವರ್ಮ್ಮಾರ್ಜನೆಯು ಮಾಡಿ, ಆ ಮೇಲೆ ಆ ಸ್ಥಳದಲ್ಲಿ ರಂಗವಲ್ಲಿಯು ಹಾಕಬೇಕು ಅದೆಂತೆಂದೊಡೆ, ಬೆಣಚಿಕಲ್ಲಿನ ಹಿಟ್ಟಿನ ಪುಡಿಯು ಮಾಡಿ, ಅದರೊಳಗೆ ಅರ್ಧ ಹಿಟ್ಟಿಗೆ ಕಾಕಿ ಸೊಪ್ಪಿನ ರಸವಾಗಲಿ ತೊಂಡೇ ಸೊಪ್ಪಿನ ರಸವಾಗಲಿ, ಈ ಎರಡರೊಳಗೆ ಆವುದಾದರೊಂದು ಸೊಪ್ಪಿನ ರಸವ ಹಿಂಡಿ, ಮೂರು ಭಾಗವಹಿಟ್ಟು, ಹಸರು ಮಾಡಿಕೊಂಡು, ಉಳಿದ ಬಿಳಿಯ ಹಿಟ್ಟು ಇದ್ದಲಿ ಹಿಟ್ಟು ಈ ಪಂಚ ಹಿಟ್ಟಿನಿಂದ ಹಾಕಬೇಕು ರಂಗವಲ್ಲಿಯು ಹಾಕಿ ಆ ಮೇಲೆ ಗದ್ದಿಗೆ ಹಾಕಬೇಕು

## ಗದ್ದಿಗೆಹಾಕುವುದು.

ಹೇಗೆಂದರೆ, ಚಿತ್ರಾಸನ ಬಿಳಿಯ ಕಂಬಳಾಸನ ಈ ಎರಡರೊಳಗೆ ಆವುದಾದರೂ ಒಂದು ಆಸನ ಹಾಕಿ ಅದರ ಮೇಲೆ ಲಿಂಗಪೂಜಾ ಸಾಮುಗ್ರಿಗಳ ಬೆಳಗಿ, ಶುಚಿ ಮಾಡಿ ಇಟ್ಟು, ಚರಿಗಿ ಬೆಳಗಿ ತೊಳೆದು, ಉದಕ ಸೋಸಿ ಇಟ್ಟು, ಗಂಧ, ಅಕ್ಷತೆ, ಕರ್ಪೂರ, ಲೋಭಾನ ಮೊದಲಾದ ಸಾಮುಗ್ರಿಗಳ ಇಟ್ಟು ಜ್ಯೋತಿ ಮುಟ್ಟಿಸಿ, ಆ ಸಾಮಾನುಗಳ ಮೇಲೆ ತುಂಬ ಮಡಿ ವಸ್ತ್ರವ ಮುಚ್ಚುವುದು

## ದಂತಧಾವನ

ಆ ಮೇಲೆ ಆಲ, ನೇರಲು, ಮಾವು, ಬೇವು, ನೆಲ್ಲಿ, ಹುಣಚ ಈ ಕಾಷ್ಠದೊಳಗೆ ಆವುದಾದರೂ ಒಂದು ಕಡ್ಡಿಯು ತಂದು, ಹನ್ನೆರಡು ಬೆರಳುದ್ದ ತಗೆದುಕೊಂಡು, ದಂತಧಾವನವ ಮಾಡಿ, ದಂತ ಸಂಧಿಗಳಲ್ಲಿಯು ಕೀಳ ಕಿಲ್ಬಿಷವ ತೆಗೆದು, ಜಿಹ್ವಾ ಮುಕ್ಕಳಿಸಿ, ಮುಖ ಪ್ರಕ್ಷಾಲನವ ಮಾಡುವುದು

## ಸ್ನಾನ.

ಆ ಮೇಲೆ ಸ್ನಾನ ಮಾಡಬೇಕಾದರೆ, ಉತ್ತಮ ಶಿರ ಸ್ನಾನ, ಮಧ್ಯಮ ಕಂಠ ಸ್ನಾನ, ಕನಿಷ್ಠ ಕಟಿಸ್ನಾನ ಹೀಗೆಂಬಲ್ಲಿ ಉತ್ತಮವಾದ ಶಿರ ಸ್ನಾನವ ಮಾಡಿ, ಮಡಿ ವಸ್ತ್ರವ ಹೊದ್ದುಕೊಂಡು, ಶಿವಸ್ಮರಣೆಯು ಮಾಡುತ್ತ ಬಂದು, ಗದ್ದಿಗೆಯ ಮೇಲೆ ಮಾರ್ಜನವ ಮಾಡುವಾಗ ಮಂತ್ರ

ಉಚ್ಚರಿಸಬೇಕು ಆವ ಮಂತ್ರವೆಂದರೆ, 'ಓಂ' ಎಂದು 'ಅಹಃ ಅನಂತ ಶಕ್ತಿ ಧಾಮ್ನೆ । ಜ್ಯೋತಿರೂಪಾಯ ವಸ್ತ್ರಾಯ ಫಟ್" ಎಂದು ಮೂರ್ತವ ಮಾಡುವುದು

## ಪದಾರ್ಥ ಶುದ್ಧಿ

ಲಿಂಗಕ್ಕೆ ಮಜ್ಜನ ನೀಡಬಾರದು ಏನು ಕಾರಣವೆಂದರೆ, ಗ್ರಂಥ॥ ಆದಿ ಮಾಂಸಂ ತು ತೋಯಾನಾಂ । ಮಧ್ಯ ಮಾಂಸಂ ತು ಗೋರಸಂ॥ ಸರ್ವ ಮಾಂಸಂ ತು ನಾರೀಣಾಂ । ಕಿಂ ಶೀಲಂ ಮಹೇಶ್ವರೀ ॥ ಟೀಕು— ಎಲೆ ಪರಮೇಶ್ವರನೇ, ಉದಕದಿಂದ ನಿನಗೆ ಅಭಿಷೇಕವಾಗುತ್ತದೆ ಆ ಉದಕ ಆದಿಯಲ್ಲಿ ಮಾಂಸ ಸ್ವರೂಪು, ಕ್ಷೀರದಿಂದ ಅಭಿಷೇಕವಾಗುತ್ತದೆ ಆ ಕ್ಷೀರ ಎಂತಹದ್ದು ಎಂದರೆ, ಆಕಳ ಕೆಚ್ಚಿನಲ್ಲಿರುವ ಮಾಂಸದಿಂದ ಹುಟ್ಟುತ್ತದೆ ಆ ಸ್ತ್ರೀಯರ ಅಪಾದ ಮಸ್ತಕ ಪರಿಯಂತರ ಮಾಂಸ ಸ್ವರೂಪು, ಹೀಗೆಂಬಲ್ಲಿ ನಿನ್ನ ಶೀಲವೆಂಬುದೇನು ಎಂದು ಪಾರ್ವತಿ ಕೇಳಲಾಗಿ ಪರಮೇಶ್ವರನು ಪ್ರತ್ಯುತ್ತರ ಹೇಳುತ್ತಿರ್ದನು ಗ್ರಂ॥ ಮಂತ್ರ ಶುದ್ಧಂ ತು ತೋಯಾನಾಂ । ಭಸ್ಮ ಶುದ್ಧಂ ತು ಗೋರಸಂ ॥ ದೀಕ್ಷಾ ಶುದ್ಧಂತು ಸ್ತ್ರೀಣಾಂ । ಮಮ ಶೀಲ ಮಹೇಶ್ವರೀ ॥ ಟೀಕು— ಎಲೇ ಪಾರ್ವತಿ ಕೇಳು ಮಂತ್ರದಿಂದ ಉದಕ ಶುದ್ಧ ಮಾಡಬೇಕು. ಭಸ್ಮ ಪೂರ್ರ ಮಾಡಿ ಕ್ಷೀರ ಶುದ್ಧ ಮಾಡಬೇಕು ದೀಕ್ಷೆಯಿಂದ ಸ್ತ್ರೀಯರ ಶುದ್ಧ ಮಾಡಬೇಕು ಎಂದು ಪರಮೇಶ್ವರನ ವಾಕ್ಯವಿದ್ದು ಕಾರಣ ಮಂತ್ರೋದಕ ಮಾಡಿ, ಪುಷ್ಪ ಪತ್ರೆ ಉಪಕರಣಗಳ ಮೇಲೆ ಸಂಪ್ರೋಕ್ಷಿಸಬೇಕು

## ಇಷ್ಟಲಿಂಗ ಪೂಜೆ

ಆ ಮೇಲೆ ಲಿಂಗಕ್ಕೆ ಮಜ್ಜನವ ನೀಡಬೇಕು ಅದರ ಕರಡಿಗೆಯ ಅರಗಿನಲ್ಲಿ ಎಡಹಸ್ತವನಿಟ್ಟು ಬಲಹಸ್ತದ ಹೆಬ್ಬೆರಳ ಲಿಂಗ ಮಸ್ತಕದ ಮೇಲಿಟ್ಟು, ನಡುವಿನ ಎರಡು ಬೆರಳು ಲಿಂಗದ ಬುಡಭಾಗದಲ್ಲಿಟ್ಟು, ಗೋಮುಖ ಶೋಧ ಮಾಡಿ, ಬಿಜಯಂಗೈಸಿಕೊಂಡು ಎಡಹಸ್ತದಲ್ಲಿ ಮೂರ್ತವ ಮಾಡಿಸಿ, ಮಂತ್ರೋದಕದಿಂದ ಅಭಿಷೇಕವ ಮಾಡಿ, ವಿಭೂತಿಯ ಧರಿಸಿ, ಪತ್ರೆ ಪುಷ್ಪವ ಧರಿಸಿ, ಲೋಭಾನ ಅರ್ಪಿಸಿ, ನಿಷ್ಠೆಯಲ್ಲಿ ಮೂರ್ತವ ಮಾಡಿಸುವುದು

## ವಿಭೂತಿ ಧಾರಣ

ಆ ಮೇಲೆ ಬಲಹಸ್ತದ ಹೆಬ್ಬೆರಳು ಮಧ್ಯದ ಎರಡು ಬೆರಳುಗ ಳಿಂದ ಕೂಡಿದ್ದು ಕುರಂಗ ಮುದ್ರೆ ಎನಿಸುವುದು ಈ ಕುರಂಗ ಮುದ್ರೆ ಯಿಂದ ಆಧಾರದಲ್ಲಿರುವ ವಿಭೂತಿಯನ್ನು ಎತ್ತಿ ಎಡದ ಹಸ್ತದಲ್ಲಿಟ್ಟು, ಬಲದ ಹಸ್ತದ ಶಕ್ತಿ ಮುದ್ರೆಯಿಂದ ಜಲಪುಷ್ಪಗಳ ಹಿಡಿದು, ಅರ್ಘ್ಯ ಕೊಟ್ಟು. ಕೂರ್ಮ ಮುದ್ರೆಯಿಂದ ಸಮಸ್ಕರಿಸಿ, ಆ ಮೇಲೆ ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ, ಜಲಮಿತಿ ಭಸ್ಮ, ಸ್ಥಲಮಿತಿ ಭಸ್ಮ, ವ್ಯೋಮಿತಿ ಭಸ್ಮ, ಸೂರ್ಯೋತಿ ಭಸ್ಮ, ಓಂ ಕ್ಷಂ ಎಂದು ಎರಡು ಮೊಳ ಪಾದ, ಎರಡು ಬಗಲು, ಉದರ, ಭುಜ ಎರಡು, ಹೃದಯ, ಕಂಠ, ಮಸ್ತಕ, ಸ್ಥಾನಂಗಳಲ್ಲಿ ಸೋಂಕಿಸಿ, ಸರ್ವಾಂಗದಲ್ಲಿ ಧೂಳನವ ಗೈದು ಸರ್ವಾಂ ಗಕ್ಕೆ ಉದ್ಧರ್ತನವ ಮಾಡಿ, ಆ ಮೇಲೆ ವಿಭೂತಿ ಧರಿಸುವ ಸ್ಥಾನಗ ಳಾವಾವೆಂದಡೆ, ಹಣೆಕಾಂಡ, ಎರಡು ಕಿವಿ, ಎರಡು ನೇತ್ರ, ಎರಡು ಘ್ರಾಣರಂಧ್ರವು, ಎರಡು ತೋಳು, ಎರಡು ಭುಜ, ಎರಡು ಕುಚ, ಎರಡು ಮೊಳಕೈ, ಎದ, ಎರಡು ಬಗಲು, ಹೊಕ್ಕುಳು, ಮೇಢ್ರ, ಬೆನ್ನು, ಎರಡು ತೊಡ, ಎರಡು ಮೊಳಕಾಲು, ಎರಡು ಕಣಕಾಲು, ಗುದ, ಎರಡು ಪಾದಗಳು, ಇಂತು ಮೂವತ್ತೆರಡು ಸ್ಥಾನಂಗಳಲ್ಲಿ ವಿಭೂತಿ ಧರಿಸುವಾಗ, ಮಂತ್ರವ ಉಚ್ಚರಿಸಬೇಕು ಆವ ಮಂತ್ರವೆಂದರೆ, 'ಪುನಾತಿ ಯಜ್ಞಗತ್ಸರ್ವಂ ತ್ರಿಪುಂಡ್ರಾತ್ಮ ಸದಾಶಿವಃ । ಐಶ್ವರ್ಯ ಪ್ರಾಪ್ತಿ ಬೀಜಾಯ ತಸ್ಮೈ ಶ್ರೀ ಭಸ್ಮನೇ ನಮಃ । ಭೂತಿಭೂತಿ ಪರಿತ್ರ ಜನನಿ। ಪಾಪೌಘ ವಿಧ್ವಂಸಿನೀ । ಸರ್ವೋಪದ್ರವ ವಿನಾಶಿನೀ ಶುಭಕರೀ॥ ಶೋಕಂಚ ವಿಚ್ಛೇದಿನೀ । ಭೂತಪ್ರೇತ ಪಿಶಾಚ ರಾಕ್ಷಸ ಹರೀ। ಸರ್ವದಾ ಸಂಪತ್ಕರೀ । ತೇಜೋರಾಶಿ ವಿಶೇಷ ಮೋಕ್ಷಕರೀ ಭೂತಿಸ್ಸದಾ ಪಾತು ಮಾಂ॥' ಎಂದು ಉಚ್ಚರಿಸುತ್ತ, ಮೇಲೆ ಹೇಳಿದ ಸ್ಥಾನಂಗಳಲ್ಲಿ ವಿಭೂತಿ ಧಾರಣ ಮಾಡಿಕೊಳ್ಳುವುದು

## ಪ್ರಣಮಸಂಬಂಧ

ಆ ಮೇಲೆ ಪ್ರಣವ ಸಂಬಂಧನ ಮಾಡಿಕೊಳ್ಳಬೇಕು ಅದಂ ತೆಂದೊಡೆ, ಗ್ರಂಥ॥ 'ಓಂಕಾರಂ ವದನಂ ದೇವೀ ನ ಮಕಾರೋ ಭುಜ ದ್ವಯಂ ಶಿಕಾರಂ ದೇಹ ಮಧ್ಯಸ್ತು ವ ಯಕಾರಂ ಪದದ್ವಯಂ॥' ಟೀಕು:- ಓಂಕಾರ ಲಲಾಟದಲ್ಲಿ, ನಕಾರ ಬಲ ಭುಜದಲ್ಲಿ, ಮಕಾರ ಎಡಭುಜದಲ್ಲಿ,

ಶಿಕಾರ ನಾಭಿಯಲ್ಲಿ, ವ ಯಕಾರ ಬಲ ಎಡ ಮೊಳಕಾಲಲ್ಲಿ, ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಇವು ಆರು ಪ್ರಣವು ಬಲದ ಬಗಲಲ್ಲಿ, ನಮಃ ಶಿವಾಯ ಎಡದ ಬಗಲಲ್ಲಿ 'ಬಸವ' ಕೊರಳಲ್ಲಿ, ಮುಂದೆಸೆಯಲ್ಲಿ, ಅ ಉ, ಮ, ಅಕ್ಷರ ಕಂಠದಲ್ಲಿ, ಎರಡು ಶಿಕಾರ ನೇತ್ರದಲ್ಲಿ, ಎರಡು ಯಕಾರ ಎರಡು ಕರ್ಣಗಳಲ್ಲಿ, ನಾಸಿಕದಲ್ಲಿ ನಕಾರ, ಬ್ರಹ್ಮರಂಧ್ರದಲ್ಲಿ ಹಕಾರ, ಗುದಸ್ಥಾನದಲ್ಲಿ ಲಕಾರ ಇಂತಿಷ್ಟು ಪ್ರಣವಂಗಳನ್ನು ಸಂಬಂಧವ ಮಾಡಿಕೊಳ್ಳಬೇಕು

## ರುದ್ರಾಕ್ಷಿ ಧಾರಣ

ಆ ವೇಳೆ ರುದ್ರಾಕ್ಷಿ ಧರಿಸುವ ಕ್ರಮವೆಂತೆಂದೊಡೆ, ಶಿಖಿಯಲ್ಲಿ ಒಂದು, ತಲೆ ಒಳಗೆ ಮೂವತ್ತಾರು, ಕಂಠದಲ್ಲಿ ಮೂವತ್ತೆರಡು, ಎದೆಯಲ್ಲಿ ಐವತ್ತು, ಎರಡು ತೋಳುಗಳಲ್ಲಿ ಹದಿನಾರು ಹದಿನಾರು, ಎರಡು ಮುಂಗೈಗಳಲ್ಲಿ ಹನ್ನೆರಡು ಹನ್ನೆರಡು, ಎರಡು ಕಿವಿಗಳಲ್ಲಿ ಒಂದೊಂದು, ಯಜ್ಞೋಪವೀತ ನೂರು ಎಂಟು, ಇಂತಿಷ್ಟು ಮೇಲೆ ಹೇಳಿದ ಸ್ಥಾನಂಗಳಲ್ಲಿ ರುದ್ರಾಕ್ಷಿ ರುದ್ರ ಬೀಜಾಯ, ಭೂತಿ ಸಂಭೂತಿ ಹೇತವೇ, ನೇತ್ರ ತ್ರಯಾಯ [illegible], ರುದ್ರಾಯ ನಮೋ ಲೋಕಹಿತಾರ್ಥಿನೇ' ಎಂದು ರುದ್ರಾಕ್ಷಿಯು ಧರಿಸಿಕೊಳ್ಳಬೇಕು

## ನ್ಯಾಸ ಮೊದಲಾದವುಗಳು

ಆ ವೇಳೆ ಬಲಹಸ್ತಕ್ಕೆ ಭಸ್ಮಲೇಪನವ ಮಾಡಿಕೊಂಡು, ಪ್ರಣವಂಗಳ ಲಿಖಿಸಿಕೊಂಡು ಕರನ್ಯಾಸ, ಅಂಗನ್ಯಾಸ, ಪ್ರಾಣಾಯಾಮ, ಇಷ್ಟ ದಿಗ್ಬಂಧನವ ಮಾಡಿದಲ್ಲಿಗೆ ಭಕ್ತಸ್ಥಲ ಸಂಬಂಧವಾದುದು.

## ಮಾಹೇಶ್ವರಸ್ಥಲ

ಆ ವೇಳೆ ಗುರುವು ಅಪ್ಪಣೆಕೊಟ್ಟಂತಹ ಮಂತ್ರವನ್ನು ಹಸ್ತಕ್ಕೆ ವಿಭೂತಿಯು ಧರಿಸಿಕೊಂಡು ಮುಖವಸ್ತ್ರವ ಮುಸುಕು ಹಾಕಿಕೊಂಡು, ಪರ ಕೃತಿಗೆ ಕೇಳದ ಹಾಗೆ ಉಚ್ಚರಿಸಿದಲ್ಲಿಗೆ ಮಾಹೇಶ್ವರಸ್ಥಲ ಸಂಬಂಧವಾದುದು

## ಪ್ರಸಾದಿಸ್ಥಲ

ಆ ಮೇಲೆ ಬಲಹಸ್ತದ ತರ್ಜನಿ, ಅಂಗುಲಿ, ಮಧ್ಯಮಾಂಗುಲಿ ಸಂದಿಗಳಲ್ಲಿ ಒಂದು ಪುಷ್ಪವ ಹಿಡಿದು ಕರಡಿಗೆಯು ಅರಗಿನಲ್ಲಿ ಎಡ ಹಸ್ತವ ಅಡ್ಡ ಇಟ್ಟು ಮೇಲೆ ಹೇಳಿದ ಪ್ರಕಾರ ಲಿಂಗವನ್ನು ಬಿಜಯಂಗೈಸಿ, ಎಡ ಹಸ್ತದಲ್ಲಿ ಮೂರ್ತವ ಮಾಡಿಸಿದಲ್ಲಿಗೆ ಪ್ರಸಾದಿ ಸ್ಥಲವೆನಿಸುವುದು

## ಪ್ರಾಣಲಿಂಗಿಸ್ಥಲ

ಆ ಮೇಲೆ ಲಿಂಗಕ್ಕೆ ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕ, ಪಂಚಾಮೃತ, ಸಪ್ತೋದಕಗಳಲ್ಲಿ ಅಭಿಷೇಕ ಎರೆದು, ಲಿಂಗದ ದ್ರವವ ತೆಗೆದು, ಲೋಭಾನದ ಹೊಗೆಯಿಂದ ಲಿಂಗವ ತರಿಸಿ, ವಿಭೂತಿಯನ್ನು ಅನಾಮಿಕ ಅಂಗುಲಿಯಿಂದ ಧರಿಸಿ, ಗಂಧ, ಅಕ್ಷತೆ, ಪುಷ್ಪ, ವಸ್ತ್ರ, ಯಜ್ಞೋಪವೀತ, ಉತ್ತರೀಯ, ಆಭರಣ ಮೊದಲಾದವುಗಳನ್ನು ಧರಿಸಿ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಅರ್ಚಿಸಿ, ಗಂಟೆ, ದರ್ಪಣ, ಚಾಮರ, ಬೀಸಣಿಕೆ, ಛತ್ರ ಉಪಾಸವಸ್ತ್ರ, ನಗಾರಿ, ಜಾಗಟೆ, ಕೈತಾಳ, ಸಮಾಳ, ಬುರುಗು, ಕಿನ್ನರಿ, ವೀಣೆ, ಚಿನ್ನಕಾಳಿ, ನಫೂರಿ, ಕರಣಿ, ಹೆಗ್ಗಾಳಿ, ಕೊಳಲು, ಕಂಚಿನ ಸಮಾಳ, ಭೇರಿ, ನರ್ತನ ಇವು ಮೊದಲಾದ ಉಪಚಾರಗಳಿಂದ ಪೂಜಿಸಿದಲ್ಲಿಗೆ ಪ್ರಾಣಲಿಂಗಿ ಸ್ಥಲ ಸಂಬಂಧವಾಗುವುದು

## ಶರಣಸ್ಥಲ

ಆ ಮೇಲೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ, ಗಾಯತ್ರೀ ವೇದಗಳ ಸ್ತೋತ್ರ, ಶಾಸ್ತ್ರ, ಸೂತ್ರ, ಪುರಾಣ, ಸ್ತೋತ್ರ, ಆದ್ಯರು, ವೇದ್ಯರು, ಸಾಧ್ಯರು, ಪುಷ್ಪದಂತ ಮಲಯರಾಜ ಮಲುಹಣ, ಹಲಾಯುಧ, ಅನಾಮಯ ಮೊದಲಾದ ಕವಿಗಳು ಶಿವನ ಕೀರ್ತಿ ಮಾಡಿದ ಸ್ತೋತ್ರಂಗಳನ್ನು ಮಾಡಿ, ಶಿರಸ ಪ್ರದಕ್ಷಿಣವ ಮಾಡಿ, ಪುಷ್ಪಾಂಜಲಿಯ ಮಾಡಿ, ನಮಸ್ಕರಿಸಿ, ನಿರ್ಮಾಲ್ಯ ವಿಸರ್ಜನಂಗೈದಲ್ಲಿಗೆ ಶರಣಸ್ಥಲ ಸಂಬಂಧವಾದುದು

## ಐಕ್ಯಸ್ಥಲ

ಆ ಮೇಲೆ ಜಂಗಮ ಮೂರ್ತಿಗಳು, ಆ ವೇಳೆಗೆ ದಯಮಾಡಿದರೆ, ದಶವಿಧ ಪಾದೋದಕದಲ್ಲಿ ಹೇಳಿದ ಪ್ರಕಾರ ಮಹತ್ವಾದವನ್ನು ಪಡೆದುಕೊಂಡು, ಅರ್ಪಿತವ ಮಾಡುವುದು ಆ ವೇಳೆಗೆ ಮೂರ್ತಿಗಳು ಆರೂ ಬರದಿದ್ದರೆ, ಮಾಡಿದ ಪದಾರ್ಥವನ್ನು ಎಡೆ ಮಾಡಿಸಿಕೊಂಡು, ಹಸ್ತಕ್ಕೆ ಭಸ್ಮ ಲೇಪನವ ಮಾಡಿಕೊಂಡು, ಗುರುವು ಅಪ್ಪಣೆಯ ದಯಪಾಲಿಸಿದ ಮಂತ್ರವನ್ನು ಐದು ವೇಳೆ ಉಚ್ಚರಿಸಿ, ಆ ಪದಾರ್ಥಕ್ಕೆ ಸಂಪ್ರೋಕ್ಷಿಸಿ, ಓಗರ ರೂಪವಳಿದು, ಪ್ರಸಾದ ಸ್ವರೂಪವನ್ನು ಮಾಡಿ, ಲಿಂಗಕ್ಕೆ ಮೂರು ವೇಳೆ ಚತುರಂಗುಲಿ ಪ್ರಮಾಣದಲ್ಲಿ, ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಮಂತ್ರ ಉಚ್ಚರಿಸಿ, ಅರ್ಪಿಸಿ, ಆ ಮೇಲೆ ಭೋಜ್ಯ ಭೋಜ್ಯಕ್ಕೆ ಮಂತ್ರ ಉಚ್ಚರಿಸುತ್ತ ಲಿಂಗ ನಿರೀಕ್ಷಣೆಯಿಂದ ಅರ್ಪಿತವ ಮಾಡುವುದು. ಆ ವೇಳೆಯಲ್ಲಿ ಬಹು ಮಾತುಗಳನಾಡಲಿಕ್ಕಾಗದು. ಪರುಷಶಬ್ದ, ಹಿಂಸಾಶಬ್ದ ಅರುಚಿ, ಅಮಂಗಳ ಶಬ್ದ, ವ್ಯಾಪಾರಶಬ್ದ ವಿಷಯ ಶಬ್ದ, ಹಾಸ್ಯ ಪ್ರಸಂಗದ ಶಬ್ದ, ನ್ಯಾಯದ ಶಬ್ದ ದುಃಖದ ಶಬ್ದ, ಅಗ್ನಿ ಪ್ರವೇಶದ ಶಬ್ದ, ಇವು ಮೊದಲಾದ ಕನಿಷ್ಟ ಶಬ್ದವ ಕಾದೆ ಲಿಂಗಾರ್ಪಿತವ ಮಾಡಿ, ಒಟ್ಟಿಲ ಖಂಡಿತ ಮಾಡಿ, ಹಸ್ತ ಪ್ರಕ್ಷಾಲನ ಮಾಡಿಸಿದ ಬಳಿಕ ಕರಡಿಗೆಯಲ್ಲಿರುವ ಇಷ್ಟಲಿಂಗವನ್ನು ಮೇಲೆ ಹೇಳಿದ ಪ್ರಕಾರದಲ್ಲಿ ಬಿಜಯಂಗೈಸಿ ಎಡ ಹಸ್ತದಲ್ಲಿ ಮೂರ್ತವ ಮಾಡಿಸಿ, ಅಭಿಷೇಕವ ಮಾಡಿ, ವಿಭೂತಿ ಪತ್ರ ಪುಷ್ಪವ ಧರಿಸಿ, ಲೋಭಾನವ ಅರ್ಪಿಸಿ, ಹಸ್ತ ಜಪವ ಮಾಡಿ, ನಮಸ್ಕರಿಸಿ ಕರಡಿಗೆಯ ಒಳಗೆ ಮೂರ್ತವ ಮಾಡುವಲ್ಲಿಗೆ ಐಕ್ಯಸ್ಥಲ ಸಂಬಂಧವಾಗಿರುವುದು ಎಂದು ಕಲ್ಯಾಣ ಪಟ್ಟಣದಲ್ಲಿ ಚನ್ನಬಸವೇಶ್ವರ ಸ್ವಾಮಿಗಳು ಬಸವಣ್ಣ ಮೊದಲಾದ ಪ್ರಮಥ ಗಣಂಗಳಿಗೆ ಅಪ್ಪಣೆಯ ದಯಪಾಲಿಸಿದ ಆಚರಣೆಯ ವಚನ ಸಮಾಪ್ತ

---

## ಲಿಂಗ ಪೂಜೆಯ ವಿಧಾನಗಳ ಸಮಾಲೋಚನೆ

ವೀರಶೈವರಲ್ಲಿ ಲಿಂಗಪೂಜೆಯ ಉದ್ದೇಶವು ಅತ್ಯವಶ್ಯಕವೇ ಇರುತ್ತದೆ ಎಂದರೆ ಅದರಿಂದ ತನ್ನನ್ನು ತಾನು ತಿಳಿದುಕೊಂಡು ಆಚರಿಸುವುದೇ ಇರುತ್ತದೆ ಈ ಉದ್ದೇಶಕ್ಕೆ ಸಹಾಯಕವಾಗಿರುವ ವಿಧಾನಗಳನ್ನು

ಮಾಡುವುದೇ ಲಿಂಗಪೂಜೆಯು. ಪ್ರತಿಯೊಬ್ಬ ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳಿರುತ್ತವೆ ಅವು ಒಂದ ಕ್ಕೊಂದು ಪರಸ್ಪರಾವಲಂಬಿಗಳಾಗಿವೆ ಒಂದು ಶರೀರದ ಕಾರ್ಯವು ಕೆಟ್ಟರೆ, ಮತ್ತೊಂದು ಸರಿಯಾಗಿ ವ್ಯವಹರಿಸಲಾರದು ಆದುದರಿಂದ ಈ ಮೂರೂ ಶರೀರಗಳಲ್ಲಿ ಲಿಂಗ ಚೈತನ್ಯವನ್ನುಂಟು ಮಾಡದ ಹೊರತು ಪರ ಮಾತ್ಮನನ್ನು ಅರಿಯಲು ಸಾಧ್ಯವಲ್ಲ ಸ್ಥೂಲ ಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಇಷ್ಟಲಿಂಗವೆಂತಲೂ, ಸೂಕ್ಷ್ಮಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಪ್ರಾಣಲಿಂಗವೆಂತಲೂ, ಕಾರಣ ಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಭಾವಲಿಂಗವೆಂತಲೂ ವಚನಕಾರರು ಹೆಸರುಗಳನ್ನು ಕೊಟ್ಟಿದ್ದಾರೆ ಈ ದೃಷ್ಟಿಯಿಂದ ಪೂಜಾ ಅರ್ಚನಾದಿಗಳನ್ನು ದಿನಾಲು ಜರುಗಿಸುವದೇ ವೀರ ಶೈವನ ಕರ್ತವ್ಯವಾಗಿದೆ ಕೇವಲ ಅಷ್ಟವಿಧಾರ್ಚನೆ ಷೋಡಶೋಪಚಾರ ಗಳನ್ನು ಲಿಂಗಪೂಜೆಯ ನಿಜವಾದ ಮರ್ಮವನ್ನು ಅರಿಯದೆ ಮಾಡಿ ದ್ದಾದರೆ, ಏನೂ ಪ್ರಯೋಜನವಾಗಲಾರದು ಇದನ್ನು ಕೊನೆಗಾ ಣಿಸಲು ವಚನಕಾರರು ಈ ಮೂರು ಲಿಂಗಗಳಲ್ಲಿ ಪ್ರತಿಯೊಂದರಲ್ಲಿ ಎರಡೆರಡು ಭಾಗಮಾಡಿ, ಒಟ್ಟಿಗೆ ಆರು ಲಿಂಗಗಳನ್ನು ಕಲ್ಪಿಸಿದ್ದಾರ ಈ ಆರು ಲಿಂಗಗಳು ಯಾವವೆಂದರೆ--

ಇಷ್ಟಲಿಂಗದಲ್ಲಿ ಆಚಾರಲಿಂಗ ಗುರುಲಿಂಗವೆಂತಲೂ, ಪ್ರಾಣಲಿಂ ಗದಲ್ಲಿ ಶಿವಲಿಂಗ ಚರಲಿಂಗವೆಂತಲೂ, ಭಾವಲಿಂಗದಲ್ಲಿ ಪ್ರಸಾದಲಿಂಗ ಮಹಾಲಿಂಗವೆಂತಲೂ, ಆರು ವಿಭಾಗಗಳು ಮಾಡಲ್ಪಟ್ಟಿವೆ ಲಿಂಗ ಪೂಜೆಯಲ್ಲಿ ಈ ಆರು ಲಿಂಗಗಳ ಅರ್ಥವನ್ನು ತಿಳಿದು ಆಚರಿಸುವುದು ಅವಶ್ಯವಿದೆ ಈ ಆರು ಲಿಂಗಗಳ ಅರ್ಥವು ವಚನಕಾರರಿಂದ ಕೆಳಗೆ ಬರೆದ ಮೇರೆಗೆ ವಿವರಿಸಲ್ಪಟ್ಟಿರುತ್ತವ

'ಪಂಚಾಚಾರ ಸ್ವರೂಪವಾದ ಆಚಾರಲಿಂಗ, ಮಂತ್ರಮೂರ್ತಿ ಯಾದ ಗುರುಲಿಂಗ, ಪರಮ ಪ್ರಕಾಶ ಸ್ವರೂಪವಾದ ಶಿವಲಿಂಗ, ಯಜ ನಸ್ವರೂಪವಾದ ಚರಲಿಂಗ, ಈಶನ ಸ್ವರೂಪವಾದ ಪ್ರಸಾದಲಿಂಗ, ಬೋಧಾಸ್ವರೂಪವಾದ ಮಹಾಲಿಂಗವಾಗಿ ನೆಲೆಗೊಂಡಿಪ್ಪುದು'

ಮೇಲ್ಕಂಡ ಉಕ್ತಿಯಲ್ಲಿ ಪೂಜಾ ದೃಷ್ಟಿಯಿಂದ ಈ ಆರು ಲಿಂಗ ಗಳ ಸ್ವರೂಪವು ಹೇಳಲ್ಪಟ್ಟಿವೆ ಇವನ್ನು ತಿಳಿದುಕೊಂಡು ಈ ಆರು

ಲಿಂಗಗಳನ್ನು ತನ್ನಲ್ಲಿ ಪ್ರಜ್ವಲಿಸುವುದೇ ಈ ಷಟ್ಸ್ಥಲಾತ್ಮಕವಾದ ಲಿಂಗಪೂಜೆ ಎಂದೆನಿಸಿಕೊಳ್ಳುತ್ತದೆ

## ಆಚಾರಲಿಂಗ

ಆಚಾರಲಿಂಗವು ಪಂಚಾಚಾರ ಸ್ವರೂಪನೆಂದು ಇಲ್ಲಿ ಹೇಳಲ್ಪಟ್ಟಿದೆ ಸದಾಚಾರ, ಭೃತ್ಯಾಚಾರ, ಶಿವಾಚಾರ, ನಿಯತಾಚಾರ, ಗಣಾಚಾರ ಇವು ಪಂಚಾಚಾರಗಳು ಈ ಪಂಚಾಚಾರಗಳನ್ನು ದೃಢಪಡಿಸುವುದರಿಂದ ಆಚಾರ ಲಿಂಗವು ಭಕ್ತನಲ್ಲಿ ನೆಲೆಗೊಳ್ಳುತ್ತದೆ ಲಿಂಗಪೂಜೆಯನ್ನು ಮಾಡುವವನು ಶುದ್ಧ ನಡತೆಯುಳ್ಳವನಾಗಿರುವದು ಅತ್ಯಂತ ಅವಶ್ಯವಿರುತ್ತದೆಂದು ತೋರಿಸಲು ಆಚಾರಲಿಂಗದ ವಿವರಣೆಯನ್ನು ವಚನಕಾರರು ಹೀಗೆ ಮಾಡಿದ್ದಾರೆ ಆದರೆ ಪೂಜಾ ಕ್ರಿಯೆಗಳಲ್ಲಿ ಈ ಆಚಾರ ಲಿಂಗದ ಸ್ಥಾನವನ್ನು ವಚನಕಾರರು ಎಲ್ಲಿ ಇಟ್ಟಿರುವರೆಂಬದನ್ನು ತಿಳಿಯುವದು ಅವಶ್ಯವಿದೆ ಲಿಂಗ ಪೂಜೆಯ ಹಿಂದಿನ ೮೫, ೮೭ ಈ ವಚನಗಳಿಂದ ಕಂಡುಬರುವದೇನೆಂದರೆ ಆಚಾರಲಿಂಗದ ಪೂಜೆಯನ್ನು ಪೂಜೆಯ ಪೂರ್ವದಲ್ಲಿ ದೇಹ ಶುದ್ಧಿಗೋಸ್ಕರ ಮಾಡುವ ಕ್ರಿಯೆಗಳಲ್ಲಿ ಎಂದರೆ ಸ್ಥಲಸಮ್ಮಾರ್ಜನೆ, ಸ್ನಾನ, ಪದಾರ್ಥ ಶುದ್ಧಿ, ವಿಭೂತಿ ರುದ್ರಾಕ್ಷಿ ಧಾರಣ, ಪ್ರಣವ ಸಂಬಂಧ, ನ್ಯಾಸ ಇಂಥ ಕ್ರಮಗಳಲ್ಲಿ ಇಟ್ಟಿರುವರೆಂದು ತಿಳಿದುಬರುತ್ತದೆ ಆದುದರಿಂದ ಲಿಂಗಪೂಜಾ ಕಾಲದಲ್ಲಿ ಈ ಕಾರ್ಯಗಳನ್ನು ಮಾಡುವುದರಲ್ಲಿಯೇ ಆಚಾರಲಿಂಗದ ಪ್ರಜ್ವಲನೆಯು ಇರುತ್ತದೆ ಈ ರೀತಿಯಾಗಿ ವರ್ತಿಸುವುದರಿಂದ ಮನುಷ್ಯನ ದೇಹ ಮತ್ತು ಮನಸ್ಸು ಒಂದು ತರದ ನಿರ್ಮಲತೆಯನ್ನು ಹೊಂದಿ ನಿತ್ಯದ ಕ್ರಿಯೆಗಳನ್ನು ಶುದ್ಧವಾದ ರೀತಿಯಿಂದ ಮಾಡಲು ಉತ್ಸಾಹಭರಿತನಾಗುತ್ತಾನೆ ಇದು ಆಚಾರಲಿಂಗದ ಸಾಧನೆಯು ಇದು ಭಕ್ತಸ್ಥಲವು

## ಗುರುಲಿಂಗ

ಗುರುಲಿಂಗವು ಮಂತ್ರಮೂರ್ತಿಯೆಂದು ಮೇಲ್ಕಂಡ ವಚನದಲ್ಲಿ ಹೇಳಿದೆ ಗುರುವು ದೀಕ್ಷೆಯ ಕಾಲದಲ್ಲಿ ಭಕ್ತನಿಗೆ ಮಂತ್ರೋಪದೇಶವನ್ನು ಮಾಡುತ್ತಾನೆ ಇದರ ಪ್ರಭಾವದಿಂದ ಆ ಶಿಷ್ಯನು ಲಿಂಗದ ಶ್ರೇಷ್ಠತರದ ಚೈತನ್ಯವನ್ನು ಒಳಕೊಳ್ಳುತ್ತಾನೆ ಹೀಗೆ ಈ ಮಂತ್ರವನ್ನು ಧ್ಯಾನಿ

ಸುವುದು ಭಕ್ತನ ಕರ್ತವ್ಯವು ಇದನ್ನು ಜಪಿಸುವುದರಿಂದ ಗುರುಲಿಂ
ಗವು ಪೂಜಕನಲ್ಲಿ ಪ್ರಜ್ವಲಿಸುತ್ತ ಹೋಗುತ್ತದೆ ಇದು ಲಿಂಗಪೂಜೆಯ
ಎರಡನೆಯ ಭಾಗವು ಮಹೇಶ್ವರ ಸ್ಥಲಕ್ಕೆ ಸಂಬಂಧಿಸಿದಂತಹದು

ಈ ಎರಡು ಕ್ರಿಯೆಗಳು ಮನುಷ್ಯನ ಸ್ಥೂಲ ಶರೀರಕ್ಕೆ ಸಂಬಂಧ
ಪಟ್ಟವಿರುತ್ತವೆ ಇದರಿಂದ ಅವನ ಬಹಿರಂಗ ಕ್ರಿಯೆಗಳು ಶುದ್ಧವಾಗುತ್ತ
ಹೋಗುತ್ತವೆ

## ಶಿವಲಿಂಗ.

ಶಿವಲಿಂಗವು ಪರಮ ಪ್ರಕಾಶ ಸ್ವರೂಪವೆಂದು ಮೇಲ್ಕಂಡ ವಚನ
ದಲ್ಲಿ ಹೇಳಿದೆ ಈ ಲಿಂಗವು ಮನಸ್ಸಿಗೆ ಸಂಬಂಧಪಟ್ಟದ್ದಿರುತ್ತದೆ ಇಷ್ಟ
ಲಿಂಗವನ್ನು ಭಕ್ತನು ಕರಸ್ಥಲದಲ್ಲಿಟ್ಟುಕೊಂಡು ಅದನ್ನು ಏಕಾಗ್ರಚಿತ್ತದಿಂದ
ಧ್ಯಾನಿಸುವುದರಿಂದ ಪ್ರಕಾಶಸ್ವರೂಪನಾದ ಈ ಶಿವಲಿಂಗವು ಭಕ್ತನಿಗೆ
ದೃಗ್ಗೋಚರವಾಗಹತ್ತುತ್ತದೆ ಈ ಕ್ರಿಯೆಯನ್ನು ಅನುಸರಿಸುವುದರಿಂದ
ಮನುಷ್ಯನು ತನ್ನ ಚಿತ್ತವನ್ನು ನಿಗ್ರಹಿಸಲು ಸಮರ್ಥನಾಗುತ್ತಾನೆ
ಇದು ಲಿಂಗಪೂಜೆಯ ಮೂರನೆಯ ಭಾಗವಿರುತ್ತದೆ ಇದು ಶಿವಲಿಂಗ
ಸಾಧನೆಯು ಇದು ಪ್ರಸಾದಿಸ್ಥಲವು

## ಚರಲಿಂಗ ಅಥವಾ ಜಂಗಮಲಿಂಗ

ಚರಲಿಂಗವು ಯಜನ ಸ್ವರೂಪನೆಂದು ಮೇಲ್ಕಂಡ ವಚನದಲ್ಲಿ
ಹೇಳಲ್ಪಟ್ಟಿದೆ ಎಂದರೆ ಅರ್ಚನೆ ಪೂಜೆ ಇವುಗಳಿಂದ ಸಾಧ್ಯನಾಗುವವನೆಂದು
ಇದರ ಭಾವವು ಅರ್ಚನ ಪೂಜನೆಯಿಂದ ಪ್ರಪಂಚದಲ್ಲಿ ವ್ಯಗ್ರವಾದ
ಮನುಷ್ಯನ ಮನಸ್ಸು ಪರಮಾತ್ಮನತ್ತ ಹೊರಳುವುದು ಇದು ಮನು
ಷ್ಯನ ಮನಸ್ಸಿನ ಚಂಚಲತೆಯನ್ನು ದೂರಮಾಡುವುದು ಆದ್ದರಿಂದ
ಇದು ಮನಶ್ಶುದ್ಧಿಗೆ ಕಾರಣವು ಈ ರೀತಿಯ ಕ್ರಿಯೆಗಳಿಂದ ಮನಸ್ಸಿ
ನಲ್ಲಿ ಮೊದಲು ನೆಲೆಗೊಂಡ ಶಿವಲಿಂಗವು ಮತ್ತಿಷ್ಟು ದೃಢತೆಯನ್ನು
ಹೊಂದುವದು ಹೀಗೆ ಪ್ರಸಾದಿ ಸ್ಥಲದಲ್ಲಿ ಪೂಜಿಸಿದ ಶಿವಲಿಂಗವ ಪ್ರಾಣ
ಲಿಂಗ ಸ್ಥಿತಿಯನ್ನು ಹೊಂದುವದು ಆದ್ದರಿಂದ ವಚನಕಾರರು ಈ
ಪೂಜಾ ಅರ್ಚನೆಗಳನ್ನು ಪ್ರಾಣಲಿಂಗಿ ಸ್ಥಲಕ್ಕೆ ಸೇರಿಸಿರುತ್ತಾರೆ

ಈ ಪ್ರಕಾರ ಶಿವಲಿಂಗ ಮತ್ತು ಚರಲಿಂಗಗಳನ್ನು ತನ್ನಲ್ಲಿ ಪ್ರಜ್ವಲ
ಗೊಳಿಸುವುದೇ ಪ್ರಾಣಲಿಂಗದ ಪೂಜೆಯು.

# ಲಿಂಗಪೂಜೆಯ ವಿಧಾನಗಳ ನಿಜಸ್ವರೂಪು.

## ಜಪ.

೬೭ ತಿಳಿಯದೆ ಜಪಿಸಿದ ಮಂತ್ರ ನಿಷ್ಫಲವಾದುದು ನೋಡಾ ಗುರುವೇ ಪ್ರಣವ ಪಲ್ಲವಗಳರಿದು ಜಪಿಸುವುದದು ಫಲ ನೋಡಾ ಗುರುವೇ ಇದರಂದವ ತೋರಿದ ಎನ್ನಗುರು ಚನ್ನಬಸವ ನೋಡಾ ಗುರುವೇ ಕಪಿಲಸಿದ್ಧ ಮಲ್ಲಿಕಾರ್ಜುನ ಗುರುವೇ

೬೮ ಭಕ್ತನಾದರೇನು? ಮಹೇಶನಾದರೇನು? ಮೊದಲಲ್ಲಿ ಭಕ್ತಿಯ ಜಪವೇ ಜಪ ನೋಡಾ! ಭಕ್ತನಾದರೇನು? ಮಹೇಶನಾದ ರೇನು? ಕಡಯಲ್ಲಿ ಶಿವಜಪವೇ ಜಪ ನೋಡಾ! ಜಪರೀತಿ ಜಪಲಕ್ಷಣ ಜಪಪ್ರಣವುಗಳನರಿಯದ ತಾಪತ್ರಯಕೊಳಗಾಗಿ ಭವಕ್ಕೀಡಾದರು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೬೯ ಜಪಿಸಬೇಕು, ಜಪಿಸಬೇಕು ದೇಹ ನಾನಲ್ಲೆಂಬ ಜಪಿಸಬೇಕು, ಜಪಿಸಬೇಕು ಜೀವಾತ್ಮ ಸಾಕ್ಷಿ ಅಲ್ಲೆಂಬ ಜಪಿಸಬೇಕು, ಜಪಿಸಬೇಕು ನಾ ಚನ್ನಬಸವನೆಂಬ ಜಪಿಸಬೇಕು, ಜಪಿಸಬೇಕು ಕಪಿಲಸಿದ್ಧ ಮಲ್ಲಿಕಾರ್ಜುನ ಪಾದಪದ್ಮಭ್ರಮರನೆಂಬ

೭೦ ಜಪಿಸಬಾರದು, ಜಪಿಸಬಾರದು ಕುಮಂತ್ರಂಗಳ ಜಪಿಸಬಾರದು, ಜಪಿಸಬಾರದು ಮೋಹನದ ಮಂತ್ರಂಗಳ ಜಪಿಸಬಾರದು ಮಾರಣ ಮಂತ್ರಂಗಳ ಜಪಿಸಬೇಕು, ಜಪಿಸಬೇಕು ಮಲ್ಲಿಕಾರ್ಜುನಾಯ ನಮಃ ಎಂದು ಕೇಳಾ ಕೇದಾರ ಗುರುದೇವಾ

## ನಿಯಮಗಳು.

೭೧ ದೇವರಿಗೆ ಕೃಷಿಯ ನೇಮಕ ಮಾಡುವರಲ್ಲದೆ ದೇವರ ಪ್ರಥಮ ಮುಖ ಭೂಮಿ ಎಂದರಿಯರೀ ಲೋಕ ದೇವರಿಗೆ ನದಿಯ ಜಲವೆರೆಯ ಬೇಕೆಂಬ ನೇಮವ ಮಾಡುವರಲ್ಲದೆ ದೇವರ ದ್ವಿತೀಯ ಮುಖ ಜಲವೆಂದರಿಯರೀ ಲೋಕ ದೇವರಿಗೆ ದೀವಿಗಯ ನೇಮಕ ಮಾಡುವರಲ್ಲದೆ ದೇವರ ತೃತೀಯ ಮುಖ ಜ್ಯೋತಿ ಎಂಬುದರಿಯರೀ ಲೋಕ ದೇವರಿಗೆ ತಾಲವೃಂತವ ನೇಮಕ ಮಾಡುವರಲ್ಲದೆ ದೇವರ ಚತುರ್ಮುಖವೇ ವಾಯುವೆಂದರಿಯರೀ ಲೋಕ ದೇವರಿಗೆ ಅಗ್ರಯ ಮಾಡಬೇಕೆಂಬ

ಸೇವಕವ ಮಾಡುವರಲ್ಲದೆ ದೇವರ ಪಂಚಮುಖವೇ ಆಕಾಶವೆಂಬುವರಿ
ಯರೀ ಲೋಕ ದೇವರಿಗೆ ಪ್ರಾಣಪ್ರತಿಷ್ಠೆಯ ಮಂತ್ರ ಹೇಳುವರಲ್ಲದೆ,
ದೇವರ ಆಸನೆಯ ಮುಖ ಆತ್ಮಪ್ರಾಣವೆಂಬುದರಿಯರೀ ಲೋಕ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ

೯೨ ಪತ್ರೆಯ ಸೇವಿಪವರು ಒಂದು ಕೋಟಿ ಲಿಂಗಾರ್ಚನೆಯ
ಸೇವಿಪವರು ಒಂದು ಕೋಟಿ ಜಂಗಮ ತೃಪ್ತಿಯವರು ಒಂದು ಕೋಟಿ
ತನ್ನ ತಾ ತಿಳಿಯುವ ಸೇವಿಪವರು ಒಬ್ಬರೂ ಇಲ್ಲವಯ್ಯಾ ಕಪಿಲಸಿದ್ಧ
ಮಲ್ಲಿಕಾರ್ಜುನಾ

೯೩ ಪತ್ರೆಯ ಸೇವಿಪವರು ನೋಡಯ್ಯ ಪಶು ಆಡುಗಳು ಲಿಂಗಾ
ರ್ಚನೆಯ ಸೇವಿಪವರು ನೋಡಯ್ಯಾ ಚತುರ್ವರ್ಣದವರು ಜಂಗಮ
ಸಂತೃಪ್ತಿಯವರು ನೋಡಯ್ಯಾ ಶೂದ್ರರು ತನ್ನ ತಾ ತಿಳಿವ ಸೇವಿಪವರು
ನೋಡಯ್ಯಾ ಶಿರಸ್ಸಾಗ್ರಗಣ್ಯರು ಕಪಿಲಸಿದ್ಧಮಲ್ಲಿಕಾರ್ಜುನಾ

## ಆಸನಗಳು

೯೪ ಇನ್ನು ಆಸನಭೇದವೆಂತೆಂದೊಡೆ ಒಂದು ಹಿಮ್ಮಡದಿಂದ
ಯೋನಿಸ್ಥಾನವನೊತ್ತಿ, ಮತ್ತೊಂದು ಹಿಮ್ಮಡದಿಂ ಮೇಢ್ರದ ಮೇಲಿರಿಸಿ
ಏಕಚಿತ್ತನಾಗಿ ಋಜುಕಾಯನಾಗಿ ಭ್ರೂಮಧ್ಯದಲ್ಲಿ ದೃಷ್ಟಿಯುಳ್ಳಾತನಾ
ಗಿರುವುದೇ ಸಿದ್ಧಾಸನವೆನಿಸುತ್ತ

ಎರಡು ತೊಡೆಗಳ ಮೇಲೆ ಎರಡು ಪಾದಂಗಳಂ ಮೇಲು ಮೇಲು
ಮುಖವಾಗಿರಿಸಿ, ಎರಡು ಕಂಗಳ ನಡುವೆ ಮೇಲು ಮುಖವಾಗಿರಿಸಿ
ರಾಜದಂತಗಳ ನಡುವೆ ರಸನಾಗ್ರವನಿಟ್ಟು ನಾಸಾಗ್ರದೃಷ್ಟಿಯಿಂದಿ
ರುವುದೇ ಪದ್ಮಾಸನವೆನಿಸುವುದು

ಎರಡು ಕಿರುದೊಡೆಗಳ ಸಂದಿಗಳಲ್ಲಿ ಎರಡು ಪಾದಗಳನಿರಿಸಿ
ಋಜುಕಾಯನಾಗಿರುವುದೇ ಸ್ವಸ್ತಿಕಾಸನವೆನಿಸುವುದು

ಮೇಢ್ರದ ಮೇಲೆ ಎಡದ ಹಿಮ್ಮಡವನಿರಿಸಿ ಅದರಮೇಲೆ ಬಲಹಿಮ್ಮ
ಡವನಿರಿಸಿ ಋಜುಕಾಯನಾಗಿರುವುದೇ ಮುಕ್ತಾಸನವೆನಿಸುವುದು

ಎಡದ ಹಿಮ್ಮಡವಂ ಬಲದ ಹಿಮ್ಮಡದ ಉದರದೊಳಿರಿಸಿ ಜಾನುಗ
ಳೆರಡನ್ನು ಗೋಮುಖಾಕಾರವಾಗಿ ಮಾಳ್ಪುದೇ ಗೋಮುಖಾಸನವೆನಿ
ಸುವುದು

ಸಕಲಾಸನಂಗಳಿಂದ ಯೋಗವುಂ ಸಾಧಿಸುವುದೇ ಆಸನಯೋಗ ನೋಡಾ ಅಖಂಡೇಶ್ವರಾ.

## ಆಹ್ವಾನ ವಿಸರ್ಜನೆಗಳಿಲ್ಲ

೯೫ ಆಹ್ವಾನವಿಲ್ಲದ ಪ್ರಾಣಲಿಂಗವಾಗಿ ವಿಸರ್ಜನವಿಲ್ಲದ ಲಿಂಗ ನೆಲೆಗೊಂಡಿಪ್ಪುದಾಗಿ, ಇದು ಕಾರಣ ಆಹ್ವಾನ ವಿಸರ್ಜನವಿಲ್ಲದ ಶರಣರ ಪರಿ ಬೇರೆ ಅಂಗ ಸಂಗವೇ ಲಿಂಗ, ಲಿಂಗ ಸಂಗವೇ ಮನ ಕೂಡಲ ಚನ್ನ ಸಂಗನ ಶರಣನು ಸುಯಿಧಾನಿ

೯೬. ಆಹ್ವಾನಿಸುವಲ್ಲಿ ಪ್ರಾಣಲಿಂಗವಿಲ್ಲ ವಿಸರ್ಜಿಸುವಲ್ಲಿ ಲಿಂಗವಂತನೆಂತೆಂಬ? ಆಹ್ವಾನ ವಿಸರ್ಜನವಿಲ್ಲದ ಪರಿ ಬೇರೆ ಲಿಂಗ ಭೋಗೋಪಭೋಗವಿಲ್ಲದ ಅನರ್ಪಿತವ ಭೋಗಿಸುವನಲ್ಲ ಆವಾಗಲೂ ಪ್ರಾಣಲಿಂಗದ ಸಂಗದಲ್ಲಿಪ್ಪನು ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ನಮ್ಮ ಶರಣಂಗೆ ನಮೋ ನಮೋ ಎಂಬೆನು

೯೭ ಜ್ಞಾನವೇ ಪ್ರಸಾದಕಾಯ ಜ್ಞೇಯವೇ ಚಿನ್ಮಯ ಲಿಂಗ ಜ್ಞಾನ ಜ್ಞೇಯ ಸಂಪುಟದಿಂದ ಶರಣನೆನಿಸಿಕೊಂಡು ಆ ಜಂಗಮದ ಅಂತರಂಗದಲ್ಲಿ ನೀನೇ, ಬಹಿರಂಗದಲ್ಲಿ ನೀನೇ ಎಂತು ನೋಡುವರೆ ಶರಣನ ಕಣ್ಣಮುಂದಲ್ಲಿ ನೀನೇ ಶಿವಜ್ಞಾನಸಂಪನ್ನನಾದ ಶರಣಂಗೆ ಆಹ್ವಾನ ವಿಸರ್ಜನವೆಲ್ಲಿಯದೋ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

## ಲಿಂಗಪೂಜೆಯಲ್ಲಿ ಗುರುಪೂಜೆ, ಲಿಂಗಪೂಜೆ, ಜಂಗಮಪೂಜೆ

೯೮ ಮಾಡುವ ಸದಾಚಾರಕ್ಕೆ ಮೊದಲನೆಯ ಲಿಂಗಪೂಜೆ ಗುರುಪೂಜೆ ಮಾಡುವ ಸದಾಚಾರಕ್ಕೆ ಎರಡನೆಯ ಲಿಂಗಪೂಜೆಯೇ ಲಿಂಗಪೂಜೆ ಮಾಡುವ ಸದಾಚಾರಕ್ಕೆ ಮೂರನೆಯ ಪೂಜೆಯೇ ಜಂಗಮಪೂಜೆ ಮಾಡುವ ಸದಾಚಾರಕ್ಕೆ ಮೂರು ಪೂಜೆ ಈ ಪೂಜೆ ಅನಂತ ಜನ್ಮದುರಿತಧ್ವಂಸ ನೋಡಾ ಕೂಡಲಚನ್ನಸಂಗಮದೇವ ಸಾಕ್ಷಿಯಾಗಿ

## ಲಿಂಗಪೂಜೆಯಲ್ಲಿ ಸಮರಸಭಾವ.

೯೯ ತಾನೇ ಗುರುವಾಗಿ ಭಕ್ತಿಯ ಮಾಡುತ್ತಿಪ್ಪನು ತಾನೇ ಲಿಂಗವಾಗಿ ಲಿಂಗಪೂಜೆಯ ಮಾಡುತ್ತಿಪ್ಪನು ತಾನೇ ಜಂಗಮವಾಗಿ ಜಂಗಮಪೂಜೆಯ ಮಾಡುತ್ತಿಪ್ಪನು ತಾನೇ ಪಾದೋದಕ ಪ್ರಸಾದವಾಗಿ ಪಾದೋದಕ ಪ್ರಸಾದ ಸೇವನೆಯ ಮಾಡುತ್ತಿಪ್ಪನು ತಾನೇ ವಿಭೂತಿ

ಸಕಲಾಸನಂಗಳಿಂದ ಯೋಗವುಂ ಸಾಧಿಸುವುದೇ ಆಸನಯೋಗ ನೋಡಾ ಅಖಂಡೇಶ್ವರಾ.

## ಆಹ್ವಾನ ವಿಸರ್ಜನೆಗಳಿಲ್ಲ

೯೫ ಆಹ್ವಾನವಿಲ್ಲದ ಪ್ರಾಣಲಿಂಗವಾಗಿ ವಿಸರ್ಜನವಿಲ್ಲದ ಲಿಂಗ ನೆಲೆಗೊಂಡಿಪ್ಪುದಾಗಿ, ಇದು ಕಾರಣ ಆಹ್ವಾನ ವಿಸರ್ಜನವಿಲ್ಲದ ಶರಣರ ಪರಿ ಬೇರೆ ಅಂಗ ಸಂಗವೇ ಲಿಂಗ, ಲಿಂಗ ಸಂಗವೇ ಮನ ಕೂಡಲ ಚೆನ್ನ ಸಂಗನ ಶರಣನು ಸ್ವಯಂಭುವಾನಿ

೯೬. ಆಹ್ವಾನಿಸುವಲ್ಲಿ ಪ್ರಾಣಲಿಂಗವಿಲ್ಲ ವಿಸರ್ಜಿಸುವಲ್ಲಿ ಲಿಂಗವಂತನೆಂತೆಂಬ? ಆಹ್ವಾನ ವಿಸರ್ಜನವಿಲ್ಲದ ಪರಿ ಬೇರೆ ಲಿಂಗ ಭೋಗೋಪಭೋಗವಿಲ್ಲದ ಅನರ್ಪಿತವ ಭೋಗಿಸುವನಲ್ಲ ಆವಾಗಲೂ ಪ್ರಾಣಲಿಂಗದ ಸಂಗದಲ್ಲಿಪ್ಪನು ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ನಮ್ಮ ಶರಣಂಗೆ ನಮೋ ನಮೋ ಎಂಬೆನು

೯೭ ಜ್ಞಾನವೇ ಪ್ರಸಾದಕಾಯ ಜ್ಞೇಯವೇ ಚಿನ್ಮಯ ಲಿಂಗ ಜ್ಞಾನ ಜ್ಞೇಯ ಸಂಪುಟದಿಂದ ಶರಣನೆನಿಸಿಕೊಂಡು ಆ ಜಂಗಮದ ಅಂತರಂಗದಲ್ಲಿ ನೀನೇ, ಬಹಿರಂಗದಲ್ಲಿ ನೀನೇ ಎಂತು ನಾ ಪರಿ ಶರಣನ ಕಣ್ಣಾಮರೆಯಲ್ಲಿ ನೀನೇ ಶಿವಜ್ಞಾನಸಂಪನ್ನನಾದ ಶರಣಂಗ ಆಹ್ವಾನ ವಿಸರ್ಜನವೆಲ್ಲಿಯದೋ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ?

## ಲಿಂಗಪೂಜೆಯಲ್ಲಿ ಗುರುಪೂಜೆ, ಲಿಂಗಪೂಜೆ, ಜಂಗಮಪೂಜೆ

೯೮ ಮಾಡುವ ಸದಾಚಾರಕ್ಕೆ ಮೊದಲನೆಯ ಲಿಂಗಪೂಜೆ ಗುರು ಪೂಜೆ ಮಾಡುವ ಸದಾಚಾರಕ್ಕೆ ಎರಡನೆಯ ಲಿಂಗಪೂಜೆಯೇ ಲಿಂಗ ಪೂಜೆ ಮಾಡುವ ಸದಾಚಾರಕ್ಕೆ ಮೂರನೆಯ ಪೂಜೆಯೇ ಜಂಗಮ ಪೂಜೆ ಮಾಡುವ ಸದಾಚಾರಕ್ಕೆ ಮೂರು ಪೂಜೆ ಈ ಪೂಜೆ ಅನಂತ ಜನ್ಮ ದುರಿತಧ್ವಂಸ ನೋಡಾ ಕೂಡಲಚನ್ನಸಂಗಮದೇವ ಸಾಕ್ಷಿಯಾಗಿ

## ಲಿಂಗಪೂಜೆಯಲ್ಲಿ ಸಮರಸಭಾವ.

೯೯ ತಾನೇ ಗುರುವಾಗಿ ಭಕ್ತಿಯ ಮಾಡುತ್ತಿಪ್ಪನು ತಾನೇ ಲಿಂಗವಾಗಿ ಲಿಂಗಪೂಜೆಯ ಮಾಡುತ್ತಿಪ್ಪನು ತಾನೇ ಜಂಗಮವಾಗಿ ಜಂಗಮಪೂಜೆಯ ಮಾಡುತ್ತಿಪ್ಪನು ತಾನೇ ಪಾದೋದಕ ಪ್ರಸಾದವಾಗಿ ಪಾದೋದಕ ಪ್ರಸಾದ ಸೇವನೆಯ ಮಾಡುತ್ತಿಪ್ಪನು ತಾನೇ ವಿಭೂತಿ

೧೦೪ ಕಂದದ ಹೂವನೆ ಕೊಯ್ದು ನಂದದಾರುತಿಯು ಬೆಳಗಿ ಅಂದವಳಿಯದೆ ಬಿಂದು ತುಳುಕದೆ ಸಂದಿ ಮುಂದುಗೆಡದ ಮುನ್ನವೆ ಕಂದದ ಹೂವಿನ ಪೂಜೆಯು ಲಿಂಗ ಮಧ್ಯದಿ ತಿಳಿದು ನೋಡಿ ಮೇಲು ಗಿರಿಯು ಮೇಲಿಹ ಆಕಳದ ಕ್ಷೀರದಲ್ಲಿ ಅಡಿಗೆಯನೆ ಮಾಡಿ ನಮ್ಮ ಕೂಡಲ ಚನ್ನ ಸಂಗಯ್ಯನೆಂಬ ಲಿಂಗಕ್ಕೆ ಆರೋಗಣೆಯನೆಸಗಿಹನು.

೧೦೫ ಅಧ್ಯಾತ್ಮ ಅಧ್ಯಾತ್ಮವೆಂಬಿರಿ ಅಧ್ಯಾತ್ಮವಾರಿಗೆ? ಶ್ರೀ ಗುರು ಸ್ವಾಮಿ ಬಹಳವಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ ಕರಸ್ಥಲದಲ್ಲಿ ಕೊಟ್ಟ ಬಳಿಕ ಬೇರೆ ಯೋಗವುಂಟೇ? ತನ್ನ ಹಸ್ತವ ಮಸ್ತಕದಲ್ಲಿಟ್ಟು ವಾಯು ಪ್ರಾಣಿವಾಗಿದ್ದುದ ಕೂಂದು ಲಿಂಗಪ್ರಾಣಿಯ ಮಾಡಿದ ಬಳಿಕ ಅಕ್ಷಿಗಳ ರಲ್ಲಿ ಮುಕ್ತನ ಮಾಡಿದ ಬಳಿಕ ಮರಳಿ ಯೋಗವುಂಟೇ, ಶಿವಯೋಗವ ಲ್ಲದೆ? ಇಂತಪ್ಪವನತಿಗಳೆದು ಶುದ್ಧ ಶಿವಯೋಗವ ಮಾಡಿದಾತ ಚೆನ್ನಬ ಸವಣ್ಣ. ಮಹಾಲೋಕದಲ್ಲಿಪ್ಪ ಅಕ್ಷರದ್ವಯವ ಭೇದಿಸಿ ತಂದು ಕರಸ್ಥಲ ದಲ್ಲಿರಿಸಿ ಇದು ಉರುತರ ಪದವೆಂದು ತೋರಿಕೊಟ್ಟ ಎನ್ನ ತನ್ನಂತ ಮಾಡಿದ ಗುರುವೇ ಚನ್ನ ಬಸವಣ್ಣ ಆನು ಚನ್ನಬಸವಣ್ಣನ ಕರುಣ ದಿಂದ ಅಭ್ಯಾಸ ಯೋಗವನತಿಗಳೆದು ಶಿವಯೋಗದಲ್ಲಿ ನಿತ್ಯನಾಗಿ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್ಸ್ಥಲಕ್ಕ ಅಧಿಕಾ ರಿಯಾದೆ ನಿನ್ನವರ ಸಲುಗಗ ಸಂದ ಚನ್ನಬಸವಣ್ಣನ ಕೃಪ ಎನ್ನನಿಂತು ಮಾಡಿತ್ತು ಕಾಣಾ ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ

೧೦೬ ಪ್ರಾಣವಾಯು ನೇತ್ರನಾಳ, ಅಪಾನವಾಯು ಜಿಹ್ವಾನಾಳ, ವ್ಯಾನ ವಾಯು ಅಧಮನಾಳ, ಉದಾನ ವಾಯು ಆ ಕಮನಾಳ, ಸಮಾನ ವಾಯು ವುಹಿನಾಳ, ನಾಗವಾಯು ಶ್ರೋತ್ರನಾಳ, ಕೂರ್ಮ ವಾಯು ಕಂಠನಾಳ, ಕೃಕರವಾಯು ಚಂದ್ರನಾಳ, ದೇವದತ್ತ ವಾಯು ಸೂರ್ಯನಾಳ, ಧನಂಜಯವಾಯು ಘ್ರಾಣನಾಳ, ಇಂತಿವು ದಶವಾಯು ಗಳಹ ಸ್ಥಾನವು ಪ್ರಾಣವಾಯು ಹರಿವಲ್ಲಿ ಲಿಂಗಪ್ರಾಣಮಂ ಪಡೆದು, ತನು ಮನ ಧನವೇ ಪ್ರಾಣವಾಗಿಹುದು ಅಪಾನವಾಯು ಹರಿವಲ್ಲಿ ಲಿಂಗ ಬಯಕೆಯಂ ಬಿಟ್ಟು, ಷಡುರಸಾನ್ನದ ಮೇಲೆ ಬಯಕೆಯಾಗಿಹುದು ವ್ಯಾನ ವಾಯು ಹರಿವಲ್ಲಿ ಲಿಂಗ ಧ್ಯಾನಮಂ ಮರೆದು ಉದ್ವೇಗ ಗವು ನಿಯಾಗಿಹುದು ಸಮಾನ ವಾಯು ಹರಿವಲ್ಲಿ ಲಿಂಗಜಂಗಮದ ತೀರ್ಥ ಪ್ರಸಾದಮಂ ಮರೆದು ಕಲ್ಮಷನಾಗಿಹನು ನಾಗವಾಯು ಹರಿವಲ್ಲಿ

ಸುಭಾಷಿತ ಗೋಷ್ಠಿಯಂ ಕೇಳಲೊಲ್ಲದ ಕುಭಾಷೆ ಕುಶಬ್ದಂಗಳಂ ಕೇಳ
ಬೇಕೆನುತಿಹನು ಕೂರ್ಮ ವಾಯು ಹರಿವಲ್ಲಿ ಜ್ಞಾನಸಂಭಾಷಣೆಯಂ
ಬಿಟ್ಟು ಅಜ್ಞಾನ ಸಂಭಾಷಣೆಯಂ ಮಾಡಬೇಕೆನ್ನುತ್ತಿಹನು ಕೃಕರ
ವಾಯು ಹರಿವಲ್ಲಿ ಸುಗುಣವಂ ಬಿಟ್ಟು, ದುರ್ಗುಣದಿಂದ ಕಟ್ಟಿ, ಗುರುಲಿಂಗ
ಜಂಗಮಕ್ಕೆ ತ್ರಿವಿಧ ಪದಾರ್ಥವನೊಪ್ಪಿಸಿ ಸಂತೋಷದಿಂದ ದಿವ್ಯಜ್ಞಾನವ
ಬೆರಸಲೊಲ್ಲದೆ, ಅನರ್ಥವ ಮಾಡಿ ಕಡಿಸಿ ಕಳೆದು, ಆಹಾ ಎನ್ನೊಡವೆ
ಹಾಳಾಗಿ ಹೋಯಿತ್ತೆಂದು ಮರುಗುತ್ತಿಹನು ಇಂತೀ ದಶವಾಯುಗಳ
ಭೇದವನರಿದು, ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ನಿರ್ಧರಿಸುವುದೇ
ಯೋಗಸಿದ್ಧಿ

೧೦೭ ನಾಲ್ಕು ಗ್ರಾಮದ ಪಟ್ಟಣಕ್ಕೆ ಪಂಚೈವರ ಕಾವಲು
ನೋಡಾ ಅವರ ಸಂಚವಿಡಿದು ಲಿಂಗಾರ್ಚನೆಯ ಮಾಡಿದೊಡೆ ಅದು
ಲೋಕದ ಬಳಿಕ ಕಂಡಯ್ಯಾ ಪಂಚೈವರ ಸಂಚಸ್ಥಾನವನರಿದು ಏಕಸ್ಥಾ
ನವ ಮಾಡಿದುದನರಿದು ನವನಾಳದ ಭೇದವನು ಅರಿಯನರಿದೊಡೆ
ಆತ ಲಿಂಗೈಕ್ಯ ನೋಡಾ ಆ ನವನಾಳದ ಮಧ್ಯದಲ್ಲಿರ್ಪ ಜೀವ ಪರ
ಮರ ನಿಲಯನರಿದೊಡೆ ನಮ್ಮ ಕೂಡಲ ಚನ್ನಸಂಗಯ್ಯನೊಬ್ಬನೇ
ಸಾಹಿತ ವಾಗಿಹನು

೧೦೮ ಮಾಣಿಕ್ಯದ ಮಂಟಪದೊಳಗೆ ಒಂದೇ ಚಿತ್ರಕರೆದಿದ
ಮೇಳವಿಸಿದನು ಮಹಾ ಮಂತ್ರಂಗಳ ಆ ಮಹಾ ಮಂತ್ರದ ಮೇಲೆ
ಪ್ರಾಣಲಿಂಗದ ಬೆಳಗು, ಅಲ್ಲಲ್ಲಿಗೆ ವಜ್ರದ ಕೀಲು ಆ ಮಹಾಕೂಟದ
ಜಾಳಂದ್ರದೊಳಗೆ ಮಾಣಿಕ್ಯದ ಪ್ರತಿಬಿಂಬ, ನವರತ್ನದ ಪುಷ್ಪಗಳು,
ಮಣಿ ಮಾಲೆಯ ಹಾರಂಗಳು, ಹೊಳೆವ ಮುತ್ತಿನ ಮಂಡ ಅಳಿಯ ನೀಲದ
ತೊಡಿಗೆಯ ತೊಟ್ಟು, ಸುಳಿವ ಮುದ್ದೆಕಾರರು ಒಳಗೆ ದಂಪಣವೆನಲು,
ಕುಣಿ ಕುಣಿದಾಡುವ ಪಾಡಿಗ, ಬಹುರೂಪಿಗ, ನಟುವಿಗ, ತಳೋದರಿಯ
ಮೇಳಾಪ, ಕಹಳೆಗಾರರ ನಾದ, ಕೋಳಿಲ ರಭಸದೊಳು ಹಾಡುತ್ತ ಒಳ
ಹೊರಗೆ ಕಾಣಬರುತ್ತಿದೆ ಚಿತ್ರದ ಬೊಂಬೆ ಫಣಿಪತಿಯ ಕೋಣೆಯೊಳು
ಸಂದಣಿಸುತ್ತಿರಲು ಗಣ ತಿಂಥಿಣಿಯ ಮೇಳವೆಲ್ಲವು ನಮ್ಮ ಕೂಡಲ
ಚನ್ನಸಂಗಮದೇವರಲ್ಲಿಹ ಕಾಸ ಪ್ರಾಣಲಿಂಗದ ಬೆಳಗಿನೊಳಗೆ ಬೆಳ
ಗಾಯಿತ್ತು

೧೯೯ ಕಾಯಪುರವೆಂಬ ಪಟ್ಟಣದೊಳಗೆ, ಮನವೆಂಬರಸು, ತ್ರಿಕರಣವೆಂಬ ಪ್ರಧಾನಿ, ವಶೀಕರಣವೆಂಬ ಶಾನಬೋವ, ಆಸೆ ರೋಷವೆಂಬ ದ್ವಾರಪಾಲಕರು, ತ್ರಿಮಲವೆಂಬ ಕೋಟೆ, ಬಂದಿಸುವ ಹಸಿವು ತೃಷೆ, ವಿಷಯಾದಿಗಳ ಬೊಬ್ಬೆಯಬ್ಬರ, ಪಂಚೇಂದ್ರಿಯಗಳೆಂಬ ಕಾಹುಲು ಕವಿವುತ್ತಿದೆ ಅರಿಷಡ್ವರ್ಗಾದಿಗಳ ಪೇರ್ಬಲದ ಗುಂಪಿನ ಆರ್ಭಟಿಸುವ ಸಂಚಲವೆಂಬ ತೇಜಿ, ಅಷ್ಟಮದವೆಂಬವೆಂಟಾನೆ, ಮೊದಲನಾಯಕರಿಪ್ಪತ್ತೈದು ಮಂದಿ, ಪ್ರಜೆ ಪಸಾಯಿತರು ನೂರನಾಲ್ವತ್ತೆಂಟು, ದೇಹವಿಕಾರದ ಸರಿಗಳ ಸಂದಣಿ, ಈರೈದು ಮೂವ್ವರ ಕಂಟಕವತ್ಯುಗ್ರ, ಮುಂದುವರಿವ ಕಹಳೆಯ ಮೋಹರದ ಸಂಭ್ರಮ, ದುರ್ಮದವೆಂಬ ರಾಜೇಂದ್ರನು ನಿತ್ಯತ್ವದಿಂದ ರಾಜ್ಯಂಗೆಯ್ಯುತ್ತಿರಲು, ಶೂನ್ಯವೆಂಬ ಪಟ್ಟಣದೊಳಗೆ ಅನಾಮಯವೆಂಬ ಶರಣನಂಸು ಸ್ವತಂತ್ರಲೀಲೆಯಿಂದಚ್ಚತ್ತು ನೋಡಿ, ಗಹಗಹಿಸಿ ನಗುತ್ತಿಹನು ಮಹದಹಂಕಾರದ ವಡ್ಡವಣೆಯ ನೋಡಿ ಹೂಂಕರಿಸಿ, ಸುಮನವೆಂಬ ತೇಜಿಯ ಬೇಗದಿಂದೇರಿ, ಘನತರವಾದ ಪಂಚಾಕ್ಷರಿಯ ಜೋಡಂ ತೊಟ್ಟು, ಸಿಸ್ತೆ ಎಂಬ ಅಡ್ಡಾಯುಧಮಂ ಕಿತ್ತು, ಜ್ಞಾನವೆಂಬ ಪಂಚೇಕ್ಷುವಿನಿಂದಡಬಲವಂ ನೋಡಿ, ಸತ್ವರಜತಮವೆಂಬ ತ್ರಿಗುಣದ ಪ್ರಧಾನರಂ ಕಡೆಮೆಟ್ಟಿ, ದ್ವಾರಕವಾಟಮಂ ಮುರಿದು, ಆಸೆ ರೋಷಾದಿಗಳ ಬೆದರಿಸಿ, ಮಲತ್ರಯದ ಕೋಟೆಯನುರುಹಿ ಹಸಿವು ತೃಷೆ ವಿಷಯವ್ಯಸನಾದಿಗಳಂ ಸಂಹರಿಸಿ, ಪಂಚೇಂದ್ರಿಯದ ಜಿಹ್ವೆಯಂ ಕೊಯ್ದು, ಅರಿಷಡ್ವರ್ಗವಂ ಜರಿದು, ಪ್ರಪಂಚವೆಂಬ ತೇಜಿಯಂ ಕೆಡಹಿ, ದೇಹದಲ್ಲಿರ್ದ ಅಷ್ಟಮದಂಗಳ ಹಿಟ್ಟುಗುಟ್ಟಿ, ಇಪ್ಪತ್ತೈವರ ದರ್ಪವಂ ಕೆಡಿಸಿ, ಮೂವ್ವರ ಕಾಲಾಟದ ಸಂಚಾರಕ್ಕೆ ತೆರಹುಗೊಡದೆ, ದುರ್ಲಯದ ಪಟುಭಟರ ಬಲವಂ ಬರಿಗೈಯ್ದು, ಶರಣಾಪ್ರಾಕ್ಕರ್ಗೆ ಅಭಯ ಹಸ್ತವಂ ಕೊಟ್ಟು, ಆ ಪುರಮಂ ಸಂತವಿಸಿ, ತನ್ನ ವಶಕ್ಕೆ ತಂದು, ವೀರಶೈವ ಸಮ್ಮತವಾಗಿ ನಿಂದು, ಸತ್ಕ್ರಿಯಾಸಂಪನ್ನನಾಗಿ, ಆ ಪುರಕ್ಕೆ ಅಧಿಪತಿಯಾಗಿ, ತಾನಲ್ಲದನ್ಯವಿಲ್ಲೆಂದು ಕಂಡು ಆ ಪುರಕ್ಕೆ ಸುಚಿತ್ತ ಸುಬುದ್ಧಿ ಸುಮನ ಸುಜ್ಞಾನವೆಂಬರುವಿಂಗೆ ಪಟ್ಟವಂ ಕಟ್ಟಿ, ಮಂತ್ರರಾಜನೆಂಬ ಹೆಸರಿಟ್ಟು ಷಡ್ವಿಧ ಬ್ರಹ್ಮಾದ್ವೈತದಲ್ಲಿ ಪರವಶನಾಗಿ, ಬಾಹ್ಯೋಪಚಾರಂಗಳಡಗಿ, ತನ್ನ ತಾ ಬೇರ್ಪಡಿಸಿ ನಿಂದು, ಅಖಂಡವಾಗಿ ಸುಮಹತ್ವದಿಂದ ತನ್ನ ಕರಸರೋಜಸಿಂಹಾಗ್ರದೊಳ್ಮೆರೆವ ಇಷ್ಟಬ್ರಹ್ಮದಲ್ಲಿ ತೃಪ್ತ

ನಾಗಿ ಬಾಹ್ಯವೆನ್ನದೆ ಬಾಹ್ಯಾಭ್ಯಂತರವೆನ್ನದೆ ರಾಜಯೋಗಿಯಾಗಿ ತನ್ನ ಷಟ್ತ್ರಿಂಶತ್ತತ್ವವಂ ತಾನೇ ನೋಡಿ ತಿಳಿದು ನಿಸ್ಪೃಹಾತ್ಮನಾಗಿ, ಇನ್ನು ಅನ್ಯವಿಲ್ಲವೆಂಬರಿದು, ಅದ್ವೈತ ಭಾವದಿಂದೇ ವೀರನಾಗಿ, ಮೇರುಗಿರಿಯ ಮೇಲೆ ತೊಳಗಿ ಬೆಳಗುವ ಶಿವಾಚಕ್ರದಿಂದ ಮೇಲಣ ಮಹಾಪೀಠದಲ್ಲಿರುವ ಪ್ರಣವದ ಪ್ರಭೆಯು ಜ್ಯೋತಿರ್ಮಯ ಲಿಂಗದಲ್ಲಿ ತಾನೆನ್ನದೆ ಇದಿರೆನ್ನದೆ ಅಲ್ಲಿ ಸ್ಥಿರವಾದ ನಿಜಶರಣನಲ್ಲಿಯೇ ಸನ್ನಿಹಿತ ನಮ್ಮ ಕೂಡಲಚನ್ನಸಂಗಮದೇವಾ

೧೧೦ ಪೃಥ್ವಿ ಸಲಿಲ ಪಾವಕ ಪವನ ಅಂಬರ ರವಿ ಶಶಿ ಆತ್ಮನೆಂ ಒಪ್ಪುತನುವ ಧರಿಸಿ, ಶ್ರೋತ್ರ ನೇತ್ರ ಘ್ರಾಣ, ಜಿಹ್ವೆ ತ್ವಕ್ಕುಗಳೆಂಬ ಪಂಚೇಂದ್ರಿಯವನರಿದು ವಾಕ್ಕು ಪಾಣಿ, ಪಾದ, ಪಾಯು, ಗುಹ್ಯವೆಂಬ ಕರ್ಮೇಂದ್ರಿಯಂಗಳ ತೊರೆದು, ಪ್ರಾಣಾಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ ಕ್ರಕರ, ದೇವದತ್ತ, ಧನಂಜಯವೆಂಬ ದಶ ವಾಯುಗಳ ಸಂಚವ ಮೀರಿದು, ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುರಂತಃಕರಣಂಗಳನೊಂದುಮಾಡಿ, ಜ್ಞಾನವನೆ ಬೆಳಗಿ ಧ್ಯಾನವ ನೆಲೆಗೊಳಿಸಿ ಚಿತ್ತಸುಧ್ಯಾನವಾಗಿ ನಿಜಸಂಧಾನದ ಸಮಾಧಿಯಲ್ಲಿ ನಿಂದು ಲಿಂಗಾರ್ಚನೆಯಂ ಮಾಡುವ ಶಿವಶರಣರ ಪಾದವ ತೋರಯ್ಯಾ ಸಾಕ್ಷಿ॥ ವ್ಯಾಪಾರಂ ಸಕಲಂ ತ್ಯಕ್ತ್ವಾ ಸ ರುದ್ರೋ ರುದ್ರಮರ್ಚಯೇತ್ ಎಂಬ ಶ್ರುತಿ ನಿಮ್ಮ ಶರಣರಿಗೆ ಸಂಪತ್ತು ಕೂಡಲಚನ್ನಸಂಗಮದೇವಾ

# ಜಂಗಮ.

## ಜಂಗಮದ ಲಕ್ಷಣಗಳು.

೧. ಲಿಂಗ ಗಂಭೀರನಾದ ಶರಣ ಅಂಗ ವಿಕಾರವನರಿಯನಯ್ಯಾ. ಜಂಗಮ ಸನ್ಮತವಾದ ಶರಣ ಇಂದ್ರಿಯ ವಿಕಾರವನರಿಯನಯ್ಯಾ ಲಿಂಗ ಗಂಭೀರನಾಗಿ ಮನ್ಮನದಲ್ಲಿ ಲೀಯ್ಯವಾಯಿತ್ತು ಜಂಗಮ ಸಮ್ಮತವಾಗಿ ಅವಧಾನವನರಿಯನಯ್ಯಾ ಕೂಡಲ ಚೆನ್ನ ಸಂಗಯ್ಯನಲ್ಲಿ ಐಕ್ಯವಾದ ಮಹಾ ಶರಣ

೨ ಕ್ಷೀರ ಶರಧಿಯೊಳಿರುವ ಹಂಸಂಗೆ ಅನ್ಯಕ್ಷೀರದ ಹಂಗುಂಟೇನಯ್ಯಾ? ಸುಗಂಧಮಯ ಪುಷ್ಪದಲ್ಲಿರುವ ಭೃಂಗಂಗೆ ಅನ್ಯ ಪರಿಮಳದ ಹಂಗುಂಟೇನಯ್ಯಾ? ಸಮುದ್ರದೊಳಿರುವ ಮಂಡೂಕಂಗೆ ಅಂಬುವಿನ ಹಂಗುಂಟೇನಯ್ಯಾ? ಮೊಲೆಯನುಣ್ಣುವ ಶಿಶುವಿಂಗೆ ಅನ್ಯ ಕ್ಷೀರ ನೀರಿನ ಹಂಗುಂಟೇನಯ್ಯಾ? ಸಕಲಪ್ರದಾಯಕ ಲಿಂಗದೊಳಿದ್ದ ಶರಣಂಗೆ ಅನ್ಯ ಪದದಾಸೆಯ ಹಂಗುಂಟೇ ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ?

೩ ಶರಣಸ್ಥಲ ನೋಡುವರೆ ಬಹು ಸುಲಭ ನೋಡಯ್ಯ ಶರಣನು ತಿಳಿದು ತಿಳಿದು ಆಚರಿಸನು ಮರೆದು ಮರೆದು ಆಚರಿಸುವ ಜ್ಞಾನದಿಂದ ಭೇದವಲ್ಲದ ದೇಹವೆಂಬ ಭೇದವಿಲ್ಲ ನೋಡಯ್ಯ ಶರಣ ತನ್ನ ದೇಹವೇ ಹಕಾರ ಪ್ರಣವಮಾಡಿಟ್ಟ ನರನು ತನ್ನ ದೇಹವೇ ದೇಹವೆಂದು ಜಡವೆಂದು ಪ್ರಳಯಕ್ಕೊಳಗು ಮಾಡಿಟ್ಟ ಶರಣನ ದೇಹವೆಲ್ಲ ಪಂಚಾಕ್ಷರಮಯ ನೋಡಾ ನಕಾರವೆ ಅಸ್ಥಿ, ಮಕಾರವೆ ನಾಡಿ, ಯಕಾರವೆ ರೋಮ, ಮಕಾರವೆ ಮಾಂಸ, ಶಿಕಾರವೆ ತ್ವಕ್ಕು, ವಕಾರವೆ ರುಧಿರ, ಯಕಾರವೆ ಶ್ಲೇಷ್ಮ, ಶಿಕಾರವೆ ಶುಕ್ಲ, ನಕಾರವೆ ರಸ, ಮಕಾರವೆ ಪಿತ್ತ, ಶಿಕಾರವೆ ನಿದ್ರೆ, ನಕಾರವೆ ಕ್ಷುಧೆ, ವಕಾರವೆ ಆಲಸ್ಯ ಮಕಾರವೆ ತೃಷ್ಣೆ, ಯಕಾರವೆ ಸಂಗ, ಯಶಿನಮ ಎಂಬವು ಮೋಹ ಭಯ ರಾಗ ಲಜ್ಜೆ ದೇಹಕ್ಕೆ ಸೇರಿಸಿದ ನೋಡಾ! ಕ್ಲಾಂ ಕ್ಲೀಂ ಎಂಬುದಷ್ಟ ಕಠಿಣ ಮೃದುವಿಗೆ ಇಟ್ಟ ನೋಡಾ ಕ್ಲಾಂ ಕ್ಲೀಂ ಎಂಬುದನ್ನು ಚಲನೆಗೆ ಸೇರಿಸಿದ ನೋಡಾ ಶಿಯಮವನ ಎಂಬುದೇ ಸ್ಪರ್ಶ ಗಂಧ ರೂಪು ಶಬ್ದ ರಸಕ್ಕೆ ಸೇರಿಸಿದ ನೋಡಾ.

ಶಿಯುವು ಎಂಬುದೇ ಪಾದವಾ ಗುಹ್ಯ ಪಾಣಿವಾಯುವಿಗೆ ಸಂಬಂಧಿಸಿದ ನೋಡಾ! ಯು ವು ವ ನ ಶಿ ಎಂಬುದೆ ಶ್ರೋತ್ರ ಜಿಹ್ವೆ ತ್ವಕ್ಕು ನಾಸಿಕ ನೇತ್ರಕ್ಕೆ ಸಂಬಂಧಿಸಿದ ನೋಡಾ! ಯುವುವನಶಿ ಎಂಬುದೆ ಪ್ರಾಣೋ ಸಮಾನ ಉಪಾನ ವ್ಯಾನಕ್ಕೆ ಸಂಬಂಧಿಸಿದ ನೋಡಾ! ಮ ಯು ನ ಶಿ ವ ಯು ಬುದ್ಧಿಮನ ಚಿತ್ತಹಂಕಾರಜ್ಞಾನಕ್ಕೆ ಸಂಬಂಧಿಸಿದ ನೋಡಾ! ಈ ರೀತಿಯಿಂದರಿದು ಶಿವತತ್ವ ತಾನಾಗಿ ನಿಂವ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ

೪ ಪರ ರಾಣಿಯರ ನೋಡುವಲ್ಲಿ ಅಂಧಕನಾಗಿಪ್ಪ ನೋಡಾ ಜಂಗಮನು ಪರಧನವ ಕಂಡಲ್ಲಿ ಹುಲಿಯು ಕಂಡ ಹುಲ್ಲೆಯಂತೆ ಭೀತಿ ಬಡುವ ನೋಡಾ ಜಂಗಮನು ದುರ್ಜರರ ಸಂಭಾಷಣೆಯ ಕೇಳುವಲ್ಲಿ ಅತಿ ಮುಗ್ಧನಾಗಿಪ್ಪ ನೋಡಾ ಜಂಗಮನು ದುಷ್ಟಮಾರ್ಗ ಪಥದೊಳರಸು ವಲ್ಲಿ ಕಡು ಜಡ ಪೆಳವ ನೋಡಾ ಜಂಗಮನು ವಿಷಯುಗಳೊಳು ನಿಃಕ ರುಣಿಯಾಗಿಪ್ಪ ನೋಡಾ ಜಂಗಮನು ಶಿವನಿಂದಕರ ಸ್ವರಗೇಳುವಲ್ಲಿ ಬಧಿರನಾಗಿಪ್ಪ ನೋಡಾ ಜಂಗಮನು ದುರಾತ್ಮಂಗೆ ಜ್ಞಾನ ದ್ರವ್ಯ ಕೊಡು ವಲ್ಲಿ ಲೋಭಿಯಾಗಿಪ್ಪ ನೋಡಾ ಜಂಗಮನು ಕಪಿಲಸಿದ್ಧ ಮಲ್ಲಿಕಾ ರ್ಜುನನು

೫ ಸಮತೆ ಎಂಬ ಕಂಥ ಧರಿಸಿಪ್ಪ ನೋಡಾ ಜಂಗಮನು ಅವಿ ತವೆಂಬ ಭಸ್ಮ ಧರಿಸಿಪ್ಪ ನೋಡಾ ಜಂಗಮನು ಲಿಂಗವೆಂಬ ಖರ್ಪರ ಕರಸ್ಥಲದಲ್ಲಿ ಧರಿಸಿಪ್ಪ ನೋಡಾ ಜಂಗಮನು ಸರ್ವಜೀವ ದಯಾ ಪಾರಿ ಎಂಬ ವಿಮಲ ರುದ್ರಾಕ್ಷಿ ಧರಿಸಿಪ್ಪ ನೋಡಾ ಜಂಗಮನು ನಿಸ್ಸಂ ಗವೆಂಬ ಮೇಖಲಾ ಪರಿಪೂರ್ಣ ನೋಡಾ ಜಂಗಮನು ಸುಮಾನವೇ ಕಿರೀಟವಾಗಿ ಸುದ್ಧ ಜ್ಞಾನಿಯು ಮಕುಟನಾಗಿ ನಿರಹಂಕರವೆ ಬಹಿರ್ವಾಸಿ ಯಾಗಿ ದುಸ್ತರಸವ ದುಃಖ್ಯನೊ ಸ್ವಾಹಿಕೋತ್ರಾತ ವಿಜಯ ಶಿವಯೋಗ ಮಾಗಿ ಚರಿಸುವ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾ ಜಂಗಮನು

೬ ಗೆದ್ದವ ಗರುಡಿಕಾರನಲ್ಲದೆ ಬಿದ್ದು ಗೆದ್ದವ ಗರುಡಿಕಾರನೇ ಅಯ್ಯ? ಎದ್ದವ ಜಂಗಮನಲ್ಲದೆ ಬಿದ್ದು ಎದ್ದವ ಜಂಗಮನೇ ಅಯ್ಯ? ಬೀಳಲಾಗದು ಜಂಗಮ ಬೀಳಲಾಗದು ಜಗವ ಹಿರಿಯರು, ಅಯ್ಯ ಕಪಿಲಸಿದ ಮಲ್ಲಿಕಾರ್ಜುನಾ

೭. ನಿಂದಿಸಿದಲ್ಲಿ ಕುಂದುವನಲ್ಲ ಜಂಗಮನು ವಂದಿಸಿದಲ್ಲಿ ಆನಂದ ಮಯನಲ್ಲ ಜಂಗಮನು ಬಂದುಪಚಾರದಲ್ಲಿ ಸಂದುಗೊಳ್ಳು ವನಲ್ಲ ಜಂಗಮ ಜಂಗಮನು ಬಂದಲ್ಲಿ ನೀಡದಿರೆ ಕ್ರೋಧನಲ್ಲ ಜಂಗ ಮನು ಇಂದುಧರ ಕಪಿಲಸಿದ್ಧ ಮಲ್ಲನೆಂಬೆ, ಇಂತಪ್ಪ ಜಂಗಮನು

೮ ಜನನ ಮರಣ ದೇಹ ಧರ್ಮಕ್ಕಲ್ಲದೆ ಜಂಗಮಕ್ಕೆಲ್ಲಿಹದೋ? ಕ್ಷುಧಾ ತೃಷೆ ಪ್ರಾಣಧರ್ಮವಲ್ಲದ ಜಂಗಮಕ್ಕೆಲ್ಲಿಹದೋ? ಸುಖ ದುಃಖ ಮನೋಧರ್ಮವಲ್ಲದ ಜಂಗಮಕ್ಕಲ್ಲಿಹದೋ? ಜ್ಞಾನಾಜ್ಞಾನಂಗಳು ಮುಮುಕ್ಷುವಿಂಗಲ್ಲದ ನಿರ್ಮ್ಮಲ್ಲಿ ಸಮರಸವಾದ ಸಚ್ಚಿದಾನಂದ ಶಿವಯೋಗಿ ಜಂಗಮಕ್ಕಲ್ಲಿಹದೋ ಕಪಿಲಸಿದ್ಧ ಮಲ್ಲಿಕಾರ್ಜುನಾ?

೯ ಗುಣವ ನೋಡದ ಹೊಗಳುವ ಜಂಗಮವು ಬ್ರಹ್ಮನ ಸಂತತಿ ಕಾಡಿಬೇಡುವ ಜಂಗಮವು ನಾರಾಯಣನ ಸಂತತಿ ವ್ಯಾಪಾರಿಕ ಜಂಗಮ ಈಶ್ವರನ ಸಂತತಿ ಹೊಗಳದೆ ಕಾಡದೆ ಬೇಡದ ಬಲಾತ್ಕಾರದಿಂದುಣ್ಣದ ವ್ಯವಹರಿಸುವ ಜಂಗಮವ ನೋಡಿ ಎನ್ನ ಮನ ನೀವೆಂದು ನಂಬಿತ್ತಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ

೧೦ ಭೂಷಣವುಳ್ಳ ಜಂಗಮವ ಭೂಪಾಲ ಪೂಜಿಸುವ ವೇಷ ವುಳ್ಳ ಜಂಗಮವ ವೇಶಿ ಪೂಜಿಸುವಳು ವೇಷಧಾರಿ ಜಂಗಮವ ಲೋಕ ವೆಲ್ಲ ಪೂಜಿಸುವದು ಜ್ಞಾನವುಳ ಜಂಗಮವನಾರು ಪೂಜಿಸರು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೧೧. ಕೆರೆ ಹಳ್ಳ ಬಾವಿಗಳು ಮೈದೆಗೆದರೆ, ಗುಳ್ಳೆ, ಗೊರಜೆ, ಚಿಪ್ಪು ಕಾಣಬಹುದು ವಾರುಧಿ ಮೈದಗವರೆ, ರತ್ನಂಗಳ ಕಾಣಬಹುದು ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ, ಲಿಂಗವ ಕಾಣಬಹುದು

೧೨ ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದರೇ ನಯ್ಯ? ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು ಎಂತಿದ್ದರೇ ನಯ್ಯ? ಸುಚರಿತ್ರರೆಂತಿದ್ದರೇನಯ್ಯ? ಅವಲೋಹದ ಕಳೆವ ಪರುಷ ವೆಂತಿದ್ದರೇನಯ್ಯ? ಕೂಡಲ ಸಂಗನ ಶರಣರು ರಸದ ವಾರುಧಿಗಳು ಎಂತಿದ್ದರೇನಯ್ಯ?

೧೩ ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಸಂಭಾಷ ಣೆಯು ಸುಖವು ತೆರಹಿಲ್ಲದ ನಂಬುಗೆ, ತೆರಹಿಲ್ಲದ ಸ್ವಾನುಭಾವ ಸುಖ, ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ ಕೂಡಲ ಸಂಗಮದೇವಾ ನಿಮ್ಮ ಶರಣಂಗೆ

## ಭಕ್ತ ಜಂಗಮ ಸಂಬಂಧ.

೧೪ ಜವವಿಲ್ಲದ ಭಕ್ತನ ಪರಿಯ ನೋಡಾ ಮನ ಪ್ರಾಣ ಮುಕ್ತಿ ಭಾವರಹಿತ ಒಡಲಿಲ್ಲದ ಜಂಗಮದ ಪರಿಯ ನೋಡಾ ಸಿಡಿಲ ಮಿಂಚಿನ ಬೆಳಗನೊಂದೆಡೆಯಲ್ಲಿ ಹಿಡಿಯಲುಂಟೇ? ಈ ಉಭಯ ಒಂದಾದವರ ಕಂಡರೆ ನೀನೆಂಬೆ ಕೂಡಲಚನ್ನಸಂಗಯ್ಯ

೧೫ ಭಕ್ತನಾದ ಬಳಿಕ ಜಂಗಮವ ಮೆಚ್ಚಬೇಕು ಜಂಗಮನಾದ ಬಳಿಕ ಭಕ್ತ ಮೆಚ್ಚಬೇಕು ಭಕ್ತನ ಕಾಯವೇ ಜಂಗಮನ ಕಾಯ ಜಂಗಮನ ಕಾಯವೇ ಭಕ್ತನ ಕಾಯ ಕಪಿಲಸಿದ್ಧ ಮಲ್ಲೇಶನಲ್ಲಿ ಇದೇ ಉಪಾಯ

೧೬ ಒಡಲಿಲ್ಲದಾತ ಜಂಗಮ, ಪ್ರಾಣವಿಲ್ಲದಾತ ಭಕ್ತನಯ್ಯ ಆಚಾರವೇ ಜಂಗಮ ವಿಚಾರವೇ ಭಕ್ತನಯ್ಯ ಆಚಾರ ವಿಚಾರವೆಂ ಬುದು ಸ್ವಾನುಭವವು ನೋಡಾ ಕೂಡಲಸಂಗಮದೇವಾ

೧೭ ಎಲ್ಲರ ಪ್ರಾಣಲಿಂಗ ಒಂದೇ ಕಂಡಯ್ಯ ಎನ್ನ ಪ್ರಾಣಲಿಂಗ ಬೇರೆ ಕಂಡಯ್ಯ ಕೂಡಲ ಸಂಗಮದೇವ ಕೇಳಯ್ಯ, ಜಂಗಮವೆನ್ನ ಪ್ರಾಣಲಿಂಗ ಕಂಡಯ್ಯ

೧೮ ಶಿವಶಕ್ತಿ ಆತನಲ್ಲಿರ್ಪುದು ಕಂಡಯ್ಯ ಆತನ ಪ್ರಾಣ ಶಿವ ಲಿಂಗವು ಶಿವ ತಾವು ಭೇದವನಾರು ಬಲ್ಲರು ಹೇಳಯ್ಯ ಕಪಿ ಲಸಿದ್ಧ ಮಲ್ಲಿನಾಥಯ್ಯ ಶಿವ ಶರಣ ಸಂಗನಬಸವಣ್ಣನ ಅನುವ ನೀವೇ ಬಲ್ಲಿರಿ

೧೯. ಭಕ್ತನು ಭಕ್ತನ ಕಂಡಲ್ಲಿ ಕೈಮುಗಿವುದೇ ಭಕ್ತಿಸ್ಥಲ ಜಂಗ ಮನು ಜಂಗಮನ ಕಂಡಲ್ಲಿ ಶರಣೆಂಬುದೇ ಜಂಗಮಸ್ಥಲ ಭಕ್ತ ಜಂಗ

ಮರೆಂದು ಬೇರುಂಟೇ? ರಸದಂತೆ ಭಕ್ತ, ರುಚಿಯಂತೆ ಜಂಗಮ, ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ

೨೦. ಸ್ಥಾವರ ಭಕ್ತಂಗೆ ಸೀಮೆಯಲ್ಲದೆ ಘನಲಿಂಗಜಂಗಮಕ್ಕೆ ಸೀಮೆಯೆಲ್ಲಿಯದು? ಅಂಬುಧಿಗೆ ಸೀಮೆಯಲ್ಲದೆ, ಹರಿವ ನದಿಗೆ ಸೀಮೆಯಲ್ಲಿಯದು? ಭಕ್ತಂಗೆ ಸೀಮೆಯಲ್ಲದ ಜಂಗಮಕ್ಕೆ ಸೀಮೆಯುಂಟೇ ಕೂಡಲಸಂಗಮದೇವಾ?

೨೧ ಶಿವಭಕ್ತರೇ ಅಧಿಕರು ನೋಡಯ್ಯ ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ ಈ ದ್ವಿವಿಧವನೊಂದೇ ಎಂದು ನಂಬಿದೆ ಕೂಡಲ ಸಂಗಮದೇವಾ

೨೨ ಜಂಗಮವ ಕೂಡಿಕೊಂಡು, ಲಿಂಗಾರ್ಚನೆಯ ಮಾಡುವುದು ಲೇಸಯ್ಯ ಭಕ್ತಂಗೆ ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡುವುದು ಲೇಸಯ್ಯ ಜಂಗಮಕ್ಕೆ ಆ ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ ಆ ಭಕ್ತನ ಕಿಂಕರತ್ವವೇ ಜಂಗಮಕ್ಕೆ ದಾಸೋಹ ಆ ಭಕ್ತನೊಳಗೆ ಜಂಗಮವಡಗಿ, ಆ ಜಂಗಮದೊಳಗೆ ಭಕ್ತನಡಗಿ ಇವನೇನೆಂದು ಹವಣಿಸುವೆನಯ್ಯಾ? ಎರಡೊಂದಾದ ಘನವ ಇದನೆಂತು ಪಮಿಸುವೆನಯ್ಯಾ? ತೆರಹಿಲ್ಲದ ಘನವ, ಈ ಎರಡಕ್ಕ ಭವವಿಲ್ಲೆಂಬ, ಕೂಡಲ ಸಂಗಯ್ಯ, ನಿಮ್ಮ ಶ್ರುತಿಗಳು ಹೇಳಿದವಾಗಿ ನಿಮ್ಮ ಕರುಣವೆನಗಾಯಿತ್ತು.

## ಗುರು ಜಂಗಮ ಸಂಬಂಧ.

೨೩. ಆದಿಯಲ್ಲಿ ನಿಮ್ಮ ಜಂಗಮವೇ ಲಿಂಗವೆಂಬುವನಾರು ಬಲ್ಲರಯ್ಯಾ, ಬಸವಣ್ಣನಲ್ಲದೆ? ಲಿಂಗಕ್ಕಾವಡೆಯೂ ಜಂಗಮವೇ ಬೇಕು ಜಂಗಮವಿಲ್ಲದೆ ಲಿಂಗವುಂಟೇ? ಗುರುವಿಂಗಾವಡೆಯೂ ಜಂಗಮವೇ ಬೇಕು ಜಂಗಮವಿಲ್ಲದೆ ಗುರುವುಂಟೇ? ಜಂಗಮಕ್ಕಾವಡೆಯೂ ಜಂಗಮವೇ ಬೇಕು ಇಂತಪ್ಪ ಜಂಗಮವೇ ಪ್ರಾಣಲಿಂಗವೆಂದು ಬಸವಣ್ಣನೆನಗೆ ತೋರಿದನಾಗಿ ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಕಲಿದೇವರದೇವಾ

೨೪ ಗುರುಸ್ಥಲ ಘನವೆಂಬೆನೇ? ಗುರುವಿಂಗೆ ಲಿಂಗವುಂಟು ಲಿಂಗಸ್ಥಲ ಘನವೆಂಬೆನೇ? ಲಿಂಗಕ್ಕೆ ಜಂಗಮವುಂಟು ಆ ಜಂಗಮವು ಎಲ್ಲಿ ಇಪ್ಪಡೆ ಅಲ್ಲಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ಭಕ್ತಿ ಅನುಭಾವ ಸನ್ನಿಹಿತವಾಗಿಹುದು ಕಾಣಾ ಕೂಡಲ ಚನ್ನಸಂಗಮದೇವಾ

೨೫ ಶ್ರೀಗುರು ಶಿಷ್ಯನ ಭವಪೂರ್ವಾಶ್ರಯವ ಕಳೆದು ಭಕ್ತನ ಮಾಡಿದ ಬಳಿಕ, ಆ ಭಕ್ತ ಹೋಗಿ ಜಂಗಮವಾಗಿ ಗುರುವಿನ ಮಠಕ್ಕೆ ಬಂದಡೆ, ಆ ಜಂಗಮವನ್ನು ಶಿಷ್ಯನೆಂದು ಗುರುವಿನ ಮನದಲ್ಲಿ ಹೊಳೆದರೆ, ಪಂಚಮಹಾಪಾತಕ ಈ ಜಂಗಮಕ್ಕೆ ಎನ್ನ ಗುರುವೆಂದು ಮನದಲ್ಲಿ ಭಯಭೀತಿ ಹೊಳೆದರೆ ರೌರವ ನರಕ ಇಂತೀ ಭೇದವ ಕೂಡಲಚನ್ನಸಂಗಯ್ಯನಲ್ಲಿ ನಿಮ್ಮ ಶರಣರೇ ಬಲ್ಲರು

೨೬ ಭೂತಪ್ರಾಣಿಯ ಕಳೆದು, ಲಿಂಗಪ್ರಾಣಿಯ ಮಾಡಿದ ಬಳಿಕ ಶಿಷ್ಯನೇ ಜಂಗಮವಾಗಿ ಗುರುವಿನ ಮಠಕ್ಕೆ ನಡೆದು ಬಂದರೆ, ಗುರುವೆಂಬ ಹಮ್ಮಿಲ್ಲದ, ಪರಮಗುರುವೆಂದು ಪಾದಾರ್ಚನೆಯಂ ಮಾಡುವುದು ಆಚಾರ ನಾಚಿ ಮಾಡದಿರ್ದಡೆ ನಾಯಕನರಕ ಆ ಜಂಗಮ ಶಂಕೆಯಿಲ್ಲದೆ ಪಾದಾರ್ಚನೆಯ ಮಾಡಿಸಿಕೊಂಬುವುದು ಕರ್ತವ್ಯ ಶಂಕೆಗೊಂಡರೆ ಪಂಚಮಹಾಪಾತಕ ಹೀಗಲ್ಲದೆ ಗುರುವೆಂಬ ಹಮ್ಮು ಶಿಷ್ಯನೆಂಬ ಶಂಕೆಯುಳ್ಳನ್ನಕ್ಕರ ರೌರವ ನರಕದಲ್ಲಿಕ್ಕುವ ಕೂಡಲ ಚನ್ನಸಂಗಮದೇವಯ್ಯ.

೨೭ ಮೊದಲಲ್ಲಿ ಮೊದಲಲ್ಲಿ ಅಚ್ಚೊತ್ತಿದ ಕಾರಣ ಎಚ್ಚರಿಕೆಯಾಯಿತ್ತು ಗುರುಕರುಣದಿಂದ ಅರಿವಾಯಿತ್ತು, ಆಚಾರವಾಯಿತ್ತು ಜಂಗಮದಿಂದ ತಿಳಿದ ತಿಳಿವಿನಲ್ಲಿ ಶಿವಪ್ರಸಾದ ಸಾಧ್ಯವಾಯಿತ್ತು ಕೂಡಲಚೆನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು

ಅರ್ಥಂ-ದೇಹಸಂಬಂಧಿಯಾಗಿರ್ದ ಆತನು ಪೂರ್ವ ಶಿವಾಂಶಿಕನು ಅಂತು ಶಿವಾಂಶಿಕನಾದ ಕಾರಣ ಸಮ್ಯಜ್ಞಾನೋದಯವಾಗಿತ್ತೆಂಬುದೀಗ ಮೊದಲಲ್ಲಿ ಮೊದಲಲ್ಲಿ ಅಚ್ಚೊತ್ತಿದ ಕಾರಣ ಎಚ್ಚರಿಕೆಯಾಯಿತ್ತು ಎಂಬ ಶಬ್ದಕ್ಕರ್ಥ ಅಂತು ಸಮ್ಯಜ್ಞಾನೋದಯದಿಂದ ತನ್ನ ನಿಜವ ಪರಬ್ರಹ್ಮವೆಂದರಿದಾತಂಗೆ ಬ್ರಹ್ಮವು ಕಾಣಿಸಿತ್ತೆಂಬ ಮಾತ್ರದಲ್ಲಿ ದೇಹವಾಸನೆಯುಳಿದು ಬ್ರಹ್ಮವಾಸನೆ ಆಗಲು ಅದು ಕಾರಣ ಜ್ಞಾನೋದಯವಾಗಿ ತನ್ನ ನಿಜವಪ್ಪ ಪರಬ್ರಹ್ಮವ ಕೂಡುವ ಅಪೇಕ್ಷೆಯಿಂದ ಗುರೂಪಾಸ್ತಿಯ ಮಾಡಿ ಗುರುಕರುಣವಂ ಪಡೆದು, ಷಟ್ಸ್ಥಲಜ್ಞಾನ ಕ್ರಿಯಾಚಾರವನನುಷ್ಠಿತ್ತು ಶರಣರಿಗೆಂಬುದೀಗ ಗುರುಕರುಣದಿಂದ ಅರಿವಾಯಿತ್ತು ಆಚಾರವಾಯಿತ್ತು ಎಂಬ ಶಬ್ದಕ್ಕರ್ಥ ಅಂತಪ್ಪ ಜ್ಞಾನಾಚಾರದ ತಿಳಿದ ಅರಿವು ಆಚರಿಸುವ ಆಚಾರದಿಂದ ಅಂಗವೆಲ್ಲ ಲಿಂಗಮಯವಾಗಿ ಭಿನ್ನದೋರದೆ ಇದ್ದಿತ್ತೆಂಬುದೀಗ ಜಂಗಮದಿಂದ ತಿಳಿದ ತಿಳಿವಿನಲ್ಲಿ ಪ್ರಸಾದ ಸಾಧ್ಯವಾಯಿತ್ತು ಕೂಡಲಚೆನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು ಎಂಬ ಶಬ್ದಕ್ಕರ್ಥ

೨೮ ಗುರು ಬಸವೇಶ ಮಂತ್ರಸ್ಥಿತ ಜಂಗಮ ಬಸವೇಶ ಶಕ್ತಿ ತೃಪ್ತ ನೋಡಾ ಭವರೋಗವ ಕಳೆವ ಪರಿಯ ನೋಡಾ ಕೂಡಲಸಂಗನ ಶರಣರ ಅನುಭಾವ ಮಹಿಮಾನ ಕಾಯ ಕರಂತ

ಆತ್ಮ ವಿಲ್ಲದಂಗಕ್ಕೆ ಸರ್ವಯೋಗದ ಸುಖ ಉಂಟೇ ? ಮಣ್ಣಿಲ್ಲದ ಮರ ನುಂಟೇ? ಮರವಿಲ್ಲದ ಹಣ್ಣುಂಟೇ? ಹಣ್ಣಿಲ್ಲದ ಸ್ವಾದ ಉಂಟೇ? ಹೀಗಿರಿ ವುದಕ್ಕೆ ಕ್ರಮ, ಅಂಗವೇ ಮಣ್ಣು ಲಿಂಗವೇ ಮರನು ಫಲವೇ ಜಂಗಮ ರುಚಿಯೇ ಪ್ರಸಾದ ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಸಾಕಾರ ಲಿಂಗವೇ ಜಂಗಮುದಂಗವಯ್ಯ ಪ್ರಭುವೇ

೩೪ ಅಗ್ನಿಯಾಧಾರದಲಿ ಕಬ್ಬಿಣ ನೀರುಂಬುದಯ್ಯಾ ಭೂಮಿ ಯಾಧಾರದಲಿ ವೃಕ್ಷ ನೀರುಂಬುದಯ್ಯಾ. ಜಂಗಮಕ್ಕೆ ಆಪ್ಯಾಯನ ವಾದರೆ, ಲಿಂಗಸಂತುಷ್ಟಿಯುಹುದಯ್ಯ ಇದು ಕಾರಣ ಕೂಡಲ ಸಂಗಮ ದೇವರಲ್ಲಿ ಜಂಗಮಕ್ಕ ಆಪ್ಯಾಯನವಾದರೆ ಲಿಂಗ ಸಂತುಷ್ಟಿ

೩೫ ಶ್ರೀ ಗುರುವಿನ ಹಸ್ತದಲ್ಲಿ ಉಪದೇಶವಡೆದು ಭಕ್ತರಾದುದು ಮೊದಲಾಗಿ ನಿಮ್ಮ ಲಿಂಗವಾರೋಗಣೆ ಮಾಡದ ದಿನ ಉಂಟೇ ? ಉಂಟಾದರ ತೋರಿ ಇಲ್ಲದಿಪ್ಪರೆ ನೀವು ಕೇಳಿ ನಾನು ನಮ್ಮ ಗುರುವಿನ ಹಸ್ತದಲ್ಲಿ ಉಪದೇಶ ವಡೆದು ಭಕ್ತನಾದುದು ಮೊದಲಾಗಿ ನಮ್ಮ ಲಿಂಗವು ನಿರಂತರ ಆರೋಗಣೆಯ ಮಾಡಿ ಪ್ರಸಾದವ ಕರುಣಿಸು ವದು ಅದು ಕಾರಣ ನಮಗೆ ಲಿಂಗ ಉಂಟು ನಿಮ್ಮ ಲಿಂಗಕ್ಕೆ ಕರ ಚರಣ ಅವಯ ವಂಗಳಿಲ್ಲವಾಗಿ ನಿಮ್ಮ ಲಿಂಗವು ಸಕಲ ಭೋಗಂಗಳ ಭೋಗಿಸಲರಿಯದಾಗಿ ನಿಮಗೆ ಪ್ರಸಾದವಿಲ್ಲ ಪ್ರಸಾದವಿಲ್ಲವಾಗಿ ನಿಮಗೆ ಲಿಂಗವಿಲ್ಲವೆಂದನು ಅದಕ್ಕೆ ನೀವು ಸಂಕಲ್ಪಗೊಳ್ಳದಿರಿ ಆ ವಿವರವನು ನಾನು ನಿಮಗೆ ಚೆನ್ನಾಗಿ ಕಾಣಿಸಿ ತೋರಿ ಹೇಳುವೆನು ಅದು ಹೇಗೆಂ ದಡೆ, ನಿಮ್ಮ ಶ್ರೀಗುರು ನಿಮಗೆ ಪ್ರಾಣಲಿಂಗ ಸಂಬಂಧವ ಮಾಡುವಲ್ಲಿ ಆ ಲಿಂಗವೇ ಜಂಗಮುದಂಗವು, ಆ ಜಂಗಮವೇ ಲಿಂಗದ ಪ್ರಾಣ ಚೈತನ್ಯ ಕಳೆಯ ಮಾಡಿ ನಿಮ್ಮ ಶ್ರೀಗುರು ಕರಸ್ಥಲದಲ್ಲಿ ಆ ಲಿಂಗವ ಕೊಟ್ಟ ಕಾರಣ ಇಂತಹ ಜಂಗಮ ಮುಖದಲ್ಲಿ ತೃಪ್ತನಹನಲ್ಲದೆ ಲಿಂಗದ ಮುಖದಲ್ಲಿ ನಾನು ತೃಪ್ತನಹನೆಂದು ಹೇಳಿಕೊಟ್ಟನೇ? ಶ್ರೀಗುರು ಲಿಂಗ ವನು ಹಾಗೆ ಕೊಟ್ಟುದಿಲ್ಲವಾಗಿ ಅದೆಂತೆಂದಡೆ, ಶಿವರಹಸ್ಯದಲ್ಲಿ ಶಿವನ ವಾಕ್ಯ ಶ್ಲೋ॥ ಸ್ಥಾವರಾರ್ಪಿತ ನೈವೇದ್ಯಂ ನ ಚ ತೃಪ್ತಿರ್ಮಹೇಶ್ವರೀ। ಜಂಗಮಾರ್ಪಿತ ನೈವೇದ್ಯಾದಹಂ ತೃಪ್ತೋ ವರಾನನೇ॥ ಅದಕ್ಕೆ ಉಪ ದೃಷ್ಟ ವಾಕ್ಯ ವೃಕ್ಷದ ಕೊನೆ ಕೊನೆಗಳಿಗೆ ಉದಕವ ನೀಡಿದರೆ, ವೃಕ್ಷವಲ್ಲ ಯಿಸ ವುದೇ, ಬೇರಿಂಗೆ ನೀಡಬೇಕಲ್ಲದೇ? ಅದೆಂತೆಂದಡೆ, ವೃಕ್ಷಸ್ಯವದನಂ

ಜೂವಿ. ಸ್ಥಾವರಸ್ತು ಜಂಗಮಃ, ಅಂತು ವೃಕ್ಷದ ಕೊನೆಯ ಸ್ಥಾನವೇ
ಲಿಂಗವು ಆ ವೃಕ್ಷದ ಬೇರಿನ ಸ್ಥಾನವೇ ಜಂಗಮವು. ಅದಕ್ಕೆ ಮತ್ತೆಯೂ
ದೃಷ್ಟ ಗರ್ಭಿಣೀ ಸ್ತ್ರೀಗೆ ಉಣಲಿಕ್ಕದಿದಡೆ ಆ ಗರ್ಭದೊಳಗಣ ಶಿಶು
ತೃಪ್ತಿಯಹುದಲ್ಲದೆ ಆ ಸ್ತ್ರೀಯ ಗರ್ಭದ ಮೇಲೆ ಸಕಲ ಪದಾರ್ಥಂಗಳ
ನಿಕ್ಕಿದಡೆ, ಆ ಗರ್ಭದೊಳಗಣ ಶಿಶು ತೃಪ್ತಿಯಾಗ ಬಲ್ಲುದೇ? ಅದು
ಕಾರಣ ಆ ಗರ್ಭದ ಸ್ತ್ರೀಯ ಸ್ಥಾನವೇ ಜಂಗಮವು ಆ ಗರ್ಭದೊಳಗಣ
ಶಿಶುವಿನ ಸ್ಥಾನವೇ ಲಿಂಗವು ಅದಕ್ಕೆ ಮತ್ತೆಯೂ ದೃಷ್ಟ. ಪೃಥ್ವಿಗೆ
ಹೃತ್ಸ್ಥಾನದ ಸಸಿಗಳು ಬೆಳೆವವಲ್ಲದೆ, ಆ ಸಸಿಗಳ ಕೊನೆಯ ಮೇಲೆ
ಮಳೆ ಸುರಿದರೆ ಆ ಸಸಿಗಳು ಬೆಳೆಯಬಲ್ಲವೇ? ಬೆಳೆಯಲರಿಯವಾಗಿ
ಅಂತು ಆ ಪೃಥ್ವಿಸ್ಥಾನವೇ ಜಂಗಮವು ಆ ಸಸಿಯ ಕೊನೆಯ ಸ್ಥಾನವೇ
ಲಿಂಗವು ಅದಕ್ಕೆ ಮತ್ತೆಯೂ ದೃಷ್ಟ ದೇಹದ ಮೇಲೆ ಸಕಲ ಪದಾ
ರ್ಥವ ತಂದಿರಿಸಿದಡೆ, ಆತ್ಮನು ತೃಪ್ತಿಯಾಗಬಲ್ಲುದೇ, ಜಿಹ್ವೆಯ
ಮುಖದಲ್ಲಿ ತೃಪ್ತಿಯಹುದಲ್ಲದೆ? ಅಂತು ದೇಹಸ್ಥಾನವೇ ಲಿಂಗವು
ಜಿಹ್ವೆಯ ಸ್ಥಾನವೇ ಜಂಗಮವು ಇಂತೀ ನಾನಾ ದೃಷ್ಟಂಗಳಲ್ಲಿ ತೋರಿ
ಹೇಳುವ ತೆರನಲ್ಲ ನಿಮ್ಮ ಲಿಂಗವು ನಿಮ್ಮ ಜಂಗಮದ ಸರ್ವಾಂಗ
ದೊಳಗೆ ತೊಳಗುವ ಕಾಣಾ ಕೂಡಲಚೆನ್ನಸಂಗಮದೇವಾ

೩೬ ತನು ಮನ ಧನ ತ್ರಿಸ್ಥಾನ ಸಂಗವಾಯಿತ್ತು ಆಗಿ ಭಕ್ತಿಯು
ಮದವೇರಿತ್ತು ಸದ್ಭಕ್ತಿ ಸಂಘಟಿಸೆ ಕ್ರಿಯೆ ಅರತು ತೂರ್ಯಾ
ತೂರ್ಯಗೊಂಡಿತ್ತಾಗಿ ಲಿಂಗದಲ್ಲಿ ಅರಿವು, ಜಂಗಮದಲ್ಲಿ ಮರಹು,
ಕೂಡಲಚೆನ್ನಸಂಗ ತಾನು ತಾನಾಗಿ

೩೭ ಶ್ರೀಗುರು ಕಾರುಣ್ಯದ ಸಂಬಂಧವ ಮಾಡುವಲ್ಲಿ, ಈ
ಲಿಂಗವೇ ಜಂಗಮ ಆ ಜಂಗಮವೇ ಈ ಲಿಂಗವೆಂದು ಹೇಳಿಕೊಟ್ಟಂ
ತಹ ವಿವರವನರಿಯದ ಮರುಳ ಈ ಲಿಂಗದೊಳಗೆ ಜಂಗಮ ಉಂಟೆಂದು
ಬೊಗಳುತಿರ್ಪ ಮೂಕೊರೆಯರು ನೀವು ಕೇಳಿರೋ ರಾಶಿಗಿಕ್ಕಿದ
ಲಚ್ಚಣ ರಾಶಿಯ ಕಾಂಬಲ್ಲದ ನೀವು ಮೂಢ, ರಾಶಿಯ ಒಡೆಯ
ನಲ್ಲಿದೆ? ಆ ಪರಿಯಲ್ಲಿ ಈ ಲಿಂಗವು ಜಂಗಮದ ಮುದ್ರೆ ಎಂದು ತಿಳಿ
ಅದಕ್ಕೆ ಜಂಗಮವೇ ಮಿಗೆ ಪತಿಯಾದ ಕಾರಣ, ಆ ಜಂಗಮದೊಳಗೆ
ಆ ಲಿಂಗವುಂಟೆಂಬುದು ಸತ್ಯವಲ್ಲದೆ, ಈ ಲಿಂಗದೊಳಗೆ ಜಂಗಮವು
ಉಂಟೆಂಬುದು ಸತ್ಯವಲ್ಲ ವೃಕ್ಷದ ಕೊನೆಗಳಿಗೆ ಉದಕವ ನೀಡಿದರೆ

ಫಲವಹುದೆ, ಬೇರಿಂಗೆ ನೀರು ಬೇಕಲ್ಲದೆ? ಸಾಕ್ಷಿ॥ ವೃಕ್ಷಸ್ಯವದನಂ ಭೂಮಿಃ ಸ್ಥಾವರಸ್ಯ ಚ ಜಂಗಮಃ। ಸ್ಥಾವರಂ ವೃಕ್ಷ ರೂಪೇ ಚ ವೃಕ್ಷಮೂಲಂತು ಜಂಗಮಃ। ಇದು ಕಾರಣವಾಗಿ, ವೃಕ್ಷದ ಆಧಾರವೇ ಪೃಥ್ವಿ ಆ ಪೃಥ್ವಿಯೇ ಜಂಗಮವು, ಶಾಖೆಯೇ ಲಿಂಗವು ದೇಹದ ಮೇಲೆ ಸಕಲ ಪದಾರ್ಥವ ತಂದಿರಿಸಿದೊಡೆ ತೃಪ್ತಿಯಾಗುವುದೆ ಮುಖದಿಂದೋಗರವುಣ್ಣ ನೀಡಬೇಕಲ್ಲದೆ? ಅದು ಕಾರಣವಾಗಿ, ಅವಯವಗಳು ಕಾಣಲ್ಪಟ್ಟ ಮುಖವನುಳ್ಳುದೇ ಜಂಗಮವು ದೇಹವೇ ಲಿಂಗವು ಲಿಂಗದಂಬುವುದು ಜಂಗಮವೊಂದಂಗವಯ್ಯಾ ಕೂಡಲಚನ್ನಸಂಗಮದೇವಾ

೩೮ ಭಕ್ತನ ಹಸ್ತ ಮುಟ್ಟಿ ಪಾವನವಾದವೆಂಬರು ಎಂಟನ್ನಕ್ಕರ ತಾವೇನು ಭವಿಗಳೇ? ಆತನ ಲಿಂಗ ದೇಹಿ ಎಂತೆಂಬೆ? ಲಿಂಗಾಚಾರಿ ಎಂತೆಂಬೆ? ಆತ ಪವಿತ್ರ ಕಾಯನೆಂತೆಂಬೆ? ಇದು ಕಾರಣ ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಲಿಂಗವೇ ಕ್ಷೇತ್ರವು, ಜಂಗಮವೇ ಬೀಜವೆಂದರಿಯರಾಗಿ

೩೯ ಜಗಭಂತ ಲಿಂಗವ [illegible] ಚರಾಚರಿಗೆ ಲಿಂಗವಪೂರ್ವವಯ್ಯಾ. ಗಮನ ಜಂಗಮ [illegible] ನಿರ್ಗಮನ ಜಂಗಮವಪೂರ್ವವಯ್ಯಾ ಅಚೇತನ ಲಿಂಗಕ್ಕೆ ಚೈತನ್ಯ ಜಂಗಮ ಸಾಹಿತ್ಯ ನೋಡಾ ಇಂತೀ ಲಿಂಗಾಂಗಸಂಗಸಮರಸದ ಸಕೀಲ ಸಂಬಂಧದಲ್ಲಿ ಪರಿಣಾಮಿಗಳಯ್ಯಾ ಕೂಡಲ ಚನ್ನಸಂಗಮದೇವಾ ನಿಮ್ಮ ಶರಣರು

೪೦ ಭಕ್ತಿ ಇಲ್ಲದ ಬದುಕು [illegible] ಏತಕ್ಕರಸ? [illegible] ಒಡೆದರೆ, ಫಲ ಇಲ್ಲ? ಜಂಗಮವಿಲ್ಲದ ಮಾಡಬಹುದೇ? [illegible] ನ ಭೇದಿಸಬಹುದೇ? ಇದರಿಂದ [illegible] ಕೂಡಲ ಸಂಗಮದೇವ ಜಂಗಮ ಮುಖ ಲಿಂಗ [illegible]

೪೧ ಆತ್ಮ ಲಿಂಗ, ಪರಮಾತ್ಮ ಜಂಗಮ, ತನು ಮುಖ ಪ್ರಸಾದವಾಯಿತ್ತು ನಿಶ್ಚಿಂತ ನಿವಾಸವಾಯಿತ್ತು ಕೂಡಲ ಸಂಗನ ಶರಣರ ಸಂಗದಿಂದ ನಿಶ್ಚಿಂತ ನಿವಾಸವಾಯಿತ್ತು

೪೨ ಅಷ್ಟದಳ ಕಮಲಾತ್ಮನೊಂದಿಗೆ ನಟ್ಟನೆ ಮನಕ ಪ್ರೇರಕ ನಾ ನಿಮ್ಮ ನಂಬಿದ ವ ತೆರ್ದಿಂದನರಿಯದೆ, ಮತ್ತೊಂದ ಕೇಳದ ನಿತ್ಯ

೪೯ ಸಕ್ಕರೆಯು ಆಕಾರ, ರುಚಿಯು ನಿರಾಕಾರ ಲಿಂಗವಾಕಾರ, ಜಂಗಮ ನಿರಾಕಾರ ಬೆಣ್ಣೆ ಆಕಾರ, ಘೃತ ನಿರಾಕಾರ ಆಕಾರ ಬಿಟ್ಟು ನಿರಾಕಾರವಿಲ್ಲ. ನಿರಾಕಾರ ಬಿಟ್ಟು ಆಕಾರವಿಲ್ಲ ಲಿಂಗ ಜಂಗಮವೆಂಬುಭಯ ಶಬ್ದ ಒಂದೇ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ

## ಲಿಂಗ ಜಂಗಮ ಭಕ್ತ ಸಂಬಂಧ.

೫೦ ನಿತ್ಯ ನಿರಂಜನ ಪರಶಿವನು ಲಿಂಗ ಜಂಗಮ ಭಕ್ತನೆಂದು ಮೂರು ತೆರನಾದ ನೋಡಿರೇ ಸದ್ರೂಪು ಲಿಂಗ, ಚಿದ್ರೂಪು ಭಕ್ತ, ಆನಂದಸ್ವರೂಪವೇ ಜಂಗಮ ನೋಡಾ ಆ ಚಿತ್‌ಸ್ವರೂಪವಪ್ಪ ಭಕ್ತಂಗ ಸದ್ರೂಪವಪ್ಪ ಲಿಂಗವೇ ಅಂಗ ಆನಂದಸ್ವರೂಪವಪ್ಪ ಜಂಗಮವೇ ಪ್ರಾಣ ಇದುಕಾರಣ ಲಿಂಗವೇ ಅಂಗ, ಜಂಗಮವೇ ಪ್ರಾಣ ಇದು ಕಾರಣ ಲಿಂಗವೇ ಅಂಗ ಜಂಗಮವೇ ಪ್ರಾಣ ಗ್ರಾಹಕನಾದ ಚಿನ್ಮಯನಯ್ಯಾ ಭಕ್ತನು ಲಿಂಗ ಜಂಗಮ ಭಕ್ತ ಮೂರೊಂದಾಗಿ ಪರಶಿವತತ್ವದಲ್ಲಿ ಅಡಗಿದ ಅದ್ವೈತಪರಬ್ರಹ್ಮವು ತಾನೇ ಪರಮಭಕ್ತನು ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ

೫೧ ಲಿಂಗಕ್ಕೆ ನಾದವಿಲ್ಲ ಅದೇನು ಕಾರಣ? ನಿಶ್ಶಬ್ದವಾಯಿತ್ತಾದ ಕಾರಣ ಜಂಗಮಕ್ಕೆ ಬಿಂದುವಿಲ್ಲ ಅದೇನು ಕಾರಣ? ಅದು ಶಬ್ದ ಮಂತ್ರೋಪದೇಶವನುಳ್ಳುದಾದ ಕಾರಣ ಇದುಕಾರಣ ನಾದಸ್ವರೂಪವೇ ಜಂಗಮ ಬಿಂದು ಸ್ವರೂಪವೇ ಲಿಂಗ ಇದುಕಾರಣ ಲಿಂಗವೇ ಜಂಗಮದಂಗ ಆ ಜಂಗಮವೇ ಲಿಂಗಪ್ರಾಣ ಆ ನಾದ ಬಿಂದು ಸ್ವರೂಪವಪ್ಪ ಲಿಂಗಜಂಗಮಕ್ಕೆ ಆಧಾರವಾಗಿಪ್ಪ ಚಿತ್‌ಕಲಾಸ್ವರೂಪ ಭಕ್ತ ಈ ನಾದ ಬಿಂದುಕಳೆಗಳ ಕೂಡಿಕೊಂಡಿಪ್ಪ ಶಿವತತ್ವವು ತಾನೇ ಲಿಂಗ ಜಂಗಮ ಭಕ್ತನೆಂದು ಮೂರು ತೆರನಾದನು ನೋಡಾ ಈ ಮೂರೂ ಒಂದೇ ಎಂದರಿದನು ನೋಡಾ ಎನ್ನ ಶರಣತ್ವವಾದಿಯು ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ

೫೨. ಲಿಂಗಲೀಲೆ ಹೇಳುವಡೆನಗಸಾಧ್ಯನೋಡಾ ಅಯ್ಯ! ಭಕ್ತನ ಹಸ್ತದಲ್ಲಿ ಜಂಗಮವಾಗಿ ನೆಲಸಿದನಯ್ಯಾ ಲಿಂಗಮೂರ್ತಿಯು. ಜಂಗ

ಮನ ಹಸ್ತದಲ್ಲಿ ಭಕ್ತನಾಗಿ ನೆಲಸಿವನಯ್ಯ ಲಿಂಗಮೂರ್ತಿಯು ಜಂಗಮ ಪೂಜಿಸಿದ ಫಲ ಸಂಪದಾದಿ ಮೋಕ್ಷ ಕೊಟ್ಟಿತ್ತು ಭಕ್ತಂಗೆ ಭಕ್ತ ಪೂಜಿಸಿದ ಫಲ ಜ್ಞಾನ ಸಂಪದಾದಿ ವೈರಾಗ್ಯ ಕೊಟ್ಟಿತ್ತು ಜಂಗಮಂಗೆ ಇಂತಪ್ಪ ಲಿಂಗಮೂರ್ತಿಯ ನೋಡಿ ನೋಡಿ ರೋಮಂಗಳೆಲ್ಲ ನಯನಂಗಳಾದವು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೫೩ ಇನಮಂಡಲದೊಳಗ ಕಿರಣವಡಗಿಪ್ಪಂತೆ, ಫಲವಹ ಬೀಜದಲ್ಲಿ ವೃಕ್ಷವಡಗಿಪ್ಪಂತೆ, ಇಂದುಕಾಂತ ರವಿಕಾಂತದಲ್ಲಿ ಜಲಬಿಂದು ಅಗ್ನಿ ಇಪ್ಪಂತೆ, ಸಂದಕ್ಷೀರದಲ್ಲಿ ಹೊಂದಿ ದಧಿ ತಕ್ರ ನವನೀತ ಘೃತವಿಪ್ಪಂತೆ ಅಂಗದಮೇಲೆ ಲಿಂಗ ಸಾಹಿತ್ಯವಾಗಿ ತನ್ನೊಳಗೆ ಆ ಲಿಂಗವ ಕಂಡು ಲಿಂಗದೊಳಗೆ ತನ್ನ ಕಂಡು ತನ್ನೊಳಗೆ ಸಮಸ್ತ ವಿಸ್ತಾರವನೆಲ್ಲವ ಕಂಡು ಜಂಗಮ ಮುಖ ಲಿಂಗವೆಂಬ ಭೇದವನು ಲಿಂಗಕ್ಕೆ ಜಂಗಮವೇ ಪ್ರಾಣವಾಗಿಪ್ಪ ಭೇದವನು ಅಂಗದೊಳಗೆ ಲಿಂಗವೇ ಆಚಾರವಾಗಿ ಅಳವಟ್ಟ ವಿವರವನು ಲಿಂಗಾಂಗ ಸ್ಥಲ ಸಂಬಂಧ ಸ್ಥಲ ಕುಳಂಗಳ ವಿವರವಾಗಿ ಇದ್ದಿತೆಂಬುದನು ಕಂಗಳ ನೋಟಕ್ಕೆ ಗುರುವಾದ ಲಿಂಗನ ಅಂಗವನೊಳಕೊಂಬ ಭೇದವನು ಸಂಗನಬಸವಣ್ಣ ಚನ್ನಬಸವಣ್ಣಸಂದ ಕೃಪೆ ಮಾಡಿಸಿ ಎನ್ನನುಳುಹು ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನದೇವಯ್ಯ

## ಲಿಂಗ ಜಂಗಮ ಪ್ರಸಾದ ಸಂಬಂಧ

೫೪ ಲಿಂಗ ಮಹಿಮನರಿದವಂಗೆ ಅಂಗವೆಂಬುದಿಲ್ಲ ಜಂಗಮ ಮಹಿಮನರಿದವಂಗೆ ಸಂಸಾರವೆಂಬುದಿಲ್ಲ ಪ್ರಸಾದ ಮಹಿಮನರಿದವಂಗೆ ಇಹಪರವೆಂಬುದಿಲ್ಲ ಈ ತ್ರಿವಿಧಕ್ಕ ಒಂದಾದವಂಗ ಮುಂದೇನು ಇಲ್ಲವಯ್ಯಾ ಈ ತ್ರಿವಿಧದ ನೆಲೆಯ ಶೃತಿ ಸ್ಮೃತಿ ಪುರಾಣಾಗಮ ಇತಿಹಾಸಂಗಳರಿಯವಯ್ಯಾ ಎಲೆಲೆ ಕೂಡಲಚನ್ನಸಂಗಯ್ಯ ನಿಮ್ಮ ಶರಣರೇ ಬಲ್ಲರಯ್ಯಾ

೫೫ ಲಿಂಗ ಗ್ರಾಹಕನಾದ ಶರಣ ಅಂಗಗುಣಕ್ಕೆ ವಿರೋಧಿಯಯ್ಯಾ ಜಂಗಮ ಗ್ರಾಹಕನಾದ ಶರಣ ತೀರ್ಥ ಪ್ರಾಣಾಭಿಮಾನಕ್ಕೆ ವಿರೋಧಿಯಯ್ಯಾ ಪ್ರಸಾದ ಗ್ರಾಹಕನಾದ ಶರಣ ಜಿಹ್ವೇಂದ್ರಿಯದ

ರುಚಿಗೆ ವಿರೋಧಿಯಯ್ಯ ಇಂತೀ ತ್ರಿವಿಧ ಗ್ರಾಹಕನಯ್ಯಾ ನಿಮ್ಮ ನಿಜ ಶರಣ ಕೂಡಲಚನ್ನಸಂಗಮದೇವಾ

೫೬ ಕ್ರಿಯೆಯೆಂಬುದನಾರು ಬಲ್ಲರೋ? ಅಂಗ ಲಿಂಗವೆಂಬ ಸಂದುಳಿದುದು ಕ್ರಿಯೆಯಲ್ಲ ಅರ್ಪಿತ ಅನರ್ಪಿತವೆಂಬರು ಅರ್ಪಿತವಾವುದು? ಅನರ್ಪಿತವಾವುದು? ತನುವೆಂಬ ಲಿಂಗವು ಪ್ರಾಣವೆಂಬ ಜಂಗಮಕ್ಕೆ ಮನವ ಸಮರ್ಪಣೆಯ ಮಾಡಿ ಆ ಪ್ರಾಣಲಿಂಗವೆಂಬ ಜಂಗಮಕ್ಕೆ ಮನವ ಸಮರ್ಪಿಸಿದ ಸತ್ಕ್ರಿಯಾಪ್ರಸಾದಿಗಳ ತೋರಿಸಿ ಬದುಕಿಸಯ್ಯ ಎನ್ನ ಕೂಡಲ ಚನ್ನಸಂಗಮದೇವಾ

೫೭ ಲಿಂಗವಾದ ಬಳಿಕ ಪೂಜಿಸಲಿಲ್ಲ ಜಂಗಮವಾದ ಬಳಿಕ ನೋಡಲಿಲ್ಲ ಪ್ರಸಾದಿಯಾದ ಬಳಿಕ ರುಚಿಸಲಿಲ್ಲ ಇಂತೀ ತ್ರಿವಿಧ ಒಂದಾದ ಬಳಿಕ ಕಪಿಲಸಿದ್ಧಮಲ್ಲಯ್ಯ ಬೇರೊಂದು ತಿಳಿಯಲಿಲ್ಲ

೫೮. ಪೂಜಯುಳ್ಳನ್ನಬರ, ಲಿಂಗವ ಹಾಡಿದ ಮಾಟವುಳ್ಳನ್ನಬರ, ಜಂಗಮವ ಹಾಡಿದ ಜಿಹ್ವೆಯುಳ್ಳನ್ನಬರ, ಪ್ರಸಾದವ ಹಾಡಿದೆ ಈ ತ್ರಿವಿಧ ನಾಸ್ತಿಯಾದ ಬಳಿಕ ಎನ್ನ ನಾ ಹಾದಿಕೊಂಡೆ ಕಾಣಾ ಕೂಡಲ ಸಂಗಮದೇವಾ

## ಗುರು ಲಿಂಗ ಜಂಗಮ ಸಂಬಂಧ

೫೯ ಗುರುವಾದಡೂ ಮಲತ್ರಯದಾಸೆಯುಳ್ಳನ್ನಕ್ಕ ಮಲದೇಹಿ ಲಿಂಗವಾದಡೂ ಶಕ್ತಿ ಸಂಪುಟವುಳ್ಳನ್ನಕ್ಕ ಭವಕ್ಕೊಳಗು ಜಂಗಮವಾದಡೂ, ತನ್ನಿರವ ತಾನರಿಯದನ್ನಕ್ಕ ಪ್ರಸಿದ್ಧ ಭಾವಪಿಲ್ಲಿ ಇಂತಿವನರಿತು ಪೂಜಿಸಬೇಕು, ತನ್ನಯ ಜನ್ಮನಿವೃತ್ತಿಯ ಮಾಡಿಕೊಳಬಲ್ಲಡೆ ಇದೇ ಸದ್ಭಕ್ತನಿರವು ಸದಾಶಿವ ಮೂರ್ತಿಲಿಂಗವನರಿವುದಕ್ಕೆ

೬೦ ಗುರುವೆಂದಡೂ ಕಾಯವುಳ್ಳನ್ನಕ್ಕ ದೋಷಕ್ಕೆ ಹೊರಗಾಗಿರಬೇಕು ಲಿಂಗವೆಂದಡೂ ಪೀಠಕ್ಕೆ ಸಿಕ್ಕಿಹನ್ನಕ್ಕರ ಜಗದಾಗುಹಾಗೆಯನರಿಯಬೇಕು. ಜಂಗಮವೆಂದಡೂ ಸುಖದುಃಖವುಳ್ಳನ್ನಕ್ಕರ ಕಾಯವಿಡಿದಿಹ ಕಾರಣ ಪಾತಕಕ್ಕೆ ಹೊರಗಾಗಿರಬೇಕು ಶೂನ್ಯವಾದಡೂ ಆ

ಕೈಕೊಂಬುದಕ್ಕೆ ಕರ್ತನಾದ ಲಿಂಗವಾದರೆ, ಪೂಜಕನ ಮನದಲ್ಲಿ ಎರಕ ವೆರೆದ ಹಾಗೆ ಕೂಡಿರಬೇಕು ಪ್ರಾಣ ಲಿಂಗವಾಗಿ ಭಕ್ತರುಗಳಿಂದ ಭಕ್ತಿಯ ಕೈಕೊಂಬುದಕ್ಕೆ ಕರ್ತನಾದ ಜಂಗಮನಾದರೆ ಆವುದಾನೆಂದು ವಸ್ತುವಿನ ಮೇಲಣ ಬಯಕೆ ತನ್ನಲ್ಲಿ ಹುಟ್ಟುವದು ಆ ವಸ್ತುವ ಸಾಧಿಸುವುದಕ್ಕೆ ಹಲವು ವರ್ತನೆಗಳಲ್ಲಿ ತಾ ಕೂಡಿರುವುದು ಆ ವಸ್ತುವಿನಲ್ಲಿ ಮನವು ಲಯುವ ನೆಯ್ದಿರುವುದು ಈ ಸೃಷ್ಟಿ ಸ್ಥಿತಿ ಸಂಹಾರಂಗಳ ಉಪಾಧಿಯಲ್ಲಿ ನಿಲ್ಲದೆ, ಬಂದೀತು ಬಾರದೆಂಬ ಮನೋವ್ಯಾಕುಲ ವಿಲ್ಲದವನಾಗಿ ಇಂತೀ ಗುರು ಲಿಂಗ ಜಂಗಮವು, ತ್ರಿವಿಧ ಪದಾರ್ಥ ಕೈಕೊಂಬುದಕ್ಕೆ ಯೋಗ್ಯವಾಗಿ, ಆ ಭಕ್ತನ ಮೂರಂಗವು ಆಣವ ಮಾಯಾ ಕಾರ್ಮಿಕವಂಬ ಮಲ ಮೂರಕ್ಕೆ ಬೇರಾಗಿ, ತ್ಯಾಗ ಭೋಗ ಯೋಗಾಂಗವಾಗಿ ಇಷ್ಟ ಪ್ರಾಣ ಭಾವ ಲಿಂಗ ಸಂಬಂಧವಾಗಿ ಆತ್ಮತ್ರಯಂಗಳು ಜ್ಞಾನ ಗುರು ಲಿಂಗ ಜಂಗಮದ ಭಕ್ತಿಯಲ್ಲಿ ಇಂಬುಗೊಂಡು ಇಷ್ಟ ಪ್ರಾಣ ಭಾವ ಲಿಂಗದ ಮೇಲಣ, ಗುರುಲಿಂಗ ಜಂಗಮದ ಮೇಲಣ ಪ್ರೀತಿ ಪ್ರೇಮದಲ್ಲಿ ಭಿನ್ನವಿಲ್ಲದ ತನುತ್ರಯಂಗಳೆಲ್ಲ ಇಷ್ಟ ಪ್ರಾಣ ಭಾವ ಲಿಂಗ ಸ್ವರೂಪವಾಗಿ, ಆತ್ಮತ್ರಯಂಗಳೆಲ್ಲ ಗುರುಲಿಂಗ ಜಂಗಮ ಸ್ವರೂಪವಾದ ಮಹಾಲಿಂಗದಲ್ಲಿ ಏಕತ್ವವನುಳ್ಳ ಶಿವೈಕ್ಯಂಗ ಬಯಕ ನಿರ್ಬಯಕೆ ಇಲ್ಲ, ಶುಭಾಶುಭಂಗಳಿಲ್ಲ, ಜ್ಞಾನ ಕ್ರಿಗಳಿಲ್ಲ ಈ ಖಂಡಿತ ಭಾವವುಳ್ಳ ತನಲ್ಲ ಲಿಂಗನೇ ತಾನೆಂದರಿದ ಶರಣನೆಂಬುದರ್ಥ

೬೫ ಗುರುಲಿಂಗ ಜಂಗಮದ ಇರವನರಿವಲ್ಲಿ ತನ್ನ ಪ್ರಪ್ತಿಯೋ ಅವರಿಂದ್ವೋ ಎಂಬುವನರಿಯಬೇಕು ಗುರುವಿನಲ್ಲಿ ಗುಣವ ನರಸಲಿಲ್ಲ ಎಂಬುದು, ಲಿಂಗದಲ್ಲಿ ಲಕ್ಷಣವನರಸಲಿಲ್ಲ ಎಂಬುದು, ಜಂಗಮದಲ್ಲಿ ಜಾತಿ ಸೂತಕವ ನರಸಲಿಲ್ಲ ಎಂಬುದು ಇದು ಎಲ್ಲರ ಬಳಕೆಯ ಮಾತು ಗುರುವಿನಲ್ಲಿ ಗುಣವನರಸದಿರ್ದಡೆ ಶಿಷ್ಯನ ಕೃತಾರ್ಥನ ಮಾಡುವ ಪರಿ ಇನ್ನೆಂತೋ? ಲಿಂಗದಲ್ಲಿ ಲಕ್ಷಣವಿಲ್ಲದಿರ್ದಡೆ ಪಂಚಸೂತ್ರ ಪ್ರವರ್ತನ ವರ್ತುಳ ಗೋಮುಖ ಗೋಳಕಾಕಾರ ಇಷ್ಟಾರ್ಥ ಭಕ್ತರಿಗೆ ಮನೋಹರವಾಹ ಪರಿ ಇನ್ನೆಂತೋ? ಜಂಗಮಕ್ಕೆ ಜಾತಿ ಇಲ್ಲದಿರ್ದಡೆ ಉತ್ತಮ ಮಧ್ಯಮ ಕನಿಷ್ಠ ಈ ಅಂಗದಲ್ಲಿ ವಿಶೇಷವ ಕಂಡು ಜಾತಿಯ ಹಿಂಗುವ ಪರಿ ಇನ್ನೆಂತೋ? ನುಡಿಯಬಾರದು ಮರುಕನಕ್ಕಂಜಿ ಸುಮ್ಮನೆ ಇರ

೬೨ ಗುರುವಿನಿಂದ ಲಿಂಗವ ಕಂಡೆನಲ್ಲದೆ ಲಿಂಗದಿಂದ ಲಿಂಗವ ಕಾಣಲಿಲ್ಲಯ್ಯ ಲಿಂಗದಿಂದ ಫಲಪದವಿಗಳ ಕಂಡೆನಲ್ಲದೆ ಫಲಪದಂಗಳಿಂದೆ ಫಲಪದವಿಗಳ ಕಾಣಲಿಲ್ಲವಯ್ಯ ಜಂಗಮನಿಂದ ಮೋಕ್ಷವ ಕಂಡೆನಲ್ಲದೆ ಮೋಕ್ಷದಿಂದ ಮೋಕ್ಷವ ಕಾಣಲಿಲ್ಲಯ್ಯ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ

೬೩ ಲಿಂಗ ಘನವೆಂಬೆನೆ? ಗುರುವಿಡಿದು ಕಂಡೆ ಗುರು ಘನವೆಂಬೆನೆ? ಸಾಕಾರವಿಡಿದು ಕಂಡೆ ಸಾಕಾರ ಘನವೆಂಬೆನೆ? ನಿರಾಕಾರವಿಡಿದು ಕಂಡೆ ನಿರಾಕಾರ ಘನವೆಂಬನೆ? ಜಂಗಮವಿಡಿದು ಕಂಡೆನಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ

೬೪ ಇನ್ನಾಡುವೆ ಇನ್ನಾಡುವೆ ಮನ ಬಂದ ಪರಿಯಲ್ಲಿ ಅದಕ್ಕೆ ನೀವು ಸಂದೇಹಗೊಳ್ಳದಿರಿ, ಪ್ರಮಥರಿರಾ ಸಂದೇಹವುಳ್ಳರ ಜಂಗಮವಲ್ಲ ಸಂದೇಹವೇ ಲಿಂಗವಾದ ಬಳಿಕ ಇನ್ನೆಲ್ಲಿಯದಯ್ಯ, ಇನ್ನೆಲ್ಲಿಯದಯ್ಯ ಸಂಕಲ್ಪ ವಿಕಲ್ಪವು ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ?

೬೫ ಗುರುವೇ ಪರಬ್ರಹ್ಮವು ಆದಂತೆಂದೊಡೆ, ಲಲಾಟದಲ್ಲಿರ್ಪ ಆತ್ಮನಂ ಭಸ್ಮತೇಜೋಮುಖದಿಂ ಕರಗ್ರಸ್ತವಂ ಮಾಡಿ ಹಸ್ತಮಸ್ತಕ ಸಂಗದಿಂ ಬ್ರಹ್ಮಸ್ಥಾನದಲ್ಲಿ ಭಾವಮಧ್ಯದಲ್ಲಿಂಬಿಟ್ಟು ಆ ವಸ್ತುವೇ ಶಿವನೆಂದು ಕರ್ಣೋಪದೇಶಮಂ ಮಾಡಿ, ಆ ವಸ್ತು ಹೇಗಿರ್ಪುದೆಂದವರೆ ಹೀಗಿರ್ಪುದೆಂದು ಸಾಕಾರಮೂರ್ತಿಯಾದ ಲಿಂಗವಂ ಕರದಲ್ಲಿ ಕೊಟ್ಟು ಒಳಗಿರ್ಪ ಮಂತ್ರವೂ ಹೊರಗಿರ್ಪ ಲಿಂಗವೂ ಭಾವದಲ್ಲೊಂದಾಗಿ ಪ್ರಕಾಶಿಸುವಂತೆ ಮಾಡಿ, ಅಂತಃಕರ್ಮವು ಮಂತ್ರದಿಂ, ಬಾಹ್ಯಕರ್ಮವು ಲಿಂಗದಿಂ, ಪೂರ್ವಮಾಗಿರ್ಪ ವಾಸನೆಯುಳಿದು ಲಿಂಗಪ್ರಸಾದೋಪಭೋಗದಿಂ ಕರಣಂಗಳೆಲ್ಲ ಲಿಂಗದ ಕಿರಣಂಗಳಾಗಿ ಲಿಂಗಾನುಭವ ಸುಖದಿಂ ತನ್ನಂ ಮರೆತು, ಲಿಂಗವೇ ತಾನಾಗಿರ್ಪವನೇ ಜಂಗಮವು ಲಿಂಗಯಂತ್ರದಲ್ಲಿ ಮಂತ್ರಬೀಜಾಕ್ಷರವನಿಂಬಿಟ್ಟು, ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂ ಪೂಜಿಸುತ್ತಿರ್ಪಾತನೇ ಭಕ್ತನು ಗುರುವೆಂಬ ಪರಬ್ರಹ್ಮದಲ್ಲಿ ಜಂಗಮ ಲಿಂಗ ಭಕ್ತರೆಂಬ ಮೂರು ಮೂರ್ತಿಗಳುತ್ಪನ್ನರಾಗಿ, ಭಕ್ತನು ಕರ್ಮವಂ ಸೃಷ್ಟಿಸುತ್ತಿರ್ಪನು. ಲಿಂಗವು ತತ್ಕರ್ಮವಂ ರಕ್ಷಿಸುತ್ತಿರ್ಪುದು ಜಂಗಮವು ಆ ಸತ್ಕರ್ಮಸುಖದಿಂ ಬಂದ ಪಾ

ದಾಗಲೆಲ್ಲ ಉದರದೊಳಗಿಟ್ಟುದರಿಂ ಸಂಹರಿಸುತ್ತಿರ್ದನು ಸೃಷ್ಟಿ ಕರ್ತೃವೇ ಸ್ಥೂಲವೂ, ಸ್ಥಿತಿ ಕರ್ತೃವೇ ಸೂಕ್ಷ್ಮವೂ, ಸಂಹಾರಕರ್ತೃವೇ ಕಾರಣವೂ ಆದುದರಿಂದ, ಸ್ಥೂಲಕ್ಕೆ ಸೂಕ್ಷ್ಮವೇ ಚೈತನ್ಯವು. ಸೂಕ್ಷ್ಮಕ್ಕೆ ಕಾರಣವೇ ಚೈತನ್ಯವು ಆಕಾರವಿದ್ದಂತಿರ್ದುದು ಸಕಲ ಶರೀರಕ್ಕೂ ಶಿರಸ್ಸೇ ಕಾರಣವಾಗಿರ್ಪಂತೆ ಲಿಂಗ ಭಕ್ತರಿಗೆ ಜಂಗಮವೇ ಕಾರಣವಾಗಿ, ಜಂಗಮೋಪಯೋಗದಿಂ ಲಿಂಗವು ತೃಪ್ತಿಗೊಳ್ಳುತ್ತಿರ್ಪುದಾದುದರಿಂದ ಜಂಗಮವು ಸ್ವಾಭಾವದಿ ಸಕಲಕ್ಕೂ ಕಾರಣವಾಯಿತ್ತು ಕಾರಣ ಶರೀರವಂ ಹೊಂದುವುದೇ ಸುಕ್ಷೇತ್ರವು, ಅದೇ ಸ್ವಸ್ವರೂಪ ಜ್ಞಾನವು, ಅದೇ ಅಭೇದವು ಅಂತಪ್ಪ ಜಂಗಮನ ಸೇವೆಯೊಳಗೆ ಸಾಧ್ಯವಪ್ಪಂತೆ ಮಾಡಿ ಸಲಹಾ ಮಹಾಘನದೊಡೆಯ ಮಡಿವಾಳಯ್ಯ ಗುರುಪ್ರಭುವೇ

## ಅಷ್ಟಾವರಣಗಳಲ್ಲಿ ಗುರುಲಿಂಗಜಂಗಮವು

೭೬ ಶ್ರೀಗುರುವಿನ ಪಾದವೇ ಅಖಂಡ ಘನಲಿಂಗ, ತನ್ಮೂರ್ತಿಯೇ ಅಯ್ಯನು, ತತ್ಸಂಬಂಧ ಪ್ರಸಾದವೇ ಚರಮೂರ್ತಿ ಶಿವಲಿಂಗದ ಪೀಠವೇ ಗುರು ಗೋಮುಖವೇ ಚರಮೂರ್ತಿ, ಗೋಳಕವೇ ಶಿವಲಿಂಗ ಜಂಗಮನ ಶ್ರೀಪಾದವೇ ಅಖಂಡ ಘನಲಿಂಗ, ತನ್ಮೂರ್ತಿಯೇ ಚರಮೂರ್ತಿ, ತತ್ಸಂಬಂಧ ಪ್ರಸಾದವೇ ಶ್ರೀಮೂರ್ತಿ ಶಿವಸ್ವಯವೇ ಮಹಾಘನಲಿಂಗ ತನ್ಮುಖವೇ ಚರಮೂರ್ತಿ ಪರಿಣಾಮವೇ ಶ್ರೀಗುರು ಪಾದೋದಕದ ಸ್ವರೂಪವೇ ಲಿಂಗದ ಸತ್ಪ್ರಸಾದವೇ ಶಿವಲಿಂಗ, ಶಿವನ ಮುಖಾನಂದವೇ ಚರಮೂರ್ತಿ ಭಸ್ಮವೇ ಶಿವಲಿಂಗ, ತದ್ಗತ ಮಂತ್ರವೇ ಚರಮೂರ್ತಿ ಪ್ರಸಾದ ಚೈತನ್ಯವೇ ಶ್ರೀಗುರು ಅಕ್ಷರ ಮಾಲಿಕೆ ಶ್ರೀಗುರು ತನ್ನಾಮವೇ ಲಿಂಗ, ತನ್ನ ಮೂರ್ತಿ ಚರಮೂರ್ತಿ ನಮಃ ವರ್ಣವೇ ಶಿವಲಿಂಗ, ಶಿವಾಕ್ಷರವೇ ಚರಮೂರ್ತಿ, ಆ ಯಕಾರವೇ ಶ್ರೀಗುರು

## ತನಗೂ ಗುರುಲಿಂಗ ಜಂಗಮಕ್ಕೂ ಇರುವ ಸಂಬಂಧ.

೭೭ ಕಾಯ ಗುರು, ಪ್ರಾಣ ಲಿಂಗ, ಜ್ಞಾನ ಜಂಗನು ಕಾಯದಲ್ಲಿ ಶುದ್ಧ ಪ್ರಸಾದ, ಪ್ರಾಣದಲ್ಲಿ ಸಿದ್ಧ ಪ್ರಸಾದ, ಜ್ಞಾನದಲ್ಲಿ ಪ್ರಸಿದ್ಧ ಪ್ರಸಾದ ಇಂತೀ ತ್ರಿವಿಧ ಪ್ರಸಾದ ನಿರ್ಣಯ ಕೂಡಲ ಚನ್ನ ಸಂಗಾ ನಿಮ್ಮ ಶರಣಂಗೆ

೭೮ ಗುರುವೆಂದಡೆ ತನು, ಲಿಂಗವೆಂದಡೆ ಆತ್ಮ, ಜಂಗಮ ವೆಂದಡೆ ಆತ್ಮನ ಅರಿವು ತ್ರಿವಿಧ ವ್ಯಾಪ್ತಿಯ ಕಳೆದುಳಿದ ಸರ್ವಜ್ಞಾನದ ಸಂಬಂಧವನು ನೀನೇ ಅನುಪಮ ಲಿಂಗ ನಿರವಯ ನಿಷ್ಕಳಂಕ ಮಲ್ಲಿ ಕಾರ್ಜುನಾ

ಅರ್ಥಃ— ಗುರುವೆಂಬುದರ ಅರ್ಥವೇನಯ್ಯಾ ಎಂದರೆ, ಅಂಗದಲ್ಲಿ ಸಂಬಂಧ ವಾಗಿಪ್ಪುದು ಲಿಂಗವೆಂಬುದರ ಅರ್ಥವೇನಯ್ಯ ಎಂದರೆ, ಮನ ದಲ್ಲಿ ಸಂಬಂಧವಾಗಿಪ್ಪುದು ಜಂಗಮ ವೆಂಬುವದರರ್ಥ ವೇನಯ್ಯಾ ಎಂದರ ಚಿದಾತ್ಮನಲ್ಲಿ ಸಂಬಂಧವಾಗಿಪ್ಪುದು ಮಲತ್ರಯಂಗಳ ವ್ಯಾಪ್ತಿಯನು ಬೇರ್ಪಡಿಸಿ, ತನುವೇ ಗುರು, ಮನವೇ ಲಿಂಗ, ಚಿದಾತ್ಮನೇ ಜಂಗಮ ವಾಗಿ, ಅವಶೇಷವಾಗಿರ್ದ ಸರ್ವಜ್ಞಾನದಲ್ಲಿ ಕೂಟಸ್ಥನಾದ ಶರಣನೇ ಶಿವನು ಉಪಮಿಸಬಾರದ ಲಯಗಮನಂಗಳಿಗೆ ಕಾರಣವಾದ ನಿರಾ ಕಾರವಾದ ಎಲೆ ಶಿವನೇ ಎಂಬುವರ್ಥ

೭೯ ಕಾಯವಿಡಿದು ಕಾಂಬುವುದು ಗುರುಸ್ಥಲ ಜೀವವಿಡಿದು ಕಾಂಬುವುದು ಲಿಂಗಸ್ಥಲ ಭಾವವಿಡಿದು ಕಾಂಬುವುದು ಜಂಗಮಸ್ಥಲ ತ್ರಿವಿಧವನೊಡಗೂಡಿ ಕಾಂಬುವುದು ಭಕ್ತಸ್ಥಲ ಭಕ್ತಿ ನಿಷ್ಟೆಯುವಾಗಿ ನಿಂವಲ್ಲಿ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗ ನಿಷ್ಟೆಯುವಾದ ಸ್ಥಲ

೮೦ ತನುವಿಡಿದು ಕಾಂಬುವುದು ಗುರುವಿನ ಭೇದ, ಮನವಿಡಿದು ಕಾಂಬುವುದು ಲಿಂಗಭೇದ ಜ್ಞಾನವಿಡಿದು ಕಾಂಬುವುದು ಜಂಗಮದ ಭೇದ ಈ ತ್ರಿವಿಧವಿಡಿದು ಕಾಂಬುವುದು ಮಹಾಪ್ರಕಾಶ. ಮಹಾಪ್ರಕಾಶ ದೊಳಗೆ ಮಹವ ಕಂಡು ಮಹಕ್ಕೆ ಮಹನಾಗಿರ್ದೆನಯ್ಯಾ ಮಹಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ

೮೧ ಗುರುವೇ ಅಂಗ, ಲಿಂಗವೇ ಮನ ಜಂಗಮವೇ ಪ್ರಾಣವಯ್ಯ ನಾದವೇ ಗುರು, ಬಿಂದುವೇ ಲಿಂಗ, ಕಳೆಯೇ ಜಂಗಮವಯ್ಯ ಗುರುವೇ ಲಿಂಗ, ಲಿಂಗವೇ ಜಂಗಮ, ಜಂಗಮವೇ ಪ್ರಸಾದ ಪ್ರಸಾದ ಸಂಪೂರ್ಣವಾದಡೆ ಸೌರಾಷ್ಟ್ರ ಸೋಮೇಶ್ವರಲಿಂಗವು ತಾನೇ

೮೨ ಮನ ಘನವಸ್ತುವಾದ ಬಳಿಕ, ಮನ ವಚನ ಕಾಯವೆಂಬ ತ್ರಿಕರಣ ಶುದ್ಧಾತ್ಮನೆಂಬೆ, ನಿತ್ಯ ಮುಕ್ತನೆಂಬೆ, ನಿರಾಲಂಬಿ ಎಂಬ ಆತನ ತನು ಶುದ್ಧವಾಗಿ, ತನುವೇ ಗುರು, ಆತನ ಮನ ಶುದ್ಧವಾಗಿ ಮನವೇ ಲಿಂಗ, ಆತನ ಭಾವ ಶುದ್ಧವಾಗಿ, ಭಾವವೇ ಮಹಾನುಭಾವ ಚರಲಿಂಗ ನೋಡಾ ಇಂತೀ ಜ್ಞಾನವೆಂಬ ಗುರು, ಅರುಹೆಂಬ ಶಿವಲಿಂಗ ಮಹಾನುಭಾವವೆಂಬ ಜಂಗಮ, ಇಂತೀ ತ್ರಿವಿಧವು ತನ್ನ ತ್ರಿವಿಧಾತ್ಮ ನೋಡಾ ಜ್ಞಾನವೆಂಬ ಗುರುವೆಂದಡೆ ಜೀವಾತ್ಮ, ಅರುಹೆಂಬ ಶಿವಲಿಂಗ ವೆಂದಡ ತನ್ನ ಅಂತರಾತ್ಮ, ಮಹಾನುಭಾವ ಜಂಗಮವೆಂದಡೆ ತನ್ನ ಪರಮಾತ್ಮ ಇಂತೀ ತ್ರಯಾತ್ಮವೇ ಏಕಾತ್ಮವಾದಡ ಸಚ್ಚಿದಾನಂದ ನಿರಂಜನ ಪರಾಪರ ವಸ್ತು ನೀನೇ ಅಲ್ಲಿ ನಾ ನೀ ಎನಲಿಕ್ಕಿಲ್ಲ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ

೮೩ ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು ಆಚಾರವನೇ ಲಿಂಗವೆಂದರುಹಿದನಯ್ಯ ಬಸವಣ್ಣನು ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು ಆ ಅರಿವೇ ಜಂಗಮವೆಂದರುಹಿದ ನಯ್ಯ ಬಸವಣ್ಣನು. ಚನ್ನಮಲ್ಲಿಕಾರ್ಜುನಯ್ಯ ಎನ್ನ ಹೆತ್ತ ತಂದೆ ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯ ಪ್ರಭುವೇ

೮೪ ಗುರು ಸ್ವರೂಪವಾಗಿ ಮಸ್ತಕಸ್ಥಾನದಲ್ಲಿ ಇರುತಿರ್ದ ಲಿಂಗ ಸ್ವರೂಪವಾಗಿ ಭ್ರೂಮಧ್ಯದಲ್ಲಿ ಇರುತಿರ್ದ ಜಂಗಮ ಸ್ವರೂಪವಾಗಿ ಹೃದಯ ಕಮಲ ಮಧ್ಯದಲ್ಲಿ ಇರುತಿರ್ದ ಈ ಪರಿ ಅಂತರಂಗ ಭರಿತನಾ ಗಿರ್ದನಯ್ಯ ಬಹಿರಂಗದಲ್ಲಿ ಶ್ರೀ ಗುರು ಲಿಂಗವಾಗಿ ದೀಕ್ಷಿಸಿ ರಕ್ಷಿಸಿದ ಶಿವಲಿಂಗವಾಗಿ ಕರಸ್ಥಲದಲ್ಲಿ ಪೂಜಗೊಂಡು ರಕ್ಷಿಸಿದ ಜಂಗಮಲಿಂಗ ವಾಗಿ ಅವಗುಣಂಗಳೆಲ್ಲವ ಕಳೆದು ಶಿಕ್ಷಿಸಿ ರಕ್ಷಿಸಿದ ಇಂತೀ ತ್ರಿವಿಧವು ಒಂದೇ ರೂಪಾಗಿ ಅಂತರಂಗ ಬಹಿರಂಗ ಭರಿತವಾಗಿ ಪ್ರಸಾದವ ಕರುಣಿಸಿ ಮುಕ್ತನ ಮಾಡಿದಯ್ಯ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ

೮೫  ತ್ರಿವಿದದ ಅನಿತ್ಯ ತ್ರಿವಿಧದ ನಿತ್ಯವ ಬಲ್ಲವರುಂಟೋ? ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧ ಪ್ರಸಾದವ ಕೊಳಬಲ್ಲಡೆ ಆತನ ತ್ರಿವಿಧನೆಂಬೆ, ಆತನ ವೀರನೆಂಬೆ, ಆತನ ಧೀರನೆಂಬೆ, ಗುಹೇಶ್ವರ ಲಿಂಗದಲ್ಲಿ ಆತನ ಅಚ್ಚಪ್ರಸಾದಿ ಎಂಬೆ

೮೬  ಅರುಹು ತಲೆದೋರಿತೆಂದು ಗುರು ಹಿರಿಯರ ಜರಿಯಲಾಗದಯ್ಯ ಗುರುವನು ಜರಿಯೆ ಹಿರಿಯರನು ಜರಿಯೆ ಅದೇನು ಕಾರಣವೆಂದರೆ, ಗುರುವೇ ಸದ್ರೂಪು, ಲಿಂಗವೇ ಚಿದ್ರೂಪು, ಜಂಗಮವೇ ಆನಂದ ಸ್ವರೂಪವು ಅವನು ಜರಿಯಲುಂಟೇ? ನಡುವಣ ಪ್ರಕೃತಿಯು ಜರಿವುತ್ತಿರ್ಪನಯ್ಯ ಪ್ರಕೃತಿಯು ಜರಿದರೆ ಗುರುಹಿರಿಯರಿಗೆ ನಿಮಗೇಕೆ ದುಮ್ಮಾನವಯ್ಯಾ? ಪ್ರಕೃತಿ ಏನು ನಿಮ್ಮ ಸೊಮ್ಮು ಹೇಳಿರಯ್ಯಾ? ಜೀವನೋಪಾಯಕ್ಕೆ ಪರಮಾರ್ಥವನೊಲ್ಲ ಎಂಬ ಪ್ರಪಂಚಿಗಳನು ಮೆಚ್ಚನು ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ

೮೭. ಸರ್ವ ನಿರ್ವಾಣವಾದಲ್ಲಿ ಗುರುಸ್ಥಲ ಲಯ ನಿರ್ವಾಣವಾದಲ್ಲಿ ಲಿಂಗಸ್ಥಲ ಇಷ್ಟ, ಕಾಮ್ಯ, ಮೋಕ್ಷಂಗಳು, ಉತ್ಪತ್ತಿ, ಸ್ಥಿತಿ, ಲಯ, ಆಣವ, ಮಾಯಿಕ, ಕಾರ್ಮಿಕ ನವಗುಣಂಗಳು ನಿಂದು ಶಬ್ದಮುಗ್ಧವಾದುದು ಜಂಗಮಸ್ಥಲ ಇಂತೀ ಸ್ಥಲ ಕುಳಂಗಳ ಭೇದಿಸಿ ಸರ್ವಜ್ಞ ಪರಿಪೂರ್ಣವಾಗಿಪ್ಪ ತ್ರಿವಿಧ ಮೂರ್ತಿಯೇ ನಿಃಕಳಂಕ ಮಲ್ಲಿಕಾರ್ಜುನ ತಾನು ತಾನೇ

೮೮  ಮೃದು ರುಚಿ ರೂಪು ಕೂಡಿ ಸಕ್ಕರೆಯಾಯಿತ್ತು ಗುರು ಲಿಂಗ ಜಂಗಮ ಕೂಡಿ ವಸ್ತು ಆಯಿತ್ತು ಮೃದುವಿನಂತೆ ಗುರುವು, ರುಚಿಯಂತೆ ಲಿಂಗ, ರೂಪಿನಂತೆ ಜಂಗಮ, ಕೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ

೮೯  ತನ್ನ ತಾನರಿದಡೆ ತನ್ನರಿವೇ ಗುರು, ತಾನೇ ಲಿಂಗ, ತನ್ನ ನಿಷ್ಪತ್ತಿಯೇ ಜಂಗಮ ಇಂತೀ ತ್ರಿವಿಧವು ಒಂದಾದಡೆ ರಾಮೇಶ್ವರ ಲಿಂಗವು ತಾನೆ

೯೦  ಎನ್ನ ಚಿನ್ನಾದದಿರವ ಗುರುವೆಂದೆನಿಸಿದ ಬಸವಣ್ಣ. ಎನ್ನ ಚಿದ್ಬಿಂದುವಿನ ಇರವ ಲಿಂಗವೆಂದೆನಿಸಿದ ಬಸವಣ್ಣ ಎನ್ನ ಚಿತ್ಕಳೆಯ ಇರವ ಜಂಗಮವೆಂದೆನಿಸಿದ ಬಸವಣ್ಣ ಗುರುವಿನಲ್ಲಿ ಶುದ್ಧ, ಲಿಂಗದಲ್ಲಿ

ಸಿದ್ಧ, ಜಂಗಮದಲ್ಲಿ ಪ್ರಸಿದ್ಧ ಇಂತೀ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದದಲ್ಲಿ ಎನ್ನನುಣಕಲಿಸಿದ ಕಲಿದೇವ ನಿಮ್ಮ ಶರಣ ಸಂಗನ ಬಸವಣ್ಣ

೯೧ ಗರಿಯು ಕಟ್ಟಿದ ಕೋಲು ಗುರಿಯ ತಾಕಬಲ್ಲುದೇ ಅಯ್ಯಾ? ಗುರು ಲಿಂಗ ಜಂಗಮದ ಪಾದತೀರ್ಥ ಪ್ರಸಾದವನರಿಯದೆ ಪರವ ಕಂಡೆನೆಂಬ ಮರುಳಾಚಾರಿಗಳ ಮುಖವ ನೋಡಲಾಗದು ಕಾಣಾ ಕಲಿದೇವರ ದೇವಯ್ಯ

೯೨ ಗುರುವಾಗಿ ಬಂದು ಎನಗೆ ದೀಕ್ಷೆಯ ಮಾಡಿದಿರಿ ಲಿಂಗವಾಗಿ ಬಂದೆನ್ನ ಮನದ ಮಲಿನವ ಕಳೆದಿರಿ ಜಂಗಮವಾಗಿ ಬಂದೆನ್ನ ಪ್ರಪಂಚುಕತನವ ಕಳೆದು ಪರಮ ಸೇವೆಯ ಮಾಡಿದಿರಿ ಇಂತಿವೆಲ್ಲವು ಬಸವಣ್ಣನಾಗಿ ಎನಗೆ ಪ್ರಸಾದವ ನೀಡಿ ಸಲಹಿದ ಕಪಿಲಸಿದ್ಧ ಮಲ್ಲಿಕಾರ್ಜುನ ಇನ್ನೆನಗತಿಶಯವು ಇಲ್ಲ

೯೩ ಉಪದೇಶವ ಮಾಡಿದಲ್ಲಿ ಗುರುವೆನಿಸಿದನು ಕಾಮಿತ ಫಲಂಗಳ ಕೊಟ್ಟಲ್ಲಿ ಲಿಂಗಮೂರ್ತಿ ಎನಿಸಿದನು ನಿತ್ಯ ನಿರ್ವಾಣದ ಸಕೀಲವ ತೋರಿದಲ್ಲಿ ಜಂಗಮವೆನಿಸಿದನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ

೯೪ ಗುರುವಿನಿಂದ ಲಿಂಗವ ಕಂಡೆನಲ್ಲದೆ ಲಿಂಗದಿಂದ ಲಿಂಗವ ಕಾಣಲಿಲ್ಲವಯ್ಯ ಲಿಂಗದಿಂದ ಫಲ ಪದವಿಗಳ ಕಂಡೆನಲ್ಲದೆ ಫಲ ಪದಂಗಳಿಂದ ಫಲ ಪದವಿಗಳ ಕಾಣಲಿಲ್ಲವಯ್ಯ ಜಂಗಮದಿಂದ ಮೋಕ್ಷವ ಕಂಡೆನಲ್ಲದ, ಮೋಕ್ಷದಿಂದ ಮೋಕ್ಷವ ಕಾಣಲಿಲ್ಲವಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ

೯೫ ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗವು ನೆಲಸಿ ಲಿಂಗವೆನಿಸಿತ್ತಯ್ಯ ಲಿಂಗವು ಇದಿರಿದ್ದ ಅರುಹಿದಲ್ಲಿ ಗುರುವೆನಿಸಿತ್ತಯ್ಯ ಲಿಂಗವು ಗುರುಲಿಂಗ ಜಂಗಮಕ್ಕೆ ತಿಲಾಂಶ ಭೇದವಿಲ್ಲ ನೋಡಾ ಎಲೆ ದೇವಾ ಭೇದಿಸಿದವಗೆ ಭವಬಾಧೆ ತಪ್ಪುವುದೇ ದೇವರದೇವ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ.

## ಗುರುಲಿಂಗಜಂಗಮದ ಸಾಧನೆ.

೯೬ ಆಚಾರ ಅಂಗಸಂಬಂಧವಾದಲ್ಲಿ ಶ್ರೀಗುರು ಸನ್ನಿಹಿತ ಅರಿವು ಮನ ಸಂಬಂಧವಾದಲ್ಲಿ ಶಿವಲಿಂಗ ಸನ್ನಿಹಿತ ಉಭಯ ಲಾಂಛನವು ಸಂಬಂಧವಾದಲ್ಲಿ ಜಂಗಮಲಿಂಗ ಸನ್ನಿಹಿತ ಇದು ಕಾರಣ ಕೂಡಲ ಚನ್ನಸಂಗಯ್ಯ ನಿಮ್ಮಲ್ಲಿ ತ್ರಿವಿಧಸಂಪನ್ನನಾ ಶರಣನು

೯೭ ಪೂಜಿಸಿ ಕಾಂಬುವುದು ಗುರುವಿನ ಭೇದ. ಧ್ಯಾನಿಸಿ ಕಾಂಬುವುದು ಲಿಂಗದ ಭೇದ ಉಭಯದಲ್ಲಿ ನಿಂದು ವಿಚಾರಿಸಿ ಕಾಂಬುವುದು ಜಂಗಮದ ಭೇದ ಜಾ ಎಂಬಲ್ಲಿ ಜನನ ನಾಸ್ತಿ, ಗಾ ಎಂಬಲ್ಲಿ ಗಮನನಾಸ್ತಿ ಮಾ ಎಂಬಲ್ಲಿ ಮರಣ ನಾಸ್ತಿ. ಈ ತ್ರಿವಿಧ ನಾಸ್ತಿಯಾಗಿ ನಿಂದುದು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ನಿಂದ ನಿಲವು

೯೮ ಭಾವ ಶುದ್ಧವಾಗಿಪ್ಪುದೇ ಗುರು ಪೂಜೆ ಜ್ಞಾನಶುದ್ಧವಾಗಿಪ್ಪುದೇ ಲಿಂಗಪೂಜೆ ತ್ರಿಕರಣ ಶುದ್ಧವಾಗಿ ತ್ರಿವಿಧ ಮಲದಲ್ಲಿ ನಿಶ್ಚಯವಾಗಿ ನಿಂದುದೇ ಜಂಗಮಪೂಜೆ ಇಂತೀ ತ್ರಿವಿಧ ಭೇದದಲ್ಲಿ ತ್ರಿವಿಧಾರ್ಪಣವನರ್ಪಿಸಿ ನಿಂದುದೇ ಚಂದೇಶ್ವರ ಲಿಂಗಕ್ಕೆ ಅರ್ಪಿತ

೯೯ ಆತ್ಮತೇಜವ ಬಿಟ್ಟಾಗಳೇ ಗುರುವನರಿದವ ಮಾನವಿಕಾರವ ಬಿಟ್ಟಾಗಳೇ ಲಿಂಗವನರಿದ ಧನವಿಕಾರವ ಬಿಟ್ಟಾಗಳೇ ಜಂಗಮವನರಿದ ಇಂತು ತ್ರಿವಿಧ ನಾಸ್ತಿಯಾದಂಗಲ್ಲದೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸಹಜಭಕ್ತನಲ್ಲ

೧೦೦ ಧ್ಯಾನದಿಂದ ವಸ್ತು, ವಿಷಯದಿಂದ ಮೋಹ ಭಾವ ಶುದ್ಧದಿಂದ ಗುರುಸ್ಥಲ, ದ್ವಂದ್ವವಳಿದು ನಿಂದುದು ಲಿಂಗ, ತ್ರಿವಿಧ ಸಂದನಳಿದು ಸಲೆ ನಿಂದುದು ಜಂಗಮ ಈ ಸ್ಥಲದಂಗವನರಿದು ಭಯ ಭಂಗವಿಲ್ಲದೆ ಸುಸಂಗದಿಂದ ಮಾಡುವುದು ಭಕ್ತಸ್ಥಲ ನಿಶ್ಚಯವಾಗಿ ನಿಂದುದು ಕಾಲಾಂತಕ ಭೀಮೇಶ್ವರಲಿಂಗವಲ್ಲಿ ನಿಶ್ಚಯಿಸುವದುಭಯ ಭಾವ

೧೦೧ ಗುರುಭಕ್ತನಾವಲ್ಲಿ ಗುರುವಳಿದು ತಾನುಳಿವರೆ ಗುರುಭಕ್ತನಲ್ಲ ಲಿಂಗಭಕ್ತನಾವಡೆ ಜಾಗ್ರ ಬಾಹ್ಯಗಳಲ್ಲಿ ತಮ್ಮಂಗವ ಬಿಟ್ಟು

ಲಿಂಗ ಹಿಂಗವಲ್ಲಿ ಆತ್ಮನೊಡಗೂಡವಿದ್ದಲ್ಲಿಯೇ ಲಿಂಗಭಕ್ತನಲ್ಲ. ಜಂಗಮ
ಭಕ್ತನಾದಡೆ ಕಾವು ಹಾದರ ದುರ್ಗುಣದಿಂದ ಕೆಡಿಯಿಸಿಕೊಂಬಲ್ಲಿ
ಅವುಗಳಲಿ ತಾನದಗಿ ಅರಿವೆ ಇಲ್ಲದಿದ್ದಾಗಳೇ ಜಂಗಮಭಕ್ತನಲ್ಲ. ಇಂತೀ
ತ್ರಿವಿಧ ಭಾವಂಗಳಲ್ಲಿ ಘಟಸಂದನಾದವಂಗಲ್ಲದೆ ತ್ರಿವಿಧ ಭಕ್ತಿ ಇಲ್ಲ ಈ
ಗುಣ ಸಂಗನ ಒಸವಣ್ಣಂಗಲ್ಲದೆ ಸಾಧ್ಯವಿಲ್ಲ ಬ್ರಹ್ಮೇಶ್ವರ ಲಿಂಗವ
ನರಿವವರಿಗೂ ಅಸಾಧ್ಯ ನೋಡಾ

೧೦೨ ಗುರುವನೇ ಲಿಂಗವೆಂದರಿವ ಕಾರಣ ಗುರುವ ಲಿಂಗ
ದಲ್ಲಿ ಕಂಡೆ ಲಿಂಗವನೇ ಜಂಗಮವೆಂದರಿವ ಕಾರಣ ಲಿಂಗವ ಜಂಗ
ಮದಲ್ಲಿ ಕಂಡೆ ಜಂಗಮವನೇ ತಾನೆಂದರಿವ ಕಾರಣ ಜಂಗಮವ
ನನ್ನಲ್ಲಿ ಕಂಡೆ ನನ್ನ ನಿನ್ನಲ್ಲಿ ಅರಿವ ಕಾರಣ ನನ್ನ ನಿನ್ನಲ್ಲಿ ಕಂಡೆ
ಈ ಪರಿಯಿಂದ ಗುರು ಲಿಂಗಜಂಗಮ ಸದಾ ಸನ್ನಿಹಿತನಾಗಿ ನಿನ್ನೊಳ
ಗಾದೆ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ

೧೦೩ ಗುರುವಿಡಿದು ಲಿಂಗವ ಕಂಡೆ ಲಿಂಗವಿಡಿದು ಜಂಗಮವ
ಕಂಡೆ ಇಂತೀ ಪರವ ತೋರುವ ಗುರುವಿನಾಜ್ಞೆಯ ಮೀರಿ ನಡೆದ ದುರಾ
ಚಾರಿಗಳ ಮುಖವ ನೋಡಲಾಗದು ಕಾಣಾ ಕಲಿದೇವರದೇವಯ್ಯ

೧೦೪ ಪರಧನವ ಬಿಟ್ಟಾಗಳೇ ಗುರುವಿನ ಇರವು ಸಾಧ್ಯವಾ
ಯಿತ್ತು ಪರಸ್ತ್ರೀಯ ಬಿಟ್ಟಾಗಳೇ ಲಿಂಗ ಅಂಗದ ಮೇಲೆ ಸಲೆ ಸಂದಿತ್ತು
ನಿಂದೆ ಎಂಬುದು ನಿಂದಾಗಳೇ ಜಂಗಮ ಭಕ್ತಿ ಸಾಧನಾಯಿತ್ತು
ಇಂತೀ ತ್ರಿವಿಧವ ತಟ್ಟದಿಪ್ಪಾತನು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ
ಲಿಂಗವ ಮುಟ್ಟಿಪ್ಪನು

## ಶುದ್ಧಾಚಾರದಿಂದ ಗುರುಲಿಂಗಜಂಗಮದ ಸಾಧನೆ.

೧೦೫ ಗುರುವಿನಲ್ಲಿ ಸದಾಚಾರ, ಲಿಂಗದಲ್ಲಿ ಶಿವಾಚಾರ, ಜಂಗಮದಲ್ಲಿ ಸಮಯಾಚಾರ, ಇಲ್ಲದಿದ್ದರ ನಮ್ಮ ಕೂಡಲ ಚನ್ನಸಂಗಮದೇವ ಮೆಚ್ಚ ಕಾಣಿರೋ

೧೦೬. ಗುರುವ ನರಿತು ಮಾಡುವಲ್ಲಿ ಅಹಂಕಾರವ ಮರೆದು ಮಾಡಬೇಕು ಲಿಂಗವನರಿತು ಮನ ಮುಟ್ಟಿದಲ್ಲಿ ಪ್ರಕೃತಿ ತಲೆದೋರದಿರಬೇಕು ಜಂಗಮವನರಿತು ಮುಟ್ಟಿ ಪೂಜಿಸುವಲ್ಲಿ ಅರ್ಥ ಪ್ರಾಣಾಭಿಮಾನವನಳಿಯಬೇಕು ಈ ಮೂರರಲ್ಲಿ ನಿಶ್ಚಯವಾಗಿರಬೇಕು, ಸಂಗನಬಸವಣ್ಣಪ್ರಿಯ ಚಂದೇಶ್ವರ ಲಿಂಗವನರಿಯಬಲ್ಲಡೆ

೧೦೭ ಗುರುವೆಂದು ಅನುಸರಣೆಯ ಮಾಡಿದಲ್ಲಿ ಲಿಂಗವಿಲ್ಲ ಲಿಂಗವೆಂದು ಅನುಸರಣೆಯ ಮಾಡಿದಲ್ಲಿ ಜಂಗಮವಿಲ್ಲ ಜಂಗಮವೆಂದು ಅನುಸರಣೆಯ ಮಾಡಿದಲ್ಲಿ ಪಂಚಾಚಾರ ಶುದ್ಧಕ್ಕೆ ಹೊರಗು ತಾನು ಮಾಡುವ ಭಕ್ತಿ ತನಗ ಹಾನಿಯಾದ ಕಾರಣ ಈ ತ್ರಿವಿಧಕೆ ಅನುಸರಣೆಯ ಮಾಡಲಿಲ್ಲ ಸದಾಶಿವ ಮೂರ್ತಿಲಿಂಗವನರಿವುದಕ್ಕೆ

೧೦೮ ಶ್ರೀಗುರುವಿನ ಸಂದರ್ಶನಕ್ಕೆ ಹೋದಲ್ಲಿ ಮೂರ್ತಿ ಧ್ಯಾನದಿಂದ ಸಹಸ್ರಸಂಗವ ಮಹಾಪ್ರಸಾದವೆಂದು ಕೈಕೊಂಬುದು ಆ ಗುಣ ಗುರುಭಕ್ತಿ ಸಾಧನೆ ಶಿವಲಿಂಗ ಪೂಜೆಯ ಮಾಡುವಲ್ಲಿ ಪರಾಕು, ಪರಿಭ್ರಮಣ, ಪ್ರಕೃತಿ ಭಾವ, ಪಗುಡಿ ಪರಿಹಾಸಕರ ವಾಗ್ವಾದಿಗಳ ಕೂಡದ, ಕಂಗಳಲ್ಲಿ ಹರಿ ಹಿಂಗದೆ, ಭಾವದಲ್ಲಿ ಬೈಚಿಟ್ಟುಕೊಂಡು, ಓರೆ ಹಿಂಗದ ಇರವು ಶಿವಲಿಂಗ ಪೂಜಕದ ಭಾವ ಜಂಗಮಸೇವೆ ಮಾಡುವಲ್ಲಿ, ಇಷ್ಟ, ಕಾಮ್ಯ, ಮೋಕ್ಷಗಳನರಿದು, ಆಸನ ವಿಷಯ ದೋಷಕ್ಕೆ ಆಸರವನರಿತು, ಧರ್ಮಕ್ಕೆ ಮುಕ್ತಿಸದ, ವೈಭವಕ್ಕೆ ಪ್ರೀತಿ ಲಾಭಭಂಗಗಳನಳಿದು ಮಾಡುವುದೇ ಜಂಗಮಭಕ್ತಿ. ಇಂತೀ ತ್ರಿವಿಧ ಭಕ್ತಿಯಲ್ಲಿ ನಿರುತ ಸ್ವಯಸನ್ನದ್ಧನಾಗಿಪ್ಪ ಭಕ್ತನ ಪಾದವೇ ಗೋಪತಿನಾಥ ವಿಶ್ವೇಶ್ವರನಿಪ್ಪ ಸಜ್ಜೆಗೃಹ

೧೦೯ ಗುರುಭಕ್ತನಾದಲ್ಲಿ ಘಟಧರ್ಮವಳಿದು, ಲಿಂಗಭಕ್ತನಾದಲ್ಲಿ ಸಂಚಲ ನಿಂದು, ಜಂಗಮಭಕ್ತನಾದಲ್ಲಿ ತ್ರಿವಿಧಾಂಗ ಸಲೆಸಂದು, ಇಂತೀ

ತ್ರಿವಿಧ ಭಕ್ತಿಯಲ್ಲಿ ತ್ರಿಕರಣ ಶುದ್ಧವಾದಾತ್ಮಂಗೆ ಮರ್ತ್ಯ ಕೈಲಾಸವೆಂಬ ಠಾವು ಮಾತಿಲ್ಲ ಆತ ನಿತ್ಯ ಮುಕ್ತ ಎನ್ನಯ್ಯ ಚೆನ್ನರಾಮನಾಗಿ

## ಅರ್ಪಣದಿಂದ ಗುರುಲಿಂಗಜಂಗಮದ ಸಾಧನೆಯು.

೧೧೦ ಆನಾವ ಪ್ರತ್ಯಕ್ಷ ಗುರುಲಿಂಗಜಂಗಮವೇ ಮೂಲ ಮಂತ್ರ ಅವ್ವದನು ತಾ ಕೊಂಬುಕೊಡುವಲ್ಲಿ ಲಿಂಗಜಂಗಮವ ಮುಂದಿಟ್ಟುಕೊಂಬ ಪ್ರವೇಶ ಶುದ್ಧಕ್ರಿ ಹೀಗೆಯಲ್ಲಿದೆ ಲಿಂಗಜಂಗಮವ ಹೊರತೆಯಾಗಿ ಮತ್ತೊಂದ ಕೊಂಡನಾಯಿತ್ತಾದಡೆ, ಎನಗಿಲ್ಲದ ದ್ರವ್ಯ ಎನಗಿದೇ ಭಾಷೆ, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ ಸಾಕ್ಷಿಯಾಗಿ

೧೧೧ ಶಿವನೇ ನೀನು ಗುರುವಾದೆ ಲಿಂಗವಾದೆ, ಜಂಗಮವಾದೆ ಭಕ್ತನಾದ ಗುರುವಾಗಿದ್ದ ಭಕ್ತನೊಳಗಡಗಿದ ಅದೆಂತು ಕಾರಣವೆಂದಡೆ, ಗುರುವಿಂಗೆ ಅರ್ಥಪ್ರಾಣಾಭಿಮಾನವನು ಕೊಟ್ಟು ಆತ ಭೋಗಿಸಿದ ಬಳಿಕ ತಾನು ಪ್ರಸಾದ ಮುಖವಂತಾಗಿ ಭೋಗಿಸುವನಾಗಿ ಆ ಗುರು ತನ್ನೊಳಗಡಗಿದ, ಲಿಂಗವು ಗರ್ವ ಭಕ್ತನೊಳಗಡಗಿದ ಅದೆಂತು ಕಾರಣವೆಂದಡೆ, ಅರ್ಥ ಪ್ರಾಣಾಭಿಮಾನವನು ಕೊಟ್ಟು, ತಾನು ಪ್ರಸಾದ ಮುಖಂತಾಗಿ ಭೋಗಿಸುವನಾಗಿ ಆ ಲಿಂಗವು ಭಕ್ತನೊಳಗಡಗಿತ್ತ ಜಂಗಮವಾಗಿ ಭಕ್ತನೊಳಗಡಗಿತು ಅದೆಂತು ಕಾರಣವೆಂದರೆ ಅರ್ಥ ಪ್ರಾಣಾಭಿಮಾನವನು ಕೊಟ್ಟು ಆ ಜಂಗಮವು ಭೋಗಿಸಿದ ಬಳಿಕ ತಾನು ಪ್ರಸಾದ ಮುಖಂತಾಗಿ ಭೋಗಿಸುವನಾಗಿ ಆ ಜಂಗಮವು ಭಕ್ತನೊಳಗಡಗಿತ. ಇಂತಪ್ಪ ಗುರುವರೇ ಮಹಿಮರು ಮಸಣಯ್ಯ ಪ್ರಿಯ ಗಜೇಶ್ವರಾ

೧೧೨ ಅರ್ಥಪ್ರಾಣಾಭಿಮಾನವನ ಗುರು ಲಿಂಗಜಂಗಮ ಮುಖಕ್ಕೆ ಸಮರ್ಪಿಸಿ, ಆ ಗುರು ಲಿಂಗ ಜಂಗಮವೇ ತನು ಮನ ಪ್ರಾಣವಾಗಿರ ಬಲ್ಲಡೆ ಪ್ರಸಾದಿಸ್ಥಲಪಿಂಚನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ

೧೧೩ ಗುರುವಿಂಗೆ ತನುವ ಕೊಟ್ಟು, ಲಿಂಗಕ್ಕೆ ಮನವ ಕೊಟ್ಟು, ಜಂಗಮಕ್ಕೆ ಧನವ ಕೊಟ್ಟು, ಇಂತೀ ತ್ರಿವಿಧಕ್ಕೆ ತ್ರಿವಿಧವ ಕೊಟ್ಟು ನಾನು ಶುದ್ಧನಾದನು ಕಾಣಾ ಕೂಡಲ ಸಂಗಮದೇವಾ

೧೧೪ ಗುರುವೆನ್ನ ತನುವ ಬೆರಸಿದ ಕಾರಣ ಗುರು ಶುದ್ಧವಾದ ನಯ್ಯ ಲಿಂಗವೆನ್ನ ಮನವ ಬೆರಸಿದ ಕಾರಣ, ಲಿಂಗದ ಮನವ ನಾ ಬೆರಸಿದ ಕಾರಣ ಲಿಂಗ ಶುದ್ಧವಾದೆನಯ್ಯ ಜಂಗಮವೆನ್ನ ಜಿಹ್ವೆ ಬೆರ ಸಿದ ಕಾರಣ, ಜಂಗಮನ ಜಿಹ್ವೆಯ ನಾ ಬೆರಸಿದ ಕಾರಣ ಜಂಗಮ ಶುದ್ಧವಾದೆನಯ್ಯ ಈ ಮೂವರು ತಮ್ಮಿಂದ ತಾವು ಶುದ್ಧವಾಗಲರಿಯದ, ಎನ್ನ ಮುಟ್ಟಿ ಶುದ್ಧವಾದರು ಕಾಣಾ ಕೂಡಲ ಚನ್ನಸಂಗಮದೇವಾ

೧೧೫. ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯ ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯ ಪ್ರಸಿದ್ಧವ ಜಂಗ ಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬನಯ್ಯ ಗುರು ಲಿಂಗ ಜಂಗ ಮವನೇಕತ್ರವಾಗಿ ಕಾಣಲರಿಯದಿದ್ದರೆ, ಶುದ್ಧ ಸಿದ್ಧ ಪ್ರಸಿದ್ಧ ಒಡನ ನಗುತ್ತಿದ್ದಾವೆ ತನು ಮನ ಧನವ ನಿವೇದಿಸಲರಿಯರಾಗಿ, ಕೂಡಲ ಸಂಗಮದೇವ ಒಲಿ ಎಂದೊಡೆಂತೊಲಿವ ?

೧೧೬ ಮುನ್ನಿನ ಜನ್ಮದಲ್ಲಿ ಗುರು ಲಿಂಗ ಜಂಗಮವ ಪೂಜಿಸ ಲರಿಯದ ಕಾರಣ, ಬಹು ಜನ್ಮಕ್ಕೆ ತಂದಿಕ್ಕಿದೆಯಯ್ಯ ಎನ್ನನು ಎನಗೆ ಗುರುಪಥವ ತೋರಿದವರಾರು ? ಲಿಂಗಪಥವ ತೋರಿದವರಾರು? ಜಂಗಮಪಥವ ತೋರಿದವರಾರು ? ಪಾದೋದಕ ಪ್ರಸಾದವ ತೋರಿ ದವರಾರು ? ತೋರುವ ಮನವೇ ನೀವೆಂದರಿತ ಎನಗಿನ್ನಾವ ಭವವೂ ಇಲ್ಲ ಕೂಡಲಸಂಗಮದೇವಾ

೧೧೭ ತ್ರಿವಿಧ ಪ್ರಸಾದವೆಂದೆಂಬರು ಅವೆಂತಹುದೋ ? ಶುದ್ಧ ಪ್ರಸಾದ ಲಿಂಗದದು ಸಿದ್ಧಪ್ರಸಾದ ಜಂಗಮದದು ಪ್ರಸಿದ್ಧ ಪ್ರಸಾದ ಗುರುವಿನದು ಇಂತೀ ತ್ರಿವಿಧ ಒಂದಾದವರ ತೋರಾ ಕೂಡಲ ಸಂಗಮದೇವ

೧೧೮ ಗುರುಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾ ಯಿತ್ತು ಆ ಭಾವವೇ ಮಹಾಸುಖಾವವಾಗಿ, ಎನಗೆ ಬೇರ ಪ್ರಸಾದ ವೆಂಬುದಿಲ್ಲ ಕೂಡಲ ಸಂಗಮದೇವ

೧೧೯ ತನು ಕೊಡುವಡೆ ಗುರುವಿನದು ಮನ ಕೊಡುವಡೆ ಲಿಂಗದದು ಧನ ಕೊಡುವಡೆ ಜಂಗಮದದು ಅವರ ಸದಾರ್ಥವ ಅವರಿಗೆ ಕೊಟ್ಟು ಭಕ್ತನಾದನೆಂಬವರ ಹಿರಿಯತನವ ಕೇಳು ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ

೧೨೦. ತನು ಕೊಟ್ಟಬಳಿಕ ದೇಹವೆಲ್ಲಿಯದೋ? ಧನ ಕೊಟ್ಟಬಳಿಕ ಭೋಗಗಳೆಲ್ಲಿಯವು? ಇವೆಲ್ಲ ಒರಿಯ ಭ್ರಮೆ ಕೊಟ್ಟನೆಂಬವರ ಮುಖವ ನೋಡಲಾಗದು ಕೊಟ್ಟು ಭಕ್ತನಾದನೆಂಬ ನುಡಿ ಸಮನಿಸದಯ್ಯಾ ಗುರುವೇ ನಿಮ್ಮ ಶರಣರ ಬುದ್ಧಿಗ ಕಪಿಲಸಿದ್ಧಮಲ್ಲಿಕಾರ್ಜುನಾ

---

## ಗುರುಲಿಂಗಜಂಗಮದ ಸಾಮರಸ್ಯ

೧೨೧ ಸಕಲ ಗುರು, ಸಕಲ ನಿಃಕಲ ಲಿಂಗ, ನಿಃಕಲ ಜಂಗಮ ಇಂತೀ ತ್ರಿವಿಧ ಲಿಂಗಕ್ಕೆ ಮಾಡುವ ಭಕ್ತಿಯುಕ್ತಿ ಅದೆಂತೆಂದಡೆ, ಲಿಂಗವು ಜಂಗಮವು ಗುರುವಿನಲ್ಲಿ ಉಂಟೆಂದು ತನು ಮನ ಧನವ ಸವೆದು ಮಾಡುವುದು ಅದು ಗುರುಭಕ್ತಿ ಗುರುವು ಜಂಗಮವು ಲಿಂಗದಲ್ಲಿ ಉಂಟೆಂದು ತನು ಮನ ಧನವ ಮುಟ್ಟಿ ಮಾಡುವುದು ಲಿಂಗಭಕ್ತಿ ಗುರುವು ಲಿಂಗವು ಜಂಗಮದಲ್ಲಿ ಉಂಟೆಂದು ತನು ಮನ ಧನವ ಸವೆದು ಮಾಡುವುದು ಜಂಗಮಭಕ್ತಿ ಈ ತ್ರಿವಿಧಲಿಂಗಕ್ಕೆ ತ್ರಿವಿಧ ಪ್ರಕಾರದಲ್ಲು ಮಾಡಿ ಕೂಡಿ ಜೀವಿಸುವಾತನೇ ಶಿವಭಕ್ತನು ಕಾಣಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ

೧೨೨ ಗುರುಪೂಜೆಯ ಮಾಡುವಲ್ಲಿ ಗುರುಪೂಜೆಯಲ್ಲಿಯೇ ಮುಕ್ತರು ಲಿಂಗ ಪೂಜೆಯ ಮಾಡುವಲ್ಲಿ ಲಿಂಗ ಪೂಜೆಯಲ್ಲಿಯೇ ಮುಕ್ತರು ಜಂಗಮ ಪೂಜೆಯ ಮಾಡುವಲ್ಲಿ ಜಂಗಮ ಪೂಜೆಯಲ್ಲಿಯೇ ಮುಕ್ತರು ಈ ಮೂರೊಂದಾದಲ್ಲಿ ಬೇರೊಂದಂಗವಿಲ್ಲ ಆಗು ಹೋಗು ಮೂರರಲ್ಲಿ ಅಡಗಿತ್ತೇ ಅಮರೇಶ್ವರ ಲಿಂಗದ ಪೂಜೆ

೧೭೩. ಲಿಂಗವನು ಪ್ರಾಣವನು ಒಂದು ಮಾಡಿ ತೋರಿದ ಗುರುವಿರ್ದನಲ್ಲಾ, ಲಿಂಗವಿರ್ದನಲ್ಲಾ, ಇದಕ್ಕೆ ಸಾಕ್ಷಿ ಜಂಗಮವಿರ್ದನಲ್ಲಾ ಈ ತ್ರಿವಿಧ ದೃಷ್ಟವ ಕಂಡು ಅವು ಬೇರೆಂಬ ಅಜ್ಞಾನಕ್ಕೆ ನಾನು ಬೆರಗಾದೆನು ಗುಹೇಶ್ವರಾ

೧೭೪ ಗುರುವನರಿದು ಲಿಂಗವನರಿವರುಂಟು ಲಿಂಗವನರಿದು ಪಂಚಾಚಾರವನರಿವರುಂಟು ಜಂಗಮವನರಿದಲ್ಲಿ ಷಟ್‌ಸ್ಥಲ ಸಂಬಂಧವಾಯಿತ್ತು ಆ ಸಂಬಂಧ ಸಮಯ ನಿಂದು ಉಭಯವಳಿದು ಏಕವಾದಲ್ಲಿ ಹಲವು ನಲಿ ತನ್ನ ವಿಶ್ವಾಸದ ಹೊಲಬಿನಲ್ಲಿ ಅಡಗಿತ್ತು. ಆ ಹೊಲಬಿನಲ್ಲಿ ನಿಂದವಂಗೆ ಇಹ ಪರವೆಂಬುದು ಇಲ್ಲ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ

೧೭೫ ತಾನೆಂದೆನಲೊಲ್ಲದೆ ಗುರುವೆಂದು ಪಿಡಿವನನ, ಗುರುವೆಂದಲ್ಲಿ ನೀನೆಂದು ನಡೆವವನ, ನೀನೆಂದಲ್ಲಿಯೇ ಲಿಂಗಜಂಗಮದ ಸಕೀಲಸಂಬಂಧವ ನೆಲೆಗೊಳಿಸಿದವನ, ಲಿಂಗ ಜಂಗಮದಲ್ಲಿ ತನ್ನ ಮರವು ಕರಿಗೊಂಡ ಲಿಂಗೈಕ್ಯನ, ಗುಹೇಶ್ವರ ಲಿಂಗದಲ್ಲಿಪ್ಪ ಚನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು

೧೭೬ ಗುರುವೆಂಬ ಭಾವ ಬ್ರಹ್ಮಮೂರ್ತಿ ಲಿಂಗವೆಂಬ ಭಾವ ವಿಷ್ಣುಮೂರ್ತಿ ಜಂಗಮವೆಂಬ ಭಾವ ರುದ್ರಮೂರ್ತಿ ಅದೆಂತೆಂದೊಡೆ, ಅನಾದಿ ವಸ್ತು ರೂಪಾದ ಕಾರಣ ಅಹಂ ಬ್ರಹ್ಮವೆಂಬಾಕಾರವಿಡಿದು ಬ್ರಹ್ಮ ಮೂರ್ತಿಯಾದ ಜ್ಞಾನಸೀರ ಸಂಬಂಧಿಯಾದ ಕಾರಣ ವಿಷ್ಣುಮೂರ್ತಿಯಾದ ಚಿದ್ಘನ ರುದ್ರ ಚತುರ್ವಿಧ ಫಲ ಪದಂಗಳೊಳಗಾದ ಕಾರಣ ಸಂಹಾರ ರುದ್ರನಾದ ಸಂಹಾರವಡಗಿ ನಿಂದು ಉಮೆಯ ಬಿಟ್ಟು ಸ್ವಯಂಭುವಾದ ಆ ಸ್ವಯಂಭು ಜಂಗಮವೆಂಬಲ್ಲಿ ನಿಂದು ನಿಜವ ಕಂಡಲ್ಲಿ ಲಿಂಗವಾದಲ್ಲಿ ಭಾವರಹಿತನಾಗಬೇಕೆಂದನಂಬಿಗಚೌಡಯ್ಯ

೧೭೭ ಗುರುವಿಂಗೆ ಗುರುವುಸ್ಸನ್ನಸ್ಕಾರ, ಲಿಂಗಕ್ಕೆ ಲಿಂಗವುಸ್ಸನ್ನಸ್ಕಾರ, ಜಂಗಮಕ್ಕೆ ಜಂಗಮವುಸ್ಸನ್ನಸ್ಕಾರ, ಆತ್ಮಂಗೆ ಅರಿವುಸ್ಸನ್ನಸ್ಕಾರ, ಅರಿವುಮರವೆಗೆ ಇದಿರೆಡೆಯುಂಟು ಗುರುವಿಂಗೆ ಉಭಯವಿಲ್ಲದ, ಲಿಂಗಕ್ಕೆ ಉಭಯವಿಲ್ಲದ, ಜಂಗಮಕ್ಕೆ ಉಭಯವಿಲ್ಲದ, ಆತ್ಮಂಗೆ ಎರಡಳಿದು ನಿಜವೇಕವಾಹನ್ನಬರ ಒಂದನಹುದು, ಒಂದನಲ್ಲ ಎ ಬ ಸಂದೆ ಹಕ್ಕೂ

ದಲಾಗಬಾರದು. ತಾ ನಿಂದ ನಿಂದಲ್ಲಿಯೇ ಸಂದಳಿಯ ಬೇಕು ಬಸ
ವಣ್ಣಪ್ರಿಯನಾಗೇಶ್ವರಲಿಂಗವನರಿಯಬಲ್ಲಡೆ

ಅರ್ಥ :— ಜ್ಞಾನ ಗುರುವಿಂಗೆ ಕ್ರಿಯಾಗುರು ಭಿನ್ನವಾಗಿರುವ ಪರಿಯಂತರ ಜ್ಞಾನ ಲಿಂಗಕ್ಕೆ ಕ್ರಿಯಾ ಲಿಂಗವು ಭಿನ್ನವಾಗಿರುವ ಪರಿಯಂತರ ಜ್ಞಾನ ಜಂಗಮಕ್ಕೆ ಕ್ರಿಯಾ ಜಂಗಮವು ಭಿನ್ನವಾಗಿರುವ ಪರಿಯಂತರ, ಆತ್ಮನಲ್ಲಿ ಭಿನ್ನಜ್ಞಾನ ಉಂಟಾಗಿರುವ ಪರಿಯಂತರ, ಜ್ಞಾನ ಕ್ರಿಗಳಿಗೆ ಭಿನ್ನ, ಭಿನ್ನವುಂಟು. ತನುವಿನಲ್ಲಿ ಗುರು ಸಂಬಂಧವ ಮಾಡಿಕೊಂಡು ಗುರುಭಕ್ತಿ ಮಾಡುವಲ್ಲಿ ಜ್ಞಾನ ಗುರುವು ಕ್ರಿಯಾ ಗುರುವಿಂಗೆ ಭಿನ್ನವಿಲ್ಲದೆ ಮನದಲ್ಲಿ ಲಿಂಗಸಂಬಂಧವ ಮಾಡಿಕೊಂಡು ಪೂಜೆಯ ಮಾಡುವಲ್ಲಿ ಜ್ಞಾನ ಲಿಂಗ ಕ್ರಿಯಾ ಲಿಂಗಕ್ಕೆ ಭಿನ್ನವಿಲ್ಲದೆ ಪ್ರಾಣದಲ್ಲಿ ಜಂಗಮಸಂಬಂಧವ ಮಾಡಿಕೊಂಡು ಜಂಗಮಭಕ್ತಿ ಮಾಡುವಲ್ಲಿ ಜ್ಞಾನ ಜಂಗಮ ಕ್ರಿಯಾ ಜಂಗಮಕ್ಕೆ ಭಿನ್ನವಿಲ್ಲದೆ ಜ್ಞಾನ ಗುರು ಲಿಂಗ ಜಂಗಮ ಬೇರೆ ಕ್ರಿಯಾ ಗುರುಲಿಂಗ ಜಂಗಮ ಬೇರೆ ಎಂಬ ಆತ್ಮನ ಭಿನ್ನ ಜ್ಞಾನ ನಷ್ಟವಾಗಿ ತನು ಮನ ಪ್ರಾಣಂಗಳು ಗುರು ಲಿಂಗ ಜಂಗಮದಲ್ಲಿ ಸಮರಸವಾಗುವ ಪರಿಯಂತರ ಜ್ಞಾನ ಗುರು ಲಿಂಗ ಜಂಗಮವೇ ಮೋಕ್ಷಕ್ಕೆ ಕಾರಣವಹುದು. ಕ್ರಿಯಾ ಗುರು ಲಿಂಗ ಜಂಗಮವೇ ಮೋಕ್ಷಕ್ಕೆ ಕಾರಣವಲ್ಲ ಎಂದು ಸಂಕಲ್ಪಿಸಲಾಗ ಬಾರದು ತನುವಿನಲ್ಲಿ ಗುರುಸಂಬಂಧವ ಮಾಡಿಕೊಂಡು ಗುರುಭಕ್ತಿಯ ಮಾಡುವಲ್ಲಿ ಮನದಲ್ಲಿ ಲಿಂಗಸಂಬಂಧವ ಮಾಡಿಕೊಂಡು ಲಿಂಗ ಪೂಜೆಯ ಮಾಡುವಲ್ಲಿ ಪ್ರಾಣದಲ್ಲಿ ಜಂಗಮಸಂಬಂಧವ ಮಾಡಿಕೊಂಡು ಜಂಗಮ ಭಕ್ತಿಯ ಮಾಡುವಲ್ಲಿ, ತನು ಗುರು ಮನ ಲಿಂಗ, ಪ್ರಾಣ ಜಂಗಮ ವೆಂಬ ಭಿನ್ನವಳಿಯಬೇಕು ಎಂಬುದರ್ಥ

೧೩. ಅಹಂಕಾರವಳಿದು ಗುರುವಾಗಿ, ಜಂಗಮವಳಿದು ಲಿಂಗವಾಗಿ, ತ್ರಿವಿಧವಳಿದು ಜಂಗಮವಾಗಿ, ಸಕಲೇಂದ್ರಿಯದ ಲಂಪಟವನಳಿದು ಭಕ್ತನಾಗಿ, ಸಂಸಾರವೆಂಬ ಗಡಗಡಿಯಲ್ಲಿ ಸಿಲುಕದೆ, ಆವ ಸ್ಥಲದಲ್ಲಿ ನಿಂದು ನೋಡಿದಡೂ ಭಾವ ಶುದ್ಧವಾಗಿ, ಗುರುವಿಂಗೆ ಗುರುವಾಗಿ, ಲಿಂಗಕ್ಕೆ ಲಿಂಗವಾಗಿ, ಜಂಗಮಕ್ಕೆ ಜಂಗಮವಾಗಿ ಭಕ್ತರ ಭಕ್ತಿಯ ಮಾಡಿಕೊಂಡಿಪ್ಪ ಸದ್ಭಕ್ತ ಕಾಲಾಂತಕ ಭೀಮೇಶ್ವರ ಲಿಂಗವು ತಾನೆ

೧೨೯ ತ್ರಿವಿಧಕ್ಕೆ ರೀತಿಯಾಗಿ, ತ್ರಿವಿಧದ ನಿಜವ ತಿಳಿದು, ತ್ರಿವಿಧವನವಗ್ರಹಿಸಿ, ತ್ರಿವಿಧ ಪದವ ಮೀರಿ, ತ್ರಿವಿಧ ನಿರ್ಣಯದಲ್ಲಿ ನಿಷ್ಪತ್ತಿಯಾದ ಕೂಡಲ ಚನ್ನಸಂಗ ನಿಮ್ಮ ಶರಣ

೧೩೦ ಮೂರಳಿದು ಮೂರಳವಟ್ಟದೇ ಭಕ್ತಸ್ಥಲ ಮೂರಳಿದು ಮೂರಳವಟ್ಟದೇ ಜಂಗಮಸ್ಥಲ ಅಳಿದು ಎಂದರೆ ಇದ್ದ ಮನ ಲಿಂಗಕ್ಕೆ ಕೊಟ್ಟಾಗಳೇ ಮಣ್ಣಳಿದುದು ಇದ್ದ ಧನ ಜಂಗಮಕ್ಕೆ ಕೊಟ್ಟಾಗಳೇ ಹೊನ್ನಳಿದುದು ಇದ್ದ ತನು ಗುರುವಿಗೆ ಕೊಟ್ಟಾಗಳೇ ಹೆಣ್ಣಳಿದುದು ಅವರವರಾಚರಣೆಯ ನೋಡಿ ಕೊಡುವುದಲ್ಲದ ಬೇಡಿದ ಪರಿಯಲ್ಲಿ ಕೊಡುವದೇನೋ? ಅಯ್ಯ ಸಿಂಧು ಬಲ್ಲಾಳ ತನ್ನ ವಧುವ ಕೊಟ್ಟನೆಂದು ಹೇಳಿದಲ್ಲಿ ತನ್ನ ಹೆಂಡತಿಯನೇನಾದರೂ ಕೊಟ್ಟನೇ? ಇಲ್ಲಿಲ್ಲ ಹೆಣ್ಣು ಎಂದರೆ, ತಾನು ಶರಣಸತಿ ಲಿಂಗಪತಿ ಎಂಬ ಭಾವದಿಂದ ಲಿಂಗಕ್ಕೆ ಮನ ಕೊಟ್ಟು ವಧುವಾದನಲ್ಲದ ತನ್ನಂಗನೆಯ ಕೊಡಲಿಲ್ಲವು ಹೆಣ್ಣು ಎಂದರೆ ತನ್ನ ತನುವ ಗುರುವಿಗೆ ಕೊಟ್ಟು ಸ್ವಯಂಭುವಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು ಹೆಣ್ಣು ಎಂದರೆ ಜಂಗಮಕ್ಕೆ ಧನವ ಕೊಟ್ಟು ನಿಧಿನಿಧಾನ ಒಲ್ಲನಾದನಲ್ಲದ ತನ್ನಂಗನೆಯ ಕೊಡಲಿಲ್ಲವು ಹೆಣ್ಣು ಸಲ್ಲದು ಜಂಗಮಕ್ಕೆ ಹೊನ್ನು ಸಲ್ಲದು ಲಿಂಗಕ್ಕೆ ಮಣ್ಣು ಸಲ್ಲದು ಗುರುವಿಗೆ ಇದರ ಭೇತವನಂತ ಉಂಟು ತಿಳಿವಡೆ ಬಹು ದುರ್ಲಭ ತಿಳಿದು ನೋಡಿದಡೆ ಭಕ್ತಿಗೆ ಬಹು ಸುಲಭ ತಿಳಿದು ಮಾಡಿ ಮೋಕ್ಷವ ಹಡೆವರಲ್ಲದೆ ತಿಳಿಯದ ಮಾಡಲು ಅವರೇನು ಮರುವಿನೊಳಗಿರುವ ಬಂಗಾರವಾಗಲಿ, ಸಮುದ್ರದೊಳಗಿರುವ ನಿಧಿ ನಿಧಾನಗಳಾಗಲಿ, ತಂದಿಹರೇನೋ? ಕಪಿಲಸಿದ್ಧ ಮಲ್ಲಿಕಾರ್ಜುನ ಇವರಿರವ ಹೇಳಿಕೊಡಯ್ಯ ಎನ್ನ ಪ್ರಾಣಗುರು ಚನ್ನ ಬಸವಣ್ಣನಿಂದ

೧೩೧ ಗುರುವಿಂಗೆ ಗುರುವಿಲ್ಲ ಲಿಂಗಕ್ಕೆ ಲಿಂಗವಿಲ್ಲ ಜಂಗಮಕ್ಕೆ ಜಂಗಮವಿಲ್ಲ ನನಗೆ ನಾನಿಲ್ಲ ಕಕ್ಕೆರೆಮ ನೋಡುವಡೆ ಆರಿಗೆ ಆರು ಇಲ್ಲ ಕಪಿಲಸಿದ್ಧಮಲ್ಲಿಕಾರ್ಜುನಾ

೧೩೨ ತನುವಿನೊಳಗಾದಾತ ಗುರುವೇ? ಮನಕ್ಕೊಳಗಾದಾತ ಲಿಂಗವೇ? ಧನಕ್ಕೊಳಗಾದಾತ ಜಂಗಮವೇ? ತನು ಮನ ಧನ ತನ್ನ ಮನಕ್ಕಲ್ಲಿವೆ ಗುರು ಲಿಂಗ ಜಂಗಮದಲ್ಲಿಂಟೇ ಕಪಿಲಸಿದ್ಧ ಮಲ್ಲಿಕಾರ್ಜುನಾ?

೧೩೩ ಶುದ್ಧ ಗುರು ಬಸವಣ್ಣ, ಸಿದ್ಧಗುರು ಚನ್ನಬಸವಣ್ಣ, ಪ್ರಸಿದ್ಧಗುರು ಪ್ರಭುರಾಯನು ತನುತ್ರಯ ಮಲತ್ರಯ ಆರನತಿಗಳೆದು ಲಿಂಗತ್ರಯ ಪ್ರಸಾದ ಪೂರಣ ಪರಿಭವಿಸಿ ಪಾವಮಾಡಿ, ಎನ್ನ ರಕ್ಷಿಸಿದ ಬಸವಪ್ರಭು ಶರಣೆಂದು ಬದುಕಿದೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ

೧೩೪ ಲಿಂಗ ಬಂದು ಲಿಂಗಗಳಯಿತ್ತಯ್ಯ ಲಿಂಗವೇ ಲಿಂಗ ಬಂದು ಲಿಂಗಗಳೇದಾಡಿತ್ತಯ ಲಿಂಗವೇ ಲಿಂಗ ಬಂದು ಲಿಂಗ ಉಳಿಯಿತ್ತಯ್ಯ ಲಿಂಗವೇ ಗುರು, ಲಿಂಗವೇ ಜಂಗಮ, ಲಿಂಗವೇ ನಾನು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ

೧೩೫ ಭಕ್ತಿ ಎಂಬ ಕೃಷಿಯ ಮೇಲೆ ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು ಆಚಾರವೆಂಬ ಕಾಯಾಯಿತ್ತು ನಿಷ್ಪತ್ತಿ ಎಂಬ ಹಣ್ಣಾಯಿತ್ತು. ನಿಷ್ಪತ್ತಿ ಎಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ ಕೂಡಲಸಂಗಮದೇವ ತನಗ ಬೇಕಂದು ಎತ್ತಿಕೊಂಡ

೧೩೬ ಲಿಂಗವ ಪೂಜಿಸುವವರನಂತರುಂಟು ಜಂಗಮವ ಪೂಜಿಸುವವರನಂತರುಂಟು ತನ್ನ ತಾನರಿದು ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಕೂಡುವವರಾರೂ ಇಲ್ಲ

೧೩೭ ಲಿಂಗಾಂಗ ಒಂದಾದ ಬಳಿಕ ಭಕ್ತನ ನೋಡಲಿಲ್ಲವು ಲಿಂಗಾಂಗ ಒಂದಾದ ಬಳಿಕ ಜಂಗಮವ ನೋಡಲಿಲ್ಲವು ಲಿಂಗಾಂಗ ಒಂದಾದ ಬಳಿಕ ಮನೆಂದುಮಿಲ್ಲವು ನೋಡಯ್ಯ ಎಮ್ಮಯ್ಯ ಕಪಿಲಸಿದ್ಧ ಮಲ್ಲಿನ ಎಲ್ಲರಲ್ಲಿಯು

೧೩೮ ಅಂಗವು ನಿರಯವಹುದು ಲಿಂಗ ನಿಟ್ಟು ಲಿಂಗದ ತೇಜ ಹಿಂಗದು ಲಿಂಗ ಪ್ರಭು ಲಿಂಗ ಅಂಗವೆಲ್ಲ ಲಿಂಗಮಯವಾಗಿ ಸಂಗನಿಸ್ಸಂಗವೆಂಬ [illegible] ಭಾವವಳಿವುದು ನಿಂದ ನಿಜದಲ್ಲಿ [illegible] ಪ್ರಾಣನಮಸ್ಕಾರಿಯಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಎನ್ನ ಗುರು ಚನ್ನಬಸವಣ್ಣ

೧೩೯ ವಾದಿ ನಾಲ್ವರ ಮೇಲೆ ಮಾಣದೆ ನುಡಿವ ನಿರ್ಣಯ ಸಂಭಾಷಣೆಯ ಮಾಡಬಲ್ಲರ ನಿರ್ವಾಣವದೊಳಗೆ ಪರಿಪೂರ್ಣವಾ

ಗಿರ್ಪ ಮಹಾವರ್ಣವ ತನ್ಮಯ ಮಾಡಬಲ್ಲರೆ ನಿರ್ವಾಣಸ್ಥಾನ ಹತ್ತ ರಲ್ಲಿ ಆನಂದ ಸಿಂಹಾಸನ ನಾನಾ ಬೆಳಗಿನ ಬೀಜದ ತಿರುಳನನುಭವಿಸ ಬಲ್ಲರೆ ಲಿಂಗಾನುಭಾವಿ ಪ್ರಾಣ ಮಹತ್ತರದಲ್ಲಿ ಧ್ಯಾನ ಚತುಷ್ಟಯ ಕೂಡಿದಲ್ಲಿ ಸಕೀಲ ಬಲ್ಲರೆ ಲಿಂಗೈಕ್ಯ. ಇದು ಕಾರಣ ಕಪಿಲಸಿದ್ಧ ಮಲ್ಲಿ ಕಾರ್ಜುನಯ್ಯ ನಿಮ್ಮ ಶರಣ ಚನ್ನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು

೧೪೦ ನಾ ನಿಮ್ಮ ರೂಪ ವಿಚಾರಿಸುವನಲ್ಲ ಕೇಳಾ ನಿನ್ನ ಧ್ಯಾನ ದಲ್ಲಿ ಇಟ್ಟಾತನಲ್ಲ ಕೇಳಾ ಅತ್ಯತಿಷ್ಠದ್ದಶಾಂಗುಲದಲ್ಲಿ ನಿಮ್ಮ ನಿಲಿಸಿ ನಾನೊಂದಡೆಯಲ್ಲಿ ಇಪ್ಪಾತನಲ್ಲ ಕೇಳಾ ಓಂಕಾರವೆಂಬ ಪೀಠಕ್ಕೆ ನಾನಾಗಿ ನಿಃಶಬ್ದವೆಂಬ ಲಿಂಗವ ನೆಲೆಗೊಳಿಸಿ ಬೆರಸಿ ಬೇರಿಲ್ಲದೆ ಇಪ್ಪೆ ನೋಡಯ್ಯ, ಕಪಿಲಸಿದ್ಧಮಲ್ಲಿನಾಥಯ್ಯನೇ ನೀನು ಪ್ರಣಮರೂಪಾಗಿ

೧೪೧. ನಾದ ಬಿಂದು ಎಂಬಲ್ಲಿ ಅಂಗ ಸಂಬಂಧವೆಂಬೆನಯ್ಯ ನಾದ ಪ್ರಾಣ, ಬಿಂದು ಕಾಯವಾದ ಕಾರಣ ನಾದ ಸ್ವರವಲ್ಲ, ಬಿಂದು ಕಾಯವಲ್ಲ. ಉಭಯ ಸೂತಕ ರಹಿತನ ಮಾಡಯ್ಯ. ನಾದ ಬಿಂದು ವಿನ ವಡ್ಡ ತೋರಿ ಮನ ಮಗ್ನವಾದ ನಿಲವ ಕಪಿಲಸಿದ್ಧ ಮಲ್ಲಿಕಾರ್ಜುನ ನೀನೆ ಬಲ್ಲೆ

೧೪೨ ಲಿಂಗವಾದ ಬಳಿಕ ಪಂಚಸೂತ್ರ ಸಹವಾಗಿರಬೇಕು. ಜಂಗಮನಾದ ಬಳಿಕ ಸದ್ಗುಣ ಸಹಿತವಾಗಿರಬೇಕು ತನ್ನ ತಾನರಿವಾತನಾದ ಬಳಿಕ ಮರೀಚಿಯ ಜಲದಂತಿರಬೇಕು ಕಪಿಲಸಿದ್ಧ ಮಲ್ಲೀಶನಲ್ಲಿ

ಪೂರ್ದಯ್ಯಾ ಆ ಕರಸ್ಥಲಲಿಂಗವ ಕಂಗಳು ತುಂಬಿ ನೋಡಿ, ಮನಮುಟ್ಟಿ ನೆನೆದು ಸಂದಿಲ್ಲದೆ ಇಷ್ಟಲಿಂಗದಲ್ಲಿ ಭಾವಬಲಿದು, ಲಿಂಗವನಪ್ಪಿ, ಅಗಲದೆ, ಲಿಂಗದಲ್ಲಿ ಸದಾ ಸನ್ನಿಹಿತವಾಗಿರ್ದು, 'ಶಿವ ಶಿವ, ಹರ ಹರ' ಎನುತಿರ್ದೆನಯ್ಯಾ ನಿಮ್ಮ ನನಹಿಂದೆ ನಿಮ್ಮ ನೆನವುತ್ತಿರ್ದೆನು ಕಾಣಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ

೩. ಆರಾಧಾರದ ನಿಚ್ಚಣಿಕೆಯನೇರಿ ನೋಡಲು, ಮಂದರಗಿರಿ ಎಂಬ ಮಹಾಪರ್ವತ ಕಾಣಬಹುದು ಆ ಪರ್ವತದವ ತುಟ್ಟತುದಿಯನೇರಿ ನೋಡಲು ಮಹದಾಕಾಶ ಮಂಟಪ ಉಂಟು ಆ ಮಂಟಪವ ಹೊಕ್ಕಿಹೆನೆಂದು ವಿಚಾರಿಸಿ ನೋಡಲು ಅಲ್ಲೊಂದು ಸೂಕ್ಷ್ಮ ದ್ವಾರ ಉಂಟು ಆ ಸೂಕ್ಷ್ಮ ದ್ವಾರಕವಾಟವ ತೆರೆದುನೋಡಲು ಅಲ್ಲಿ ನಿರುಪಾಧಿಕ ಜ್ಯೋತಿ ಬೆಳಗುತ್ತಿಪ್ಪುದು ಆ ಬೆಳಗಿನೊಳಗೆ ಅಚಳವಾಗಿ ನಿಂದು ಪರಿಪೂರ್ಣಪೂಜೆಯಾಗಿ ತನ್ನನೇ ನಿರಾಳ ಲಿಂಗಕ್ಕೆ ಪೂಜೆಯ ಮಾಡುವಾತನೇ ಪರಮ ನಿರ್ವಾಣಿಯಯ್ಯಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ

೪ ತನುವಿನ ಗುಣಂಗಳ ತರಿದೊಟ್ಟಿ, ಮನದ ಮಾಯಾವಿಕಾರದ ಬಾಯ ಟೊಣೆದು, ಕಂಗಳ ಕತ್ತಲೆಯ ಕಡಿಸಿ, ಎಡ ಬಲಂಗಳ ತಡಹದ ನಡುಮಧ್ಯ ಮಾರ್ಗವಿಡಿದು ಸುಷುಮ್ನಗಿರಿಯನಡರಿ ಕಡೆಮೊದಲಿಲ್ಲದ ಬೆಳಗಿನೊಳಗಣ ಬೆಳಗುತಿರ್ದ ನಾನು ಪರಶಿವ ಯೋಗಿಯಾದನಯ್ಯಾ ಅಖಂಡೇಶ್ವರಾ

೫ ಅಯ್ಯಾ ನೀಲಮಣಿ ಮಧ್ಯಸ್ಥಾನದಲ್ಲಿ ಕಾರಮೇಘದೊಳಗಿನ ಮಿಂಚಿನ ಪ್ರಕಾಶದಂದದಿ ಚಿದಾಕಾರ ಸ್ವರೂಪದಿಂದ ಪೀತವರ್ಣ ಮೊದಲಾಗಿ ಅನಂತವರ್ಣಸ್ವರೂಪನಾಗಿ, ಅತ್ಯಂತವಾದ ಅಣುರೂಪನಾಗಿ, ಬದವಣಿಯ ಮುಳ್ಳಿನ ಹಾಗೆ ಅನಂತ ಪ್ರಕಾರದಿಂದ ಕಾಣಲ್ಪಡುವುದು ನಿಜ ಶಿವಯೋಗಲಿಂಗಧ್ಯಾನಿಗಳಿಗೆ ಅನಾದಿಮೂಲ ಪ್ರಣಮಸ್ವರೂಪದಿಂದ ಮುಖಕಮಲದ ಮೇಲೆ ಕಾಣಲ್ಪಡುವುದು ನೋಡಾ ಅದಂತೆಂದೊಡೆ ಮುಖಮಧ್ಯದಲ್ಲಿ ನೇತ್ರ, ನೇತ್ರ ಮಧ್ಯದಲ್ಲಿ ಮನಸ್ಸು, ಮನೋಮಧ್ಯದಲ್ಲಿ ತಾನೇ ತಾನಲ್ಲದೆ ಮತ್ತೊಂದು ಸಾಧಕವಿಲ್ಲವದು ನಿಜ ತಾರಕ ಬ್ರಹ್ಮ ಶಾಂಭವ ಮೂರ್ತಿ ನೋಡಾ ಅದಕ್ಕೆ ಹರನ ನಿರೂಪು ಉಂಟು ಸಾಕ್ಷಿ ॥ ರವಿ ಮಧ್ಯಸ್ಥಥಾ ಇಷ್ಟಂ ಚಂದ್ರ ಮಧ್ಯಸ್ತು ಪ್ರಾಣಕಂ। ಅಗ್ನಿ ಮಧ್ಯಸ್ಥಥಾ ಭಾವಂ ಇತ್ಯೇತೆ ಶಂಭುರೂಪಕಂ ॥

೧೦ ಸುಷುಮ್ನದ ನಾಳ್ವಿಸೆಯಲ್ಲಿ, ಆತ್ಮಕಲೆ, ವಿದ್ಯಾಕಲೆ, ನಾದಕಲೆ, ಬಿಂದುಕಲೆಗಳನರಿಯಬೇಕು ಆ ಕಲೆ ನಾಲ್ಕು ಸುತ್ತಿ ಅಗ್ನಿ ಕಲೆಗಳ ಹತ್ತನರಿಯಬೇಕು ಪಿಂಗಳೆಯಲ್ಲಿ ಭಾನುಕಲೆ ಹನ್ನೆರಡನರಿವುದು ಈಡೆಯಲ್ಲಿ ಚಂದ್ರಕಲೆಗಳು ಹದಿನಾರು ಕ್ಷಯವೃದ್ಧಿಯಾಗಿ ನಡೆವುದನರಿವುದು ಈ ಮೂವತ್ತೆಂಟು ಕಲೆಗಳ ಕೂಡಿದ ಚಂದ್ರ ಸೂರ್ಯಾಗ್ನಿಗಳ ಮಧ್ಯದಲ್ಲಿ ತತ್ವ ಮೂರು ಕೂಡಿ ಬೆಳಗುವ ಪರಂಜ್ಯೋತಿ ಲಿಂಗವನರಿದು ಯೋಗಿ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಒಳಕ ಕೂಡುವುದು ಕಾಣಿರಣ್ಣಾ

೧೧ ತನುವೆಂಬ ಭೂಮಿಯಲ್ಲಿ ಶೃಂಗಾಟದ ಇಂದ್ರಕೂಟಗಿರಿ ಎಂಬ ಕೈಲಾಸದಲ್ಲಿ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ದಳದ ಆತ್ಮ, ಶಕ್ತಿ, ಬಿಂದು, ನಾದಗಳ ಮಧ್ಯದಲ್ಲಿ ರೂಪ್ಯಸಿಂಹಾಸನವೆಂಬ ಸುಜ್ಞಾನ ಪೀಠದ ಮೇಲೆ ನೀವು ಮೂರ್ತಿಗೊಂಡಿಹುದಾಗಿ ಕಂಡು ಹರುಷಿತನಾದ ಸೂರ್ಯಮಂಡಲದ ದ್ವಾದಶದಳದ ರುದ್ರರು ರುದ್ರಶಕ್ತಿಯರು ನಿಮ್ಮನೋಲಗಿಸುತ್ತಿಹರು ಚಂದ್ರಮಂಡಲದ ಷೋಡಶದಳದ ರುದ್ರರು ರುದ್ರಶಕ್ತಿಯರು ನಿಮ್ಮನೋಲಗಿಸುತ್ತಿಹರು ಅಗ್ನಿಮಂಡಲದ ದಶದಳ ರುದ್ರರು ರುದ್ರಶಕ್ತಿಯರು ನಿಮ್ಮನೋಲಗಿಸುತ್ತಿಹರು ಈ ಪರಿಯಾದ ದೇವರ ದೇವನ ಓಲಗವನೇನೆಂದು ಹೇಳುವೆನು? ಮತ್ತೆ ಭೇರಿ ಮೃದಂಗ, ನಾಗಸರ, ಕೊಳಲು, ವೀಣೆ, ಕಹಳೆ ಗಂಟೆ ರಂಜಾನಾದ, ನಾನಾ ಬಹುವಿಧದ ಕೇಳಿಕೆಯ ಉಲುವಸರದಲ್ಲಿ ರಾಜಿಸುವ ರಾಜಯೋಗವ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ಶರಣ ರಾಜಯೋಗಿಗಳೇ ಬಲ್ಲರು

೧೨ ಆಸನ ಬಂಧನ ಸಡಿಲ, ನಾಸಿಕಾಗ್ರದಲ್ಲಿ ದೃಷ್ಟಿಯನಿರಿಸಿ ಸೂಸಲೀಯದ, ಮನವ ಬೇಸರಿಸದಾಗದೆ, ಪವನವ ಬಿಸರಿಸಲೀಯದವ ಬಿಂದುವನೂರ್ಧ್ವಕ್ಕಾತ್ತಿ ಇಂತೀ ತ್ರಿವಿಧವನಾನಂದ ರಾಶಿಯಲ್ಲಿ ಒಲಿದು ನಿಲಿಸಿ, ಸಾಸಿರದಳ ಕಮಲದ ನಾದಾತ್ಮಕ ಲಿಂಗದಲ್ಲಿ ಮನ ಲೀಯವಾದಡೆ ಅದೇ ರಾಜಯೋಗವಯ್ಯಾ ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರನ ಪದವನೆಯ್ದುವಡ

೧೩ ಪೃಥ್ವಿ ಅಪ್ಪುಗಳೆರಡನು ಆಧಾರಗೊಳಿಸಿ, ಅಗ್ನಿವಾಯುಗಳೆರಡನು ಅಂಬರಸ್ಥಾನಕ್ಕೊಯ್ದು ಆತ್ಮಾಕಾಶವನು ಅನುಭಾವ ಮುಖಕ್ಕೆ ತಂದು, ಮನವಲನುಮಾನವಳಿದು, ನೆನಹು ನಿಷ್ಪತಿಯಾಗಿ, ಯೋಗ

ಮಧ್ಯದಲ್ಲಿ ಉದ್ಯೋಗಿಸುತ್ತಿರ್ಪ ಸುಯಿಧಾನ ಬ್ರಹ್ಮವು, ಅಂತಪ್ಪ ಸುಯಿ ಯಿಧಾನ ಬ್ರಹ್ಮದಲ್ಲಿ ಮನವಡಗಿ ವೈಮರೆದಿರ್ಪಾತನೇ ಘನಲಿಂಗ ಯೋಗಿಯಯ್ಯಾ ಅಖಂಡೇಶ್ವರಾ

೧೭ ಕಮಲಸಾಲೊಳಗೆ ಭ್ರಮರದ ಹಿಂಡು ಝೇಂಕರಿಸು ತಿರ್ಪುವು ನೋಡಾ ನಿರ್ಮಲ ಚಿತ್ತದಿಂದ ಲಾಲಿಸಲು, ಅದು ತನ್ನ ಸುಮನ ಸುಜ್ಞಾನದ ನಿಲವು ನೋಡಾ ಅಖಂಡೇಶ್ವರಾ

೧೮ ಗಗನ ಮಂಟಪದಲ್ಲಿ ಅಘಹರನ ಪೂಜೆ ಒಗುಮಿಗಿಲಾ ಗುತಿರ್ಪುದು ನೋಡಾ ಇಲ್ಲಿ ಧಿಗಿಭುಗಿಲೆಂಬ ಶಬ್ದದ ಸೊಗಸು ನೋಡಾ ಅಖಂಡೇಶ್ವರಾ

೧೯. ಉತ್ತರಗಿರಿಯ ಚಿತ್ರ ಮಂಟಪದೊಳಗೆ ರತ್ನ ತೋರಣ ಪರಿ ಪರಿಯ ನೋಡಾ ಮುತ್ತಿನ ಗದ್ದುಗೆಯ ಮೇಲೆ ಛತ್ತೀಸಕೋಟಿ ಚಂದ್ರಸೂರ್ಯರ ಬೆಳಗನೊಳಕೊಂಡು ನಿತ್ಯ ಪರಿಪೂರ್ಣ ವಸ್ತುವ ಕೂಡ ಬಲ್ಲಾತನೇ ಕರ್ತೃ ಶಿವ ತಾನೇ ನೋಡಾ ಅಖಂಡೇಶ್ವರಾ

೨೦ ದೇಹವೆಂಬ ದೇಗುಲದೊಳಗೆ ಭಾವ ಸಿಂಹಾಸನವನ್ನ ಮಾಡಿ, ಜೀವದೊಡಯನ ಪೂಜಿಸ ಬಲ್ಲ ದೇವರಿಗೆ ದೇವನೆಂಬೆನಯ್ಯಾ ಅಖಂಡೇಶ್ವರಾ

೨೧ ಪ್ರಾಣಲಿಂಗ ಸಂಬಂಧಿಗಳೆಂದು ನುಡಿವರು ಅನೇಕ ರುಂಟು ಪ್ರಾಣಲಿಂಗದ ಕಳೆಯ ನಾವು ಅರಿಯರಲ್ಲಾ ಪ್ರಾಣಲಿಂಗದ ಕಳೆ ಎಂದರೆ, ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುತಿರ್ಪುದು ನೋಡಾ ಸ್ವಾದಿಷ್ಠಾನದಲ್ಲಿ ಪೌರ್ಣಮಿಯ ಚಂದ್ರನಂತೆ ಬೆಳಗುತಿ ರ್ಪುದು ನೋಡಾ ಪ್ರಾಣಲಿಂಗವು ಮಣಿಪೂರಕದಲ್ಲಿ ಮಿಂಚಿನ ಲತೆ ಯಂತೆ ಬೆಳಗ ತಿರ್ಪುದು ನೋಡಾ ಪ್ರಾಣಲಿಂಗವು ಅನಾಹತದಲ್ಲಿ ಸ್ಫಟಿಕದ ಶಲಾಕೆಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು ಆಜ್ಞೆಯಲ್ಲಿ ರತ್ನ ದೀಪ್ತಿಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು ಬ್ರಹ್ಮರಂಧ್ರದಲ್ಲಿ ಸ್ವಯಂ ಜ್ಯೋತಿಯಂತೆ ಬೆಳಗುತಿ ರ್ಪುದು ನೋಡಾ ಪ್ರಾಣಲಿಂಗವು ಶಿಖೆಯಲ್ಲಿ ಶುಭ್ರ ತಾರೆಯಂತೆ ಬೆಳ ಗುತಿರ್ಪುದು ನೋಡಾ ಪಶ್ಚಿಮದಲ್ಲಿ ಅನೇಕ ನಕ್ಷತ್ರದಂತೆ ಬೆಳಗುತಿ

ಅಲ್ಲಿ ಅಷ್ಟದಿಕ್ಕುಗಳಲ್ಲಿ ನಿಂದು ಓಲಗಂಗೊಡುವ ಭಕ್ತಿ ಸಸ್ತ್ರೀ ಳವ ಕಂಡು, ಅಲ್ಲಿಂದ ಮುಂದಕ್ಕೆ ಹೋಗಿ, ನಟ್ಟನಡುವಿರ್ದ ಪರಶಿವನ ಕಂಡು, ತನು ಉಬ್ಬಿ, ಮನ ಕರಗಿ, ಕರಣಂಗಳಲ್ಲಿ ಪರಿಣಾಮ ಜಲ ಉಕ್ಕಿ ಕಡೆಗೋಡಿವರಿಯುತ್ತ, ಉರಿ ಕರ್ಪುರ ಸಂಯೋಗದಂತೆ, ಆ ನಿಷ್ಕಲ ಪರಶಿವನನೊಡವೆರೆದು ಪರಿಪೂರ್ಣವಾದ ಮಹಾ ಶರಣರ ತೋರಿ ಬದುಕಿಸಯ್ಯಾ ಎನ್ನ ಅಖಂಡೇಶ್ವರಾ

೨೪ ಎನ್ನಂತರಂಗದ ಆರು ಭವನದ ಮೇಲೆ ತೋರುತ್ತಿರ್ದ ಮಹಾಕೈಲಾಸದ ಮೂರು ಮಂಡಲದಲ್ಲಿ ಎಂಟು, ಹದಿನಾರು, ಮೂವ ತ್ತೆರಡು ತಂಡದಲ್ಲಿನಿಂದು, ಓಲಗಂಗೊಡುತಿರ್ಪ ಸಕಲ ಗುಣಂಗಳು ನಿಮಗೆ ಎನ್ನ ಮನ ಬುದ್ಧಿ ಚಿತ್ತಹಂಕಾರಗಳೇ ನಿಮ್ಮ ಮಂತ್ರಂಗಳಾಗಿ ರ್ಪವು ಎನ್ನ ದಶವಾಯುಗಳೇ ನಿಮ್ಮ ಮಂತ್ರ ನಾಮಂಗಳ ಕೊಂಡಾ ಡುತ್ತಿರ್ಪವು ಎನ್ನ ಚರಣಂಗಳು ನಿಮ್ಮ ಪ್ರದಕ್ಷಿಣೆಯ ಮಾಡುತಿರ್ಪವು ಎನ್ನ ತ್ವಕ್ಕು ನಿಮಗೆ ಹಾಸಿಗೆಯ ಸುಖವನುಂಟುಮಾಡುವುದು ಎನ್ನ ಕರ್ಣವು ನಿಮಗೆ ಜ್ಞಾನವ ಕೇಳಿಸುತಿರ್ಪುದು ಎನ್ನ ಕಂಗಳು ನಿಮಗೆ ವಿಚಿತ್ರರೂಪು ತೋರುತಿರ್ಪವು ಎನ್ನ ಘ್ರಾಣವು ನಿಮಗೆ ಗಂಧಪರಿಮ ಳವ ಮಾಡಿಸುತಿರ್ಪವು ಎನ್ನ ಜಿಹ್ವೆಯು ನಿಮ್ಮ ಭೋಜನಕ್ಕೆ ಷಡು ರಸದ ಪ್ರಪಂಚ ಕಜ್ಜಾಯಗಳ ಎಡೆ ಮಾಡುತಿರ್ಪವು ಎನ್ನ ಸಕಲ ಕರಣಂಗಳು ನಿಮ್ಮ ನಿಜ ಸೇವೆಯನ್ನು ಮಾಡುತಿರ್ಪವು. ಇಂತೀ ನಾನಾ ತರದಲ್ಲಿ ಆಗುವ ನಿಮ್ಮ ಓಲಗವ ಅಷ್ಟವಣೆಯಂ ಕೊಂಡು ಹೋದುದು ಬಂದುದು ಅರಿವೆ ಸಂಪಿಗೆಯ ಪುಷ್ಪಕ್ಕೆರಗಿದ ಭ್ರಮರನಂತೆ ನಿಮ್ಮೊಳಗೆ ಪರವಶನಾಗಿರ್ದೆನಯ್ಯ ಅಖಂಡೇಶ್ವರಾ

ಪಶ್ಚಿಮದ್ವಾರವೆಂಬ ಬಾಗಿಲ ತೆರೆದು, ಕಂಗಳೇ ಪ್ರಾಣವಾಗಿ, ಬರವ ಹಾರೈಸುತಿರ್ದೆನಯ್ಯಾ ನಾನು ಬಾರನೆಂದು ಉಮ್ಮಳಿಸಿಹಳೆಂದು ತಾನೇ ಬಂದು ಎನ್ನ ಹೃದಯ ಸಿಂಹಾಸನದ ಮೇಲೆ ಮೂರ್ತಿಗೊಂಡಿರೆ ಎನ್ನ ಮನದ ಬಯಕೆ ಸಯವಾಯಿತ್ತು ಹಿಂದೆ ಹನ್ನೆರಡು ವರ್ಷದಲ್ಲಿದ್ದ ಚಿಂತೆ ಇಂದು ನಿಶ್ಚಿಂತವಾಯಿತ್ತು ಕೂಡಲ ಸಂಗಮದೇವರು ಕೃಪಾ ಮೂರ್ತಿಯಾದ ಕಾರಣ ನಾನು ಬದುಕಿದೆನು

೩೧ ಅಂತರಂಗ ಸನ್ನಿಹಿತ ಪರಂಜ್ಯೋತಿ ಲಿಂಗದಲ್ಲಿ ಧ್ಯಾನ ನಿಷ್ಠನಾದ ಯೋಗಿ ಎಲ್ಲ ಕಡೆಯಲ್ಲಿ ಪರಿಪೂರ್ಣ ಜ್ಞಾನ ದೃಷ್ಟಿಯಿಂದ ನೋಡಲು ಪಶ್ಚಿಮ ಮುಖವಾದ ಪರತತ್ವವೆಂಬ ನಿರ್ಮಲ ದರ್ಪಣದೊಳಗೆ ತನ್ನ ಕಂಡು ಕಂಡಿಹೆನೆಂಬ ಚಿದಹಂಭಾವವಳಿದು ನಿಂದ ನಿಲವೇ ನಿಜ ನಿರ್ವಾಣವಯ್ಯಾ ನಿಜ ಗುರು ಸ್ವತಂತ್ರಸಿದ್ಧಲಿಂಗೇಶ್ವರಾ

೩೨ ಶಿವಧ್ಯಾನದ ಕಡೆಯಲ್ಲಿ ಒಪ್ಪಿ ತೋರುವ ಸಂವಿತ್ತಿನ ತೃಪ್ತಿಯಿಂದ ತನ್ನ ಮರೆದ ಶರಣನು ಪರಮಪ್ರಕಾಶ ರೂಪನಾದ ಶಿವನ ಕೂಡಿ ಸರ್ವ ಜೀವರ ಹೃದಯದಲ್ಲಿದ್ದು ಅವಕ ಅರಿವನರುಹಿಸಿ ಕೊಡುತ್ತ ಎಲ್ಲ ಕಡೆಯಲ್ಲಿ ಸುಖರಾಶಿಯಾದ ಚೈತನ್ಯ ಒಟ್ಟರೂಪ ಪರಬ್ರಹ್ಮವೇ ತಾನಾಗಿಹನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಶರಣನು

೩೩ ಅಯ್ಯಾ ಲಿಂಗಾಂಗ ಸಮರಸ ಹೇಗುಂಟೆಂದರೆ, ಸುಚಿತ್ತ ಕಮಲ ಮೊದಲಾಗಿ ಆಯಾಯ ಕರಸ್ಥಲದಲ್ಲಿ ಮೂರ್ತಗೊಂಡಿರುವ ಸುಜ್ಞಾನ ಜಂಗಮ ಸ್ವರೂಪನಾದ ಇಷ್ಟ ಮಹಾಲಿಂಗದ ಗರ್ಭದಲ್ಲಿ ತನ್ನಂಗವ ಬಟ್ಟು ಎರಡು ನೇತ್ರ ಒಂದಾದ ಲಲಾಟ ನೇತ್ರದಲ್ಲಿ ಇಷ್ಟಲಿಂಗವನು ಮುಳುಗಿಸುವದೀಗ ಲಿಂಗಾಂಗಸಂಗ ಸಮರಸವು ನೋಡಾ ಆ ಇಷ್ಟ ಮಹಾಲಿಂಗ ನೇತ್ರದರ್ಪಣದಲ್ಲಿ ಪ್ರತಿಬಿಂಬವಾಗಿ, ಮನೋನೇತ್ರಕ್ಕೆ ಒಂದರಡಾಗಿ ಕಾಣಲ್ಪಡುವದೀಗ ಪ್ರಾಣಲಿಂಗವು ಆ ಪ್ರಾಣಲಿಂಗ ಹಸ್ತಂಗಳೆಂಬ ಎರಡರಲ್ಲಿ ನೇತ್ರದ್ವಯವೆಂಬ ಕುಚಂಗಳೆರಡು ಹಿಡಿವುದೀಗ ಲಿಂಗಾಂಗ ಸಂಗಸಮರಸವು ರೂಪು ರೇಖೆ ವಿಭ್ರಮ ವಿಲಾಸ ಕಳಾ ಲಾವಣ್ಯಸ್ವರೂಪವಾದ ಪರಶಿವ ಬ್ರಹ್ಮಮೂರ್ತಿಯ ಮುದ್ದುಮುಖದ ಆಧಾರದಲ್ಲಿ ಓಂಕಾರ ಪ್ರಣವ ನಾದಾಮೃತವ ತಾ ಚುಂಬನ ಮಾಡಲ್ಕೆ ಚಿತ್‌ಶಕ್ತಿ ಸ್ವರೂಪಮಪ್ಪ ತನ್ನ ಮುದ್ದುಮುಖದ ಆಧಾರದಲ್ಲಿ ಹುಟ್ಟಿದ ನಕಾರಾದಿ ಪಂಚ ಪ್ರಣಮಂಗಳು ಆ ಪಂಚ ಬ್ರಹ್ಮ ಚುಂಬನವ ಮಾಡಲಿಕ್ಕೆ

ಇದು ಲಿಂಗಾಂಗ ಸಮರಸವು ಇದು ಶರಣ ಸತಿ, ಲಿಂಗ ಪತಿ ನ್ಯಾಯವು.
ಇದು ಶ್ರೀತನುವ ಲಿಂಗಕ್ಕರ್ಪಿಸುವ ಕ್ರಮವು. ತನ್ನಲ್ಲಿ ತನ್ನ ತೋರಿ.
ನನ್ನಲ್ಲಿ ನನ್ನ ತೋರಿದನಾಗಿ ನಾನು ನೀನೆಂಬುದು ಇಲ್ಲ. ನೀನು ನಾನೆಂ
ಬುದಿಲ್ಲ, ತಾನೇ ತಾನಾದುದು ಬಯಲು ಬಯಲ ಕೂಡಿದ ಹಾಗೆ,
ಮಾತು ಮಾತ ಕಲಿತ ಹಾಗೆ, ಪರಶಿವಲಿಂಗದಲ್ಲಿ ನಿಜ ದೃಷ್ಟಿ ಕರಗೊಂಡ
ಮೇಲೆ ಗುಹ್ಯಕ್ಕೆ ಗುಹ್ಯ ಗೋಪ್ಯಕ್ಕೆ ಗೋಪ್ಯ ರಹಸ್ಯಕ್ಕೆ ರಹಸ್ಯ ಇದ
ಗುಹೇಶ್ವರನೇ ಬಲ್ಲನಲ್ಲದೆ ಕಣ್ಣುಗೆಟ್ಟಣ್ಣಗಳೆತ್ತ ಬಲ್ಲರು ನೋಡಾ?

೩೪ ಅಯ್ಯ, ಎರಡು ನೇತ್ರವು ಒಂದಾದ ಭಾವನೇತ್ರವು ಇಷ್ಟ
ಲಿಂಗ ಗೋಚರಕ್ಕೆ ಕಾಣಿ ಒಂದು ಲಿಂಗ ಎರಡಾದ ಪ್ರಾಣಲಿಂಗ ಸ್ಥಾನಂ
ಗಳಿಗೆ ಎರಡು ನೇತ್ರವು ಕೂಡುವ ಹಿಡಿಯಲಿಕ್ಕೆ ಈ ಕೂಡುವೆಂದು ಗುಹ್ಯ
ಒಂದು, ಇದು ತ್ರಿಕೂಟವೆಂಬ ಹೆಸರಾಯಿತ್ತು ಆ ತ್ರಿಕೂಟ ಶಾಂಭವ
ಪುರ ಮಧ್ಯದಲ್ಲಿ ಘನ ಮಹಾ ನಿಶ್ಚಯ ಜ್ಯೋತಿರ್ಲಿಂಗವು ತಾನು ಏಕ
ಸಮರಸವಾದ ಬಳಿಕ ತನುತ್ರಯವಿರಾದವ ಹೊದ್ದಲಾಗದು ಇಂತು
ಹರ ಗುರು ವಾಕ್ಯವ ಮೀರಿ ಹೊದ್ದಿದಡೆ ಮೀಸಲ ಓಗರವ ನಾಯಿ
ಮುಟ್ಟಿದಂತೆ ಆಯಿತ್ತು ಆ ಅತ್ತ ಪದಾರ್ಥವು ಲಿಂಗಕ್ಕೆ ಸಲ್ಲದು
ಅವರು ಮಾಡುವ ಉಪಚಾರಂಗಳು ಲಿಂಗಕ್ಕೆ ಸಲ್ಲವು ಅವರ ತೆರನೆಂ
ತಾಯಿತ್ತೆಂದಡೆ ಜನ್ಮದಂಧನು ನಿಕ್ಷೇಪವ ಕಂಡು ಹೋಗಲಾಡಿಸಿ,
ದಿಗಿಲುಬಿದ್ದು ಸತ್ತಂತಾಯಿತ್ತು ಇಂಥ ನಿರ್ಭಾಗ್ಯರ ದುರ್ಮಾರ್ಗವ
ಕಂಡು ನಮ್ಮ ಶರಣರು ಅನಾಚಾರ ಅಕ್ರಿಯೆ ಅಜ್ಞಾನಗಳ ಹೊದ್ದದೆ,
ಸರ್ವಾಂಗವ ನಿಜ ಗುರು ಲಿಂಗ ಜಂಗಮದಲ್ಲಿ ನಿಕ್ಷೇಪವ ಮಾಡಿ, ಅಪ
ರಳಾನಂದದಿಂದ ನಿರಾಳರಾಗಿ ಮನ್ಮಥ ರತಿ ಎಂಬ ಜಡಪಾಶದಲ್ಲಿ
ಬೀಳದ ಅಕ್ಷಯ ಸುಖಿಗಳಾದರ ನೋಡಾ ಗುಹೇಶ್ವರಲಿಂಗದಲ್ಲಿ

೩೫ ಅಯ್ಯ ಅವಸ್ಥಾತ್ರಯವ ಬಿಟ್ಟು ಇಷ್ಟಲಿಂಗದ ಗರ್ಭದಲ್ಲಿ
ಕಾಯವ ನಿಕ್ಷೇಪವ ಮಾಡಿದ ಬಳಿಕ ಕಾಲನ ಭಯವಿಲ್ಲ ಆ ಏಕಾಂತ
ವಾಸ ಜ್ಯೋತಿರ್ಲಿಂಗ ಸಂಧಾನದಿಂದ ಸಮರಸವಾಗಲು ಕರ್ಮದ ಭಯ
ವಿಲ್ಲ ತ್ರಿವಿಧಾಂಗ ತ್ರಿವಿಧ ಲಿಂಗಾಹಿತದಿಂದ ಸಂಧಿಸಿದ ಬಳಿಕ ಕಾಲ
ಕಾಮ ಕರ್ಮಂಗಳ ತಾ ಮೆಟ್ಟಿ ನಿಲ್ಲದ, ವಿಷಯಸುಖಕ್ಕೆ ಮೆಚ್ಚಿ, ಆ
ಮೂವರ ಕಾಲ ಕೆಳಗೆ ತಾವು ಬಿದ್ದು ಮಹಾ ದುಃಖಕ್ಕೆ ಒಳಗಾದರು ಆ
ವಿಷಗಾಳಿ ಮಹಾ ಕೆಟ್ಟುದು ಅದೆಂತೆಂದೊಡೆ, ಆ ವಿಷಗಾಳಿ ನೋಂಕಲು

ಕರಿ ಹತ್ತು ಭವವನೆತ್ತಿದ ಅಜನ ಶಿರ ಹೋಯಿತ್ತು ಇಂದ್ರನ ಮೈ ಕೆಟ್ಟಿತ್ತು ಚಂದ್ರನು ಕ್ಷಯರೋಗಿಯಾದನು ದಿನಕರನ ನೇತ್ರ ಹೋಯಿತ್ತು ಮುನೀಂದ್ರರು ಮುಳುಗಿ ಹೋದರು. ಮನುಮಾಂಧಾತೃಗಳು ಮಂದ ಮತಿಗಳಾದರು ದೇವ ದಾನವ ಮಾನವರು ಮಡಿದು ಹೋದರು ಅದ ನೋಡಿ, ಕಂಡು, ಕೇಳಿ ನಮ್ಮ ಶರಣರು ವಿಷಗಾಳಿ ತಮ್ಮನ್ನು ಸೋಂಕ ದಂತೆ ಶಾಂಭವಪುರದ ಮಧ್ಯದಲ್ಲಿ ನಿಂದು ನಿರ್ಣಯವೆಂಬ ಶಸ್ತ್ರದಿಂದ ವಿಷಗಾಳಿಯ ಛೇದಿಸಿ ನಿಜಾಚರಣೆಯಲ್ಲಿ ನಿಂದು ಅಕ್ಷಯ ಸುಖಿಗಳಾ ದರು ನೋಡಾ ಗುಹೇಶ್ವರಲಿಂಗದಲ್ಲಿ ಸಿದ್ಧರಾಮಯ್ಯ ಎಂದು ಪ್ರಭು ಸ್ವಾಮಿಗಳು ನಿರೂಪವಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

---

## ಬಯಲು.

೩೬ ಜ್ಞಾನದ ಗಮನದ ಸಹಜದ ಉದಯದಲ್ಲಿ ಏನೆಂದರಿ ಯೆನು ಲಿಂಗದ ಬೆಳಗು ಒಳಕೊಂಡುದಾಗಿ ಏನೆಂದರಿಯೆನು ಕೂಡಲ ಸಂಗಮದೇವನ ಧ್ಯಾನದಿಂದ ಏನೆಂದರಿಯೆನು.

೩೭ ಬೆಳಗಿನೊಳಗಣ ಮಹಾಬೆಳಗು ಶಿವ ಶಿವ ಪರಮಾಶ್ರ ಯವೇ ತಾನಾಗಿ, ಶತ ಪತ್ರ ಕಮಳ ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧ ನಾಗಿಪ್ಪ ನಮ್ಮ ಕೂಡಲಸಂಗಮದೇವ

೩೮ ಆ ಭಸ್ಮ ತಾಗಿ ಬ್ರಹ್ಮ ತನ್ನ ಕಪಾಲವಿಡಿದನು ಗಣನಾ ಥನ ಐವತ್ತೆರಡು ಸರ ಹರಿದು ಬಿದ್ದವು ಆ ಭಸ್ಮ ತಾಗಿ ಅಂಡಜ ಮುಗ್ಧೆಯ ಮೂರು ಮೊಲೆ ಹರಿದು ಬಿದ್ದವು ನಾದ ಪ್ರಿಯ ನಂದಿಯ ನೇರಿಕೊಂಡು, ಅತೀತನ ಮೇಲೆ ಆನಂದ ಸಿಂಹಾಸನವನಿಕ್ಕಿ ಕುಳಿತು ಕೂಡಲ ಸಂಗಮದೇವರ ದೇವತ್ವ ಕೆಟ್ಟಿತ್ತು

೩೯. ಸ್ಥೂಲದೇಹ ತೊಳೆದವರೇನು, ಸೂಕ್ಷ್ಮದೇಹ ಶುದ್ಧವಾದ ರೇನು, ಕಾರಣಾತೀತನಾಗದನ್ನಕ್ಕ ? ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ ನಾ ಯೋಗಿಯಾದರೇನು, ಮನ ಒಲಿದು ಚನ್ನಬಸವಣ್ಣ ಲಿಂಗವ ಕೂಡದನ್ನಕ್ಕ ?

೪೦ ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇ ಏಕ, ಏಕವೇ ಸಮರಸ, ಸಮರಸವೇ ಲಿಂಗ, ಲಿಂಗವೇ ಪರಿಪೂರ್ಣ, ಪರಿ ಪೂರ್ಣವೇ ಪರಬ್ರಹ್ಮವು ತಾನೇ ಗುಹೇಶ್ವರಾ

ಶಕ್ತಿಯಾದಳು. ಆ ಚಿತ್‌ಶಕ್ತಿಗೆ ಸಮರಸ ಭಕ್ತಿಯಾಯಿತ್ತು. ಆ ಸಮರಸ ಭಕ್ತಿಗೆ ಸುತೃಪ್ತಿ ಪದಾರ್ಥವಾಯಿತ್ತು. ಸುತೃಪ್ತಿ ಪದಾರ್ಥಕ್ಕೆ ತೃಪ್ತಿಪ್ರಸಾದವಾಯಿತ್ತು. ಇಂತೀ ೧೩ ಸಕೀಲಂಗಳು ಮನದಲ್ಲಿ ಸೋಂಕಿದರೆ ಅರಿವುದೇ ಶಾಂತ್ಯಾತೀತೋತ್ತರೆ ಎಂಬ ಕಲೆಯಾಯಿತ್ತು. ವಿಚಾರಿಸುವಲ್ಲಿಗೆ ಮಹಾ ಸಾದಾಖ್ಯವಾಯಿತ್ತು. ನಿಶ್ಚಯಿಸಿದಲ್ಲಿಗೆ ಅಖಂಡವೆಂಬ ಲಕ್ಷಣವಾಯಿತ್ತು. ದೃಢೀಕರಿಸುವಲ್ಲಿಗೆ ಮಹಾಸಂಜ್ಞೆಯಾಯಿತ್ತು. ಶಬ್ದವಿಟ್ಟು ನುಡಿವುದೇ ಗಾಯತ್ರೀವೇದವಾಯಿತ್ತು. ಇಂತೀ ಹದಿನೆಂಟು ಸಕೀಲಂಗಳ ಬಲ್ಲ ಮಹಾತ್ಮಂಗೆ ನಮೋ ನಮೋ ಎಂಬೆ ಕಾಣಾ ಮಹಾಸತ್ಯ ಜಗತ್ಪ್ರಿಯ ಸಂಗನ ಬಸವೇಶ್ವರ ಪ್ರಭುವೇ.

ಇನ್ನು ಪ್ರಥಮದಲ್ಲಿ ೧೮ ತೆರದ ಸಕೀಲಂಗಳು ಇಷ್ಟಲಿಂಗದ ಪೀಠದಲ್ಲಿ ಅಡಕವಾಯಿತ್ತು. ದ್ವಿತೀಯದಲ್ಲಿ ೧೮ ತೆರದ ಸಕೀಲಂಗಳು ಇಷ್ಟಲಿಂಗದ ಕಟಿಯಲ್ಲಿ ಅಡಕವಾಯಿತ್ತು. ತೃತೀಯದಲ್ಲಿ ೧೮ ತೆರದ ಸಕೀಲಂಗಳು ಇಷ್ಟಲಿಂಗದ ವೃತ್ತದಲ್ಲಿ ಅಡಕವಾಯಿತ್ತು. ಚತುರ್ಥದಲ್ಲಿ ೧೮ ತೆರದ ಸಕೀಲಂಗಳು ಇಷ್ಟಲಿಂಗದ ಗೋಮುಖದಲ್ಲಿ ಅಡಕವಾಯಿತ್ತು. ಪಂಚಮದಲ್ಲಿ ೧೮ ತೆರದ ಸಕೀಲಗಳು ಇಷ್ಟಲಿಂಗದ ನಾಳದಲ್ಲಿ ಅಡಕವಾಯಿತ್ತು. ಷಷ್ಠಮದಲ್ಲಿ ೧೮ ತೆರದ ಸಕೀಲಂಗಳು ಇಷ್ಟಲಿಂಗದ ಗೋಳಕದಲ್ಲಿ ಅಡಕವಾಯಿತ್ತು. ಆ ಗೋಳಕವೇ ಚಿನ್ನಾದದಲ್ಲಿ ಅಡಕವಾಯಿತ್ತು. ಆ ಚಿನ್ನಾದವೇ ಚಿದ್ಬಿಂದುವಿನಲ್ಲಿ ಅಡಕವಾಯಿತ್ತು. ಆ ಚಿದ್ಬಿಂದುವೇ ಬಸವಾಕ್ಷರ ತ್ರಯದಲ್ಲಿ ಅಡಕವಾಯಿತ್ತು ಕಾಣಾ ಮಹಾಸತ್ಯ ಜಗತ್ಪ್ರಿಯ ಸಂಗನಬಸವೇಶ್ವರ ಪ್ರಭುವೇ.

ಇಂತೀ ೧೮ ತೆರದ ಸಕೀಲಂಗಳು ಕರ ಮನ ಭಾವದಲ್ಲಿ ಕುಳ್ಳಿರಿಸಿ ಅರ್ಚಿಸಿ ಧ್ಯಾನಿಸಿ ಸುಖಿಯಾಗು ಮಗನೇ ಎಂದು ಬೋಧಿಸಿದ ಸದ್ಗುರುವೆನಗೆ ಸಕೀಲಂಗಳನು.

## ೨೧೬ ಸಕೀಲಗಳು.

ಇನ್ನೂರು ಹದಿನಾರು ಸಕೀಲಗಳೆಂತೆಂದೊಡೆ:—

ಪೃಥ್ವಿ ಎಂಬ ಭೂತ, ಕ್ರಿಯಾಶಕ್ತಿ, ಪ್ರಾಣವಾಯು, ಜಾಗ್ರಾವಸ್ಥೆ, ಬ್ರಹ್ಮನಧೀದೇವತೆ, ವೃತ್ತಸ್ಥಾನ, ಭಕ್ತನೇ ಅಂಗ, ಆಧಾರಚಕ್ರ, ನಾಲ್ಕು ದಳ, ಹಳದೀ ವರ್ಣ, ವ ಶ ಷ ಸ ಎಂಬ ನಾಲ್ಕು ಅಕ್ಷರ, ತಾರಕಾಕೃತಿ, ನಕಾರ ಪ್ರಣವುದ ಪೀಠ, ಆಚಾರಲಿಂಗ, ಪೀತವರ್ಣದ ಪ್ರಭೆ, ಬಕಾರ ಮಂತ್ರ, ಘ್ರಾಣವೆಂಬ ಮುಖ, ಸುಚಿತ್ತ ಹಸ್ತ, ಶ್ರದ್ಧಾಭಕ್ತಿ, ಗಂಧಪದಾರ್ಥ, ಹ್ರಾಂಕಾರವೆಂಬ ಪ್ರಸಾದ ಮಂತ್ರ, ಭೋಜ್ಯ ಅರ್ಪಣ, ಶುದ್ಧ ಪ್ರಸಾದ, ಸದಾಚಾರ, ಸತ್ತುವೆಂಬ ಲಕ್ಷಣ, ಕರ್ಮಸಾದಾಖ್ಯ, ನಿವೃತ್ತಿಕಲೆ, ಪರವೆಂಬ ಸಂಜ್ಞೆ, ಪಶ್ಚಿಮದಿಕ್ಕು, ಸದ್ಯೋಜಾತಮುಖ, ಋಗ್ವೇದ, ಮೂರ್ತಿಬ್ರಹ್ಮ, ದೇಹದ ಕೂಟ, ಇಷ್ಟವೇ ಆಟ, ಭಕ್ತಿಯೇ ಗೊತ್ತು, ಅರ್ಥವೇ ದ್ರವ್ಯ ಇಂತೀ ೩೬ ಸಕೀಲಂಗಳು ಇಷ್ಟ ಲಿಂಗದ ವೃತ್ತ ಸಂಬಂಧವು.

ಅಪ್ಪುವೆಂಬಭೂತ, ಜ್ಞಾನಶಕ್ತಿ, ಅಪಾನವಾಯು, ಸ್ವಪ್ನಾವಸ್ಥೆ, ವಿಷ್ಣುವಧಿದೇವತೆ, ಕಟಿ ಸ್ಥಾನ, ಮಹೇಶ್ವರನೇ ಅಂಗ, ಸ್ವಾಧಿಷ್ಠಾನ ಚಕ್ರ, ಆರುದಳ, ಶ್ವೇತವರ್ಣ, ಬ ಭ ಮ ಯ ರ ಲ ಎಂಬ ಅಕ್ಷರ, ದಂಡಕಾಕೃತಿ, ಮಕರ ಪ್ರಣವುದ ಪೀಠ, ಗುರುಲಿಂಗ, ಕಪೋತ ವರ್ಣದ ಪ್ರಭೆ, ನಕಾರ ಮಂತ್ರ ಜಿಹ್ವೆಯೆಂಬ ಮುಖ, ಸುಬುದ್ಧಿ ಎಂಬ ಹಸ್ತ, ನೈಷ್ಠೆ ಎಂಬ ಭಕ್ತಿ, ರಸವೆಂಬ ಪದಾರ್ಥ, ಹ್ರೀಂಕಾರ ಪ್ರಸಾದ ಮಂತ್ರ, ಪಾನ್ಯವೇ ಅರ್ಪಣ, ಶುದ್ಧ ಗುರುಪ್ರಸಾದ, ಲಿಂಗಾಚಾರ, ಚಿತ್ತೆಂಬ ಲಕ್ಷಣ, ಕರ್ತು ಸಾದಾಖ್ಯ, ಪ್ರತಿಷ್ಠಾ ಕಲೆ, ಗೂಢವೆಂಬ ಸಂಜ್ಞೆ, ಉತ್ತರ ದಿಕ್ಕು, ವಾಮದೇವ ಮುಖ, ಯಜುರ್ವೇದ, ಪಿಂಡ ಬ್ರಹ್ಮ, ಜೀವದ ಕೂಟ, ಪ್ರಾಣದಾಟ, ಜ್ಞಾನದ ಗೊತ್ತು, ಪ್ರಾಣವೇ ದ್ರವ್ಯ ಇಂತೀ ೩೬ ಸಕೀಲಂಗಳು ಇಷ್ಟಲಿಂಗದ ಕಟಿಯಲ್ಲಿ ಸಂಬಂಧವು.

ತೇಜವೆಂಬ ಭೂತ, ಇಚ್ಛಾಶಕ್ತಿ, ವ್ಯಾನ ವಾಯು, ಸುಷುಪ್ತಿ ಅವಸ್ಥೆ, ರುದ್ರನದಿದೇವತೆ, ವರ್ತುಳ ಸ್ಥಳ, ಪ್ರಸಾದಿಯೇ ಅಂಗ, ಮಣಿಪೂರಕ ಚಕ್ರ, ಹತ್ತು ದಳ, ಕುಂಕುಮ ವರ್ಣ, ಡ ಢ ತ ಥ ದ ಧ ನ ಪ ಫ ಎಂಬ ಹತ್ತಕ್ಷರ, ಕುಂಡಲಾಕೃತಿ, ಶಿಕಾರ ಪ್ರಣವುದ ಪೀಠ, ಶಿವಲಿಂಗ, ಹರಿತ ವರ್ಣದ ಪ್ರಭೆ, ವಕಾರವೇ ಮಂತ್ರ, ನೇತ್ರವೆಂಬ ಮುಖ,

ನಿರಂಕಾರ ಹಸ್ತ, ಸಾವಧಾನಭಕ್ತಿ, ರೂಪು ಪದಾರ್ಥ, ಹ್ರೂಂಕಾರ ಪ್ರಸಾದಮಂತ್ರ, ಭಕ್ಷ್ಯವೇ ಅರ್ಪಣ, ಸಿದ್ಧ ಪ್ರಸಾದ, ಭೃತ್ಯಾಚಾರ, ಆನಂದವೆಂಬ ಲಕ್ಷಣ, ಮೂರ್ತಿ ಸಾದಾಖ್ಯ, ವಿದ್ಯಾ ಕಲೆ, ಶರೀರವೆಂಬ ಸಂಜ್ಞೆ, ದಕ್ಷಿಣದಿಕ್ಕು, ಅಘೋರಮುಖ, ಸಾಮವೇದ, ಕಲಾಬ್ರಹ್ಮ, ಅಂಗ ಕೂಟ, ಸ್ಥೂಲದಾಟ, ವೈರಾಗ್ಯವೇ ಗೋತ್ರ, ಅಭಿಮಾನವೇ ದ್ರವ್ಯ, ಇಂತೀ ೩೬ ಸಕೀಲಂಗಳು ಇಷ್ಟಲಿಂಗದ ಮತ್ತಳದಲ್ಲಿ ಸಂಬಂಧವು.

ವಾಯುವೆಂಬ ಭೂತ, ಆದಿಶಕ್ತಿ, ಉದಾನ ವಾಯು, ತೂರ್ಯಾವಸ್ಥೆ, ಈಶ್ವರನಧಿದೇವತೆ, ಗೋಮುಖಸ್ಥಾನ, ಪ್ರಾಣಲಿಂಗವೇ ಅಂಗ, ಅನಾಹತ ಚಕ್ರ, ಹನ್ನೆರಡು ದಳ, ಹಸುರು ವರ್ಣ, ಕ ಖ ಗ ಘ ಙ ಚ ಛ ಜ ಝ ಞ ಟ ಠ ಎಂಬ ಹನ್ನೆರಡಕ್ಷರ, ಅರ್ಧಚಂದ್ರಾಕೃತಿ, ವಕಾರ ಪ್ರಣಮದ ಪೀಠ, ಜಂಗಮಲಿಂಗ, ಮಾಂಜಿಷ್ಠವರ್ಣದ ಪ್ರಭೆ, ಅಕಾರ ಮಂತ್ರ, ತ್ವಕ್ಕೆಂಬ ಮುಖ, ಸುಮನವೆಂಬ ಹಸ್ತ, ಅನಂದ ಭಕ್ತಿ, ಸ್ಪರ್ಶನ ಪದಾರ್ಥ, ಹ್ರೈಂಕಾರ ಪ್ರಸಾದಮಂತ್ರ, ಚೋಷ್ಯವೇ ಅರ್ಪಣ, ಸಿದ್ಧ ಪ್ರಸಾದ, ಶಿವಾಚಾರ. ನಿತ್ಯವೆಂಬ ಲಕ್ಷಣ, ಅಮೂರ್ತಿ ಸಾದಾಖ್ಯ, ಶಾಂತಿಕಲೆ, ಲಿಂಗಕ್ಷೇತ್ರವೆಂಬ ಸಂಜ್ಞೆ, ಪೂರ್ವದಿಕ್ಕು. ತತ್ಪುರುಷ ಮುಖ, ಅಥರ್ವಣ ವೇದ, ಅನಂದ ಬ್ರಹ್ಮ, ಲಿಂಗದ ಕೂಟ, ಸೂಕ್ಷ್ಮದಾಟ, ವಿರಕ್ತಿಯೇ ಗೋತ್ರ, ಒಡೆಯ ಜಂಗಮನೇ ದ್ರವ್ಯ, ಇಂತೀ ೩೬ ಸಕೀಲಂಗಳು ಇಷ್ಟಲಿಂಗದ ಗೋಮುಖದಲ್ಲಿ ಸಂಬಂಧವು.

ಆಕಾಶವೆಂಬ ಭೂತ, ಪರಾಶಕ್ತಿ, ಸಮಾನವಾಯು, ತೂರ್ಯಾತೀತಾವಸ್ಥೆ, ಸದಾಶಿವನೇ ಅಧಿದೇವತೆ, ನಾಳಸ್ಥಾನ, ಶರಣನೇ ಅಂಗ, ವಿಶುದ್ಧಿ ಚಕ್ರ, ಹದಿನಾರು ದಳ. ಕಪ್ಪು ವರ್ಣ, ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ ಹದಿನಾರು ಅಕ್ಷರಂಗಳು, ದರ್ಪಣಾಕೃತಿ, ಯಕಾರ ಪ್ರಣಮದ ಪೀಠ, ಪ್ರಸಾದಲಿಂಗ, ಶುಕ್ತಿ ವರ್ಣದ ಪ್ರಭೆ, ಉಕಾರಮಂತ್ರ. ಶ್ರೋತ್ರವೆಂಬ ಮುಖ, ಸುಜ್ಞಾನವೆಂಬ ಹಸ್ತ, ಅನುಭವ ಭಕ್ತಿ, ಶಬ್ದಪದಾರ್ಥ, ಹ್ರೌಂಕಾರ ಪ್ರಸಾದಮಂತ್ರ. ಲೇಹ್ಯವೇ ಅರ್ಪಣ, ಪ್ರಸಿದ್ಧ ಪ್ರಸಾದ, ಗಣಾಚಾರ,

ಪರಿಪೂರ್ಣವೆಂಬ ಲಕ್ಷಣ, ಶಿವ ಸಾದಾಖ್ಯ, ಶಾಂತ್ಯಾತೀತಕಲೆ, ಅನಾದಿ ಎಂಬ ಸಂಜ್ಞೆ, ಊರ್ಧ್ವದಿಕ್ಕು, ಈಶಾನ್ಯ ಮುಖ, ಗಾಯತ್ರೀ ವೇದ, ವಿಜ್ಞಾನಬ್ರಹ್ಮ, ಸಂಗದ ಕೂಟ, ಕಾರಣಪಾಟ, ಮುಕ್ತಿಯೇ ಗೊತ್ತು, ಕರ್ತೃಲಿಂಗವೇ ದ್ರವ್ಯ, ಇಂತೀ ೩೬ ಸಕೀಲವು ಇಷ್ಟಲಿಂಗದ ನಾಳ ದಲ್ಲಿ ಸಂಬಂಧವು.

ಆತ್ಮನೆಂಬಭೂತ, ಚಿತ್‌ಶಕ್ತಿ, ನಾಗ ಕೂರ್ಮ, ಕೃಕರ ದೇವ ದತ್ತ ಧನಂಜಯುವೆಂಬ ವಾಯು, ನಿರವಯಾವಸ್ಥೆ, ಗುರುವೇ ಅಧಿ ದೇವತೆ, ಪೀಠಸ್ಥಾನ, ಐಕ್ಯನೇ ಅಂಗ, ಆಜ್ಞಾಚಕ್ರ, ಎರಡು ದಳ, ಕೆಂಪುವರ್ಣ, ಹಂ ಕ್ಷಂ ಎಂಬ ಎರಡು ಅಕ್ಷರಂಗಳು, ಜ್ಯೋತಿರಾಕೃತಿ, ಓಂಕಾರ ಪ್ರಣವ ಪೀಠ, ಮಹಾಲಿಂಗ, ರತ್ನಪ್ರಭೆ, ಮಕಾರ ಮಂತ್ರ, ಹೃದಯ ಮುಖ, ಸದ್ಭಾವ ಹಸ್ತ, ಸಮರಸಭಕ್ತಿ, ಪರಿಣಾಮ ಪದಾರ್ಥ, ಪಃಕಾರ ಪ್ರಸಾದ ಮಂತ್ರ, ತೃಪ್ತಿ ಅರ್ಪಣ, ಪ್ರಸಿದ್ಧ ಜಂಗಮಪ್ರಸಾದ, ಅಖಂಡವೆಂಬ ಲಕ್ಷಣ, ಮಹಾಸಾದಾಖ್ಯ, ಶಾಂತ್ಯಾತೀತೋತ್ತರವೆಂಬ ಕಲೆ, ದೇವವೆಂಬ ಸಂಜ್ಞೆ, ಪಾತಾಳದಿಕ್ಕು, ಗೋಪ್ಯ ಮುಖ, ಅಜಪ ವೇದ, ಪರಬ್ರಹ್ಮ, ಸಮರಸಕೂಟ, ಭಾವದಾಟ, ದೃಢದ ಗೊತ್ತು, ಗುರುವರ್ಯನೇ ದ್ರವ್ಯ, ಇಂತೀ ೩೬ ಸಕೀಲಂಗಳು ಇಷ್ಟಲಿಂಗದ ಪೀಠದಲ್ಲಿ ಸಂಬಂಧವು.

ಇಂತೀ ಇನ್ನೂರು ಹದಿನಾರು ಸಕೀಲಂಗಳನೊಳಕೊಂಡು ಪರಮ ಗುರು ಜೀವ ಷಣ್ಮುಖ ಲಿಂಗವ ಕರ ಮನ ಭಾವದೊಳಗೆ ಕುಳ್ಳಿರಿಸಿ, ಪೂಜಿಸಿ ಅರ್ಚಿಸಿ ಧ್ಯಾನಿಸಿ, ಕೂಡಿ, ಎರಡಳಿದ ಪರಮ ಶರಣರ ಶ್ರೀಪಾದ ಕಮಲದಲ್ಲಿ ಸದಮಲ ತುಂಬಿಯಾಗಿ ಇರಿಸು ಎನ್ನ ಗುರುವಿನ ಗುರು ಷಣ್ಮುಖೇಶ್ವರಾ.

---

# ಷಟ್‌ಸ್ಥಲ.



ಜಗತ್ತಿನ ಸೃಷ್ಟಿಯು ಕಾಲದಲ್ಲಿ ಯಾವ ಯಾವ ಶಕ್ತಿಗಳು ಉದ್ಭವಿಸುತ್ತವೆ ಮತ್ತು ಅವುಗಳ ಮೂಲಕ ಅದಕ್ಕೆ ಯಾವ ಯಾವ ಸ್ವರೂಪುಗಳು ಪ್ರಾಪ್ತವಾಗುತ್ತಹೋಗುತ್ತವೆ ಎಂಬದು ಆರಂಭದ ಪ್ರಕರಣದಲ್ಲಿ ಹೇಳಲ್ಪಟ್ಟಿತು. ಮುಂದೆ ಕರಣಹಸಿಗೆಯ ಪ್ರಕರಣದಲ್ಲಿ ಆ ಶಕ್ತಿಗಳು ಮನುಷ್ಯನ ದೇಹದಲ್ಲಿ ಹ್ಯಾಗೆ ವ್ಯವಹರಿಸುತ್ತವೆ ಎಂಬುದು ಹೇಳಲ್ಪಟ್ಟಿತು. ಈ ಎಲ್ಲ ವಿವರಣೆಗಳ ಮೇಲಿಂದ ಜಗತ್ತಿನಲ್ಲಿ ವ್ಯಾಪಾರಗಳು ಹ್ಯಾಗೆ ನಡಿಯುತ್ತವೆ ಮತ್ತು ಮನುಷ್ಯನಲ್ಲ ಅವು ಹ್ಯಾಗೆ ವ್ಯವಹರಿಸುತ್ತವೆ ಎಂಬದರ ತಿಳುವಳಿಕೆಯಾಗುವದು.

ಮುಂದೆ ಈ ಕ್ರಿಯೆಗಳು ಅವವುಗಳ ಉದ್ದೇಶ ಮತ್ತು ಪರಸ್ಪರ ಸಂಬಂಧಕ್ಕನುಸಾರವಾಗಿ ಅನೇಕ ವಿಭಾಗಗಳಾಗಿ ವಿಂಗಡಿಸಲ್ಪಟ್ಟವೆ. ಇವುಗಳಲ್ಲಿ ಮಾರ್ಗಕ್ರಿಯೆ ಮತ್ತು ಮಿೂರಿದಕ್ರಿಯೆ ಎಂಬ ಮುಖ್ಯ ವಿಭಾಗಗಳು ಕಲ್ಪಿಸಲ್ಪಟ್ಟವೆ. ಈ ಕ್ರಿಯೆಗಳು ಮುಂದೆ ಉತ್ಕ್ರಾಂತಿಯನ್ನು ಹೊಂದುತ್ತ ಹೋದ ಹಾಗೆ ಅವುಗಳಲ್ಲಿ ಬದಲಾವಣೆಗಳೂ ಆಗುತ್ತವೆ. ಈ ಬದಲಾವಣೆಗಳು ಈ ಭಾಗದಲ್ಲಿಯೇ ವಿವರಿಸಲ್ಪಟ್ಟವೆ. ಈ ಕ್ರಿಯೆಗಳು ಒಟ್ಟು ೨೧೬ ಇದ್ದು ಅವುಗಳಿಗೆ ಸಕೀಲಗಳೆಂಬ ಇನ್ನೊಂದು ಹೆಸರೂ ಇರುತ್ತದೆ.

ಈ ಎಲ್ಲ ವಿಷಯಗಳ ಜ್ಞಾನದಿಂದ ಷಟ್‌ಸ್ಥಲಗಳ ಮರ್ಮವನ್ನು ಅರಿಯಬೇಕು. ಈ ಷಟ್‌ಸ್ಥಲ ವಿಷಯಕ್ಕೆ ವೀರಶೈವ ಮತಗ್ರಂಥಗಳಲ್ಲಿ ಬಹು ಮಹತ್ವದ ಸ್ಥಾನವು ಕೊಡಲ್ಪಟ್ಟಿರುತ್ತದೆ. ಇದರ ನಿರೂಪಣೆಯಲ್ಲಿ ಕೆಳಗೆ ಕಾಣಿಸಿದಂತೆ ವಿಭಾಗಗಳು ಮಾಡಲ್ಪಡುತ್ತವೆ.

ಶಿವ ತತ್ವವು ಮೊದಲಿಗೆ ಒಂದೇಯಾಗಿರುತ್ತದೆ. ಅದರಲ್ಲಿ ಮುಂದೆ ಅಂಗಲಿಂಗಗಳೆಂಬ ಎರಡು ವಿಭಾಗಗಳಾಗುವವು. ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥದಲ್ಲಿ ಅಂಗ ಮತ್ತು ಚೈತನ್ಯ ಎಂಬ ಎರಡು ಯಾವಾ

ಗಲೂ ಇದ್ದೇ ಇರುತ್ತವೆ. ಈ ಚೈತನ್ಯಕ್ಕೆ ಶಕ್ತಿ ಎಂಬ ಹೆಸರೂ ಇರು ತ್ತದೆ. ಈ ಶಕ್ತಿಯು ಸರಿಯಾದ ಮಾರ್ಗದಿಂದ ಹೋದದ್ದಾದರೆ ಅದು ಲಿಂಗವೆಂದು ಹೇಳಿಸಿಕೊಳ್ಳಲ್ಪಡುವದು. ಅಂಗ ಲಿಂಗಗಳ ವಿವರಣೆಯು ಮೊದಲಿಗೆ ಬರುತ್ತದೆ.

ಮನುಷ್ಯನ ಶರೀರದಲ್ಲಿ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿರುತ್ತವೆ. ಅವುಗಳ ಮೂಲಕವಾಗಿಯೇ ಮನುಷ್ಯನು ಕಾರ್ಯಗಳನ್ನು ಮಾಡಲು ಶಕ್ತನಾಗುವನು. ಈ ಮೂರು ಶರೀರಗಳ ನಿರೂಪಣೆಯು ಹಿಂದಿನ ಪ್ರಕ ರಣಗಳಲ್ಲಿ ಅನೇಕ ಕಡೆಗೆ ಬಂದಿರುತ್ತದೆ. ಈ ಶರೀರಗಳಿಗೆ ಅನು ಸರಿಸಿಯೇ ಅಂಗದಲ್ಲಿ ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂತಲೂ ಲಿಂಗದಲ್ಲಿ ಇಷ್ಟ ಪ್ರಾಣ ಭಾವಗಳೆಂತಲೂ ಮೂರು ವಿಭಾಗಗಳಾಗುತ್ತವೆ. ಇವುಗಳ ವರ್ಣನೆಯು ಈ ಷಟ್‌ಸ್ಥಲ ವಿವೇಚನೆಯಲ್ಲಿ ಬರುತ್ತದೆ.

ಮುಂದೆ ಈ ಮೂರು ಸ್ಥಲಗಳಲ್ಲಿಯು ಪ್ರತಿಯೊಂದು ಸ್ಥಲವಲ್ಲಿ ಪುನಃ ಎರಡೆರಡು ವಿಭಾಗಗಳಾಗಿ ಒಟ್ಟಿಗೆ ಆರು ವಿಭಾಗಗಳಾಗುತ್ತವೆ. ಇವುಗಳಿಗೆ ಷಟ್‌ಸ್ಥಲವೆಂಬ ಹೆಸರು ಇರುತ್ತದೆ. ಮನುಷ್ಯನ ಎಲ್ಲ ವ್ಯಾಪಾರಗಳು ಈ ಷಟ್‌ಸ್ಥಲಕ್ಕೆ ಸಂಬಂಧಪಡುತ್ತವೆ. ಈ ವ್ಯಾಪಾರ ಗಳ ಉತ್ಕೃಷ್ಟತೆಯ ಮೇಲೆಯೇ ಮನುಷ್ಯನ ಉತ್ಕ್ರಾಂತಿಯು ಅವ ಲಂಬಿಸಿರುತ್ತದೆ. ಇವು ಅತ್ಯಂತ ಮಹತ್ವದವಿರುವದರಿಂದ ಈ ಶಾಸ್ತ್ರಕ್ಕೆ ಷಟ್‌ಸ್ಥಲ ಸಿದ್ಧಾಂತ ಅಥವಾ ಶಾಸ್ತ್ರವೆಂಬ ಹೆಸರು ಪ್ರಾಪ್ತವಾಗಿರುತ್ತದೆ.

ಆದರೆ ನಾವು ಮೇಲೆ ವಿವರಿಸಿದ ಸ್ಥೂಲ ಸೂಕ್ಷ್ಮ ಕಾರಣ ಶರೀ ರಗಳು ಪೂರ್ಣ ಸ್ವತಂತ್ರವಾಗಿ ವ್ಯವಹರಿಸುವದಿಲ್ಲ. ಅವುಗಳ ಕಾರ್ಯ ಗಳು ಪರಸ್ಪರಾವಲಂಬಿಗಳಾಗಿವೆ. ಉದಾಃ— ಸ್ಥೂಲ ಶರೀರದಲ್ಲಿ ಸೂಕ್ಷ್ಮ ಕಾರಣ ಶರೀರಗಳೂ, ಸೂಕ್ಷ್ಮ ಶರೀರದಲ್ಲಿ ಸ್ಥೂಲ ಕಾರಣ ಶರೀರಗಳೂ, ಕಾರಣ ಶರೀರದಲ್ಲಿ ಸ್ಥೂಲ ಸೂಕ್ಷ್ಮ ಶರೀರಗಳೂ ಅಡಗಿಕೊಂಡಿರುತ್ತವೆ.

ಈ ಕಾರಣಕ್ಕೋಸ್ಕರ ಆರು ಸ್ಥಲಗಳಲ್ಲಿಯ ಆಚರಣೆಗಳು ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳ ದೃಷ್ಟಿಯಿಂದ ೧೮ ಸ್ಥಲಗಳಾಗಿ ವರ್ಣಿಸ ಲ್ಪಡುತ್ತವೆ. ಇವುಗಳ ಆಚರಣೆಯಿಂದ ಷಟ್‌ಸ್ಥಲಗಳು ದೃಢಪಡುತ್ತವೆ.

ಮುಂದೆ ಈ ಷಟ್‌ಸ್ಥಲಗಳ ಪ್ರತಿಯೊಂದು ಸ್ಥಲದಲ್ಲಿ ಪುನಃ ಆರು ವಿಧಗಳಾಗಿ ಒಟ್ಟು ೩೬ ಸ್ಥಲಗಳಾಗುತ್ತವೆ. ಇವುಗಳ ತಿಳವಳಿಕೆಯು ಮನುಷ್ಯನ ಪೂರ್ಣಾವಸ್ಥೆಗೆ ಕಾರಣವಾಗುತ್ತದೆ.

ಈ ಎಲ್ಲ ಸ್ಥಲಗಳ ಜ್ಞಾನವನ್ನು ಮಾಡಿಕೊಂಡು ಆಯಾ ಸ್ಥಲಗಳಿಗನುಸಾರವಾಗಿ ಆಚರಿಸಿದಲ್ಲಿ ಮನುಷ್ಯನಲ್ಲಿ ಪೂರ್ಣ ವಿಕಾಸವು ಪ್ರಾಪ್ತಗುತ್ತದೆ.

ಈ ಪ್ರಕಾರ ಮನುಷ್ಯನು ೧ ರಿಂದ ೩೬ ಸ್ಥಲಗಳ ವರೆಗೆ ತನ್ನ ಕ್ರಿಯೆಗಳಲ್ಲಿ ಹೆಚ್ಚಿನ ತರಗತಿಗಳನ್ನು ಹೊಂದುತ್ತ ಹೋಗುವನು. ಇದು ಪ್ರವೃತ್ತಿ ಎಂದು ವಚನಕಾರರು ಹೇಳುವದುಂಟು.

ಈ ಪ್ರಕಾರ ಪೂರ್ಣ ಸ್ಥಿತಿಯನ್ನು ಮನುಷ್ಯನು ಹೊಂದಿದ ಬಳಿಕ ಅವನು ನಿವೃತ್ತಿಯನ್ನು ಹೊಂದಲು ಅರ್ಹನಾಗುತ್ತಾನೆ.

ಆಗ ಅವನ ೩೬ ಸ್ಥಲಗಳು ೬ ಸ್ಥಲಗಳಲ್ಲಿ ಅಡಗುತ್ತವೆ. ಈ ೬ ಸ್ಥಲಗಳು ೩ ಸ್ಥಲಗಳಲ್ಲಿ, ೩ ಸ್ಥಲಗಳು ೨ ಸ್ಥಲಗಳಲ್ಲಿ ಮತ್ತು ಕಡೆಗೆ ಈ ೨ ಸ್ಥಲಗಳು ೧ ಸ್ಥಲದಲ್ಲಿ ಪೂರ್ಣವಾಗಿ ಅಡಗಿಹೋಗುತ್ತವೆ. ಈ ಕಡೆಯ ಸ್ಥಿತಿಯೇ ಲಿಂಗಾಂಗ ಸಾಮ್ಯರಸ್ಯವು.

ಈ ಪ್ರಕಾರ ಈ ಷಟ್‌ಸ್ಥಲ ಪ್ರಕರಣದಲ್ಲಿ **ಪ್ರವೃತ್ತಿ** ಮತ್ತು **ನಿವೃತ್ತಿ** ಎಂದು ಮುಖ್ಯ ವಿಭಾಗಗಳು ಮಾಡಲ್ಪಟ್ಟಿವೆ. ಪ್ರವೃತ್ತಿ ಎಂಬ ಭಾಗದಲ್ಲಿ ೧ ರಿಂದ ೩೬ ವರೆಗೆ ಇರುವ ಸ್ಥಲಗಳು ಕ್ರಮವಾಗಿ ವಿವೇಚಿಸಲ್ಪಡುವವು. ಮತ್ತು ನಿವೃತ್ತಿ ಭಾಗದಲ್ಲಿ ಸ್ಥಲಗಳು ಪರಸ್ಪರ ಅಡಗುವಿಕೆಯು ಹೇಳಲ್ಪಡುವನು.

# ಪ್ರವೃತ್ತಿ.

## ಷಟ್‍ಸ್ಥಲ ಮಾರ್ಗದ ಸಾಮಾನ್ಯ ವಿವೇಚನೆ.

(೧) ಅಖಂಡ ಗೋಳಕಾಕಾರ ಸಹಜ ನಿರಂಜನ ವಸ್ತು ಲಿಂಗ ವೆನಿಸಿ ನಿಂದಲ್ಲಿ ಒಂದಾಯಿತ್ತು. ಒಂದಾದಲ್ಲಿ ಉಭಯವಾಯಿತ್ತು. ಕ್ರಿಯೆಯಲ್ಲಿ ಮೂರಾಯಿತ್ತು. ಆಚಾರವಲ್ಲಿ ಆರಾಯಿತ್ತು. ಆನಂದ ಪಲ್ಲಿ ಮೂವತ್ತಾರಾಯಿತ್ತು ಅಖಂಡಲಿಂಗದಿಂದ ಚಿದ್ರೂಪವಾದ ಪರಿ ಯನು ಶಿಷ್ಯಂಗೆ ಗುರು ನಿರೂಪಿಸಿದ ಕಾರಣ ಜಂಗಮ ಲಿಂಗ ಪ್ರಭುವೇ.

(೨) ಮಹಾಲಿಂಗ ಸ್ತ್ರಯೋರ್ಲಿಂಗಂ। ತ್ರಿವಿಧಂ ಷಡ್ವಿಧಮುಖಂ। ತ್ರಿವಿಧೇಕ ಮುಖೋಲಿಂಗಂ ಮಹಾಲಿಂಗಂತು ದರ್ಶನಂ॥ ಇಂತೆಂದು ದಾಗಿ ಒಂದನು ಎರಡ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಎರಡನು ಮೂರು ಮಾಡಿಕೊಂಡನಯ್ಯಾ ನಮ್ಮ ಬಸವಣ್ಣನು. ಆ ಮೂರ ಆರ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಆ ಆರ ಮೂವತ್ತಾರ ಮಾಡಿ ಕೊಂಡನಯ್ಯ ನಮ್ಮ ಬಸವಣ್ಣನು. ಆ ಮೂವತ್ತಾರ ಆರ ಮಾಡಿಕೊಂಡ ನಯ್ಯ ನಮ್ಮ ಬಸವಣ್ಣನು. ಆ ಆರ ಮೂರ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಆ ಮೂರ ಎರಡ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಆ ಎರಡ ಒಂದ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಆ ಒಂದ ತಾನೇ ಆಗಿಪ್ಪನಯ್ಯ ನಮ್ಮ ಬಸವಣ್ಣನು. ಇಂತಪ್ಪ ಸರ್ವಾವಧಾ ನಿಯಯ್ಯ ನಮ್ಮ ಬಸವಣ್ಣನು. ಇಂತಪ್ಪ ಸರ್ವಸಂಗ ಪರಿತ್ಯಾಗಿಯಯ್ಯಾ ನಮ್ಮ ಬಸವಣ್ಣನು. ಇಂತಪ್ಪ ಸರ್ವಾಂಗಲಿಂಗಿಯಯ್ಯ ನಮ್ಮ ಬಸ ವಣ್ಣನು. ಇಂತಪ್ಪ ಸರ್ವನಿರ್ವಾಣಿಯಯ್ಯ ನಮ್ಮ ಬಸವಣ್ಣನು. ಇಂತಪ್ಪ ಬಸವಣ್ಣನ ಮಹಿಮೆಯ ನೀವೇ ಬಲ್ಲಿರಿ. ಅಸಂಖ್ಯಾತ ಮಹಾಪುರು ಷರು ಪ್ರಭುದೇವರು ಮುಖ್ಯವಾದ ನಿಲವಿನ ಶ್ರೀ ಚರಣಕ್ಕೆ ನಾನು ಶರಣಾರ್ಥಿ ಶರಣಾರ್ಥಿ ಎಂದು ಶಬ್ದ ಮುಗ್ಧವಾಗಿ ಉರಿಯುಂಡ ಕರ್ಪೂ ರದಂತೆ ನಿಮ್ಮ ಶ್ರೀ ಚರಣವ ಬೆರಿಸಿದೆನಯ್ಯ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜನಯ್ಯ ನಿಮ್ಮ ಶರಣ ಬಸವ ಣ್ಣನ ಮುಂದೆ ಬಯಲಾಗಿ ಹೋದೆನಯ್ಯ, ನಿಮ್ಮ ಧರ್ಮ, ನಿಮ್ಮ ಧರ್ಮ.

(೩) ನಿಃಕಲ ಶಿವತತ್ವ ತಾನೊಂದೇ ತನ್ನ ಶಕ್ತಿಯ ಚಲನೆ ಮಾತ್ರದಿಂದ ಒಂದೆರಡಾಯಿತ್ತು ನೋಡಾ. ಅದರೊಳಗೊಂದು ಲಿಂಗಸ್ಥಲ

ವುತ್ತೊಂದು ಅಂಗಸ್ಥಲ. ಹೀಗೆ ಅಂಗಲಿಂಗವೆಂದು ಉಪಾಸ್ಯ ಉಪಾಸಕರೆಂದು ವರ್ತಿಸುತ್ತಿಹುದು ನೋಡಾ. ಆ ಪರಶಿವನ ಚಿತ್ ಶಕ್ತಿಯು ತಾನೇ ಎರಡು ತೆರನಾಯಿತ್ತು.

ಲಿಂಗಸ್ಥಲವನಾಶ್ರಯಿಸಿ ಶಕ್ತಿ ಎನಿಸಿತ್ತು. ಅಂಗಸ್ಥಲವ ನಾಶ್ರಯಿಸಿ ಭಕ್ತಿ ಎನಿಸಿತ್ತು. ಶಕ್ತಿಯೇ ಪ್ರವೃತ್ತಿ ಎನಿಸಿತ್ತು. ಭಕ್ತಿಯೇ ನಿವೃತ್ತಿ ಎನಿಸಿತ್ತು. ಶಕ್ತಿ ಭಕ್ತಿ ಎಂದು ಎರಡು ತೆರನಾಯಿತ್ತು. ಲಿಂಗ ಆರು ತೆರನಾಯಿತ್ತು. ಅಂಗ ಆರು ತೆರನಾಯಿತ್ತು. ಅದು ಹೇಗೆಂದೊಡೆ,

ಮೊದಲಲ್ಲಿ ಲಿಂಗ ಮೂರು ತೆರನಾಯಿತ್ತು. ಅದು ಹೇಗೆಂದೊಡೆ ಭಾವಲಿಂಗವೆಂದು, ಪ್ರಾಣಲಿಂಗವೆಂದು, ಇಷ್ಟಲಿಂಗವೆಂದು, ಮೂರು ತೆರನಾಯಿತ್ತು.

ಆ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂಬ ಲಿಂಗತ್ರಯವು ಒಂದೊಂದು ಲಿಂಗ ಎರಡೆರಡಾಗಿ ಆರು ತೆರನಾಯಿತ್ತು. ಅದು ಹೇಗೆಂದೊಡೆ, ಭಾವಲಿಂಗವು ಮಹಾಲಿಂಗವೆಂದು ಪ್ರಸಾದಲಿಂಗವೆಂದು ಎರಡು ತೆರನಾಯಿತ್ತು. ಪ್ರಾಣಲಿಂಗವು ಜಂಗಮಲಿಂಗವೆಂದು ಶಿವಲಿಂಗವೆಂದು ಎರಡುತೆರನಾಯಿತ್ತು. ಇಷ್ಟಲಿಂಗವು ಗುರುಲಿಂಗವೆಂದು ಆಚಾರಲಿಂಗವೆಂದು ಎರಡು ತೆರನಾಯಿತ್ತು. ಹೀಗೆ ಒಬ್ಬ ಶಿವನು ಆರು ತೆರನಾದನು.

ಶಾಂತ್ಯಾತೀತೋತ್ತರವೆಂಬ ಕಲಾಪರಿಯಾಯವನುಳ್ಳ ಚಿತ್‌ಶಕ್ತಿ, ಶಾಂತ್ಯಾತೀತವೆಂಬ ಕಲಾಪರಿಯಾಯವನುಳ್ಳ ಆದಿಶಕ್ತಿ, ಶಾಂತಿ ಎಂಬ ಕಲಾ ಪರಿಯಾಯವನುಳ್ಳ ಪರಾಶಕ್ತಿ, ವಿದ್ಯಾ ಕಲಾ ಪರಿಯಾಯವನುಳ್ಳ ಜ್ಞಾನಶಕ್ತಿ, ಪ್ರತಿಷ್ಠಾಕಲಾ ಪರಿಯಾಯವನುಳ್ಳ ಇಚ್ಛಾಶಕ್ತಿ, ನಿವೃತ್ತಿ ಕಲಾ ಪರಿಯಾಯವನುಳ್ಳ ಕ್ರಿಯಾಶಕ್ತಿ, ಈ ಒಂದೇ ಶಕ್ತಿ ಆರು ತೆರನಾಗಿ ಷಟ್‌ಪ್ರಕಾರವಾದಂತಹ ಲಿಂಗಕ್ಕೆ ಅಂಗ ರೂಪಾಯಿತ್ತು. ಇದು ಲಿಂಗ ಷಟ್‌ಸ್ಥಲ.

ಇನ್ನು ಒಂದಂಗ ಮೂರು ತೆರನಾಯಿತ್ತು. ಅದು ಹೇಗೆಂದೊಡೆ ಯೋಗಾಂಗ ಭೋಗಾಂಗ ತ್ಯಾಗಾಂಗವೆಂದು ಮೂರು ಪ್ರಕಾರವಾಯಿತ್ತು. ಈ ತ್ರ್ಯಂಗವೇ ಒಂದೊಂದು ಎರಡೆರಡಾಗಿ ಆರು ತೆರನಾಯಿತ್ತು. ಅದು ಹೇಗೆಂದೊಡೆ,

ಯೋಗಾಂಗವೇ ಐಕ್ಯನೆಂದು ಶರಣನೆಂದು ಎರಡು ತೆರನಾಯಿತ್ತು. ಭೋಗಾಂಗವೇ ಪ್ರಾಣಲಿಂಗಿ ಪ್ರಸಾದಿ ಎಂದು ಎರಡು ತೆರನಾಯಿತ್ತು. ತ್ಯಾಗಾಂಗವೇ ಮಹೇಶ್ವರನೆಂದು ಭಕ್ತನೆಂದು ಎರಡು ತೆರನಾಯಿತ್ತು. ಹೀಗೆ ಒಬ್ಬ ಶರಣನು ಆರು ತೆರನಾದನು.

ಸಮರಸಭಕ್ತಿ, ಆನಂದಭಕ್ತಿ, ಅನುಭಾವಭಕ್ತಿ, ಅವಧಾನಭಕ್ತಿ, ನೈಷ್ಠಿಕಾಭಕ್ತಿ, ಸದ್ಭಕ್ತಿ ಎಂದು ಮಹಾಘನ ಅನುಪಮ ಭಕ್ತಿ ತಾನೇ ಆರು ತೆರನಾಗಿ ಷಟ್ ಪ್ರಕಾರವಾದ ಶರಣಂಗೆ ಅಂಗರೂಪಾಯಿತ್ತು. ಇದು ಅಂಗ ಷಟ್‌ಸ್ಥಲ.

ಇನ್ನು ಕ್ರಿಯಾ ಶಕ್ತಿಯಿಂದ ನಿವೃತ್ತಿಕಲೆಯ ಸಂಕಲ್ಪ ಮಾತ್ರದಿಂದ ಮಾಯಾಶಕ್ತಿ ಹುಟ್ಟಿತ್ತು. ಆ ಮಾಯಾ ಶಕ್ತಿಯಿಂದ ಸಮಸ್ತ ಜಗತ್ತಿನ ಉತ್ಪತ್ತಿ. ಅಂಗವೆಂದೊಡೆ ಶರಣ. ಲಿಂಗವೆಂದೊಡೆ ಶಿವಶರಣಂಗೆ ಆ ಲಿಂಗವು ಆವಾಗಲೂ ಪ್ರಾಣವು. ಆ ಲಿಂಗಕ್ಕೆ ಆ ಶರಣನಾವಾಗಲೂ ಅಂಗವು. ಈ ಶರಣ ಲಿಂಗವೆರಡಕ್ಕೂ ಬೀಜವೃಕ್ಷದ ನ್ಯಾಯದಂತೆ ಭಿನ್ನವಿಲ್ಲ. ಇದು ಶರಣ ಅನಾದಿಯಿಂದಾದವು. ಶರಣನೆಂದರೆ ಲಿಂಗ, ಲಿಂಗವೆಂದರೆ ಶರಣ. ಇವೆರಡಕ್ಕು ಭೇದವಿಲ್ಲೆಂಬುದನ್ನು ಸ್ವಾನುಭಾವ ವಿವೇಕದಿಂದ ಅರಿವುದು ಅರುಹಲ್ಲದೆ ಆಗನು ಯುಕ್ತಿಯಿಂದ ಅರಿವುದು ಅರುಹಲ್ಲ. ಅದೇನು ಕಾರಣವೆಂದಡೆ ಶಾಸ್ತ್ರಜ್ಞಾನದಿಂದ ಸಂಕಲ್ಪ ಹಿಂಗದಾಗಿ ಈ ಷಟ್‌ಸ್ಥಲ ಮಾರ್ಗವು ದ್ವೈತಾದ್ವೈತ ಪರಿವರ್ತನೆಯಲ್ಲ. ಅದೇನು ಕಾರಣವೆಂದಡೆ, ಇದು ಶಿವಾದ್ವೈತಮಾರ್ಗವಾದ ಕಾರಣ. ಈ ಲಿಂಗಾಂಗ ಸಂಬಂಧ ಸಮರಸೈಕ್ಯವ ತಿಳಿದ ಬಳಿಕ ಬ್ರಹ್ಮ ಪರಬ್ರಹ್ಮವೆಂದು ಬೇರುಂಟೇ ತಾನಲ್ಲದೆ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ?

ಆ ನಿರಾಕಾರ ಪರವಸ್ತುವೇ ನಿಃಕಲ ಲಿಂಗವಾದಲ್ಲಿ ಆ ನಿಃಕಲ ಲಿಂಗದಿಂದ ಜ್ಞಾನ ಚಿತ್ತು ಉದಯವಾಗಿ, ಆ ಜ್ಞಾನ ಚಿತ್ತುವೇ ಶರಣ

ರೂಪಾಗಿ ನಿಃಕಲ ಲಿಂಗಕ್ಕಾಶ್ರಯುವಾಗಿ ಚಿದಂಗ ಸ್ವರೂಪವಾಗಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ?

ಆ ನಿಃಕಲ ಜ್ಞಾನ ಚಿತ್ತೇ ಬಿಂದು ಚಿತ್ಶಕ್ತಿಯಾದಲ್ಲಿ ಆ ಚಿತ್‌ಶಕ್ತಿಯು ಸಂಗದಿಂದ ನೀನು ಮಹಾಲಿಂಗವಾದಲ್ಲಿ ಆ ಶಾಂತ್ಯಾತೀತೋತ್ತರ ಎಂಬ ಕಲೆಯಿಂದ ನಾನು ಉದಯುವಾಗಿ ಆ ಮಹಾಲಿಂಗಕ್ಕಾಶ್ರಯುವಾಗಿ ಐಕ್ಯವಾಗಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ?

ಆ ಚಿತ್‌ಶಕ್ತಿಯಿಂದ ಪರಾಶಕ್ತಿ ಉದಯುವಾಗಿ ಆ ಪರಾಶಕ್ತಿಯು ಸಂಗದಿಂದ ನೀನು ಪ್ರಸಾದಲಿಂಗವಾದಲ್ಲಿ, ತ ಶಾಂತ್ಯಾತೀತ ಎಂಬ ಕಲೆಯಲ್ಲಿ ನಾನು ಉದಯುವಾಗಿ ಪ್ರಸಾದಲಿಂಗಕ್ಕಾಶ್ರಯುವಾಗಿ ಶರಣನಾಗಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ? ಆ ಪರಾಶಕ್ತಿಯಿಂದ ಆದಿಶಕ್ತಿ ಉದಯುವಾಗಿ ಆದಿಶಕ್ತಿಯು ಸಂಗದಿಂದ ನೀನು ಶುದ್ಧ ಸುಜ್ಞಾನವೆಂಬ ಜಂಗಮಲಿಂಗವಾದಲ್ಲಿ ಆ ಶಾಂತಿ ಎಂಬ ಕಲೆಯಲ್ಲಿ ನಾನುದಯುವಾಗಿ ಜಂಗಮಲಿಂಗಕ್ಕಾಶ್ರಯುವಾಗಿ ಪ್ರಾಣಲಿಂಗಿಯಾಗಿಪ್ಪುದನು ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ? ಆದಿಶಕ್ತಿಯಿಂದ ಇಚ್ಛಾಶಕ್ತಿ ಉದಯುವಾಗಿ ಆ ಇಚ್ಛಾಶಕ್ತಿಯು ಸಂಗದಿಂದ ನೀನು ದಿವ್ಯ ಶಿವಲಿಂಗ ಆಕಾರವಾದಲ್ಲಿ ಅವಿದ್ಯೆ ಎಂಬ ಕಲೆಯುಲ್ಲಿ ನಾನುದಯುವಾಗಿ ಆ ಶಿವಲಿಂಗಕ್ಕಾಶ್ರಯುವಾಗಿ ಪರಮ ಪ್ರಸಾದಿಯಾಗಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ?

ಆ ಇಚ್ಛಾಶಕ್ತಿಯಿಂದ ಸುಜ್ಞಾನ ಶಕ್ತಿ ಉದಯುವಾಗಿ ಸುಜ್ಞಾನ ಶಕ್ತಿಯು ಸಂಗದಿಂದ ನೀನು ಗುರುಲಿಂಗವಾದಲ್ಲಿ ಆ ಪ್ರತಿಷ್ಠೆ ಎಂಬ ಕಲೆಯಲ್ಲಿ ನಾನುದಯುವಾಗಿ ಆ ಗುರುಲಿಂಗಕ್ಕಾಶ್ರಯುವಾಗಿ ಮಹೇಶ್ವರನಾಗಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ?

ಆ ಸುಜ್ಞಾನ ಶಕ್ತಿಯಿಂದ ಕ್ರಿಯಾಶಕ್ತಿ ಉದಯುವಾಗಿ ಆ ಕ್ರಿಯಾಶಕ್ತಿಯು ಸಂಗದಿಂದ ನೀನು ಆಚಾರಲಿಂಗವಾದಲ್ಲಿ ಅಲ್ಲಿ ನಿವೃತ್ತಿ ಎಂಬ ಕಲೆಯಲ್ಲಿ ನಾನುದಯುವಾಗಿ ಆಚಾರಲಿಂಗಕ್ಕಾಶ್ರಯುವಾಗಿ ಸದ್ಭಕ್ತನಾಗಿರ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ? ನಿನ್ನ ಸ್ವಲೀಲೆಯಿಂದ ನಾನು ರೂಪಾದಲ್ಲಿ ನಿನ್ನ ಬೆಂಬಳಿವಿಡಿದು ನಾನು ನಾನಾ

ರೂಪಾಗುತ್ತಿರ್ದೆನಯ್ಯಾ. ನೀನಾವ ರೂಪಾದೆ ನಾನು ಆ ರೂಪು ಆಗು
ತ್ತಿರ್ದೆನಯ್ಯಾ. ಇದು ಕಾರಣ ಶಿವಲಿಂಗವೆರಡಕ್ಕು ಭಿನ್ನವಿಲ್ಲೆಂಬು
ವನು ಸ್ವಾನುಭಾವ ವಿವೇಕದಿಂದರಿದುದು ಅರುಹಲ್ಲದೆ ಆಗಮಯುಕ್ತಿ
ಯಿಂದ ಅರಿದುದು ಅರುಹಲ್ಲ. ಅದೇನು ಕಾರಣವೆಂದಡೆ ಶೃತಿ ಜ್ಞಾನ
ದಿಂದ ಸಂಕಲ್ಪ ಭ್ರಾಂತು ತೊಲಗದಾಗಿ ಷಟ್‌ಸ್ಥಲ ಮಾರ್ಗವನು
ದ್ವೈತಾದ್ವೈತದೊಳಗೆ ಕೂಡಲಿಕ್ಕಿ ನುಡಿಯಲಾಗದು. ಈ ಲಿಂಗಾಂಗ
ಸಂಬಂಧ ಸಮರಸೈಕ್ಯವ ತಿಳಿದ ಬಳಿಕ ನಿತ್ಯ ನಿರಂಜನ ಪರತತ್ವವು
ತಾನೇ ನೋಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

(೪) ಸರ್ವಾಚಾರ ಸಂಪತ್ತಿನಾಚರಣೆಯ ಉದಯಾಧಾರ
ವಿಶ್ರಾಂತಿಗೆ ಮೂಲಕಾರಣವಾದ ನಿಃಕಲಬ್ರಹ್ಮವು ತಾನೊಂದೇ ತನ್ನ
ಚಿಚ್ಛಕ್ತಿಯ ನೆನಹು ಮಾತ್ರದಿಂದ ಅಂಗಲಿಂಗವೆಂಬುಭಯ ಸ್ವರೂಪವನು
ತಳೆಯಿತು. ಆ ಅಂಗದಲ್ಲಿ ಅಖಂಡ ಭಕ್ತಿ ಎಂಬುದು ಪುಟ್ಟಿತು. ಆ ಅಂಗ
ಲಿಂಗಭಕ್ತಿ ವಿಡಿದು ಆಚರಿಸುತ್ತಿರ್ದ್ದ ಹಾಗೆ ಒಂದು ಲಿಂಗವೇ ಮುಂದ
ಕ್ಕಾಚರಣೆಯನು ಕುರಿತು ಇಷ್ಟ ಪ್ರಾಣಭಾವವೆಂದು ತ್ರಿವಿಧ ಲಿಂಗಂಗ
ಳಾಯಿತು. ಆ ಲಿಂಗಂಗಳ ಬಳಿವಿಡಿದು ಒಂದಂಗವೇ ತ್ಯಾಗ ಭೋಗ
ಯೋಗಾಂಗವೆಂಬ ತ್ರಿವಿಧಾಂಗಂಗಳಾಯಿತು. ಆ ಅಂಗಂಗಳ ಬಳಿವಿ
ಡಿದು ಅಖಂಡ ಭಕ್ತಿ ಎಂಬುದು ತಾನೊಂದೇ ಕ್ರಿಯಾಭಕ್ತಿ, ಜ್ಞಾನ
ಭಕ್ತಿ, ಮಹಾಜ್ಞಾನಭಕ್ತಿಯೆಂದು ಮೂರು ತೆರನಾಯಿತು. ಹೀಗೆ ಒಂ
ದಂಗಲಿಂಗ ಭಕ್ತಿಗಳೇ ತ್ರಿವಿಧಾಂಗ ಲಿಂಗಭಕ್ತಿಗಳಾದವು. ಅದು ಕಾರ
ಣವಾಗಿ ಆ ತ್ರಿವಿಧಾಂಗದಲ್ಲಿ ತ್ರಿವಿಧಲಿಂಗ ಸಂಬಂಧವ ಮಾಡಿಕೊಂಡು
ತ್ರಿವಿಧ ಭಕ್ತಿವಿಡಿದು ಆಚರಿಸುತ್ತಿರ್ದ ಹಾಗೆ ಆ ತ್ರಿವಿಧ ಲಿಂಗಾಂಗಗಳೇ
ಮುಂದಕ್ಕಾಚರಣೆಯನು ಕುರಿತು ಷಡ್ವಿಧ ಲಿಂಗಂಗಳಾದವು. ಅದು
ಹೇಗೆಂದೊಡೆ ಭಾವಲಿಂಗವೆಂಬುದು ತಾನೊಂದೇ ಮಹಾಲಿಂಗ, ಪ್ರಸಾದ
ಲಿಂಗವೆಂದೆರಡು ತೆರನಾಯಿತು. ಪ್ರಾಣಲಿಂಗವೆಂಬುದು ತಾನೊಂದೇ
ಜಂಗಮಲಿಂಗ ಶಿವಲಿಂಗವೆಂದುಭಯ ಭೇದವಾಯಿತು. ಇಷ್ಟಲಿಂಗ
ವೆಂಬುದು ತಾನೊಂದೇ ಗುರುಲಿಂಗ ಆಚಾರಲಿಂಗವೆಂದು ದ್ವಿವಿಧ
ಪ್ರಕಾರವಾಯಿತು. ಆ ಲಿಂಗಂಗಳ ಬಳಿವಿಡಿದು ತ್ರಿವಿಧ ಅಂಗಂಗಳೇ
ಷಡ್ವಿಧ ಅಂಗಗಳಾದವು. ಅದು ಹೇಗೆಂದೊಡೆ, ಯೋಗಾಂಗವೆಂಬು
ವದು ತಾನೊಂದೇ ಐಕ್ಯ ಶರಣನೆಂದೆರಡು ತೆರನಾಯಿತು. ಭೋಗಾಂ

ಗವೆಂಬುವದು ತಾನೊಂದೇ ಪ್ರಾಣಲಿಂಗಿ, ಪ್ರಸಾದವೆಂದುಭಯ ಭೇದ ವಾಯಿತು. ತ್ಯಾಗಾಂಗವೆಂಬುದು ತಾನೊಂದೇ ಮಹೇಶ್ವರ ಭಕ್ತನೆಂದು ದ್ವಿವಿಧ ಭೇದವಾಯಿತು. ಆ ಅಂಗಂಗಳ ಬಳಿವಿಡಿದು ತ್ರಿವಿಧ ಭಕ್ತಿಗಳೇ ಷಡ್ವಿಧ ಭಕ್ತಿಗಳಾದವು. ಅದು ಹೇಗೆಂದೊಡೆ, ಮಹಾಜ್ಞಾನಭಕ್ತಿ ಎಂಬುದು ತಾನೊಂದೇ ಸಮರಸಭಕ್ತಿ ಆನಂದ ಭಕ್ತಿ ಎಂದೆರಡು ತೆರನಾಯಿತು. ಜ್ಞಾನ ಭಕ್ತಿ ಎಂಬುದು ತಾನೊಂದೇ ಅನುಭಾವಭಕ್ತಿ ಸಾವಧಾನ ಭಕ್ತಿ ಎಂಬುಭಯ ಭೇದವಾಯಿತು. ಕ್ರಿಯಾಭಕ್ತಿ ಎಂಬುದು ತಾನೊಂದೇ ನೈಷ್ಠಿ ಕಾಭಕ್ತಿ, ಶ್ರದ್ಧಾಭಕ್ತಿ ಎಂಬ ದ್ವಿವಿಧ ಭೇದವಾಯಿತು. ಹೀಗೆ ತ್ರಿವಿಧ ಭಕ್ತಿಗಳೇ ಷಡ್ವಿಧ ಭಕ್ತಿಗಳಾದವು. ಈ ರೀತಿಯಲ್ಲಿ ಷಡ್ವಿಧಾಂಗ ಲಿಂಗಭಕ್ತಿಗಳುತ್ಪತ್ತಿಯಾದವು. ಅದು ಕಾರಣವಾಗಿ ಷಟ್‌ಸ್ಥಳವೆಂದಡೆ ಷಡ್ವಿಧಾಂಗ, ಬ್ರಹ್ಮವೆಂದಡೆ ಷಡ್ವಿಧಲಿಂಗ, ಒಡಗೂಡಿಹೆನೆಂದಡೆ ಈ ಷಡಂಗದಲ್ಲಿ ಷಡ್ವಿಧಲಿಂಗವ ಸಂಬಂಧ ಮಾಡಿಕೊಂಡು ಷಡ್ವಿಧಭಕ್ತಿ ಪಿಡಿದು ಆಚರಿಸಿ ಆ ಷಡ್ವಿಧಾಂಗ ಲಿಂಗಭಕ್ತಿಗಳಿಗೆ ಮಾತೃಸ್ಥಾನವಾದ ಸಕಲಬ್ರಹ್ಮವನ್ನು ಒಂದಾಗಿ ಬೆರೆದಿಹೆನೆಂದು ಉದ್ಯೋಗಿಸಿದಡೆ ಅದು ಅಂತಪ್ಪ ಆಚರಣೆಯು ಆರಿಗೆ ನಿಲುಕುವದಯ್ಯಾ, ಆವಂಗೆ ಎಟಕೀ ತೆಲೆ ಸ್ವಾಮಿ ಎಂದು ಬೆಸಗೊಂಡಲ್ಲಿ ಕ್ರಿಯಾಬಾಹ್ಯನಾದ ವೇದಾಂತಿಗೆ ಜ್ಞಾನಬಾಹ್ಯರಾದ ಸಿದ್ಧಾಂತಿಗಳಿಗೆ, ಜ್ಞಾನಕ್ರಿಯಾಬಾಹ್ಯರಾದ ಯೋಗಾ ಭ್ಯಾಸಿಗಳಿಗೆ ಎಟಕೀತೇ? ಎಟಕದು. ಅರ್ಪಣದ ಅಂಗ ಸಂಬಂಧವಾದ ರೂಪು ಷಡ್ವಿಧ ಪದಾರ್ಥಂಗಳನ್ನು ಇಷ್ಟಲಿಂಗದೊಡನೆ ಕೂಡಿದ ಆಚಾ ರಾದಿ ಷಡ್ವಿಧಲಿಂಗಂಗಳಿಗೆ ಷಡ್ವಿಧ ಸಕೀಲಂಗಳಿಂದ ಸಮರ್ಪಿಸಿಕೊಂಬ ಕಾಯಾರ್ಪಣದೊಳಗರ್ಪಣದ ಮನೋ ಸಂಬಂಧವಾದ ಮೂವತ್ತಾರು ರುಚಿಪದಾರ್ಥಂಗಳನ್ನು ಪ್ರಾಣಲಿಂಗದೊಡನೆ ಕೂಡಿದ ಮೂವತ್ತಾರು ಲಿಂಗಗಳಿಗೆ ಮೂವತ್ತಾರು ತೆರದ ಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಬ ಕರಣಾರ್ಪಣದ ಭೇದಾರ್ಪಣದ ಆತ್ಮ ಸಂಬಂಧವಾದ ಇನ್ನೂರು ಹದಿ ನಾರು ತೃಪ್ತಿಪದಾರ್ಥಂಗಳನ್ನು ಭಾವಲಿಂಗದೊಡನೆ ಕೂಡಿದ ಇನ್ನೂರು ಹದಿನಾರು ಲಿಂಗಂಗಳಿಗೆ ಇನ್ನೂರು ಹದಿನಾರು ತೆರದ ಭಕ್ತಿಸಕೀಲಂಗ ಳಿಂದ ಸಮರ್ಪಿಸಿಕೊಂಬ ಭಾವಾರ್ಪಣದ ಭೇದವಂ ಕಾಯಾರ್ಪಣವ ರ್ಪಿತವಾಗಿ ಉಳಿದುದೇ ಶುದ್ಧ ಪ್ರಸಾದ, ಕರಣಾರ್ಪಣವರ್ಪಿತವಾಗಿ ಉಳಿ ದುದೇ ಸಿದ್ಧಪ್ರಸಾದ, ಭಾವಾರ್ಪಣವಾಗಿ ಉಳಿದುದೇ ಪ್ರಸಿದ್ಧ ಪ್ರಸಾ

ವವೆಂಬ ನಿಲುಕಡೆಯನರಿದು ಸೊಪ್ಪಡಗಿದ ಒಂದಾನೊಂದೆಲೆಗಳೆದ ವೃಕ್ಷದಲ್ಲಿ ಹುಳವಿಲ್ಲವೆಂಬ ಹಾಗೆ ಈ ತ್ರಿವಿಧ ಪ್ರಸಾದವ ಪಡೆದನುಭವಿಸಿದ ಶಿವಶರಣನ ತನು ಕರಣೇಂದ್ರಿಯ ಶಬ್ದ ಜಾಲಂಗಳು ಪಟಲವಳಿದ ನಿಃಪತಿ, ತನ್ನಲ್ಲಿ ತಾನೇ ಪರವು ಕಾಂತಿಯನೈದಿದ ಸ್ವಕೀಯವಾದ ಮಹಾಲಿಂಗದಲ್ಲಿ ಐಕ್ಯದಿರವು.

(೫) ಆದಿ ಅನಾದಿ ನಿತ್ಯ ಅನಿತ್ಯವ ತಿಳಿಯಲರಿಯದೆ ವಾಯುಕ್ಕೆ ಪರಬ್ರಹ್ಮವ ನುಡಿವ ವಾಯು ಪ್ರಾಣಿಗಳವರೆತ್ತ ಬಲ್ಲರೋ ಆ ಪರಬ್ರಹ್ಮದ ನಿಜದ ನಿಲವನು? ಅದೆಂತೆಂದೊಡೆ, ಆದಿಯೇ ದೇಹ, ಅನಾದಿಯೇ ನಿರ್ದೇಹ. ಆದಿಯೇ ಸಕಲ, ಅನಾದಿಯೇ ನಿಃಕಲ. ಆದಿಯೇ ಜಡ ಅನಾದಿಯೇ ಅಜಡ, ಆದಿಯೇ ಕಾಯ, ಅನಾದಿಯೇ ಅಜಡ, ಈ ಎರಡರ ಯೋಗವ ಭೇದಿಸಿ ತನ್ನಿಂದ ತಾನೇ ತಿಳಿದು ನೋಡಲು, ಆದಿ ಸಂಬಂಧವಪ್ಪ ಭೂತಂಗಳು ನಾನಲ್ಲ. ದಶವಿಧೇಂದ್ರಿಯಂಗಳು ನಾನಲ್ಲ. ದಶವಾಯುಗಳು ನಾನಲ್ಲ. ಅಷ್ಟ ಮದಂಗಳು ಅರಿಷಡ್ವರ್ಗಂಗಳು ಷಡೂರ್ಮಿಗಳು, ಷಡ್ಭಾವ ವಿಕಾರಂಗಳು ಷಟ್‌ಕರ್ಮಂಗಳು ಷಡ್ಧಾತುಗಳು, ಮಲತ್ರಯಂಗಳು, ಗುಣತ್ರಯಂಗಳು. ಜೀವತ್ರಯಂಗಳು, ಭಾವತ್ರಯಂಗಳು, ತಾಪತ್ರಯಂಗಳು, ಅಂತಃಕರಣಂಗಳು ಇಂತು ಇವಾದಿಯಾಗಿ ತೋರುವ ತೋರಿಕೆ ಏನೂ ನಾನಲ್ಲ ನನ್ನವಲ್ಲ, ಇವೆಲ್ಲವೂ ನನ್ನಾಧೀನವಾಗಿಪ್ಪವು. ನಾನಿವರುಗಳಾಧೀನವಲ್ಲ. ನಾನು ತೂರ್ಯ ತೂರ್ಯಾತೀತವಪ್ಪ ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ತನ್ನಿರವೆಂದು ತಿಳಿಯೆ ಆ ತಿಳಿದ ಮಾತ್ರದಲ್ಲಿಯೆ ಅನಿತ್ಯದ ಬೆಸುಗೆಯುಂ ಬಿಟ್ಟು ನಿರಾಳದಲ್ಲಿ ನಿರವಯವನೆಯ್ದಲರಿಯದೆ ಮತ್ತೆಯೂ ಭೌತಿಕ ತತ್ವ ಸಂಬಂಧವಾಗಿರುತ್ತಿರಲು, ಈ ತತ್ವದಾದಿ ತಾನೆಂತೆನಲು ಆ ಪರಬ್ರಹ್ಮವಪ್ಪ ನಿತ್ಯ ನಿರಾಳ ನಿಶ್ಶೂನ್ಯ ಲಿಂಗವೇ ತನ್ನ ಲೀಲಾ ವಿಲಾಸದಿಂದ ತಾನೇ ಸುನಾದ ಬಿಂದು ಪ್ರಕಾಶತೇಜೋ ಮೂರ್ತಿಯಾಗಿ ಮಹಾಲಿಂಗವೆಂದೆನಿಸಿತ್ತು ಆ ಮಹಾಲಿಂಗವೇ ಪಂಚ ಸಾದಾಖ್ಯವೆಂದೆನಿಸಿತ್ತು. ಆ ಪಂಚಸಾದಾಖ್ಯವೇ ಪಂಚಲಿಂಗಪ್ರಕಾಶವೆಂದೆನಿಸಿತ್ತು. ಆ ಪಂಚಲಿಂಗ ಪ್ರಕಾಶವೇ ಪಂಚ ಮುಖವೆಂದೆನಿಸಿತ್ತು. ಆ ಪಂಚಮುಖದಿಂದವೇ ಪಂಚಾಕ್ಷರಿಯುತ್ಪತ್ತಿ ಆ ಪಂಚಾಕ್ಷರಿಯಿಂದವೇ ಪಂಚಕಲೆಗಳುತ್ಪತ್ತಿ. ಆ ಪಂಚಕಲೆಗಳಿಂದಲೇ ಮನ ಬುದ್ಧಿ ಚಿತ್ತ ಅಹಂಕಾರಗಳ ಜನನ.

ಆ ಮನ ಬದ್ಧಿ ಚಿತ್ತ ಅಹಂಕಾರಗಳಿಂದವೇ ತನ್ಮಾತ್ರಂಗಳುತ್ಪತ್ತಿ. ಆ ತನ್ಮಾತ್ರಂಗಳಿಂದವೇ ಪಂಚಭೂತಂಗಳುತ್ಪತ್ತಿ. ಆ ಪಂಚಭೂತಂಗಳೇ ಪಂಚೀಕರಣವನೈದಿ ಆತ್ಮಂಗೆ ಅಂಗವಾಯಿತ್ತು. ಆ ಅಂಗಕ್ಕೆ ಜ್ಞಾನೇಂದ್ರಿಯಂಗಳು ಕರ್ಮೇಂದ್ರಿಯಂಗಳು ಪ್ರತ್ಯಂಗವೆನಿಸಿತ್ತು. ಇಂತು ದೇಹಸಂಬಂಧವಂ ಶಿವ ತನ್ನ ಚಿದಂಶಿಕನಪ್ಪ ಆತ್ಮಂಗೆ ಸಂಬಂಧಿಸಿದನಾಗಿ ಆ ಸಂಬಂಧಿಸಿದ ಕಾಯದ ಪೂರ್ವಾಶ್ರಯುವು ಎಲ್ಲಿಯಾಯಿತ್ತು, ಅಲ್ಲಿಯೇ ಅಡಗಿಸಿ ಆ ಕಾಯಾಶ್ರಯವಳಿದು ಮಹಾಘನಲಿಂಗವ ವೇಧಿಸಿಕೊಟ್ಟು, ಶಿವನು ತಾನೇ ಗುರುವಾಗಿ ಬಂದು ಮಹಾಘನಲಿಂಗವ ವೇಧಿಸಿಕೊಟ್ಟ ಪರಿ ಎಂತೆಂದೊಡೆ, ಆತ್ಮ ಗೂಡಿ ಪಂಚಭೂತಂಗಳ ಷಡಂಗವೆಂದೆನಿಸಿ, ಆ ಅಂಗಕ್ಕೆ ಕಲೆಗಳನೆ ಷಟ್‌ಶಕ್ತಿಗಳೆನಿಸಿ. ಆ ಶಕ್ತಿಗಳಿಗೆ ಷಡ್ವಿಧ ಭಕ್ತಿಯನಳವಡಿಸಿ ಆ ಭಕ್ತಿಗಳಿಗೆ ಭಾವ, ಜ್ಞಾನ. ಮನ ಬುದ್ಧಿ ಚಿತ್ತಾಹಂಕಾರಗಳನೇ ಹಸ್ತಂಗಳೆಂದೆನಿಸಿ, ಆ ಹಸ್ತಂಗಳಿಗೆ ಮಹಾಲಿಂಗವಾದಿಯಾದ ಪಂಚಲಿಂಗಗಳನೆ ಷಡ್ವಿಧ ಲಿಂಗಂಗಳೆನಿಸಿ ಆ ಲಿಂಗಂಗಳಿಗೆ ಷಡಕ್ಷರಿಯ ಮಂತ್ರವೆಂದೆನಿಸಿ, ಆ ಮಂತ್ರ ಲಿಂಗಂಗಳಿಗೆ ಹೃದಯಗೂಡಿ ಪಂಚೇಂದ್ರಿಯಂಗಳನೆ ಮುಖಂಗಳೆಂದೆನಿಸಿ, ಆ ಮುಖಂಗಳಿಗ ತನ್ಮಾತ್ರಂಗಳನೆ ದ್ರವ್ಯ ಪದಾರ್ಥಂಗಳೆಂದೆನಿಸಿ, ಆ ದ್ರವ್ಯ ಪದಾರ್ಥಂಗಳ ಆಯಾಯ ಮುಖದ ಲಿಂಗಂಗಳಲ್ಲಿ ನಿರಂತರ ಸಾವಧಾನದಿಂದ ಅರ್ಪಿತವಾಗಲೊಡನೆ, ಅಂಗಸ್ಥಲಂಗಳಡಗಿ ತ್ರಿವಿಧ ಲಿಂಗಸ್ಥಲಂಗಳುಳಿದು ಕಾಯ ಗುರು, ಪ್ರಾಣ ಲಿಂಗ, ಜ್ಞಾನ ಜಂಗಮ, ಗುರುವಿನಲ್ಲಿ ಶುದ್ಧಪ್ರಸಾದ ಲಿಂಗದಲ್ಲಿ ಸಿದ್ಧಪ್ರಸಾದ, ಜಂಗಮದಲ್ಲಿ ಪ್ರಸಿದ್ಧಪ್ರಸಾದ, ಇಂತೀ ತ್ರಿವಿಧ ಪ್ರಸಾದ ಏಕಾರ್ಥವಾಗಿ ಮಹಾಘನ ಪರಿಪೂರ್ಣ ಪ್ರಸಾದವಳವಟ್ಟ ಶರಣ ಜ್ಞಾನಿಯಲ್ಲ, ಅಜ್ಞಾನಿ ಮುನ್ನವೇ ಅಲ್ಲ, ಶೂನ್ಯನಲ್ಲ ನಿಃಶೂನ್ಯನಲ್ಲ ದ್ವೈತಿಯಲ್ಲ ಅದ್ವೈತಿಯಲ್ಲ, ಇಂತೀ ಉಭಯಾತ್ಮಕ ತಾನೆಯಾಗಿ, ಇದು ಕಾರಣ ಇದರ ಆಗು ಹೋಗು ಸಕೀಲ ಸಂಬಂಧವ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರೇ ಬಲ್ಲರು

---

# ಅಂಗಲಿಂಗಸ್ಥಲಗಳು.

(೧) ಚಿತ್ತವೆಂಬ ಬಿತ್ತು ಬಲಿದು ಎರಡಾದಲ್ಲಿ ಲಿಂಗವೆಂಬ ಕಳೆ ಅಂಕುರಿಸಿ ಮೂರ್ತಿಯಾಯಿತ್ತು. ಆ ಮೂರ್ತಿಯ ಘನತೆಯನೇನೆಂದು ಪಮಿಸಬಾರದು. ನೋಡಿದಡೆ ಮೂರ್ತಿ, ಹಿಡಿದಡೆ ಬಯಲು. ಈ ಮೂರ್ತಿಯೊಳಗದೆ ಈರೇಳು ಲೋಕದ ಪ್ರಾಣ ಕಳೆ. ಆ ಕಳೆಯು ಬೆಳಗು ತಾನೇ ನಮ್ಮ ಗುಹೇಶ್ವರ ಲಿಂಗದ ಲೀಲಾ ಮೂಲದ ಪ್ರಥಮ ಬಿತ್ತು.

(೨) ಅಖಂಡ ಪರಿಪೂರ್ಣ ಗೋಳಕಾಕಾರವು ಮಹಾಲಿಂಗವು ತನ್ನ ಸ್ವಲೀಲೆಯಿಂದ ಲಿಂಗಸ್ಥಲವು ಅಂಗಸ್ಥಲವೆಂದು ಎರಡು ಪ್ರಕಾರವಾಗಿತ್ತಾಗಿ, ಅಂಗಲಿಂಗೋದ್ಭವ ಸ್ಥಲವಾದುದು. ಪ್ರಥಮದಲ್ಲಿ ನಿರಾಕಾರವಾದ ಪರವಸ್ತು ತಾನೊಂದೇ ಆ ನಿರಾಕಾರ ಪರವಸ್ತುವಿನಲ್ಲಿ ಮಹಾಜ್ಞಾನ ಉದಯವಾಗಿ ಆ ಮಹಾಜ್ಞಾನವೇ ಅನಾದಿ ಶರಣ ರೂಪಾಗಿ ಆ ನಿರಾಕಾರ ಪರವಸ್ತುವಿಗೆ ಆಧಾರ ತಾನಾಗಿ ಚಿನ್ನಬಣ್ಣದ ಹಾಗೆ ಭಿನ್ನವಿಲ್ಲದಿಪ್ಪುದ ನಿ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ! ಆ ನಿರಾಕಾರ ಪರವಸ್ತುವೇ ನಿಃಕಲಲಿಂಗವಾದಲ್ಲಿ ಆ ನಿಃಕಲಲಿಂಗದಿಂದ ಜ್ಞಾನ ಚಿತ್ತು ಉದಯವಾಗಿ ಆ ಜ್ಞಾನ ಚಿತ್ತುವೇ ಶರಣರೂಪಾಗಿ ಆ ನಿಃಕಲ ಲಿಂಗಕ್ಕಾಶ್ರಯವಾಗಿ ಚಿದಂಗಸ್ವರೂಪಾಗಿಪ್ಪುದ ನೀ ಬಲ್ಲೆಯಲ್ಲದೆ ಮತ್ತಾರು ಬಲ್ಲರು ಹೇಳಾ? ... ನಿಃಕಲಶಿವತತ್ವ ತಾನೊಂದೇ ತನ್ನ ಶಕ್ತಿಯ ಚಲನೆಮಾತ್ರದಿಂದ ಒಂದೆರಡಾಯಿತ್ತು ನೋಡಾ. ಅದರೊಳಗೆ ಒಂದು ಲಿಂಗಸ್ಥಲ ಮತ್ತೊಂದು ಅಂಗಸ್ಥಲ. ಹೀಗೆ ಅಂಗಲಿಂಗವೆಂದು ಉಪಾಸ್ಯ ಉಪಾಸಕರೆಂದು ವರ್ತಿಸುತ್ತಿಹುದು ನೋಡಾ ಆ ಪರಶಿವನ ಚಿತ್ ಶಕ್ತಿ ತಾನೆರಡಾಯಿತ್ತು. ಲಿಂಗಸ್ಥಲವನಾಶ್ರಯಿಸಿ ಶಕ್ತಿ ಎನಿಸಿತ್ತು. ಅಂಗಸ್ಥಲವನಾಶ್ರಯಿಸಿ ಭಕ್ತಿ ಎನಿಸಿತ್ತು. ಆ ಶಕ್ತಿಯೇ ಪ್ರವೃತ್ತಿ ಎನಿಸಿತ್ತು. ಭಕ್ತಿಯೇ ನಿವೃತ್ತಿ ಎನಿಸಿತ್ತು. ಶಕ್ತಿ ಭಕ್ತಿ ಎಂದು ಎರಡು ಪ್ರಕಾರವಾಯಿತ್ತು......ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

(೩) ಅಂಗಲಿಂಗ ಸಂಬಂಧದ ಇರವು ಬೀಜ ಒಡೆದು ಮೊಳೆದೋರುವಂತೆ, ಕುಸುಮ ಬಲಿದು ದೆಸೆದೆಸೆಗೆ ಪಸರಿಸುವಂತೆ, ಭೂಜಲ ಉಣ್ಮೆ ಪರಿವ ತೆರನಂತೆ, ಘಟಮಧ್ಯದಲ್ಲಿ ಘನಲಿಂಗ ನಿಂದು ಕುರುಹು

ಪೋರುತ್ತಿದೆ. ಐಘಟದೂರ ರಾಮೇಶ್ವರ ಲಿಂಗವು ಮೂರ್ತಿ ಅಮೂ
ರ್ತಿಯಾಗುತ್ತಿದೆ.

(೪) ಅಂಗಗುಣವರತು ಲಿಂಗವನರಿಯಬೇಕೆಂಬರು. ಅಂಗವರತ
ಮೇಲೆ ಲಿಂಗಕ್ಕೆ ಕುರುಹುಂಟೆ? ಅಂಗವೇ ಲಿಂಗ, ನಿರಂಗವೇ ಸಂಗ.
ಈ ಭಾವದಂಗವನರಿಯಬೇಕೆಂದನಂಬಿಗ ಚೌಡಯ್ಯ.

(೫) ಕಲ್ಪಿತಾಂತರವನುಂಬುದು ಕಾಯವೋ? ಜೀವವೋ? ಜೀವ
ವೆಂದೊಡೆ ನಿರಾಕಾರಮಭೇದ. ಕಾಯವೆಂದೊಡೆ ಮೃತ. ಅಚೇತನ ಘಟವು
ಉಭಯಸಂಗ ಸಂಬಂಧವಾದಲ್ಲಿ ಎನ್ನಯ್ಯ ಚನ್ನರಾಮನ ಭೇದ.

ಅರ್ಥ:— ಕರ್ಮದಿಂದ ಕಲ್ಪಿಸಲ್ಪಟ್ಟ ಪ್ರಾರಬ್ಧ ಭೋಗವನನು
ಭವಿಸುವುದು ದೇಹವೋ ಆತ್ಮನೋ? ಆತ್ಮನನುಭವಿಸುವನೆಂದೊಡೆ.
ನಿರಾಕಾರ ಸ್ವರೂಪನಾದ ಕಾರಣ ಸಾಕಾರವಾದ ವಸ್ತುವ ಭೋಗಿಸ
ಲರಿಯನು. ದೇಹವು ಅನುಭವಿಸುವದೆಂದೊಡೆ ಅನಿತ್ಯವಾದ ಜಡದೇಹ
ವಾದ ಕಾರಣ, ಅದು ಭೋಗಿಸಲರಿಯದು. ದೇಹಾತ್ಮರುಗಳ ಕೂಟ
ದಿಂದ ಪ್ರಾರಬ್ಧ ಭೋಗದ ಅನುಭಾವ ಉಂಟಾಗಿಪ್ಪುದು ಎಂಬ ಹಾಗೆ
ಶರಣಲಿಂಗದ ಕೂಟದಿಂದಲೇ ಸಕಲ ಪದಾರ್ಥವರ್ಪಿತವಾಗುತ್ತಿಹುದು.
ಇದು ಲಿಂಗಸಂಬಂಧವನುಳ್ಳ ಶರಣರುಗಳ ವಿಚಾರವೆಂಬುದರ್ಥ.

(೬) ಷಡಧ್ವಾತ್ರಯವಾದ ಪರಬಿಂದುಸ್ಥಾನದ ಮೇಲಿಂದ ಷಟ್
ಸ್ಥಲ ಮೂಲವಾದ ಪರಶಿವತತ್ತ್ವದೊಳು ಷಟ್‌ಸ್ಥಲ ಲಿಂಗಾಂಗ ಜನಿಸಿ
ತೋರಿತ್ತೆಂಬಡೆ. ಅಂಗ ಲಿಂಗಕ್ಕೆ ಭೇದವುಂಟೇ? ಇಲ್ಲವಾಗಿ. ಬೀಜಾಂ
ಕುರದಂತೆ ಒಂದ ಬಿಟ್ಟು ಒಂದು ತೋರದು. ಇಂತಪ್ಪ ಲಿಂಗಾಂಗ
ಸಂಬಂಧ ಸಕೀಲವನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಮ್ಮ
ಶರಣ ಬಲ್ಲನು.

(೭) ಆಕಾಶದಂಬರ ಉದಯಿಸದಂದು ಒಂದು ತುಂಬಿದ
ಕೊಡನ ಕಂಡೆ. ಆ ಕೊಡನನೆತ್ತಿದವರಿಲ್ಲ. ಇಳುಹಿದವರಿಲ್ಲ. ಆ ಕೊಡ
ದುಳುಕಿನಲ್ಲಿ ಒಂದು ಬಿಂದು ಕಡೆಗೆ ಸಿಡಿಯುತ್ತ ಕಂಡೆ. ಆ ಬಿಂದು
ವಿನಲ್ಲಿ ಅನಂತ ದೇವತಾಮೂರ್ತಿಗಳು ಹುಟ್ಟಿತ್ತ ಕಂಡೆ. ಇದು

ಕಾರಣ ಚಿಕ್ಕಯ್ಯಪ್ರಿಯ ಸಿದ್ಧಲಿಂಗಲೀಲಾಮೂಲವ ಕಂಡು ಇಲ್ಲ ಇಲ್ಲ ಎನುತಿರ್ದೆನು.

ಅರ್ಥ:— ಸರ್ವತತ್ವಂಗಳೇನೂ ಇಲ್ಲದಿದ್ದಂದು, ಅಖಂಡ ಚಿತ್ ಪ್ರಕಾಶಾಂಗವೆಂಬ ಭಾಜನದಲ್ಲಿ ಅಖಂಡ ಚಿದಾನಂದ ರಸ ಪರಿಪೂರ್ಣವಾದ ಪರಬ್ರಹ್ಮ ಒಂದೇ ಇದ್ದಿತ್ತೆಂಬುದೀಗ ಅವನಿಯಂಬರ ಉದಯಿಸದಂದು ಒಂದು ತುಂಬಿದ ಕೊಡನ ಕಂಡೆನೆಂಬ ಶಬ್ದಕ್ಕರ್ಥ. ಅಂತಿಪ್ಪಲ್ಲಿ ಆ ಪರಬ್ರಹ್ಮವನಂದು ಅಂಗವಲ್ಲಿ ಧರಿಸಿ ಹಿಂಗದೆ ಪೂಜಿಸುವ ಷಟ್‌ಸ್ಥಲ ಜ್ಞಾನಿಗಲ್ಲ. ಆ ಪರಬ್ರಹ್ಮನನರಿವ ಅರಿವಿಲ್ಲದೆ ಆಹ್ವಾನ ವಿಸರ್ಜನೆಯ ಮಾಡುವ ಭಿನ್ನ ಪೂಜಕರಪ್ಪ ಶೈವರೂ ಇಲ್ಲ. ಇಂತು ಭಜಿಸುವರಾರೂ ಇಲ್ಲದಂದು ಒಂದೇ ಪರಬ್ರಹ್ಮವಿದ್ದಿತ್ತೆಂಬುದೀಗ ಆ ಕೊಡನನೆತ್ತಿದವರಿಲ್ಲ, ಇಳುಹಿದವರಿಲ್ಲ ಎಂಬ ಶಬ್ದಕ್ಕರ್ಥ. ಅಂತು ಅಖಂಡ ಪರಿಪೂರ್ಣ ಚೈತನ್ಯವಸ್ತು ಒಂದೇ ಇರ್ದು, ತನ್ನ ಭಜಿಸುವರಿಲ್ಲದಿರಬಾರದೆಂದು ತನ್ನ ಚಿದ್ವಿವೇಕದಿಂದ ಚಿಂತಿಸಿದ ಚಿತ್ ಚೈತನ್ಯವೇ ಪ್ರಭಾವಿಸಿ ನೆಗಳ್ದ ಚಿತ್ ಪ್ರಭಾಂಗ ಮೂರ್ತಿಯಾದ ಚಿಲ್ಲಿಂಗವಾಯಿತ್ತೆಂಬುದೀಗ ಆ ಕೊಡ ತುಳುಕಿದಲ್ಲಿ ಒಂದು ಬಿಂದು ಕಡೆಗೆ ಸಿಡಿಯಿತ್ತ ಕಂಡೆನೆಂಬ ಶಬ್ದಕ್ಕರ್ಥ. ಅಂತು ಚಿತ್ ಪ್ರಭಾಂಗ ಮೂರ್ತಿಯಾದ ಲಿಂಗವು ತನ್ನ ಭಜಿಸುವರಾಗಬೇಕೆಂಬ ಲೀಲಾ ವಿಲಾಸದಿಂದ ತನ್ನ ಚಿತ್ ಪ್ರಭಾಂಗದ ಚಿತ್‌ಪ್ರಭಾ ಕಲಾಂಶಂಗಳ ಬೇರ್ಪಡಿಸಿ ಅನಂತ ದೇವತಾ ಮೂರ್ತಿಗಳು ಮುಖ್ಯವಾದ ಆತ್ಮರುಗಳು ಅನಂತರಾದರೆಂಬುದೀಗ ಆ ಬಿಂದುವಿನಲ್ಲಿ ಅನಂತ ದೇವತಾ ಮೂರ್ತಿಗಳು ಹುಟ್ಟಿದರೆಂಬ ಶಬ್ದಕ್ಕರ್ಥ. ಅಂತು ಲಿಂಗ ಲೀಲಾ ವಿಲಾಸದಿಂದಾದ ಜಗತ್ ಸೃಷ್ಟಿ ಮುನ್ನಿಲ್ಲ. ಲಿಂಗದ ಲೀಲೆ ಸಾಕಾದಡೆಯೂ ಇಲ್ಲವೆಂಬುದೀಗ, ಇದು ಕಾರಣ ಚಿಕ್ಕಯ್ಯಪ್ರಿಯ ಸಿದ್ಧಲಿಂಗದ ಲೀಲಾಮೂಲವ ಕಂಡು ಇಲ್ಲ ಇಲ್ಲ ಎನುತಿರ್ದೆನೆಂಬ ಶಬ್ದಕ್ಕರ್ಥ.

(೮) ಪೃಥ್ವಿಯನತಿಗಳೆದು ಅಪ್ಪುವಿಲ್ಲ. ಅಪ್ಪುವನತಿಗಳೆದು ಅಗ್ನಿ ಇಲ್ಲ. ಅಗ್ನಿಯನತಿಗಳೆದು ವಾಯುವಿಲ್ಲ. ವಾಯುವಿನತಿಗಳೆದು ಆಕಾಶವಿಲ್ಲ. ಆಕಾಶವನತಿಗಳೆದು ನಾದವಿಲ್ಲ. ನಾದವನತಿಗಳೆದು ಬಿಂದುವಿಲ್ಲ. ಬಿಂದುವನತಿಗಳೆದು ಕಳೆಯಿಲ್ಲ. ಕಳೆಯನತಿಗಳೆದು ಆತ್ಮನಿಲ್ಲ. ಆತ್ಮನತಿಗಳೆದು ಗುಹೇಶ್ವರನೆಂಬ ಲಿಂಗವಿಲ್ಲ.

ಅರ್ಥ:-ಆತ್ಮ ಮೊದಲಾಗಿ ಪೃಥ್ವಿ ಕಡೆಯಾಗಿ ತತ್ವಂಗಳೆಲ್ಲವೂ ಕೂಡಿ ಅಂಗಸ್ವರೂಪು. ಆ ಅಂಗದ ಚೈತನ್ಯವೇ ಲಿಂಗಸ್ವರೂಪು. ಆ ಲಿಂಗ ರಹಿತನಾಗಿ ಅಂಗ ತತ್ವಂಗಳ ತೋರಿಕೆ ತೋರಲಿಲ್ಲವಾಗಿ ಅಂತು ಆತ್ಮ ಮೊದಲಾದ ಅಂಗತತ್ವಂಗಳ ತೋರಿಕೆ ಎಲ್ಲವು ಲಿಂಗದಲ್ಲಿಯೇ ತೋರಿ ಲಿಂಗದಲ್ಲಿಯೇ ಸ್ಥಿತಿಯಾಗಿ ಲಿಂಗದಲ್ಲಿಯೇ ಅಡಗುತ್ತಿಹ ಭೇದವನರಿದು-ಅಂಗದೊಳಗಿರ್ದ ಲಿಂಗದ ಕ್ರಿಯಿಂದ ಬಹಿರಂಗದಲ್ಲಿ ಮೂರ್ತಿಗೊಳಿಸಿ ಆ ಮೂರ್ತಿಯಾದ ಇಷ್ಟಲಿಂಗವೇ ಪ್ರಾಣಸ್ವರೂಪವಾಗಿ ಕಾಂಬ ನೈಷ್ಠಿಕಾ ಭಕ್ತಿ ಘಟಿಸಿ ಭಕ್ತಿಯ ಮಾಡಬಲ್ಲರೆ ಅಂಗವೆಲ್ಲ ಲಿಂಗಸ್ವರೂಪಿಯಾಗಿಪ್ಪನೆಂಬುದೀ ವಚನದ ತತ್ವಾರ್ಥ.

---

# ಮೂರು ಲಿಂಗ ಸ್ಥಲಗಳು.

## ( ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು )

(೧) ಇಷ್ಟಲಿಂಗ ಮುಖವಾವುದು ಪ್ರಾಣಲಿಂಗಮುಖವಾವುದು, ಭಾವಲಿಂಗ ಮುಖವಾವುದು ಎಂದರೆ ಹೇಳಿಹೆ ಕೇಳಿರಣ್ಣಾ:—

ಇಷ್ಟಲಿಂಗದ ಮುಖವನ್ನೈದಿ, ಪ್ರಾಣವಾಯುಗಳ ಮುಖವನ್ನೈದಿ, ಪ್ರಾಣಲಿಂಗವೆನಿಸಿತ್ತು. ಭಾವವನೆಯ್ದಿ ಭಾವಲಿಂಗವೆನಿಸಿತ್ತು. ಒಂದೇ ಲಿಂಗವು ತನುತ್ರಯಂಗಳಲ್ಲಿ ಇಷ್ಟ, ಪ್ರಾಣ, ಭಾವ ರೂಪಕವಾಗಿರ್ಪುದು. ಜೀವತ್ರಯಂಗಳಲ್ಲಿ ಮಂತ್ರ, ಧ್ಯಾನ, ಜ್ಞಾನ ರೂಪಕವಾಗಿರ್ಪುದು. ಅವಸ್ಥಾತ್ರಯಂಗಳಲ್ಲಿ ಸತ್ಕ್ರಿಯಾಚರಣೆ ಸದ್ಭಾವನೆ ತಲ್ಲೀಯವಾಗಿರ್ಪುದು. ಮಲತ್ರಯಂಗಳಲ್ಲಿ ಸ್ವಯ ಚರ ಪರ ರೂಪಕವಾಗಿರ್ಪುದು. ಈಷಣತ್ರಯಂಗಳಲ್ಲಿ ತ್ರಿಲಿಂಗ ಪ್ರೇಮರತಿಗೆ ಸಕಲ ಸಾಧನಂಗಳಾಗಿ, ಮಾಯಾ ಭ್ರಾಂತಿಯನು ನಿಭ್ರಾಂತಿ ಎನಿಸಿ, ಶುದ್ಧ ಪ್ರಭಾವ ಪರಿಪೂರ್ಣ ಲಿಂಗವು ತಾನೇ ಪ್ರಸನ್ನ ಪ್ರಸಾದ ರೂಪಕನಾಗಿರ್ದನಯ್ಯಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

(೨) ಅಂಗದ ಮೇಲೆ ಸಾಕಾರವಿಡಿದು ಮಂತ್ರಾಹ್ವಾನಂಗಳಿಂದ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಲ್ಲಿ ವ್ಯಾಪಿಸಿಕೊಂಡಿಪ್ಪುದೀಗ ಇಷ್ಟಲಿಂಗ. ಆ ಇಷ್ಟಲಿಂಗಕ್ಕೆ ಆಶ್ರಯವಾಗಿ ಚತುರ್ದಶ ಇಂದ್ರಿಯಂಗಳಲ್ಲಿ ತನ್ಮುಖವಾಗಿ ಸರ್ವೇಂದ್ರಿಯಂಗಳಿಗೆ ಚೈತನ್ಯವಾಗಿ ಪ್ರಾಣದಲ್ಲಿ ಪರಿಪೂರ್ಣವಾಗಿಪ್ಪುದೀಗ ಪ್ರಾಣಲಿಂಗ. ಆ ಪ್ರಾಣಲಿಂಗಕ್ಕೆ ಆದಿಯಾಗಿ ಭಾವ ಭ್ರಮೆಗಳು ನಷ್ಟವಾಗಿ ಅನುಭಾವದಲ್ಲಿ ಅನುವಾಗಿ ಭಾವ, ಸದ್ಭಾವ, ನಿರ್ಭಾವಂಗಳಲ್ಲಿ ಭರಿತವಾಗಿ ಭಾವಬ್ರಹ್ಮವೆಂಬ ಭೇದವಿಲ್ಲದೆ ಸನ್ನಿಹಿತಭಾವದಿಂದ ಇಪ್ಪುದೀಗ ಭಾವಲಿಂಗ. ಇಂತೀ ಮೂರುಲಿಂಗದ ಮೂಲ, ಆರು ಲಿಂಗದ ಅಂತ್ಯವನೊಳಕೊಂಡು, ಮಾರ್ಗಕ್ರಿ ನಿಃಕ್ರಿಯವಾಗಿ, ಧ್ಯಾನ ನಷ್ಟವಾಗಿ, ಮಂತ್ರ ಗೋಪ್ಯವಾಗಿ, ಜ್ಞಾನ ಶೂನ್ಯವಾಗಿ, ಭಾವ ದಿಗಂಬರವಾಗಿ, ಘನಕ್ಕೆ ಘನವಾದ ಪರಬ್ರಹ್ಮವು ತಾನೇ ಸೌರಾಷ್ಟ್ರ ಸೋಮೇಶ್ವರಾ.

(೩) ನಾದಬಿಂದು ಕಳೆಯಂ ತಿಳಿದು ಚಿನ್ನಾದ ಸ್ವರೂಪವಾದ ಗುರುದೇವನು, ಚಿದ್ಬಿಂದು ಸ್ವರೂಪವಾದ ಲಿಂಗದೇವನು, ಚಿತ್ಕಳಾ ಸ್ವರೂ

ಪನಾದ ಜಂಗಮದೇವನೆಂದರಿದು, ಸ್ಥೂಲಶರೀರಾಭಿಮಾನಿಯಾದ ಜೀವಾತ್ಮನು, ಸೂಕ್ಷ್ಮಶರೀರಾಭಿಮಾನಿಯಾದ ಅಂತರಾತ್ಮನು, ಕಾರಣಶರೀರಾಭಿಮಾನಿಯಾದ ಪರಮಾತ್ಮನು ಎಂದೆನಿಸಿಕೊಂಬ ಆತ್ಮತ್ರಯದಲ್ಲಿ, ಸತ್ಕ್ರಿಯಾ ಸ್ವರೂಪವಾದ ಇಷ್ಟಲಿಂಗವು, ಸುಜ್ಞಾನ ಸ್ವರೂಪವಾದ ಪ್ರಾಣಲಿಂಗವು, ಪರಿಪೂರ್ಣ ಸ್ವರೂಪವಾದ ಭಾವಲಿಂಗವು ಎನಿಸಿಕೊಂಬ ಲಿಂಗತ್ರಯಂಗಳಲ್ಲಿ ಸಂಬಂಧಿಸಿ, ಸ್ವಾಯತವ ಮಾಡಿಕೊಂಡು, ಜೀವಾತ್ಮನಲ್ಲಿ ಇಷ್ಟಲಿಂಗ, ಅಂತರಾತ್ಮನಲ್ಲಿ ಪ್ರಾಣಲಿಂಗ, ಪರಮಾತ್ಮನಲ್ಲಿ ಭಾವಲಿಂಗವನು ಸಂಬಂಧಿಸಿ ಸ್ವಾಯತವ ಮಾಡಿಕೊಂಬುವುದು.

(೪) ಮಹಾನಾದ ಕಳೆಯೇ ಲಿಂಗಕ್ಕಾಶ್ರಯವಾಗಿ, ಲಿಂಗದ ಕಳೆಯೇ ಹೃದಯಕ್ಕಾಶ್ರಯವಾಗಿ, ಹೃದಯದ ಕಳೆಯೇ ಜ್ಞಾನಕ್ಕಾಶ್ರಯವಾಗಿ, ಜ್ಞಾನದ ಕಳೆಯೇ ನಿತ್ಯಕ್ಕಾಶ್ರಯವಾಗಿ ನಿತ್ಯ ನಿರವಯ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲಿ ಇಲ್ಲ

ಅರ್ಥ:— ಮಹಾನಾದವು ಪರಬ್ರಹ್ಮದ ಚಿತ್ಕಳೆಯೇ ಇಷ್ಟಲಿಂಗಕ್ಕೆ ಚೈತನ್ಯವಾಗಿ, ಇಷ್ಟಲಿಂಗದ ಚೈತನ್ಯ ಕಳೆಯೇ ಮನದಲ್ಲಿ ಪ್ರಾಣಲಿಂಗವಾಗುವುದಕ್ಕೆ ಆಸ್ಪದವಾಗಿ, ಮನದಲ್ಲಿ ಬೆಳಗಲ್ಪಟ್ಟ ಪ್ರಾಣಲಿಂಗವೇ ಚಿತ್ಪ್ರಾಣವನು ಒಳಕೊಂಬುವುದಕ್ಕೆ ಆಶ್ರಯವಾದ ಭಾವಲಿಂಗವಾಗಿ, ಆ ಪ್ರಾಣವನೊಳಕೊಂಡಿಪ್ಪ ಭಾವಲಿಂಗವೇ ಆತ್ಮನೊಳಕೊಂಬುವುದಕ್ಕೆ ಆಶ್ರಯವಾದ ಮಹಾಲಿಂಗವಾಗಿ ಶಾಶ್ವತವಾದ ನಿರಾಕಾರವಾದ ಪರಶಿವಲಿಂಗವು ಅಂತರಂಗ ಬಹಿರಂಗದಲ್ಲಿ ಭಿನ್ನವಿಲ್ಲವೆಂಬರ್ಥ.

(೫) ಪರಪುಟ್ಟ ನಾದವು ಎಂಬ ಲಿಂಗ ತರಗೆಲೆಗಳಿಗೊಂದೇ ಗಾಳಿ ಹಾರುತ್ತಿರ್ಪವು. ಒಂದೇ ಅನಿಲನಿಂದ ದೇಹ ಸರಪಟಿಗಳೊಳಗೆಲ್ಲ ಕರೆದಡೆ ಓ ಎಂಬಾತನೇ ಬಿಡಾಡಿ.

ಅರ್ಥ: — ಚಿದಾಕಾಶಕ್ಕೆ ಏಕಾರ್ಥವಾದ ಚಿದ್ಘನಲಿಂಗವೇ ಉಕಾರ ಪ್ರಣಮಸ್ವರೂಪವಾದ ಇಷ್ಟಲಿಂಗವಾಗಿಪ್ಪುದು. ಅಂಗದಲ್ಲಿ ಸಂಸಾರ ವಿಷಯ ರಸವರತ ಇಂದ್ರಿಯಂಗಳಿಗೆ ಇಷ್ಟಲಿಂಗ ಚೈತನ್ಯ ಸ್ವರೂಪವಾದ ಪ್ರಾಣಲಿಂಗ ಸಂಬಂಧವಾಗಿಪ್ಪುದು. ಚೈತನ್ಯ ಸ್ವರೂಪವಾದ ಪ್ರಾಣಲಿಂಗ ಸಂಬಂಧದಿಂದ ವಿಷಯಂಗಳತ್ತ ಚರಿಸುತ್ತಿದ್ದವು. ದೇಹ ಪ್ರಾಣ ಆತ್ಮಾಂಗದೊಳಗೆಲ್ಲ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವಾಗಿ

ನೆಲೆಗೊಂಡಿಪ್ಪುದು ಒಂದೇ ಬ್ರಹ್ಮವು. ಸಗುಣ ನಿರ್ಗುಣ ಮನೋ ರ್ಲಯ ನಿರಂಜನ ಪೂಜೆಗಳಿಂದಾರಾಧಿಸಿ, ಶಿವೋಹಂ, ಪ್ರಾಣೋಹಂ ಬ್ರಹ್ಮೋಹಂ, ಎಂದುಚ್ಚರಿಸಿದಡೆ, ತನ್ನ ನಿಜವನರಿವ ಜ್ಞಾನವನ ಎಚ್ಚರಿಸಿಕೊಡುವಾತನೇ ಚಿತ್ತಿಗೆ ಚೈತನ್ಯವಾದ ನಿಃಕಲ ಬ್ರಹ್ಮವು ಎಂಬುದರ್ಥ.

(೬) ಅಂಗದ ಬೊಕ್ಕಸದ ಮಂದಿರಕ್ಕೆ ಚಿಹ್ನನಲಿಂಗವೆಂಬುದೊಂದು ಬೀಗ. ತ್ರಿಗುಣವೆಂಬ ಮೂರೆಸಳಿನ ಸಿಕ್ಕು ಒಂದು ಪೂರ್ವಗತಿ ಒಂದು ಮಧ್ಯಗತಿ ಒಂದು, ಒಂದು ಉತ್ತರಗತಿಯಾಗಿ ಸಿಕ್ಕಿದವು. ಮೂರೆಸಳು ಆ ಎಸಳಿಗೆ ಘಟ ಒಂದೇ ಒಡಲು. ಎಸಳು ತೆಗೆವುದಕ್ಕೆ ಕಯ್ಯ ಕಾಣೆ. ಪ್ರೀತಿಗೈಗೆ ಎಸಳು ಅಸಾಧ್ಯ ನೋಡಾ. ಇಂತೀ ಬೀಗದ ಗುಣವ ಬಸವಣ್ಣ ಪ್ರಿಯನಾಗರೇಶ್ವರಲಿಂಗವೇ ನೀವೇ ಬಲ್ಲಿರಿ.

ಅರ್ಥಃ— ಜ್ಞಾನ ಕಾಯವನೊಳಕೊಂಡು ತೋರುವ ಸದಾ ಚಾರ ಸಂಪತ್ತಿನ ಆಚರಣೆಯುಳ್ಳ ಆಚಾರಾಂಗವೆಂಬ ಮಂದಿರಕ್ಕೆ ಸತ್ತುವಿನ ಗಟ್ಟಿಯುಪ್ಪ ಮಹಾಲಿಂಗವೆಂಬುದೊಂದು ಬೀಗವಾಗಿಪ್ಪುದು. ತ್ರಿಗುಣವೆನಿಸಿಕೊಂಬ ಕ್ರಿ ಜ್ಞಾನ ಭಾವಂಗಳೇ ಸಿಕ್ಕುಗಳಾಗಿ ಬಂಧಿ ಸಿಕೊಂಡಿರುವವು. ಸ್ಥೂಲ ತನುವಿನಲ್ಲಿ ಸತ್ಕ್ರಿಯಾಚಾರ ಸಂಬಂಧ ವಾಗಲಲ್ಲಿ ಇಷ್ಟಲಿಂಗ ಸಂಬಂಧವಾಗಿಪ್ಪುದು. ಸೂಕ್ಷ್ಮ ತನುವಿನಲ್ಲಿ ಸುಜ್ಞಾನ ಸಂಬಂಧನಾಗಲಲ್ಲಿ ಪ್ರಾಣಲಿಂಗ ಸಂಬಂಧವಾಗಿಪ್ಪುದು. ಕಾರಣ ತನುವಿನಲ್ಲಿ ಸದ್ಭಾವ ಸಂಬಂಧವಾಗಲಲ್ಲಿ ಭಾವಲಿಂಗ ಸಂಬಂ ಧವಾಗಿಪ್ಪುದು. ತನುತ್ರಯಂಗಳಲ್ಲಿ ಸಂಬಂಧವಾಗಿಪ್ಪುದು ಕ್ರಿ ಜ್ಞಾನ ಭಾವಂಗಳು. ಆ ಕ್ರಿ ಜ್ಞಾನ ಭಾವಂಗಳನೊಳಕೊಂಬುವುದಕ್ಕೆ ತನು ತ್ರಯಂಗಳೇ ಆಶ್ರಯವಾಗಿಪ್ಪುದು. ಆ ತನುತ್ರಯಂಗಳನೊಳಕೊಂಬು ವುದಕ್ಕೆ ಮಹಾಲಿಂಗ ಒಂದೇ ಆಶ್ರಯಮಾಗಿಪ್ಪುದು. ಕ್ರಿ ಜ್ಞಾನ ಭಾವ ವಿಡಿದು ಆಚರಿಸಿ ಲಿಂಗದಲ್ಲಿ ಕೂಡಿದ ಬಳಿಕ ಕ್ರಿ ಜ್ಞಾನ ಭಾವವಿಡಿದು ಆಚರಿಸುವುದಕ್ಕೆ ಸದ್ಭಾವ ಹಸ್ತವು. ಭಿನ್ನವಿಟ್ಟಲ್ಲಿ ಶೃತ ಜ್ಞಾನದಿಂದ ಅಹಂ ಬ್ರಹ್ಮವೆಂಬ ಭಿನ್ನ ಭಾವದ ಹಸ್ತಕ್ಕೆ ಕ್ರಿ ಜ್ಞಾನ ಭಾವಂಗಳು ಸಾಧ್ಯವಿಲ್ಲ ಕಂಡ್ಯಾ. ಇಂತೀ ಮಹಾಲಿಂಗದ ಆಚರಣೆಯನು ಬಸವೇ ಶ್ವರನಲ್ಲಿ ಪ್ರೀತಿಯುಳ್ಳ ಆತ್ಮಕರ್ತುವಾದ ಪರಶಿವಲಿಂಗನೇ ನಿಮಗೆ ತಿಳಿ ಯಬರುವುದೆಂದರ್ಥ.

(೭) ಉದಗದ ಬಾವಿಯಲ್ಲಿ ಒಂದು ರಸದ ಗರಿ ಹುಟ್ಟಿ ಹೊಸ ಮಾಣಿಕ್ಯವ ನುಂಗಿತ್ತ ಕಂಡೆ. ನುಂಗುವಾಗ ಒಂದು, ಗುಟುಕಿಸುವಾಗ ಎರಡು, ಸ್ವಸ್ಥಾನದಲ್ಲಿ ನಿಂದಾಗ ಮೂರು, ಅಂತರಂಗವ ತಿಳಿದು ಕಳೆಯ ಬಲ್ಲಡೆ ನಿಷ್ಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವ.

ಅರ್ಥ ಚಿತ್ತದ ಭಾವದಲ್ಲಿ ಒಂದು ಶಿವಾಪೇಕ್ಷೆ ಎಂಬ ಅದ್ರಿ ಉಂಟಾಗಿ ನೂತನವಾದ ಮಹಾ ಪ್ರಕಾಶವನುಳ್ಳ ಮಹಾಲಿಂಗವನೇ ತ್ರಿವಿಧಾಂಗದಲ್ಲಿ ತ್ರಿವಿಧಲಿಂಗವಾಗಿ ಗ್ರಹಿಸಿಕೊಂಡಿಪ್ಪನು. ದೀಕ್ಷಾತ್ರಯಂಗಳಿಂದ ಗ್ರಹಿಸುವಾಗ ಒಂದನೆಯದಾದ ಇಷ್ಟಲಿಂಗವು ಅಂಗದಲ್ಲಿ ಸಂಬಂಧವಾಗಿರ್ಪುದು. ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ ಜ್ಞಾನದಿಂದ ಗ್ರಹಿಸುವಾಗ ಎರಡನೆಯದಾದ ಪ್ರಾಣಲಿಂಗವು ಮನದಲ್ಲಿ ಸಂಬಂಧವಾಗಿಪ್ಪುದು. ನಿರ್ಗುಣ ಪೂಜಾ ಕ್ರಿಯೆಗಳನ್ನು ಕೈಕೊಂಡು ಆತ್ಮನಲ್ಲಿ ನೆಲೆಗೊಂಬಾಗ ಮೂರನೆಯದಾದ ಭಾವಲಿಂಗವಾಗಿ ಸಂಬಂಧವಾಗಿಪ್ಪುದು ತ್ರಿವಿಧಲಿಂಗ ಸಂಬಂಧದ ಒಪ್ಪವನರಿದು ತನುತ್ರಯಂಗಳ ವರ್ತನೆಯ ನಷ್ಟವ ಮಾಡಬಲ್ಲಡೆ ತ್ರಿವಿಧ ಲಿಂಗವನೊಳಕೊಂಡು ತೋರುವ ಮಹಾಲಿಂಗವೇ ತಾನೆಂದು ತಿಳಿಯಬಲ್ಲನೆಂಬರ್ಥ.

(೮) ಗುರು ಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ ಆಯತ ಲಿಂಗ. ಆ ಇಷ್ಟಲಿಂಗದ ಭಾವ ಮನೋವೇದ್ಯವಾದಲ್ಲಿ ಸ್ವಾಯತಲಿಂಗ. ಆ ಇಷ್ಟಲಿಂಗದ ಭಾವ, ಮನೋವೇದ್ಯ ಸುಖವು ಭಿನ್ನವಾಗಿ ತೋರದೆ ಅನುಪಮ ಪರಿಣಾಮ ಪರಿಪೂರಿತವಾದಲ್ಲಿ ಸನ್ನಿಹಿತಲಿಂಗ. ಇಂತು ಇಷ್ಟ ಪ್ರಾಣ ಭಾವಲಿಂಗಂಗಳು ತನುತ್ರಯಂಗಳಲ್ಲಿ ಆಯತ, ಸ್ವಾಯತ, ಸನ್ನಿಹಿತಂಗಳಾಗಲು, ಆ ಶರಣನ ಷಡಂಗದಲ್ಲಿ ಷಡ್ವಿಧ ಲಿಂಗ ಸಂಬಂಧವಾದುದೇ ಷಟ್‌ಸ್ಥಲಂಗಳೆಂದು ಪ್ರಭುದೇವರು ನಿರೂಪಿಸಿದರು.

(೯) ಆಯತ ಲಿಂಗಸಂಬಂಧವಿಲ್ಲದಾತ ಅಂಗಭವಿ. ಸ್ವಾಯತ ಲಿಂಗಸಂಬಂಧವಿಲ್ಲದಾತ ಮನ ಭವಿ. ಇದು ಕಾರಣ ಆಯತಲಿಂಗವು ಅಂಗದಲ್ಲಿ ಅಳವಡಿಸಿ, ಸ್ವಾಯತ ಲಿಂಗವು ಮನದಲ್ಲಿ ಅಳವಡಿಸಿ, ಸನ್ನಿ

ಹಿತ ಲಿಂಗವು ಆತ್ಮನಲ್ಲಿ ಅಳವಡಿಸಿ, ಅಂಗ ಪ್ರಾಣದಲ್ಲಿ ಲಿಂಗವ ಧರಿಸಿ ಹೆರೆಹಿಂಗದಿರ್ದೆನಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೧೦) ಎನ್ನ ಸ್ಥೂಲ ತನುವಿಂಗೆ ಸಿಲೆಯ ಮರೆಯಲ್ಲಿ ನಿಂದು, ಎನ್ನ ಘಟದಲ್ಲಿ ಮೂರ್ತಿಗೊಂಡು, ಬಾಹ್ಯ ಕ್ರಿಯಾರ್ಚನೆ ಪೂಜನೆಗಳಿಂದ ಆ ಸ್ಥೂಲತನುವ ಶುದ್ಧ ಮಾಡಿದೆ. ಎನ್ನ ಸೂಕ್ಷ್ಮ ತನುವಿಂಗೆ ಭಾವದ ಕೊನೆಯಲ್ಲಿ ಅರಿವಾಗಿ ಬಂದು ಆತನ ಪ್ರಕೃತಿ ಎಂಬ ತೆರನ ತೀರ್ಚಿ, ಸರ್ವೇಂದ್ರಿಯಂಗಳಲ್ಲಿ ನಿಂದು, ಆ ಸೂಕ್ಷ್ಮ ತನುವ ಸುದ್ಧ ಮಾಡಿದೆ. ಎನ್ನ ಕಾರಣ ತನುವಿಂಗೆ ಇಂದ್ರ ಮಹೇಂದ್ರ ಜಾಲದಂತೆ, ಮರೀಚಿಕಾ ಜಲದಂತೆ, ವಿದ್ಯುಲ್ಲತೆಯ ಸಂಚದ ಶಂಕೆಯ ಬೆಳಗಿನಂತೆ, ಸುಷುಪ್ತಿಯಲ್ಲಿ ನಿಂದು ಮರಪೆಯಿಂದ ಮಗ್ನನಾಗಲೀಸದೆ, ಚಿತ್ತುವಿಂಗೆ ಚಿತ್ತಾಗಿ, ನೀನೇ ಮೂರ್ತಿಗೊಂಡೆಯಲಾ. ಇಂತೀ ತ್ರಿವಿಧ ಸ್ವರೂಪಿನಿಂದ ತ್ರಿವಿಧಾಂಗ ಭರಿತನಾಗಿ ತ್ರಿವಿಧ ಸ್ವರೂಪು ನೀನೆಲಾ. ಭಕ್ತಿ ಕಾರಣವಾಗಿ ಶಂಭುಗಿಂದಿತ್ತ ಸ್ವಯಂಭುವಿಂದತ್ತ ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು.

(೧೧) ಸ್ಥೂಲದಿಂದ ದೃಷ್ಟ, ಸೂಕ್ಷ್ಮದಿಂದ ಅದರ ಸುಸಂಗ, ಕಾರಣದಿಂ ವಾಯುಭ್ರಮೆ. ಇಂತೀ ತನುತ್ರಯಂಗಳ ಕಳೆದು ನಿಜದ ಉಳಿಮೆಯಲ್ಲಿ ಒಡಗೂಡಬೇಕು ವೀರಶೂರ ರಾಮನಾಥನಾ.

ಅರ್ಥ:— ಸಾಕಾರವಾದ ಇಷ್ಟಲಿಂಗ ಸಂಬಂಧದಿಂದ ಸ್ಥೂಲತನುವಿನ ಪ್ರಪಂಚು, ನಿರಾಕಾರವಾದ ಪ್ರಾಣಲಿಂಗ ಸಂಬಂಧದಿಂದ ಸ್ಥೂಲ ತನುವಿನೊಡನೆ ಕೂಡಿದ ಸೂಕ್ಷ್ಮ ತನುವಿನ ಪ್ರಪಂಚು, ಇಷ್ಟಲಿಂಗ ಪ್ರಾಣ ಲಿಂಗಕ್ಕೆ ಕಾರಣವಾದ ಭಾವಲಿಂಗ ಸಂಬಂಧದಿಂದ ಕಾರಣ ತನುವಿನ ಪ್ರಪಂಚು, ಈ ತ್ರಿವಿಧಲಿಂಗ ಸಂಬಂಧದಿಂದ ತನುತ್ರಯಂಗಳ ಪ್ರಪಂಚನು ಬೇರ್ಪಡಿಸಿ, ತ್ಯಾಗಾಂಗ, ಭೋಗಾಂಗ, ಯೋಗಾಂಗ ಸ್ವರೂಪವನೆಯ್ದಿಸಿ ತಾನು ತ್ರಿವಿಧಾಂಗದಲ್ಲಿ ಉಳಿಮೆಯಾದ ತ್ರಿವಿಧಲಿಂಗಪೂಜೆಯಲ್ಲಿಂದ ಮಹಾಘನ ಲಿಂಗದಲ್ಲಿ ಸಮರಸವಾಗಬೇಕೆಂಬುದರ್ಥ.

(೧೨) ಕಯ್ಯಲ್ಲಿ ಕುರಿತು ಹಿಡಿದು ಕಣ್ಣಿನಲ್ಲಿ ನೋಡಿ, ಆತ್ಮನಲ್ಲಿ ಅರಿದು, ತನ್ನ ತಾನೇ ತಿಳಿದು ಕಯ್ಯಲ್ಲಿದ್ದುದೇನು, ಕಣ್ಣಿನಲ್ಲಿ

ನೋಡಿದುದೇನು, ಆತ್ಮನಲ್ಲಿ ಅರಿದುದೇನು, ಇಂತೀ ತ್ರಿವಿಧ ಗುಣವ ತಿಳಿಯಬೇಕಣ್ಣಾ. ಕಯ್ಯಲಿದ್ದುದು ಕಡದ ಲಿಂಗವೊ? ಕಣ್ಣಿನಲ್ಲಿ ನೋಡಿದುದು ಬಣ್ಣದ ಲಿಂಗವೊ? ಆತ್ಮನಿಂದರಿದುದು ಬಯಲ ಲಿಂಗವೋ? ಕೈಗೂ, ಕಣ್ಣಿಗೂ, ಮನಕ್ಕೂ, ಭಿನ್ನವಾಯಿತ್ತು. ಲಿಂಗ ಪ್ರಾಣಿ, ಪ್ರಾಣ ಲಿಂಗಿಗಳ ಇನ್ನಾರನೂ ಕಾಣೆ. ಭಾವಿಸಲಿಲ್ಲ. ಭ್ರಮೆಗೊಳಗಾಯಿತ್ತು. ಆದಿಯ ಶರಣರೆಲ್ಲರೂ ಹೋದರಲ್ಲಾ ಹೊಲಬುಗೆಟ್ಟು. ನಾದಕ್ಕೊಳಗಾಯಿತ್ತು. ಆತ್ಮನ ಕಳೆಯನೆಯ್ದಿದರಿನ್ನಾರನೂ ಕಾಣೆ. ಕಳಾತೀತ ಪರಂಜ್ಯೋತಿ ಪ್ರಕಾಶ ನೀನೆ ನಿಷ್ಕಳಂಕಮಲ್ಲಿಕಾರ್ಜುನಾ.

ಅರ್ಥಃ—ಹಸ್ತದಲ್ಲಿ ಇಷ್ಟಲಿಂಗವನು ಕುರುಹಿಟ್ಟು ಪಿಡಿದು ಸುಜ್ಞಾನ ದೃಷ್ಟಿಯಲ್ಲಿ ಪ್ರಾಣಲಿಂಗವ ನಿರೀಕ್ಷಿಸಿ, ಆತ್ಮನಲ್ಲಿ ಭಾವಲಿಂಗದ ಸಂಬಂಧವ ತಿಳಿದು, ತಮ್ಮ ಜ್ಞಾನದಿಂದ ತಾವೇ ಅರಿದು, ನಾವು ತ್ರಿವಿಧ ಲಿಂಗ ಸಂಬಂಧಿಗಳೆಂದು ಹೇಳುತ್ತಿಹರು. ಕೈಯ್ಯಲಿರುವದು ಇಷ್ಟಲಿಂಗವೆಂದು ಜ್ಞಾನದೃಷ್ಟಿಯಲ್ಲಿ ನೋಡಿದುದು ಪ್ರಾಣಲಿಂಗವೆಂದು, ಆತ್ಮನಲ್ಲಿ ತಿಳಿದುದು ಭಾವಲಿಂಗವೆಂದು ಈ ತ್ರಿವಿಧಲಿಂಗ ಒಂದೇ ಎಂಬ ಸಮರಸ ಭಾವವನರಿಯಬೇಕು. ಎಲೇ ಹಿರಿಯರುಗಳಿರಾ, ಕಯ್ಯಲ್ಲಿರುವುದು ಪಂಚಸೂತ್ರ ಪ್ರಮಾಣದಿಂದ ಕಟೆದು, ತಿದ್ದಿ, ತೀರ್ಚಿ, ಒಪ್ಪವಿಟ್ಟುದು ಲಿಂಗವೆಂದಲ್ಲಿ ಅಹುದು ಎಂಬರು. ಸುಜ್ಞಾನ ದೃಷ್ಟಿಯಲ್ಲಿ ನಿರೀಕ್ಷಿಸಿದುದು ಸಾಕಾರ ನಿರಾಕಾರದೊಡನೆ ಕೂಡಿದ ಮಂತ್ರಮೂರ್ತಿಯಾದ ಪ್ರಾಣ ಲಿಂಗವು ಎಂದಲ್ಲಿ ಅಹುದು ಎಂಬರು. ಆತ್ಮನಿಂದ ತಿಳಿದು ನಿರಾಕಾರವಾದುದು ಭಾವಲಿಂಗವು ಎಂಬಲ್ಲಿ ಅಹುದು ಎಂಬರು. ಕಯ್ಯಲ್ಲಿಪ್ಪ ಇಷ್ಟಲಿಂಗಕ್ಕೂ, ಸುಜ್ಞಾನದಲ್ಲಿ ನೋಡಿದ ಪ್ರಾಣಲಿಂಗಕ್ಕೂ, ಆತ್ಮನಲ್ಲಿ ತಿಳಿದ ಭಾವಲಿಂಗಕ್ಕೂ, ಬೇರಾಯಿತ್ತು. ಪ್ರಾಣಲಿಂಗದಲ್ಲಿ ಪ್ರಾಣವು ಕೂಡಿ, ಪ್ರಾಣದಲ್ಲಿ ಪ್ರಾಣಲಿಂಗವು ಕೂಡಿ, ಪ್ರಾಣ ಪ್ರಾಣಲಿಂಗ ಸಮರಸವುಳ್ಳವರ ಒಬ್ಬರನೂ ಕಾಣೆನು. ತ್ರಿವಿಧಲಿಂಗವು ಒಂದೇ ಎಂಬ ಸಮರಸ ಭಾವದಿಂದೆ ಭಾವಿಸಲಿಲ್ಲ. ಭಿನ್ನ ಭಾವಿಗಳು ಭಿನ್ನ ಭಾವ ಭ್ರಾಂತಿಗೆ ಈಡಾದರು. ಜ್ಞಾನಿಗಳೆನಿಸಿಕೊಂಬ ಶರಣರುಗಳೆಲ್ಲರು ಸತ್ಪಥ ಮಾರ್ಗಕ್ಕೆ ವಿಲಕ್ಷಣರಾಗಿ ಭಿನ್ನ ಭಾವಿಗಳಾಗಿ ಹೋದರಲ್ಲಾ. ಇವರೆಲ್ಲರು ಪ್ರಾಣನ ಪ್ರಪಂಚಿಗೆ ಒಳಗಾದರು. ಆತ್ಮನಲ್ಲಿ ಬೆಳಗುವ ಮಹಾ

ಲಿಂಗವೇ ಇಷ್ಟ ಪ್ರಾಣ ಭಾವಲಿಂಗವಾಗಿಪ್ಪುದೆಂದರಿದು ತ್ರಿವಿಧ ಭಕ್ತಿ ವಿಡಿದು, ಆಚರಿಸಿ, ಮಹಾಲಿಂಗದಲ್ಲಿ ಕೂಡುವರನೊಬ್ಬರನೂ ಕಾಣೆ. ಪರಂಜ್ಯೋತಿ ಪ್ರಕಾಶವನುಳ್ಳ ಮಹಾಲಿಂಗವೇ, ನೀನು ಪ್ರಾಣನ ವರ್ತನೆ ಇಲ್ಲದ ಚಿತ್ಪ್ರಾಣನಲ್ಲಿ ಪ್ರಾಣಲಿಂಗವಾಗಿಪ್ಪೆ. ದೇಹದ ವರ್ತನೆ ಇಲ್ಲದ ಆಚಾರ ಲಿಂಗದಲ್ಲಿ ಇಷ್ಟಲಿಂಗವಾಗಿಪ್ಪೆ, ಆತ್ಮನ ವರ್ತನೆ ಇಲ್ಲದ ಚಿದಾತ್ಮನಲ್ಲಿ ಭಾವಲಿಂಗವಾಗಿಪ್ಪೆ, ಎಂದರಿದು ಸಮರಸದಿಂದ ಆಚರಿಸುತ್ತಿರುವನೆಂಬುದರ್ಥ.

(೧೩) ಹೊರಸವಿ, ಒಳಸವಿ, ತೀರಾಸವಿ. ಹೊರಸವಿಯಿಂದ ಬ್ರಹ್ಮ ಸತ್ತ, ಒಳಸವಿಯಿಂದ ವಿಷ್ಣು ಸತ್ತ, ತೀರಾಸವಿಯಿಂದ ರುದ್ರ ಸತ್ತ, ಷಡ್ರುಚಿಯಿಂದ ಬ್ರಹ್ಮಾಂಡ ಜನರು ಸತ್ತರು. ಇಂತೀ ಸವಿಯ ಸೇವಿಸಿದಾತನೇ ನಿಜಲಿಂಗೈಕ್ಯ ನಿಃಕಳಂಕ ನಿರ್ಮಾಯ ಪ್ರಭುವೇ.

ಅರ್ಥಃ— ಉತ್ತತ್ತಿಯ ಮೇಲೆ ಕಡಿದರೆ ಸವಿ ತಟ್ಟುತ್ತಿರ್ಪುದಲ್ಲದೆ, ಒಳಗೆ ಕಡಿದರೆ ಮಹಾ ಕಠಿಣವಾಗಿ ತೋರುವ ಹಾಗೆ, ಇಷ್ಟಲಿಂಗವನು ಇದಿರಿಟ್ಟು ಅಷ್ಟ ವಿಧಾರ್ಚನೆ ಷೋಡಶೋಪಚಾರವನು ಮಾಡಿದಡೆ ಭಿನ್ನ ಭಾವದ ಜೀವಾತ್ಮರಿಗೆ ಮಹಾ ರಮ್ಯವಾಗಿ ತೋರುವದು. ಆ ಇಷ್ಟಲಿಂಗದ ಚಿತ್ಕಳೆಯನು ಅಂತರಂಗಕ್ಕೆ ವೇಧಿಸು ಎಂದಡೆ ಕರ್ಮಕಾಂಡಿಗೆ ಅಸಾಧ್ಯವಾಗಿ ತೋರುತ್ತಿಹುದೆಂಬುದೀಗ ಹೊರ·ಸವಿ ಎಂಬ ಶಬ್ದಕ್ಕರ್ಥ. ತೆಂಗಿನಕಾಯಿಯ ಮೇಲೆ ಕಡಿದಡೆ ಕಠಿಣವಾಗಿ ತೋರುವದು. ಒಡೆದು ಒಳಗೆ ನೋಡಿದಡೆ, ರುಚಿಯಾಗಿ ತೋರುವುದು. ಹಾಗೆ ದೇಹ ಭಾವವನಳಿಯದೆ, ಪ್ರಾಣಲಿಂಗದಲ್ಲಿ ಸಮರಸ ಭಕ್ತಿ ಎಂಬುದು ಕರ್ಮಕಾಂಡದ ವೇದಾಂತಿ, ಯೋಗಮಾರ್ಗಿ ಸಿದ್ಧಾಂತಿಗಳಿಗೆ ಅಸಾಧ್ಯ. ಆ ದೇಹ ಭಾವ ಸತ್ಕ್ರಿಲಿಂಗದಲ್ಲಿ ಅಳಿದು ಸುಜ್ಞಾನ ಸ್ವರೂಪವಾದ ಪ್ರಾಣಲಿಂಗದಲ್ಲಿ ಅವಿರಳ ಸಂಬಂಧಿಯಾದ ಜ್ಞಾನ ಕಲಾತ್ಮಂಗೆ ಶಿವಸುಖ ಮಹಾನಂದವಾಗಿ ತೋರುವದೆಂಬುದೀಗ ಒಳ ಸವಿ ಎಂಬ ಶಬ್ದಕ್ಕರ್ಥ. ಬೆಲ್ಲದ ಪೆಂಟೆಯ ಯಾವ ಕಡೆಗೆ ಕಡೆದಡೆಯೂ ರುಚಿಯಾಗಿ ತೋರುವುದಲ್ಲದೆ, ಕಹಿಯಾಗಿ ತೋರದು. ಹಾಗೆ ಇಷ್ಟ ಪ್ರಾಣವನೊಳಕೊಂಡ ಭಾವಲಿಂಗದಲ್ಲಿ ಸಮರಸವಾದ ಶಿವಜ್ಞಾನಿಗಳು ಇಂದ್ರಿಯಂಗಳ ಶ್ರೀಗುರು ಆವಕಡೆಗೆ ಮುಟ್ಟಿ ನೋಡಿದಡೆಯೂ ಅಮೃತ

ಮಯಮಾಗಿ ತೋರುವುದಲ್ಲದೆ ಸಂಸಾರಸಾರವಾಗಿ ತೋರಲಿಲ್ಲವೆಂ ಬುದೀಗ ತೀರಾ ಸವಿ ಎಂಬ ಶಬ್ದಕ್ಕರ್ಥ. ಚಿದಂಶಿಕನಾದ ಜ್ಞಾನ ಕಲಾತ್ಮನು ಇಷ್ಟಲಿಂಗವನು ಬ್ರಹ್ಮತತ್ವಾಂಶಿಕವಾದ ಸ್ಥೂಲ ತನುವಿನಲ್ಲಿ ಸ್ವಾಯತವ ಮಾಡಿ, ಆ ಸ್ಥೂಲತನುವಿನ ಪ್ರಕೃತಿಯನು ನಷ್ಟವ ಮಾಡಿದನೆಂಬುದೀಗ ಹೊರ ಸವಿಯಿಂದ ಬ್ರಹ್ಮ ಸತ್ತನೆಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದ ಪ್ರಾಣ ಕಳಾ ಚೈತನ್ಯ ಸ್ವರೂಪವಾದ ಪ್ರಾಣ ಲಿಂಗ ವನು ವಿಷ್ಣು ತತ್ವಾಂಶಿಕ ಸೂಕ್ಷ್ಮ ತನುವಿನಲ್ಲಿ ಸ್ವಾಯತವ ಮಾಡಿ ಆ ಸೂಕ್ಷ್ಮತನು ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ ಒಳಸವಿ ಯಿಂದ ವಿಷ್ಣು ಸತ್ತನೆಂಬ ಶಬ್ದಕ್ಕರ್ಥ. ಪ್ರಾಣಲಿಂಗದ ಪರಮಾನಂದ ಸ್ವರೂಪವಾದ ಭಾವಲಿಂಗವನು ರುದ್ರ ತತ್ವಾಂಶಿಕವಾದ ಕಾರಣ ತನುವಿನಲ್ಲಿ ಸ್ವಾಯತವ ಮಾಡಿ, ಆ ತನುವಿನ ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ ತೀರಾ ಸವಿಯಿಂದ ರುದ್ರ ಸತ್ತ ಎಂಬ ಶಬ್ದಕ್ಕರ್ಥ. ಆ ಇಷ್ಟ, ಪ್ರಾಣ, ಭಾವಲಿಂಗದ ಏಕ ಸ್ವರೂಪವಾದ ಘನ ಮಹಾ ಲಿಂಗವನು ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗವನು ಮಾಡಿ ಸಂಬಂಧಿಸಿ, ಆ ಷಡ್ವಿಧಾಂಗದಲ್ಲಿರುವ ಮನ ಮೊದಲಾಗಿ ಅರುವತ್ತಾರು ಕೋಟಿ ಕರಣಂಗಳ ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ ಷಡ್ರುಚಿಯಿಂದ ಬ್ರಹ್ಮಾಂಡದ ಜನರು ಸತ್ತರು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗ ವನು ಸರ್ವಾಂಗದಲ್ಲಿ ಸಂಬಂಧವ ಮಾಡಿಕೊಂಡ ಶಿವಶರಣನು ಪ್ರಳಯ ವಿರಹಿತವಾದ ಮಹಾಲಿಂಗೈಕ್ಯವೆಂಬುದೀಗ. ಇಂಥಾ ಸವಿಯ ಸೇವಿಸಿ ದಾತ ನಿಜಲಿಂಗೈಕ್ಯ ನಿಷ್ಕಳಂಕ ನಿರ್ಮಾಯ ಪ್ರಭುವೇ ಎಂಬ ಶಬ್ದಕ್ಕರ್ಥ.

(೧೪) ಅಂಗ ಕ್ರಿಯೆನರಿವಲ್ಲಿ ಸ್ಥಾಣುವಿನ ಬಾಯ ತಿಲದಂತೆ, ಆತನ ಕಳೆಯ ತಿಳಿದಲ್ಲಿ ಆ ಶಿಲೆಯೊಳಗಿರ್ದ ಬಿಂದು ಒಲವರದಿಂದ ಜಾರು ವಂತೆ, ಆ ಅರಿವು ಮಹದಲ್ಲಿ ಬೆರಸುವಾಗ ವಾರಿ ಶಿಲೆ ನೋಡ ನೋಡಲಿಕ್ಕೆ ನೀರಾದಂತೆ, ಇರಬೇಕು. ಕಾಯವಶದಿಂದ ಕರ್ಮವ ಮೀರಿ, ಕರ್ಮ ವಶದಿಂದ ಧರ್ಮವಶದಿಂದ ವರ್ಮಗತನಾದಲ್ಲಿ ಅದೇ ಕಾಯವೆರಸಿ ಎಯ್ದಿದ ಕೈಲಾಸ. ಆ ಭಾವವ ನಿಮ್ಮಲ್ಲಿ ನೀವೆ ತಿಳಿದುಕೊಳ್ಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.

ಅರ್ಥಃ— ಎಳ್ಳನು ಗಾಣದಲ್ಲಿಕ್ಕಿ ಕ್ರಿಯಿಂದ ಬಾಧಿಸಿದಡೆ ತಿಲ ದಲ್ಲಿರ್ದ ತೈಲ ಪ್ರತ್ಯಕ್ಷವಾಗಿ ಕೈಸಾರುವಂತೆ, ಆತ್ಮಾಂಗವ ಶಿವ ಕ್ರಿಯಿಂದ ಬಾಧಿಸಿದಡೆ ಆತ್ಮಾಂತರ್ಗತವಾಗಿರ್ದ ಚಿಲ್ಲಿಂಗವು ಪ್ರತ್ಯಕ್ಷ ವಾಗಿ ಕರಸ್ಥಲದಲ್ಲಿ ಕಾಣಬಹುದೆಂಬುದೀಗ ಅಂಗಕ್ರಿಯೆಯನರಿದಲ್ಲಿ ಸ್ಥಾಣುವಿನ ಬಾಯ ತಿಲದಂತೆ ಎಂಬ ಶಬ್ದಕ್ಕರ್ಥ. ಚಂದ್ರಕಾಂತದ ಶಿಲೆಯಲ್ಲಿರ್ದ ಅಮೃತಬಿಂದು ಚಂದ್ರೋದಯಕ್ಕೊಸರುವಂತೆ ಆ ಇಷ್ಟ ಲಿಂಗಕಳೆಯನು ತನ್ನಾತ್ಮ ಕಳೆ ಎಂದು ತಿಳಿವ ಶಿವಜ್ಞಾನೋದಯವಾಗಿ ಆ ಇಷ್ಟಲಿಂಗದ ಕಳೆ ಬಲಿದು ಸರ್ವಾಂಗವ ತುಂಬಿ ಲಿಂಗಾನಂದ ಜಲ ಉಕ್ಕುತ್ತಿಹುದೆಂಬುದೀಗ ಆತ್ಮನ ಕಳೆಯ ತಿಳಿದಲ್ಲಿ ಶಿಲೆಯಲ್ಲಿರ್ದ ಬಿಂದು ಒಲವರದಿಂದ ಜಾರುವಂತೆ ಎಂಬ ಶಬ್ದಕ್ಕರ್ಥ. ಅಂತು ಕ್ರಿಯಾ ಜ್ಞಾನದಿಂದ ಲಿಂಗಾಂಗ ಸಂಬಂಧಿಯಾಗಿ ಜೀವತ್ವವಳಿದು ಶಿವೋ ಹಂವೆಂಬ ಅಹಂಭಾವದರಿವ ತನ್ನ ಶಿವತ್ವದಲ್ಲಿ ಭಕ್ತಿರತಿ ಕ್ರಿಯೆಯಲ್ಲಿ ಏಕರಸವ ಮಾಡಬೇಕೆಂಬುದೀಗ ಅರಿವು ಮಹದಲ್ಲಿ ಬೆರಸುವಾಗ ವಾರಿ ಶಿಲೆ ನೋಡ ನೋಡ ನೀರಾದಂತಿರಬೇಕು ಎಂಬ ಶಬ್ದಕ್ಕರ್ಥ. ಅಂತು ಶಿವಕ್ರಿಯಿಂದ ದೇಹವಾಸನೆಯಳಿದು ಲಿಂಗದೇಹವಾಯಿತ್ತಾಗಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮಕ್ಕೆ ಹೊರಗಾದನೆಂಬುದೀಗ ಕಾಯವಶದಿಂದ ಕರ್ಮವ ಮೀರಿ ಎಂಬ ಶಬ್ದಕ್ಕರ್ಥ. ಅಂತು ಭಕ್ತಿ ಕ್ರಿಯಿಂದ ಲಿಂಗದಲ್ಲಿ ಏಕ ರಸವಾಗಿ ಲಿಂಗವೆಯಾಗಿರ್ದ ಶರಣನೆಂಬು ದೀಗ ಕರ್ಮವಶದಿಂದ ಧರ್ಮವಶದಿಂದ ಮರ್ಮಗತನಾದಲ್ಲಿ ಎಂಬ ಶಬ್ದಕ್ಕರ್ಥ. ಅಂತು ಜೀವತತ್ವವಳಿದು ಲಿಂಗತತ್ವವಾದ ಶರಣಕಾಯವು ಲಿಂಗಕಾಯ ವಾಯಿತ್ತಾಗಿ ಶರಣಕಾಯವೇ ಕೈಲಾಸವೆಂದರಿಯಬೇಕು. ಬೇರೆ ಕೈಲಾಸಕ್ಕೆ ಹೋಗಬೇಕೆಂಬ ಸಂದೇಹವ ಬಿಟ್ಟಿರಬೇಕೆಂಬುದೀಗ ಮರ್ಮ ವಶಗತವಾದಲ್ಲಿ ಅದೇ ಕಾಯವೆರಸಿ ಎಯ್ದಿದ ಕೈಲಾಸ. ಆ ಭಾವವ ನಿಮ್ಮಲ್ಲಿ ನೀವು ತಿಳಿದುಕೊಳ್ಳಿ ಎಂಬ ಶಬ್ದಕ್ಕರ್ಥ.

(೧೫) ಸ್ಥೂಲ ತನುವ ಬಿಟ್ಟು ಕಂಡೆಹೆನೆಂದಡೆ ನೀನೇ ಪ್ರಮಾಣು, ಕ್ರಿಯಿಡಿದು ಅಂಗದಲ್ಲಿ ನಿಂದ ಕಾರಣ. ಸೂಕ್ಷ್ಮ ತನುವನೊಲ್ಲದೆ ನಿನ್ನ ನೋಡಿ ಕಂಡೆಹೆನೆಂದಡೆ ನೀವೇ ಪ್ರಮಾಣು, ಭಾವದ ಕೊನೆಯಲ್ಲಿ ಅರ್ಚಿಸಿ ಕೊಂಬೆಯಾಗಿ. ಕಾರಣ ತನುವ ಮರೆದು ನಿನ್ನ ನೋಡಿ

ಕಂಡೆಹೆನೆಂದಡೆ ನೀವೇ ಪ್ರಮಾಣು, ಚಿದಂತ್ಯ ಚಿತ್ಪ್ರಕಾಶದ ಬೆಳಗಿನಲ್ಲಿ ಕಟ್ಟುವಡೆದೆಯಾಗಿ. ಇಂತೀ ಜಾಗ್ರದಲ್ಲಿ ಕ್ರಿವಂತನಾಗಿ ಸ್ವಪ್ನದಲ್ಲಿ ಆತ್ಮ ಸ್ವರೂಪನಾಗಿ ಸುಷುಪ್ತಿಯಲ್ಲಿ ಮೂರ್ಚ್ಛೆಯಿಂದ ಅಮೂರ್ತಿಯಾಗಿ, ನಿರಳಕ್ಕೆ ನಿರಳನಾಗಿ ಪರಿಪೂರ್ಣ ವಸ್ತು ನೀನಲ್ಲಾ, ಭಕ್ತಿ ಕಾರಣನಾಗಿ. ಶಂಭುಗಿಂದತ್ತ ಸ್ವಯಂಭುಗಿಂದಿತ್ತ ಅತಿಬಳ ನೋಡಾ ಮಾತುಳಂಗ ಮಧುಕೇಶ್ವರಾ.

(೧೬) ಸದ್ಗುರು ಸ್ವಾಮಿ ಅನುಗ್ರಹಿಸಿ ಕೊಟ್ಟನೇ ಇಷ್ಟಲಿಂಗ. ಆ ಲಿಂಗವೇ ಪ್ರಾಣವ ಭೇದಿಸಿ ಪ್ರಾಣಲಿಂಗವಾಯಿತ್ತು. ಭಾವವ ಭೇದಿಸಿ ಭಾವಲಿಂಗವಾಯಿತ್ತು. ಈ ತ್ರಿವಿಧವು ಒಂದೇ ಲಿಂಗ ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

# ಮೂರು ಅಂಗಸ್ಥಲಗಳು.

(ತ್ಯಾಗಾಂಗ, ಭೋಗಾಂಗ, ಯೋಗಾಂಗ.)

(೧) ತನುಗುಣವಳಿದಲ್ಲಿ ತ್ಯಾಗಾಂಗ. ಲಿಂಗದೊಡನೆ ಸಕಲ ಸುಖಂಗಳ ಭೋಗಿಸುವಲ್ಲಿ ಭೋಗಾಂಗ. ನಿಜದಲ್ಲಿ ಬೆರೆಯಲು ಯೋಗಾಂಗ. ಇಂತೀ ತ್ರಿವಿಧದಲ್ಲಿಯೂ ಯೋಗಾಂಗ. ಇದಲ್ಲದನ್ಯ ಯೋಗಂಗಳಿಲ್ಲ ವಿಯೋಗವಯ್ಯ ಸೌರಾಷ್ಟ್ರ ಸೋಮೇಶ್ವರಾ.

(೨) ಕತ್ತಲೆ ಸತ್ತು ಬೆಳಗು ಬೀದಿವರಿಯಿತ್ತು ನೋಡಾ, ಎಲೆ ಅಮ್ಮ. ಪಂಚತತ್ವಂಗಳ ಮೇಲಿಪ್ಪ ಆಚಾರಲಿಂಗದ ನೈಷ್ಠೆಯ ಬಲದಿಂದ ಅಖಂಡಿತ ಕರಣಂಗಳನೊಳಕೊಂಡಿಪ್ಪ ಈಷಣತ್ರಯಂಗಳ ನಿಕ್ಕಿ ತ್ಯಾಗಾಂಗಿಯಾದೆ. ಹದಿನೇಳು ತತ್ವಂಗಳ ಮೇಲಿಪ್ಪ ಜಂಗಮಲಿಂಗದ ಎಚ್ಚರಿನ ಬಲದಿಂದ ಅನಂತ ಸವಿಯನೊಳಕೊಂಡಿಪ್ಪ ಷಡ್ರಸಂಗಳಲ್ಲಿ ಲಿಂಗಭೋಗೋಪಭೋಗಿಯಾಗಿ ಭೋಗಾಂಗಿಯಾದೆ ಮೂರು ತತ್ವಂಗಳ ಮೇಲಿಪ್ಪ ನಿರಾಕಾರ ಲಿಂಗದ ಅರುಹಿನ ಬಲದಿಂದ ಪ್ರಣವ ಪಂಚಾಕ್ಷರಿಯ ಸ್ಮರಿಸಿ ಮನ ಮಹಾಲಿಂಗದಲ್ಲಿ ಯೋಗವಾಗಿ ಯೋಗಾಂಗಿಯಾದೆ. ಚಿದ್ಬ್ರಹ್ಮಾಂಡದೊಳಗಣ ಏಳು ತಾವರೆಯ ಮೇಲಿಪ್ಪ ನಿಷ್ಕಳ ಚಿದ್ಬಿಂದು ಲಿಂಗಕ್ಕೆ ಪ್ರಾಣಪೂಜೆಯ ಮಾಡಿದ ಮಹಾ ಜ್ಞಾನದ ಬಲದಿಂದ ಲಿಂಗಂಗಳ ಬೆಳಗು ಪಿಂಡಾಂಡದಲ್ಲಿ ಪ್ರಭವಿಸಿ ತೋರುತ್ತಿಪ್ಪುದಾಗಿ, ನಾನು ಸರ್ವಾಂಗಲಿಂಗಿಯಾದೆನಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

(೩) ತನುತ್ರಯಂಗಳಲ್ಲಿ ತನುಮನಧನಂಗಳಲ್ಲಿ ಗುರುಲಿಂಗಜಂಗಮಕ್ಕೆ ವಂಚನೆ ಇಲ್ಲದೆ ನಿರ್ವಂಚನೆಯಿಂದ ಸಮರ್ಪಣೆಯ ಮಾಡುವಂತಹದೇ ತ್ಯಾಗಾಂಗವು. ಆ ಗುರು ಲಿಂಗ ಜಂಗಮದ ಮುಖದಿಂದುಳುಮೆಯಾಗಿ ಬಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದತ್ರಯಂಗಳ ಪಡೆದನುಭವಿಸಿ ಹೋಗುವಂತಹದೇ ಭೋಗಾಂಗವು. ತನುವೇ ಗುರುವಿನಲ್ಲಿ, ಮನವೇ ಲಿಂಗದಲ್ಲಿ, ಧನವೇ ಜಂಗಮದಲ್ಲಿ ಏಕರಸವ ಮಾಡಿಕೊಂಡಿರುವಂತಹದೇ ಯೋಗಾಂಗವು ಎನಿಸಿಕೊಂಬ ಈ ಮೂರು

ಅಂಗಸ್ಥಲವು ಸಂಬಂಧವಾಗಿ, ಸ್ವಾಯತವಾಗಿ ಎಂಬಲ್ಲಿ ಸ್ಥೂಲ ತನು ವಿನಲ್ಲಿ ತ್ಯಾಗಾಂಗವು, ಸೂಕ್ಷ್ಮತನುವಿನಲ್ಲಿ ಭೋಗಾಂಗವು, ಕಾರಣ ತನು ವಿನಲ್ಲಿ ಯೋಗಾಂಗವು ಎಂಬ ತ್ರಿವಿಧ ಅಂಗಸ್ಥಲಂಗಳು.

(೪) ವಾಗ್ಬ್ರಹ್ಮಿಗಳೆಲ್ಲರು ಪಡುವ ಪಾಟ ನೋಡಿ ನಮ್ಮ ಭಕ್ತರು ತ್ಯಾಗಾಂಗದಲ್ಲಿ ಇಷ್ಟ ಪ್ರಾಣ ಭಾವಕ್ಕೆ ಬಾಹ್ಯ ಪದಾರ್ಥರೂಪವ ಈಕ್ಷಣ ಜ್ಞಾನ ಸ್ಪರ್ಶನದಿಂದ ಅರ್ಪಿಸಿ ದೇಹ ಪ್ರಸಾದಿಯಾಗಿ ಚರ ಶೇಷದಲ್ಲಿ ಇಷ್ಟಲಿಂಗಪೂಜಕರಾಗಿ ಅನಿಷ್ಟವ ಪರಿಹರಿಸಿದರು. ಭೋಗಾಂಗದಲ್ಲಿ ಇಷ್ಟ ಪ್ರಾಣ ಭಾವಕ್ಕೆ ದೇಹ ಪದಾರ್ಥರೂಪವ ರೂಪುರುಚಿ ತೃಪ್ತಿ ಯಿಂದ ಅರ್ಪಿಸಿ ಪ್ರಾಣ ಪ್ರಸಾದಿಯಾಗಿ ಲಿಂಗಶೇಷದಲ್ಲಿ ಪ್ರಾಣಲಿಂಗ ಸೃಷ್ಟಿಕರಾಗಿ ವಾಯು ಗುಣವಿಕಾರವ ಕೆಡಿಸಿದರು. ಯೋಗಾಂಗದಲ್ಲಿ ಇಷ್ಟ ಪ್ರಾಣ ಭಾವಕ್ಕೆ ವಾಯು ಪದಾರ್ಥ ರೂಪವ ಸ್ಥೂಲ ಸೂಕ್ಷ್ಮ ಕಾರಣದಿಂದ ಅರ್ಪಿಸಿ ಮಹಾ ಪ್ರಸಾದಿಯಾಗಿ ಗುರುಶೇಷದಲ್ಲಿ ಮನೋ ಗುಣ ವಿಕಾರವ ಪರಿಹರಿಸಿದರು ಗುಹೇಶ್ವರಲಿಂಗದಲ್ಲಿ.

---

# ಆರು ಲಿಂಗಸ್ಥಲಗಳು.

(ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ.)

(೧) ಭಕ್ತಂಗೆ ಲಿಂಗವಾವುದು, ಮಹೇಶ್ವರಂಗೆ ಲಿಂಗವಾವುದು, ಪ್ರಸಾದಿಗೆ ಲಿಂಗವಾವುದು, ಪ್ರಾಣಲಿಂಗಿಗೆ ಲಿಂಗವಾವುದು, ಶರಣಂಗೆ ಲಿಂಗವಾವುದು, ಐಕ್ಯಂಗೆ ಲಿಂಗವಾವುದು ಎಂದಡೆ, ಲಿಂಗಸ್ಥಲದ ಭೇದವ ಹೇಳಿಹೆನಯ್ಯ. ಭಕ್ತಂಗೆ ಆಚಾರಲಿಂಗ, ಮಹೇಶ್ವರಂಗೆ ಗುರುಲಿಂಗ, ಪ್ರಸಾದಿಗೆ ಶಿವಲಿಂಗ, ಪ್ರಾಣಲಿಂಗಿಗೆ ಜಂಗಮಲಿಂಗ, ಶರಣಂಗೆ ಪ್ರಸಾದಲಿಂಗ, ಐಕ್ಯಂಗೆ ಮಹಾಲಿಂಗ ಎಂದು ಹೇಳಲ್ಪಟ್ಟಿತ್ತಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೨) ಇಂತೀ ಷಡ್ವಿಧಲಿಂಗಂಗಳಿಗೆ, ಶಕ್ತಿಗಳಾವವೆಂದಡೆ, ಆಚಾರ ಲಿಂಗಕ್ಕೆ ಕ್ರಿಯಾಶಕ್ತಿ, ಗುರುಲಿಂಗಕ್ಕೆ ಜ್ಞಾನಶಕ್ತಿ, ಶಿವಲಿಂಗಕ್ಕೆ ಇಚ್ಛಾ ಶಕ್ತಿ, ಜಂಗಮಲಿಂಗಕ್ಕೆ ಆದಿಶಕ್ತಿ, ಪ್ರಸಾದಲಿಂಗಕ್ಕೆ ಪರಾಶಕ್ತಿ, ಮಹಾ ಲಿಂಗಕ್ಕೆ ಚಿತ್‌ಶಕ್ತಿ, ಇಂತೀ ಶಕ್ತಿಗಳು. ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕಯ್ಯ.

(೩) ಕ್ರಿಯಾಶಕ್ತಿ:— ಕ್ರಿಯಾಶಕ್ತಿಯ ಮಥನದಿಂದ, 'ಶಕ್ತಿಶ್ಚದ್ವಿ ವಿಧಾಪ್ರೋಕ್ತಾ' ಎಂದು ಹೇಳುತ್ತಿಹುದಾದ ಕಾರಣ ಕ್ರಿಯಾಶಕ್ತಿ ಎರಡು ತೆರನಾಗಿರುತ್ತಿಹಳು. ಅದು ಹೇಗೆಂದಡೆ, ಲೋಕದಾತ್ಮರುಗಳಿಗೆ ಅಸಿ, ಮಸಿ, ಕೃಷಿ, ವಾಣಿಜ್ಯ, ಯಾಚನೆ, ಗೋಪಾಲತ್ವವೆಂಬ ಷಟ್‌ಕೃಷಿಗಳನ್ನೇ ಮಾಡಿಕೊಡುತ್ತಿಹಳು. ಇತ್ತ ಗುರುಕಾರುಣ್ಯವ ಪಡೆದು, ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ಗುರುಭಕ್ತಿ ಲಿಂಗಪೂಜೆ, ಜಂಗಮದಾಸೋಹ, ಮುಂತಾದ ಸತ್ಕೃತ್ಯವನ್ನುಂಟುಮಾಡಿ ಕೊಡುತ್ತಿಹಳು. ಈ ರೀತಿಯಲ್ಲಿ ಕ್ರಿಯಾಶಕ್ತಿ ಎರಡು ತೆರನಾಗಿರುತ್ತಿಹಳು. ವಾಗಾದಿ ಕರ್ಮೇಂದ್ರಿಯಂಗಳೈದು ಕ್ರಿಯಾಶಕ್ತಿಸ್ವರೂಪದಿಂದ ಇದ್ದಿತಾದ ಕಾರಣ ಆ ಕ್ರಿಯಾಶಕ್ತಿ ಸ್ವರೂಪವಾದ ವಾಗಾದಿ ಕರ್ಮೇಂದ್ರಿಯಂಗಳೊಳಗೆ 'ಶಿವಾ' ಎಂಬುದೇ ವಾಕ್ಯ, ಶಿವಾಚಾರ ದೃಢಪಡಿಸುವದೇ

ಪಾಣಿ, ಗುರುಮಾರ್ಗಾಚಾರದಲ್ಲಿ ಆಚರಿಸುವದೇ ಪಾದ, ಅಧೋಗತಿ ಗೆಳಿವ ಮಲತ್ರಯಂಗಳ ಬಿಡುವುದೇ ಪಾಯು, ಶಿವಾನುಭಾವಿಗಳ ಸತ್ಸಂಗದಲ್ಲಿ ಸದಾ ಆನಂದಿಸುವದೇ ಗುಹ್ಯವಾಗಿ ಈ ರೀತಿಯಲ್ಲಿ ವಾಗಾದಿ ಕರ್ಮೇಂದ್ರಿಯಂಗಳೈದು ನಿವೃತ್ತಿಯಾದುದೇ ಕ್ರಿಯಾಶಕ್ತಿ.

ಜ್ಞಾನಶಕ್ತಿಃ— ಜ್ಞಾನಶಕ್ತಿಯು ಮಥನದಿಂದ 'ಶಕ್ತಿಶ್ಚ ದ್ವಿವಿಧಾ ಪ್ರೋಕ್ತಾ' ಎಂದು ಜ್ಞಾನಶಕ್ತಿ ಎರಡು ತೆರನಾಗಿರುತ್ತಿಹಳು. ಅದು ಹೇಗೆಂದೊಡೆ, ಲೋಕದಾತ್ಮರುಗಳಿಗೆ, ಗುರು ನರ, ಲಿಂಗವು ಸಿಲೆ, ಜಂಗಮವು ಮನುಜ, ಪಾದೋದಕ ನೀರು, ಪ್ರಸಾದ ಎಂಜಲು ಎಂಬ ಅಜ್ಞಾನವನ್ನೇ ಪ್ರೇರಿಸಿಕೊಡುತ್ತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ನಿಃಕಲ ಬ್ರಹ್ಮದ ಸದ್ರೂಪವೇ ಗುರು, ಚಿದ್ರೂಪವೇ ಲಿಂಗ, ಆನಂದವೇ ಜಂಗಮ, ನಿತ್ಯತ್ವವೇ ಪ್ರಸಾದ, ಪರಿಪೂರ್ಣತ್ವವೇ ಪಾದೋದಕವೆಂದರಿವ ಸುಜ್ಞಾನವನ್ನೇ ಪ್ರೇರಿಸಿಕೊಡುತ್ತಿಹಳು. ಈ ರೀತಿಯಲ್ಲಿ ಜ್ಞಾನಶಕ್ತಿ ಎರಡು ತೆರನಾಗಿರುತ್ತಿಹಳು. ಮತ್ತಂತುಮಲ್ಲದೆ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ಜ್ಞಾನಶಕ್ತಿಯ ಸ್ವರೂಪವೆಂದಿದ್ದ ಕಾರಣ ಆ ಜ್ಞಾನಶಕ್ತಿಯ ಸ್ವರೂಪವಾದ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೊಳಗೆ ಶ್ರೋತ್ರದಲ್ಲಿ ಶಿವಕಥೆ ಶಿವಪುರಾಣ ಆದ್ಯರ ವಚನವಲ್ಲದೆ ಅನ್ಯವಪ್ಪ ಮಾಯಾಕುಶಾಸ್ತ್ರ ಕುಭಾಷೆಗಳಂ ಕೇಳದಿಹುದು. ತ್ವಕ್ಕಿನಲ್ಲಿ ಶ್ರೀವಿಭೂತಿ ರುದ್ರಾಕ್ಷಿ ಶಿವಲಿಂಗ ಧಾರಣವಲ್ಲದೆ ಅನ್ಯವಪ್ಪ ಮಾಯಾ ಚೋಹಂಗಳಂ ಧರಿಸದಿರುವುದು. ನೇತ್ರದಲ್ಲಿ ಶಿವಲಿಂಗ ನಿರೀಕ್ಷಣೆಯಲ್ಲದೆ ಅನ್ಯವಪ್ಪ ಮಾಯಾ ಕುರೂಪಂಗಳಂ ನೋಡದಿಹುದು. ಜಿಹ್ವೆಯಲ್ಲಿ ಶಿವಸುಖಪ್ರಸನ್ನವಪ್ಪ ಪ್ರಸಾದವ ಸ್ವೀಕರಿಸುವದಲ್ಲದೆ, ಅನ್ಯವಪ್ಪ ಮಾಯೋಚ್ಛಿಷ್ಟಂಗಳಂ ಭುಂಜಿಸದಿಹುದು. ಘ್ರಾಣದಲ್ಲಿ ಶಿವನಿರ್ಮಾಲ್ಯ ಗಂಧವಲ್ಲದೆ ಅನ್ಯವಪ್ಪ ಮಾಯಾ ದುರ್ವಾಸನೆಯ ಘ್ರಾಣಿಸದಿಹುದು. ಈ ರೀತಿಯಲ್ಲಿ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ನಿವೃತ್ತಿಯಾದುದೇ ಜ್ಞಾನಶಕ್ತಿ.

ಇಚ್ಛಾಶಕ್ತಿಃ— ಇಚ್ಛಾಶಕ್ತಿಯು ಮಥನದಿಂದ, 'ಶಕ್ತಿಶ್ಚದ್ವಿವಿಧಾ ಪ್ರೋಕ್ತಾ' ಎಂದು ಹೇಳುತ್ತಿಹುದಾದ ಕಾರಣ, ಇಚ್ಛಾಶಕ್ತಿ ಎಂಬಾಕೆ ಎರಡು ತೆರನಾಗಿಹಳು. ಅದು ಹೇಗೆಂದಡೆ, ಲೋಕದಾತ್ಮರುಗಳಿಗೆ

ಹುಸಿ, ಕಳವು, ಪರದಾರ, ಪರಹಿಂಸೆ, ಅತಿಕಾಂಕ್ಷೆ ಎಂಬ ಪಂಚಮಹಾ ಪಾತಕಂಗಳ ಮೇಲಣೆಚ್ಚೆಯನ್ನಿಂಟುಮಾಡಿಕೊಡುತ್ತಿಹಳು. ಇತ್ತ ಗುರು ಕಾರಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸು ವಂತಹ ಶಿವಶರಣರುಗಳಿಗೆ ಪಂಚಾಚಾರದ ಮೇಲಣೆಚ್ಚೆಯನ್ನಿಂಟು ಮಾಡಿಕೊಡುತ್ತಿಹಳು. ಮತ್ತಂತುಮಲ್ಲದೆ ಶಬ್ದಾದಿ ವಿಷಯಂಗಳೈದು ಇಚ್ಛಾಶಕ್ತಿಯ ಸ್ವರೂಪು ಎಂದಿದ್ದಿತಾದ ಕಾರಣ ಆ ಇಚ್ಛಾಶಕ್ತಿಯ ಸ್ವರೂಪವಾದ ಶಬ್ದ ವಿಷಯಂಗಳೊಳಗೆ ಶಬ್ದ ಗುರು, ಸ್ಪರ್ಶನ ಲಿಂಗ, ರೂಪು ಶಿವಲಾಂಛನ, ರಸ ಶಿವಪ್ರಸಾದ ಸೇವನೆ, ಶಿವ ನಿರ್ಮಾಲ್ಯ ಗಂಧವಾಗಿ, ಶಬ್ದಾದಿ ವಿಷಯಂಗಳೈದು ನಿವೃತ್ತಿಯಾದುದೇ ಇಚ್ಛಾಶಕ್ತಿ.

ಆದಿಶಕ್ತಿಃ— ಆದಿಶಕ್ತಿಯ ಮಥನದಿಂದ 'ಶಕ್ತಿಶ್ಚದ್ವಿವಿಧಾಪ್ರೋಕ್ತಾ' ಎಂದು ಆದಿಶಕ್ತಿ ಎಂಬಾಕೆಯು ಎರಡು ತೆರನಾಗಿರುತಿಹಳು. ಅದು ಹೇಗೆಂದಡೆ, ಲೋಕದಾತ್ಮರುಗಳಿಗೆ ಜಾತಿ ವರ್ಣಾಶ್ರಮ ಕುಲ ಗೋತ್ರ ಸೂತ್ರ ನಾಮಾಚಾರಗಳನ್ನೇ ಆದಿಯು ಮಾಡಿಕೊಡುತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆ ಚರಿಸುವಂತಹ ಶಿವಶರಣರುಗಳಿಗೆ, ಭಕ್ತಿ, ಜ್ಞಾನ, ವೈರಾಗ್ಯವೆಂಬ ತ್ರಿವಿಧವನ್ನೇ ಆದಿಯು ಮಾಡಿಕೊಡುತಿಹಳು. ಕುಲವೇ ಶಿವಕುಲವಾಗಿಯೂ, ಗೋತ್ರವೇ ನಂದೀಶ್ವರನ ಗೋತ್ರವಾಗಿಯೂ, ಸಕಲ ಸದ್ಭಕ್ತ ಶರಣ ಜನಂಗಳೇ ತಂದೆ ತಾಯಿ ಬಂಧು ಬಳಗಂಗಳಾಗಿಯೂ, ಅಳವಡಿಸಿಕೊಂಡು ಆಚರಿಸುವಂತಹ ಆಚರಣೆಯನ್ನೇ ಆದಿಯು ಮಾಡಿ ಕೊಡುತ್ತಿಹಳು. ಮತ್ತಂತುಮಲ್ಲದೆ, ಪ್ರಾಣಾದಿ ವಾಯುಗಳೈದು ಆದಿ ಶಕ್ತಿಯ ಸ್ವರೂಪಿನಿಂದ ಇದ್ದಿತಾದ ಕಾರಣ, ಆ ಆದಿಶಕ್ತಿಯ ಸ್ವರೂ ಪವಾದ ಪ್ರಾಣಾದಿ ವಾಯುಗಳೊಳಗೆ ಪ್ರಾಣವಾಯುವೇ ಸತ್ತು. ಅಪಾನ ವಾಯುವೇ ಚಿತ್ತು, ವ್ಯಾನ ವಾಯುವೇ ಆನಂದ, ಉದಾನ ವಾಯುವೇ ನಿತ್ಯ, ಸಮಾನ ವಾಯುವೇ ಪರಿಪೂರ್ಣವಾಗಿ, ಈ ರೀತಿಯಲ್ಲಿ ಪಂಚಪ್ರಾಣ ವಾಯುಗಳೇ ಪಂಚಲಕ್ಷಣ ಸ್ವರೂಪಿನಿಂದ ನಿವೃತ್ತಿ ಯಾದುದೇ ಆದಿಶಕ್ತಿಯು.

ಪರಾಶಕ್ತಿಃ— ಪರಾಶಕ್ತಿಯ ಮಥನದಿಂದ 'ಶಕ್ತಿಶ್ಚದ್ವಿವಿಧಾಪ್ರೋಕ್ತಾ' ಎಂದು ಪರಾಶಕ್ತಿ ಎರಡು ತೆರನಾಗಿರುತಿಹಳು. ಅದು ಹೇಗೆಂದಡೆ,

ಲೋಕದ ಆತ್ಮರುಗಳಿಗೆ ಇಂದ್ರಿಯ ವಿಷಯ ಪ್ರಪಂಚವನೇ ಪರವಶ ಮಾಡಿಕೊಡುತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ, ಆಚರಿಸುವಂತಹ ಶಿವಶರಣರುಗಳಿಗೆ, ಶರಣನೇ ಸತಿಯಾಗಿ, ಲಿಂಗವೇ ಪತಿಯಾಗಿ, ಇಂದ್ರಿಯಂಗಳೇ ಲಿಂಗೇಂದ್ರಿಯಂಗಳಾಗಿ, ವಿಷಯಂಗಳೆಲ್ಲ ಲಿಂಗಪ್ರಸಾದವಾಗಿ ಅಳವಡಿಸಿಕೊಂಡು, ಆಚರಿಸುವಂತಹ ಆಚರಣೆಯೇ ಪರವಶಮಾಡಿಕೊಡುತಿಹಳು. ಮತ್ತಂತು ಮಲ್ಲದೆ, ಮನಸಾದಿ ಕರಣಂಗಳೈದು ಪರಾಶಕ್ತಿಯ ಸ್ವರೂಪಿಸಿಂದ ಇದ್ದಿತಾದ ಕಾರಣ, ಆ ಪರಾಶಕ್ತಿಯ ಸ್ವರೂಪವಾದ ಮನಸಾದಿ ಕರಣಂಗಳೊಳಗೆ ಮನದಲ್ಲಿ ಶಿವಧ್ಯಾನ, ಬುದ್ಧಿಯಲ್ಲಿ ನಿರ್ವಂಚನೆ, ಚಿತ್ತದಲ್ಲಿ ಶಿವದಾಸೋಹ, ಅಹಂಕಾರದಲ್ಲಿ ನಿರಹಂಕಾರ, ಅಜ್ಞಾನವಳಿದು ಸುಜ್ಞಾನವಾಗಿ, ಮನಸಾದಿ ಕರಣಂಗಳೈದು ನಿವೃತ್ತಿಯಾದುದೇ ಪರಾಶಕ್ತಿ.

ಚಿತ್‌ಶಕ್ತಿ:— ಚಿತ್ ಶಕ್ತಿಯ ಮಥನದಿಂದ 'ಶಕ್ತಿಶ್ಚದ್ವಿವಿಧಾ ಪ್ರೋಕ್ತಾ' ಎಂದು ಹೇಳುತಿಹುದಾದ ಕಾರಣ, ಚಿತ್‌ಶಕ್ತಿ ಎರಡು ತೆರನಾಗಿರುತಿಹಳು. ಅದು ಹೇಗೆಂದಡೆ, ಲೋಕಾತ್ಮರುಗಳಲ್ಲಿ ದಾಸೋಹ ಮೆಂದು ಉಳಿವ ಮೂಲಾಹಂಕಾರವನುಂಟುಮಾಡಿಕೊಡುತಿಹಳು. ಇತ್ತ ಗುರುಕಾರುಣ್ಯಮಂ ಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತಹ ಶಿವಶರಣರುಗಳಿಗೆ ತಮ್ಮ ನಿಜವನರಿವಂತಹ ಮೂಲಜ್ಞಾನವನುಂಟುಮಾಡಿಕೊಡುತಿಹಳು. ಮತ್ತಂತುಮಲ್ಲದೆ ಮೇಲಣ ಭಾವಾದಿ ಕರಣಗಳೈದು ಚಿಚ್ಛಕ್ತಿಯ ಸ್ವರೂಪಿಸಿಂದ ಇದ್ದಿತಾದ ಕಾರಣ, ಆ ಚಿಚ್ಛಕ್ತಿಯ ಸ್ವರೂಪವಾದ ಭಾವಾದಿ ಕರಣಂಗಳೊಳಗೆ ಭಾವವೇ ಭಕ್ತಿ, ಚಿತ್ತವೇ ಹಸ್ತ, ಮನವೇ ಲಿಂಗ, ಹೃದಯವೇ ಮುಖ, ಪರಿಣಾಮವೇ ಪದಾರ್ಥವಾಗಿ, ಮೇಲಣ ಭಾವಾದಿ ಕರಣಂಗಳೈದು ನಿವೃತ್ತಿಯಾದುದೇ ಚಿತ್‌ಶಕ್ತಿಯು.

(೪) ಇಂತೀ ಷಡ್ವಿಧ ಲಿಂಗಂಗಳಿಗೆ ಭಕ್ತಿ ಆವುದೆಂದೊಡೆ ಆಚಾರಲಿಂಗಕ್ಕೆ ಶ್ರದ್ಧಾ ಭಕ್ತಿ, ಗುರುಲಿಂಗಕ್ಕೆ ನಿಷ್ಠಾಭಕ್ತಿ, ಶಿವಲಿಂಗಕ್ಕೆ ಅವಧಾನಭಕ್ತಿ, ಜಂಗಮಲಿಂಗಕ್ಕೆ ಅನುಭಾವಭಕ್ತಿ, ಪ್ರಸಾದಲಿಂಗಕ್ಕೆ ಆನಂದಭಕ್ತಿ, ಮಹಾಲಿಂಗಕ್ಕೆ ಸಮರಸಭಕ್ತಿ, ಇಂತೀ ಭಕ್ತಿಗಳು. ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕಯ್ಯ.

(೫) ಇಂತೀ ಷಡ್ವಿಧ ಲಿಂಗಂಗಳಿಗೆ ಮುಖಂಗಳಾವಾವೆಂದೊಡೆ ಆಚಾರಲಿಂಗಕ್ಕೆ ನಾಸಿಕ ಮುಖ, ಗುರುಲಿಂಗಕ್ಕೆ ಜಿಹ್ವೆ ಮುಖ, ಶಿವ ಲಿಂಗಕ್ಕೆ ನೇತ್ರವೇ ಮುಖ, ಜಂಗಮಲಿಂಗಕ್ಕೆ ತ್ವಙ್ಮುಖ, ಪ್ರಸಾದ ಲಿಂಗಕ್ಕೆ ಶ್ರೋತ್ರ ಮುಖ, ಮಹಾಲಿಂಗಕ್ಕೆ ಹೃದಯಮುಖ, ಇಂತೀ ಮುಖಂಗಳು. ಸೌರಾಷ್ಟ್ರ ಸೋಮೇಶ್ವರ ತಾನು ತಾನಾಗಿರಬೇಕಯ್ಯಾ.

(೬) ಆಚಾರಲಿಂಗವ ಅಂಗಯ್ಯೊಳಳವಡಿಸಿ ಮಜ್ಜನಕ್ಕೆರೆದು, ತ್ರಿಪುಂಡ್ರಮಂ ಧರಿಸಿ, ಪುಷ್ಪಜಾತಿಗಳಿಂದರ್ಚಿಸಿ ಪೂಜೆಯ ಮಾಡುವನ್ನ ಕ್ಕರ, ಪೂಜೆಗೆ ಮೆಚ್ಚಿ, ಪಂಚಸ್ಪರ್ಶನಂಗಳ ಮರೆಯಲೊಡನೆ, ಆಚಾ ರದಲ್ಲಿ ಜಂಗಮಲಿಂಗ ನೆಲೆಗೊಂಡಿತ್ತು. ಆ ಲಿಂಗದ ಪ್ರಕಾಶಮಂ ನೋಡುವ ನೇತ್ರಂಗಳು ಆ ಪ್ರಕಾಶಕ್ಕೆ ಮೆಚ್ಚಿ, ಪಂಚ ವರ್ಣಂಗಳ ಮರೆಯಲೊಡನ ಆ ನೇತ್ರಂಗಳಲ್ಲಿ ಶಿವಲಿಂಗ ನೆಲೆಗೊಂಡಿತ್ತು. ಆ ಲಿಂಗದ ಸದ್ವಾಸನೆಯಂ ವಾಸಿಸುವ ಘ್ರಾಣ ಆ ವಾಸನೆಗೆ ಮೆಚ್ಚಿ ಪಂಚ ಗಂಧಂಗಳಂ ಮರೆಯಲೊಡನೆ, ಆ ಘ್ರಾಣದಲ್ಲಿ ಆಚಾರಲಿಂಗ ನೆಲೆಗೊಂಡಿತ್ತು. ಆ ಲಿಂಗಮಂ ಮಂತ್ರಸ್ವರೂಪವನೆತ್ತಿ ಕೊಂಡಾಡುವ ಜಿಹ್ವೆ ಆ ಮಂತ್ರಕ್ಕೆ ಮೆಚ್ಚಿ ಪಂಚ ರಸಂಗಳ ಮರೆಯಲೊಡನೆ ಆ ಜಿಹ್ವೆಯಲ್ಲಿ ಗುರುಲಿಂಗ ನೆಲೆಗೊಂಡಿತ್ತು. ಆ ಲಿಂಗಮಂ ಮನ ಒಲಿದು ಹಾಡುವ ನಾದಮಂ ಕೇಳಿದ ಶ್ರೋತ್ರ, ಆ ನಾದಕ್ಕೆ ಮೆಚ್ಚಿ ಪಂಚ ನಾದಂಗಳ ಮರೆಯಲೊಡನೆ, ಆ ಶ್ರೋತ್ರದಲ್ಲಿ ಪ್ರಸಾದಲಿಂಗ ನೆಲೆಗೊಂಡಿತ್ತು. ಆ ಲಿಂಗಮಂ ನೆನೆವ ಮನ, ಆ ನೆನಹಿಂಗೆ ಮೆಚ್ಚಿ ಪಂಚ ಪರಿಣಾಮಂಗಳ ಮರೆಯಲೊಡನೆ, ಆ ಮನದಲ್ಲಿ ಮಹಾಲಿಂಗ ನೆಲೆಗೊಂಡಿತ್ತು. ಈ ಷಡಿಂದ್ರಿಯಂಗಳು ಆ ಲಿಂಗವ ನಪ್ಪಿ ಅಗಲದ ಕಾರಣ ಆ ಲಿಂಗ ಒಲಿದು ಷಡಿಂದ್ರಿಯಂಗಳಲ್ಲಿ ಷಡ್ವಿ ಧಲಿಂಗವಾಗಿ ನೆಲೆಗೊಂಡಿತ್ತು. ಇಂತಪ್ಪ ಲಿಂಗದಲ್ಲಿ ಶರಣ ನಿಷ್ಠೆ ನಿಬ್ಬೆರಗಾಗಿ ಧ್ಯಾನಯೋಗಮಂ ಕೈಕೊಂಡು ಷಡುವರ್ಮಮಂ ಮರೆ ಯಲೊಡನೆ, ಆ ಲಿಂಗ ಒಲಿದು, ವೇಧಿಸಿ, ಜ್ಞಾನಂಗಳಲ್ಲಿ ಷಡ್ವಿಧ ಲಿಂಗ ಪ್ರಾಣವಾಗಿ, ನೆಲೆಗೊಂಡಿತ್ತು. ಆ ಪ್ರಾಣಲಿಂಗಂಗಳಂ ಶರಣ ಮಂತ್ರ ಮಾಲೆಯಿಂ ಹೃದಯದೊಳಗಿಂಬಿಟ್ಟು, ಮನವರಲ್ದು, ಜಾಗ್ರತ್ ಸ್ವಪ್ನದಲ್ಲಿ ಪೂಜಿಸುವ ಧಾರಣಯೋಗದೊಳಿರ್ದ ಕ್ರಿಯೆಯ ಮರೆ ಯಲೊಡನೆ, ಆ ಲಿಂಗವು ಒಲಿದು ಮನವ ವೇಧಿಸಿ, ಭಾವವಡ

ಗಿನಲ್ಲಿ ಶ್ರೀಗುರು ಲಿಂಗವಾಗಿ ನೆಲೆಗೊಂಡಿತ್ತು. ಆ ಭಾವಲಿಂಗಂಗಳ ಕಿರಣ ಒಡವೆರೆಯಲೊಡನೆ, ಕರ್ಪೂರ ಹೋಗಿ, ಉರಿಯು ಪಿಡಿ ದಂತೊಡನೆ ಆ ಶರಣಂಗೆ ಆ ಲಿಂಗವು ಒಲಿದು ಸರ್ವಾಂಗಲಿಂಗ ವಾಯಿತ್ತು. ಈತನೇ ಪರಬ್ರಹ್ಮ. ಇದನರಿದು ಜ್ಞಾನಕ್ರಿಯೆಗಳಿಂದಾ ಚರಿಸಿ, ಲಿಂಗಾಂಗ ಸಂಯೋಗವಾಗದೆ ಕೆರಹಿನಟ್ಟೆಗೆ ನಾಯಿ ತಲೆ ದೂಗುವಂತೆ ತಮ್ಮ ಅರುಹಿಂಗೆ ತಾವೇ ತಲೆದೂಗಿ, ಅಹಂಬ್ರಹ್ಮವೆಂದಾ ಚರಿಸುವ ಹೊಲೆಯರೆನಗೆ ತೋರದಿರಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

(೭) ಇಂತೀ ಷಡ್ವಿಧ ಲಿಂಗಂಗಳಿಗೆ ತೃಪ್ತಿ ಆವುದೆಂದೊಡೆ, ಆಚಾರಲಿಂಗಕ್ಕೆ ಗಂಧ ತೃಪ್ತಿ, ಗುರುಲಿಂಗಕ್ಕೆ ರಸ ತೃಪ್ತಿ, ಶಿವಲಿಂಗಕ್ಕೆ ರೂಪು ತೃಪ್ತಿ, ಜಂಗಮಲಿಂಗಕ್ಕೆ ಸ್ಪರ್ಶನ ತೃಪ್ತಿ, ಪ್ರಸಾದಲಿಂಗಕ್ಕೆ ಶಬ್ದ ತೃಪ್ತಿ, ಮಹಾಲಿಂಗಕ್ಕೆ ಪಂಚೇಂದ್ರಿಯ ತೃಪ್ತಿ. ಇಂತೀ ಷಡ್ವಿಧ ತೃಪ್ತಿಗಳು. ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕಯ್ಯಾ.

(೮) ಆದಿಯಲ್ಲಿ ಪ್ರಣವ ಸ್ವರೂಪವಾದ ಪರಮಾತ್ಮನು ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ, ಬಿಂದುವೇ ಶರೀರವಾಗಿ, ನಾದವೇ ಪ್ರಾಣವಾಗಿ, ಕಳೆಯೇ ಮನವಾಗಿ, ಬಿಂದುಮಯವಾದ ಶರೀರದಲ್ಲಿ ರೂಪು, ನಾದಮಯವಾದ ಪ್ರಾಣದಲ್ಲಿ ನಾಮ, ಕಳಾ ಮಯವಾದ ಮನದಲ್ಲಿ ಕ್ರಿಯೆ, ಇಂತು ನಾಮ ರೂಪು ಕ್ರಿಯಾಯು ಕ್ತವಾದ ಪುರುಷನ ಶರೀರದಲ್ಲಿ ಭಕ್ತಿ, ಪ್ರಾಣದಲ್ಲಿ ಜ್ಞಾನ, ಮನ ದಲ್ಲಿ ವೈರಾಗ್ಯ ನೆಲೆಗೊಂಡಲ್ಲಿ, ಬಿಂದುವಿನಲ್ಲಿ ಆಚಾರಲಿಂಗ ಸಂಬಂಧ ವಾಯಿತ್ತು. ಕಳೆಯಲ್ಲಿ ಶಿವಲಿಂಗ ಸಂಬಂಧವಾಯಿತ್ತು. ಆಚಾರದಿಂದ ಪೂತವಾದ ಶರೀರವೇ ಜಂಗಮಲಿಂಗವಾಯಿತ್ತು. ಗುರುಮಂತ್ರದಿಂದ ಪೂತವಾದ ಪ್ರಾಣವೇ ಪ್ರಸಾದಲಿಂಗವಾಯಿತ್ತು. ಶಿವಧ್ಯಾನದಿಂದ ಪೂತವಾದ ಮನವೇ ಮಹಾಲಿಂಗವಾಯಿತ್ತು. ಬಿಂದುವಿನಲ್ಲಿ ಕ್ರಿಯಾಶಕ್ತಿ ನೆಲೆಗೊಂಡಲ್ಲಿ ಆ ಬಿಂದುವೇ ಆದಿಶಕ್ತಿಮಯವಾಯಿತ್ತು. ನಾದದಲ್ಲಿ ಮಂತ್ರಶಕ್ತಿ ನೆಲೆಗೊಂಡಲ್ಲಿ, ಆ ನಾದವೇ ಪರಾಶಕ್ತಿ ಯಾಯಿತ್ತು. ಕಳೆಯಲ್ಲಿ ಇಚ್ಛಾಶಕ್ತಿ ನೆಲೆಗೊಂಡಲ್ಲಿ, ಆ ಕಳೆಯೇ ಜ್ಞಾನಶಕ್ತಿಯಾಯಿತ್ತು. ಇಂತು ಶರೀರವೇ ಜಂಗಮದಿಂದ ಪವಿತ್ರ

ವಾಗಿ, ಪ್ರಾಣವು ಗುರುವಿನಿಂದ ಪವಿತ್ರವಾಗಿ, ಮನವು ಲಿಂಗದಿಂದ ಪರಿಶುದ್ಧವಾಗಿರ್ದ ಶಿವಶರಣನು ಇದ್ದುದೇ ಕೈಲಾಸ, ಅನುಭವಿಸಿದುದೆಲ್ಲ ಲಿಂಗಭೋಗ, ಐಕ್ಯವೇ ಲಿಂಗೈಕ್ಯಕಾಣಾ ಮಹಾಘನ ದೊಡ್ಡದೇಶಿಕಾರ್ಯ ಗುರುಪ್ರಭುವೇ.

(೯) ಎನ್ನ ಚಿತ್ತಕ್ಕೆ ಆಚಾರಲಿಂಗವಾದ. ಎನ್ನ ಬುದ್ಧಿಗೆ ಗುರುಲಿಂಗವಾದ. ಎನ್ನ ಅಹಂಕಾರಕ್ಕೆ ಶಿವಲಿಂಗವಾದ. ಎನ್ನ ಮನಕ್ಕೆ ಜಂಗಮಲಿಂಗವಾದ. ಎನ್ನ ಜ್ಞಾನಕ್ಕೆ ಪ್ರಸಾದಲಿಂಗವಾದ. ಎನ್ನ ಭಾವಕ್ಕೆ ಮಹಾಲಿಂಗವಾದ. ಎನ್ನ ಸ್ಥೂಲತನುವಿಂಗೆ ಇಷ್ಟಲಿಂಗವಾದ. ಎನ್ನ ಸೂಕ್ಷ್ಮತನುವಿಂಗೆ ಪ್ರಾಣಲಿಂಗವಾದ. ಎನ್ನ ಕಾರಣತನುವಿಂಗೆ ಭಾವಲಿಂಗವಾದ. ಇಂತೆಂದರಿದೆನಾಗಿ, ಗೌರೇಶ್ವರಲಿಂಗದಲ್ಲಿ ಸುಖಿಯಾದೆನು.

(೧೦) ಶಿವಭಾವದಿಂದ ಆತ್ಮ ಹುಟ್ಟಿ, ಶಿವ ತಾನೆಂಬ ಉಭಯವನಲಂಕರಿಸಿದನಾಗಿ, ಆತ್ಮಂಗೆ ಭಾವನೆಂಬ ಹೆಸರಾಯಿತ್ತು. ಆತ್ಮ ಬಂದು ಆಕಾಶವ ಕೂಡಿದಲ್ಲಿ ಜ್ಞಾನವೆಂಬ ಹೆಸರಾಯಿತ್ತು. ಆತ್ಮ ಬಂದು ವಾಯುವ ಕೂಡಿದಲ್ಲಿ ಅಹಂಕಾರವೆಂಬ ಹೆಸರಾಯಿತ್ತು. ಆತ್ಮ ಬಂದು ಅಪ್ಪುವ ಕೂಡಿದಲ್ಲಿ ಬುದ್ಧಿ ಎಂಬ ಹೆಸರಾಯಿತ್ತು. ಆತ್ಮ ಬಂದು ಪೃಥ್ವಿಯ ಕೂಡಿದಲ್ಲಿ ಚಿತ್ತೆಂಬ ಹೆಸರಾಯಿತ್ತು. ಚಿತ್ತ ಆಚಾರಲಿಂಗವ ಧರಿಸಿಪ್ಪುದು. ಬುದ್ಧಿ ಗುರುಲಿಂಗವ ಧರಿಸಿಪ್ಪುದು. ಅಹಂಕಾರ ಶಿವಲಿಂಗವ ಧರಿಸಿಪ್ಪುದು. ಮನಸ್ಸು ಜಂಗಮಲಿಂಗವ ಧರಿಸಿತ್ತು ಜ್ಞಾನ ಪ್ರಸಾದಲಿಂಗವ ಧರಿಸಿತ್ತು. ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕು.

(೧೧) ಇಂತೀ ಷಡ್ವಿಧ ಲಿಂಗಗಳಿಗೆ ವಿಷಯಂಗಳಾವವೆಂದೊಡೆ, ಎಳಿಸುವದು ಆಚಾರಲಿಂಗ ವಿಷಯ, ಎಳಿಸಿ ಮೋಹಿಸುವದು ಗುರುಲಿಂಗ ವಿಷಯ, ಮೋಹಿಸಿ ಕೂಡುವದು ಶಿವಲಿಂಗ ವಿಷಯ, ಕೂಡಿ ಸುಖಂಬಡೆವುದು ಜಂಗಮಲಿಂಗ ವಿಷಯ, ಸುಖಂಬಡೆದು ಪರಿಣಾಮತೆಯನೈದುವುದು ಪ್ರಸಾದಲಿಂಗ ವಿಷಯ, ಪರಿಣಾಮವನೈದಿ ನಿಶ್ಚಯಂಬಡೆವುದು ಮಹಾಲಿಂಗ ವಿಷಯ, ಇಂತೀ ವಿಷಯಂಗಳು. ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕು.

(೧೨) ಷಡುಲಿಂಗಂಗಳಿಗೆ ಕಳೆಗಳಾವಾವೆಂದೊಡೆ, ಆಚಾರ ಲಿಂಗಕ್ಕೆ ನಿವೃತ್ತಿಕಲೆ, ಗುರುಲಿಂಗಕ್ಕೆ ಪ್ರತಿಷ್ಠಾಕಲೆ, ಶಿವಲಿಂಗಕ್ಕೆ ವಿದ್ಯಾಕಲೆ, ಜಂಗಮಲಿಂಗಕ್ಕೆ ಶಾಂತಿ ಕಲೆ, ಪ್ರಸಾದಲಿಂಗಕ್ಕೆ ಶಾಂತ್ಯಾತೀತಕಲೆ, ಮಹಾಲಿಂಗಕ್ಕೆ ಶಾಂತ್ಯಾತೀತೋತ್ತರಕಲೆ, ಇಂತೀ ಕಲೆಗಳು. ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕು.

(೧೩) ಆಧಾರದಲ್ಲಿ ಆಚಾರಲಿಂಗವ ಧರಿಸಿದನಾಗಿ ಆಚಾರ ಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ಸ್ವಾಧಿಷ್ಠಾನದಲ್ಲಿ ಗುರುಲಿಂಗವ ಧರಿಸಿದನಾಗಿ ಗುರುಲಿಂಗಭಕ್ತನಾದನಯ್ಯಾ ನಿಮ್ಮ ಶರಣ. ಮಣಿಪೂರಕದಲ್ಲಿ ಶಿವಲಿಂಗವ ಧರಿಸಿದನಾಗಿ ಶಿವಲಿಂಗಭಕ್ತನಾದನಯ್ಯಾ ನಿಮ್ಮ ಶರಣ. ಅನಾಹತದಲ್ಲಿ ಜಂಗಮಲಿಂಗವ ಧರಿಸಿದನಾಗಿ ಜಂಗಮ ಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ವಿಶುದ್ಧಿಯಲ್ಲಿ ಪ್ರಸಾದಲಿಂಗವ ಧರಿಸಿದನಾಗಿ ಪ್ರಸಾದಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ಆಜ್ಞೆಯಲ್ಲಿ ಮಹಾಲಿಂಗವ ಧರಿಸಿದನಾಗಿ ಮಹಾಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ಇಂತು ಷಡಾಧಾರದಲ್ಲಿ ಷಡ್ವಿಧಲಿಂಗವ ಧರಿಸಿ ಷಟ್‌ಸ್ಥಲ ಭಕ್ತನಾದನಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ಶರಣರು.

(೧೪) ಚರಿಸಿ ವರ್ತಿಸುವದೇ ಆಚಾರವಾದ ಕಾರಣ ಈಡಾ ಪಿಂಗಳ ನಾಡಿಯಿಂ ರೇಚಕ ಪೂರಕಂಗಳು ಚರಿಸಿ ವರ್ತಿಸುವ ದೆಸೆಯಿಂ ನಾಸಿಕಕ್ಕೆ ಆಚಾರಲಿಂಗವಾಗ ಬೇಕಾಯಿತ್ತು. ಮಂತ್ರ ಮೂರ್ತಿಯೇ ಗುರುವಾದ ಕಾರಣ ಷಡಕ್ಷರಿಯೇ ಷಟ್ ರುಚಿಯಾಗ ತೋರಿಹುದಾಗಿ ಅಂತಪ್ಪ ಷಟ್‌ರುಚಿಯೇ ಜಿಹ್ವೆಯ ಮುಖಕ್ಕೆ ಸಲುವ ದೆಸೆಯಿಂ ಜಿಹ್ವೆಗೆ ಗುರುಲಿಂಗವಾಗಬೇಕಾಯಿತ್ತು. ಸ್ವಯಂ ಪ್ರಕಾಶವೇ ಶಿವನಾದ ಕಾರಣ ಆ ಮಹಾ ಪ್ರಕಾಶವೇ ನೇತ್ರಂಗಳೊಳಗೆ ನೆಲೆಗೊಂಡು ಸಕಲ ಪದಾರ್ಥಂಗಳ ಕಾಣಿಸಿ ತೋರ್ಪ ದೆಸೆಯಿಂ ನೇತ್ರಕ್ಕೆ ಶಿವಲಿಂಗವಾಗಬೇಕಾಯಿತು. ಚರವೇ ಜಂಗಮವಾದ ಕಾರಣ ತ್ವಕ್ಕು ಸರ್ವಾಂಗದಲ್ಲಿ ನೆಲೆಗೊಂಡು ಅಲ್ಲಿಗಲ್ಲಿಗೆ ಸ್ಪರ್ಶನವನರಿವುತ್ತಿಹ ದೆಸೆಯಿಂ ತ್ವಕ್ಕಿಂಗೆ ಜಂಗಮಲಿಂಗವಾಗಬೇಕಾಯಿತ್ತು. ನಾದ ಸುನಾದ ಮಹಾನಾದವೇ ಪ್ರಸಾದವಾದ ಕಾರಣ ಪ್ರಸಾದವಪ್ಪ ಶಬ್ದ ಶ್ರೋತ್ರಮುಖಕ್ಕೆ ಸಲುವ

ದೆಸೆಯಿಂ ಶ್ರೋತ್ರಕ್ಕೆ ಪ್ರಸಾದಲಿಂಗವಾಗಬೇಕಾಯಿತ್ತು. ಇಂತೀ ಪಂಚೇಂದ್ರಿಯಂಗಳಿಗೆ ಪಂಚಲಿಂಗವಾಗಬೇಕಾಯಿತ್ತು. ಆತ್ಮನು ನಿರವಯ ನಿರ್ಗುಣ ನಿರವಸ್ತು ನಿರ್ಭಿನ್ನ ನಿರುಪಮವಾದ ದೆಸೆಯಿಂ ಗೋಪ್ಯವಾದ ಆತ್ಮಂಗೆ ಘನಕ್ಕೆ ಘನತೆಯನುಳ್ಳ ಮಹಾಲಿಂಗವಾಗಬೇಕಾಯಿತ್ತು. ಇಂತೀ ಷಟ್‌ಸ್ಥಲಿಂಗಳಿಂದ ದೆಸೆಯಿಂ ಸೌರಾಷ್ಟ್ರ ಸೋಮೇಶ್ವರನೋರ್ವ ಷಡ್ಲಿಂಗವಾಗಬೇಕಾಯಿತ್ತಯ್ಯಾ.

---

## ಷಡ್ಲಿಂಗಸಾಧನೆ.

ವಿವರಣೆ:—ಹಿಂದೆ ಆರು ಲಿಂಗಗಳ ಸ್ವರೂಪ ವರ್ಣಿಸಲ್ಪಟ್ಟಿದ್ದು ಇವು ಗಳನ್ನು ತನ್ನಲ್ಲಿ ಹ್ಯಾಗೆ ಒಳಕೊಳ್ಳಬೇಕೆಂಬುದನ್ನು ಇಲ್ಲಿ ವಚನಕಾರರು ಪ್ರತಿಪಾದಿಸಿರುತ್ತಾರೆ. ಅವರು ಇದರಲ್ಲಿ ಆರು ಮೆಟ್ಟಿಲುಗಳನ್ನು ಕಲ್ಪಿಸಿರುತ್ತಾರೆ. ಅವು ಹೇಗೆಂದರೆ, ಸಾಧಕನು ಆರಂಭದಲ್ಲಿ ಲಿಂಗವನ್ನು ಮೋಹಿಸತಕ್ಕದ್ದು. ಇದು ಮೊದಲನೆಯ ಮೆಟ್ಟಲು. ಹೀಗೆ ಮೋಹಿಸಿದ ಬಳಿಕ ಅವನು ಲಿಂಗ ದಲ್ಲಿ ಭಕ್ತಿ ಭಾವಪೂರಿತನಾಗುವನು. ಇದು ಎರಡನೆಯ ಮೆಟ್ಟಲು. ಹೀಗೆ ಭಕ್ತಿಯುಕ್ತನಾದ ಬಳಿಕ ಲಿಂಗವು ಅವನ ಆಚರಣೆಯಲ್ಲಿ ತಲೆದೋರುವದು. ಇದು ಮೂರನೆಯ ಸ್ಥಿತಿಯು. ಇದಕ್ಕೆ ಪೂಜಕ ಸ್ಥಿತಿ ಎಂಬ ಹೆಸರು. ಆಮೇಲೆ ಅವನು ಲಿಂಗದಲ್ಲಿ ದೃಢ ವಿಶ್ವಾಸವುಳ್ಳವನಾಗಿ ತನ್ನ ಕ್ರಿಯೆ ಗಳಲ್ಲಿ ಎಂಥ ಎಡರುಗಳು ಬಂದರೂ ಅವುಗಳನ್ನು ಎದುರಿಸಲು ಸಿದ್ಧನಾಗುವನು. ಇದು ಇದರ ಮುಂದಿನದಾದ ವೀರ ಸ್ಥಿತಿಯು. ಆಗ ಅವನು ಆ ಲಿಂಗದ ಅನುಭವವನ್ನು ಹೊಂದಿ ಅದರ ಸುಪರಿಣಾಮ ಗಳಲ್ಲಿ ಆನಂದಿಸಹತ್ತುವನು. ಇದು ಪ್ರಸಾದಿಯ ಸ್ಥಿತಿಯು. ಆ ಮೇಲೆ ಅವನು ಆ ಲಿಂಗವೇ ತನ್ನ ಪ್ರಾಣವಾಗಿ ವ್ಯವಹರಿಸುತ್ತಾನೆ. ಆಗ ಅವನು ಲಿಂಗ ಪ್ರಾಣಿ ಎಂದೆನಿಸಿಕೊಳ್ಳುವನು. ಹೀಗೆ ಆಯಾ ಲಿಂಗ ಗಳನ್ನು ಭಕ್ತನು ಒಳಕೊಳ್ಳತಕ್ಕದ್ದು. ಲಿಂಗಗಳು ಆರು ಇದ್ದು ಪ್ರತಿ ಯೊಂದು ಲಿಂಗವನ್ನು ಒಳಕೊಳ್ಳುವಲ್ಲಿ ಭಕ್ತನು ಮೇಲೆ ಹೇಳಿದ ಆರು ತರಗತಿಗಳನ್ನು ಹೊಂದುತ್ತ ಕಡೆಗೆ ಅವುಗಳಲ್ಲಿ ಏಕಾಕಾರನಾಗಿ ಹೋಗು ವನು. ಈ ತತ್ವಗಳನ್ನು ನಾವು ಕೆಳಗೆ ಕಾಣಿಸಿದ ಉಕ್ತಿಗಳಲ್ಲಿ ಕಂಡು ತಿಳಿಯಬಹುದಾಗಿದೆ. ಆದರೆ ಚನ್ನಬಸವೇಶ್ವರನು ಹೇಳಿದ ಈ ತರ ಗತಿಗಳು ಪುಲಿಗೆರೆಯ ಅವಯ್ಯನು ಹೇಳಿದ ತರಗತಿಗಳಿಂದ ಸ್ವಲ್ಪ ಭಿನ್ನ ವಾಗಿರುತ್ತವೆ. ಆದರೆ ಅವುಗಳಲ್ಲಿ ತತ್ವಶಃ ಭಿನ್ನತೆಗಳಿರುವದಿಲ್ಲ. ಅವ ಯ್ಯನು ಹೇಳಿದ ತರಗತಿಗಳಲ್ಲಿ ಮೂರು ಮುಖ್ಯ ವಿಭಾಗಗಳನ್ನು ಮಾಡಬಹುದು. ಅವನು ವಿವರಿಸುವ ಮೊದಲಿನ ಮೋಹೀ ಮತ್ತು ಭಕ್ತ ಸ್ಥಲಗಳು ಸ್ಥೂಲ ಶರೀರಕ್ಕೆ ಅದರ ಮುಂದಿನ ವೀರ ಮತ್ತು ಪ್ರಾಣೀ ಸ್ಥಲಗಳು ಸೂಕ್ಷ್ಮ ಶರೀರಕ್ಕೆ ಮತ್ತು ಕಡೆಯ ಪ್ರಸಾದಿ ಮತ್ತು ತೃಪ್ತಿ ಈ ಎರಡು ಸ್ಥಲಗಳು ಕಾರಣ ಶರೀರಕ್ಕೆ ಸಂಬಂಧ ಪಟ್ಟಿರುತ್ತವೆ.

ಚನ್ನ ಬಸವೇಶ್ವರನು ಕೇವಲ ಕ್ರಿಯಾ ದೃಷ್ಟಿಯಿಂದ ತನ್ನ ಆರು
ಭಾಗಗಳನ್ನು ಕಲ್ಪಿಸಿದ್ದಾನೆ. ಆದರೆ ಆದಯ್ಯನು ಷಟ್‌ಸ್ಥಲಕ್ಕೆ ಅನು
ಸರಿಸಿ ತನ್ನ ವಿಭಾಗಗಳನ್ನು ಕಲ್ಪಿಸಿರುವನು.

ಭಕ್ತನು ಲಿಂಗದಲ್ಲಿ ಮೊದಲು ಮೋಹಿಸಿ (ಮೋಹೀ) ಆಮೇಲೆ
ಅದರಲ್ಲಿ ವಿಶ್ವಾಸವುಳ್ಳವನಾಗಿ (ಭಕ್ತ), ಆ ಮೇಲೆ ಈ ವಿಶ್ವಾಸದಿಂದ
ದೃಢಭಕ್ತಿಯುಳ್ಳವನಾಗಿ (ವೀರ) ಈ ದೃಢಭಕ್ತಿಯಿಂದ ಲಿಂಗದ ಶಕ್ತಿಯೇ
ತನ್ನ ಪ್ರಾಣವಾಗಿ (ಪ್ರಾಣೀ) ಆಮೇಲೆ ಈ ಸ್ಥಿತಿಯ ಮೂಲಕ ಲಿಂಗದ
ಪ್ರಸಾದದಲ್ಲಿಯೇ ತಲ್ಲೀನನಾಗಿ (ಪ್ರಸಾದಿ) ಅದರಲ್ಲಿಯೇ ಆನಂದ
ಬಡುವನು. (ತೃಪ್ತಿ). ಈ ಪ್ರಕಾರ ತನ್ನಲ್ಲಿ ಷಡ್ಲಿಂಗಗಳ ಪ್ರಗತಿಯಾಗುವ
ದೆಂದು ತನ್ನ ವಚನಗಳಲ್ಲಿ ಆದಯ್ಯನು ವಿವರಿಸಿರುವನು.

ಈ ಭಾಗಗಳು ಭಿನ್ನವಾಗಿ ತೋರಿದರೂ ಅವುಗಳ ಉದ್ದೇಶವು
ಒಂದೇ ಇರುತ್ತದೆ. ಮತ್ತು ಈ ಉಭಯ ವಚನಕಾರರು ಲಿಂಗಸಾ
ಧನೆಗೆ ಅವಶ್ಯವಿರುವ ನೈತಿಕ ಮತ್ತು ಧಾರ್ಮಿಕ ಆಚರಣೆಗಳನ್ನು
ತಮ್ಮ ವಿಷಯ ವಿವೇಚನೆಯಲ್ಲಿ ಸೂಚನಾರೂಪವಾಗಿ ಬೋಧಿಸಿದ್ದಾರೆ.

---

## ೧ನೆಯ ವಿಧ.

(ಮೋಹೀ, ಭಕ್ತ, ಪೂಜಕ, ವೀರ, ಪ್ರಸಾದಿ, ಪ್ರಾಣೀ)

(೧) ಆಚಾರಲಿಂಗ ಮೋಹಿತನಾದರೆ, ಸತಿ ಸಹೋದರ ಮೋಹವ
ಮರೆಯಬೇಕು. ಆಚಾರಲಿಂಗ ಭಕ್ತನಾದರೆ, ಪೂರ್ವಾಚಾರವ ನುಡಿ
ಯಲಾಗದು. ಆಚಾರಲಿಂಗ ಪೂಜಕನಾದರೆ, ಅನ್ಯಪೂಜೆಯ ಮಾಡ
ಲಾಗದು. ಆಚಾರಲಿಂಗ ವೀರನಾದರೆ, ಒಡಿದ ವ್ರತ ನೇಮವ ಬಿಡ
ಲಾಗದು. ಆಚಾರಲಿಂಗ ಪ್ರಸಾದಿಯಾದರೆ. ಅಶುಚಿಯಾಗಿರಲಾಗದು.
ಆಚಾರಲಿಂಗ ಪ್ರಾಣಿಯಾದರೆ ಭಕ್ತ ನಿಂದೆಯ ಕೇಳಲಾಗದು. ಇದು
ಕಾರಣ ಕೂಡಲ ಚನ್ನಸಂಗಯ್ಯಲ್ಲಿ ಈ ಆರುಸಹಿತ ಆಚಾರಲಿಂಗ ಭಕ್ತಿ.

ಗುರುಲಿಂಗ ಮೋಹಿತನಾದಡೆ, ಮಾತಾಪಿತರ ಮೋಹವ ಮರೆಯ
ಬೇಕು. ಗುರುಲಿಂಗಭಕ್ತನಾದಡೆ, ಪೂರ್ವ ಬಂಧು ಪ್ರೇಮವ ಮಾಡ

ಲಾಗದು. ಗುರುಲಿಂಗ ಪೂಜಕನಾದಡೆ, ಅನ್ಯ ಪೂಜೆಯ ಮಾಡಲಾಗದು. ಗುರುಲಿಂಗ ವೀರನಾದಡೆ, ಗುರುಮಾರ್ಗಾಚಾರದಲ್ಲಿ ನಡೆಯಬೇಕು. ಗುರುಲಿಂಗ ಪ್ರಸಾದಿಯಾದಡೆ, ಗುರುವಾಜ್ಞೆಯ ಮೀರಲಾಗದು. ಗುರುಲಿಂಗ ಪ್ರಾಣಿಯಾದಡೆ ಮಾನವರ ಸೇವೆ ಮಾಡಲಾಗದು. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಈ ಆರುಸಹಿತ ಗುರುಲಿಂಗಭಕ್ತಿ.

ಶಿವಲಿಂಗ ಮೋಹಿತನಾದಡೆ, ಅನ್ಯ ಮೋಹವ ಮರೆಯಬೇಕು. ಶಿವಲಿಂಗಭಕ್ತನಾದಡೆ, ಅನ್ಯ ದೈವವ ಮಾಡಲಾಗದು. ಶಿವಲಿಂಗ ಪೂಜಕನಾದಡೆ ಅನ್ಯ ದೈವದ ಪೂಜೆಯ ಮಾಡಲಾಗದು. ಶಿವಲಿಂಗ ವೀರನಾದಡೆ, ಪುಣ್ಯ ಕ್ಷೇತ್ರಂಗಳ ಕುರಿತು ಹೋಗಲಾಗದು. ಶಿವಲಿಂಗ ಪ್ರಸಾದಿಯಾದಡೆ, ಅಂಗ ಭೋಗವ ಮರೆಯಬೇಕು. ಶಿವಲಿಂಗ ಪ್ರಾಣಿಯಾದಡೆ, ಸತಿ ಸಂಗವ ಮಾಡಲಾಗದು. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ, ಈ ಆರುಸಹಿತ ಶಿವಲಿಂಗಭಕ್ತಿ.

ಜಂಗಮಲಿಂಗ ಮೋಹಿತನಾದಡೆ, ತನ್ನ ಕುಲಗೋತ್ರ ಮೋಹವ ಮರೆಯಬೇಕು. ಜಂಗಮಲಿಂಗ ಭಕ್ತನಾದಡೆ, ಪೂರ್ವ ಕುಲವ ಜರಿಸಲಾಗದು. ಜಂಗಮಲಿಂಗ ಪೂಜಕನಾದಡೆ, ಮಾನವರನುಪಥಾವಿಸಲಾಗದು. ಜಂಗಮಲಿಂಗ ವೀರನಾದಡೆ, ಅರ್ಥವ ಕಟ್ಟಲಾಗದು. ಜಂಗಮಲಿಂಗ ಪ್ರಸಾದಿಯಾದಡೆ, ಬೇಡಿದಡೆ ಇಲ್ಲೆನ್ನಲಾಗದು. ಜಂಗಮಲಿಂಗಪ್ರಾಣಿಯಾದಡೆ, ಲಾಂಛನದ ನಿಂದೆಯ ಕೇಳಲಾಗದು. ಇದು ಕಾರಣ, ಕೂಡಲ ಚನ್ನಸಂಗಯ್ಯನಲ್ಲಿ ಈ ಆರುಸಹಿತ ಜಂಗಮಲಿಂಗಭಕ್ತಿ.

ಪ್ರಸಾದಲಿಂಗ ಮೋಹಿತನಾದಡೆ, ಅಂಗರುಚಿಗೆ ಇಚ್ಛೈಸಲಾಗದು. ಪ್ರಸಾದಲಿಂಗಭಕ್ತನಾದಡೆ, ಪೂರ್ವಾಹಾರವ ಕೊಳ್ಳಲಾಗದು. ಪ್ರಸಾದಲಿಂಗ ಪೂಜಕನಾದಡೆ, ಅಪ್ರಸಾದಿಗಳಿಗೆ ಉಣಲಿಕ್ಕಲಾಗದು. ಪ್ರಸಾದಲಿಂಗವೀರನಾದಡೆ, ಅನ್ಯರಿಗೆ ಕಯ್ಯಾನಲಾಗದು. ಪ್ರಸಾದಲಿಂಗ ಪ್ರಸಾದಿಯಾದಡೆ, ಜೀವಹಿಂಸೆಯ ಮಾಡಲಾಗದು. ಪ್ರಸಾದಲಿಂಗ ಪ್ರಾಣಿಯಾದಡೆ ಆತ್ಮನಿಗ್ರಹವ ಮಾಡಲಾಗದು. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಈ ಆರು ಸಹಿತ ಪ್ರಸಾದಲಿಂಗಭಕ್ತಿ.

ಮಹಾಲಿಂಗ ಮೋಹಿತನಾದಡೆ, ಲೋಕದ ಮೋಹವ ಮರೆಯಬೇಕು. ಮಹಾಲಿಂಗ ಭಕ್ತನಾದಡೆ, ಪೂರ್ವ ಭಕ್ತಿಯ ಮಾಡಲಾಗದು. ಮಹಾಲಿಂಗ ಪೂಜಕನಾದಡೆ, ಅಜ್ಞಾನಿಗಳ ಕೂಡೆ ಸಂಗವ, ಭಾಷಣೆಯ ಮಾಡಲಾಗದು. ಮಹಾಲಿಂಗ ವೀರನಾದಡೆ, ಪ್ರಳಯಾದಿಗಳಿಗಂಜಲಾಗದು. ಮಹಾಲಿಂಗ ಪ್ರಸಾದಿಯಾದಡೆ, ಸಮತೆ ನೆಲೆಗೊಳ್ಳಬೇಕು. ಮಹಾಲಿಂಗ ಪ್ರಾಣಿಯಾದಡೆ, ಮನದ ಕೊನೆಯಲ್ಲಿ ಲಿಂಗದ ನೆನಹು ಹಿಂಗಲಾಗದು. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಈ ಆರುಸಹಿತ ಮಹಾಲಿಂಗಭಕ್ತಿ.

ಇಂತೀ ಆರುಸಹಿತ ಆಚಾರ, ಆಚಾರಸಹಿತ ಗುರು, ಗುರುಸಹಿತಲಿಂಗ, ಲಿಂಗಸಹಿತ ಜಂಗಮ, ಜಂಗಮಸಹಿತ ಪ್ರಸಾದ, ಪ್ರಸಾದಸಹಿತ ಮಹಾಲಿಂಗ, ಇಂತೀ ಎಲ್ಲ ಸ್ಥಲಂಗಳು ತಾನಾಗಬಲ್ಲಡೆ ಕೂಡಲಚನ್ನಸಂಗನಲ್ಲಿ ಲಿಂಗೈಕ್ಯವು.

---

## ೨ನೆಯ ವಿಧ.

(ಮೋಹೀ, ಭಕ್ತ, ವೀರ, ಪ್ರಾಣೀ ಪ್ರಸಾದೀ, ತೃಪ್ತಿ)

ಇನ್ನು ಆಚಾರಲಿಂಗ ಮೋಹಿತನಾದಡೆ, ಸತಿ-ಸುತ ಬಾಂಧವರಲ್ಲಿ ಮೋಹವಿಲ್ಲದಿರಬೇಕು. ಆಚಾರಲಿಂಗಭಕ್ತನಾದಡೆ, ಸ್ವಕಾಯಕದಲ್ಲಿರಬೇಕು. ಆಚಾರಲಿಂಗವೀರ ತಾನಾದಡೆ, ಪೂರ್ವವನಳಿದು ಪುನರ್ಜಾತನಾಗಿರಬೇಕು. ಆಚಾರಲಿಂಗ ಪ್ರಾಣಿಯಾದಡೆ, ಭವಿಗಳಿಗೆ ತಲೆವಾಗದಿರಬೇಕು. ಆಚಾರಲಿಂಗ ಪ್ರಸಾದಿಯಾದಡೆ, ಜಿಹ್ವಾಲಂಪಟವಿಲ್ಲದಿರಬೇಕು. ಆಚಾರಲಿಂಗ ತೃಪ್ತನಾದಡೆ, ಭಕ್ತಕಾಯ ಮಮಕಾಯನಾಗಿರಬೇಕು.

ಇನ್ನು ಗುರುಲಿಂಗ ಮೋಹಿತನಾದಡೆ, ತನುಗುಣನಾಸ್ತಿಯಾಗಿರಬೇಕು. ಗುರುಲಿಂಗಭಕ್ತನಾದಡೆ, ತನ್ನ ಗುರುವಿನಲ್ಲಿ ಸವೆಯಬೇಕು. ಗುರುಲಿಂಗ ವೀರನಾದಡೆ, ಭವರೋಗಂಗಳಿಲ್ಲದಿರಬೇಕು. ಗುರುಲಿಂಗ ಪ್ರಾಣಿಯಾದಡೆ, ಪ್ರಕೃತಿಗುಣ ರಹಿತನಾಗಿರಬೇಕು. ಗುರುಲಿಂಗ ಪ್ರಸಾದಿಯಾದಡೆ, ಗುರು ಪ್ರಸಾದವಲ್ಲದೆ ಸ್ವೀಕರಿಸದಿರಬೇಕು. ಗುರುಲಿಂಗ ತೃಪ್ತನಾದಡೆ, ಅರಸುವ ಅರಿಕೆ ಇಲ್ಲದಿರಬೇಕು.

ಇನ್ನು ಶಿವಲಿಂಗ ಮೋಹಿತನಾದಡೆ, ಮನಗುಣನಾಸ್ತಿಯಾಗಿರಬೇಕು. ಶಿವಲಿಂಗಭಕ್ತನಾದಡೆ, ಲಿಂಗದ ಏಕೋ ಗ್ರಾಹಕತ್ವ ಅಳವಟ್ಟಿರಬೇಕು. ಶಿವಲಿಂಗವೀರನಾದಡೆ ಕಾಲಕಾಮಾದಿಗಳಿಗೆ ಅಳುಕದಿರಬೇಕು. ಶಿವಲಿಂಗ ಪ್ರಾಣಿಯಾದಡೆ, ಜನನ ಮರಣಂಗಳಿಗೊಳಗಾಗದಿರಬೇಕು. ಶಿವಲಿಂಗ ಪ್ರಸಾದಿಯಾದಡೆ, ಶಿವಪ್ರಸಾದವಲ್ಲದೆ ಸ್ವೀಕರಿಸದಿರಬೇಕು. ಶಿವಲಿಂಗ ತೃಪ್ತನಾದಡೆ, ದ್ವೈತಾ ದ್ವೈತವನಳಿದಿರಬೇಕು.

ಇನ್ನು ಜಂಗಮಲಿಂಗ ಮೋಹಿತನಾದಡೆ. ಪ್ರಾಣಗುಣ ನಾಸ್ತಿಯಾಗಿರಬೇಕು. ಜಂಗಮಲಿಂಗಭಕ್ತನಾದಡೆ, ಜಂಗಮದಲ್ಲಿ ಧನಮನವನೆಯಬೇಕು. ಜಂಗಮಲಿಂಗವೀರನಾದಡೆ, ಭಯಭಂಗವಿಲ್ಲಬೇಕು. ಜಂಗಮಲಿಂಗ ಪ್ರಾಣಿಯಾದಡೆ, ತಥ್ಯ ಮಿಥ್ಯ ರಾಗದ್ವೇಷಗಳಿಲ್ಲದಿರಬೇಕು. ಜಂಗಮಲಿಂಗ ಪ್ರಸಾದಿಯಾದಡೆ, ಭೋಗಭೂಷಣಂಗಳಾಸೆಇಲ್ಲದಿರಬೇಕು. ಜಂಗಮಲಿಂಗ ತೃಪ್ತನಾದಡೆ, ಹಮ್ಮಿಲ್ಲದಿರಬೇಕು.

ಇನ್ನು ಪ್ರಸಾದಲಿಂಗ ಮೋಹಿಯಾದಡೆ, ಶಬ್ದ ಜಾಲಂಗಳಿಗೆ ಕಿವಿಯೊಡ್ಡದಿರಬೇಕು. ಪ್ರಸಾದಲಿಂಗ ಭಕ್ತನಾದಡೆ, ದಾಸೋಹವಿಲ್ಲದಿರಬೇಕು. ಪ್ರಸಾದಲಿಂಗ ವೀರನಾದಡೆ, ಚಿರ ಹಮ್ಮಿಲ್ಲದಿರಬೇಕು. ಪ್ರಸಾದಲಿಂಗ ಪ್ರಾಣಿಯಾದಡೆ, ಪ್ರಾಣಲಿಂಗದೊಳು ಅಭಿನ್ನನಾಗಿರಬೇಕು. ಪ್ರಸಾದಲಿಂಗ ಪ್ರಸಾದಿಯಾದಡೆ ಪ್ರಸಾದ ಪ್ರಸನ್ನನಾಗಿರಬೇಕು. ಪ್ರಸಾದಲಿಂಗ ತೃಪ್ತನಾದಡೆ, ಇಂದ್ರಿಯಂಗಳಿಚ್ಛೆ ಇಲ್ಲದಿರಬೇಕು.

ಇನ್ನು ಮಹಾಲಿಂಗ ಮೋಹಿತನಾದಡೆ, ಅಣಿಮಾದಿ ಅಷ್ಟೈಶ್ವರ್ಯಂಗಳ ಬಯಸದಿರಬೇಕು. ಮಹಾಲಿಂಗ ಭಕ್ತನಾದಡೆ, ಅಷ್ಟಮಹಾಸಿದ್ಧಿಗಳ ಬಯಸದಿರಬೇಕು. ಮಹಾಲಿಂಗ ವೀರನಾದಡೆ ಚತುರ್ವಿಧಪದವಿಯ ಹಾರದಿರಬೇಕು. ಮಹಾಲಿಂಗ ಪ್ರಾಣಿಯಾದಡೆ, ಇಹಪರಂಗಳಾಶೆ ಇಲ್ಲದಿರಬೇಕು. ಮಹಾಲಿಂಗ ಪ್ರಸಾದಿಯಾದಡೆ, ಅರಿವು ಮರಪಳಿದ ಚಿಲ್ಲಿಂಗಸಂಗಿಯಾಗಿರಬೇಕು. ಮಹಾಲಿಂಗ ತೃಪ್ತನಾದಡೆ, ಭಾವ, ಸದ್ಭಾವ, ದುರ್ಭಾವವಳಿದು, ಭಾವೈಕ್ಯವಾಗಿ ತಾನಿದಿರೆಂಬ ಭಿನ್ನ ಭಾವವ ತೋರದಿರಬೇಕು. ಇಂತು ಸೌರಾಷ್ಟ್ರ ಸೋಮೇಶ್ವರ ಲಿಂಗ ತಾನು ತಾನಾಗಿರಬೇಕಯ್ಯ.

---

# ಆರು ಅಂಗಸ್ಥಲಗಳು.

## (ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ)

(೧) ಭಕ್ತಂಗೆ ಹಸ್ತವಾವುದು, ಮಹೇಶ್ವರಂಗೆ ಹಸ್ತವಾವುದು, ಪ್ರಸಾದಿಗೆ ಹಸ್ತವಾವುದು, ಪ್ರಾಣಲಿಂಗಿಗೆ ಹಸ್ತವಾವುದು, ಶರಣಂಗೆ ಹಸ್ತವಾವುದು ಐಕ್ಯಂಗೆ ಹಸ್ತವಾವುದು, ಎಂದರೆ ಈ ಹಸ್ತಂಗಳ ಭೇದವ ಹೇಳಿಹೆನಯ್ಯಾ. ಭಕ್ತಂಗೆ ಸುಚಿತ್ತವೇ ಹಸ್ತ, ಮಹೇಶ್ವರಂಗೆ ಸುಬುದ್ಧಿಯೇ ಹಸ್ತ, ಪ್ರಸಾದಿಗೆ ನಿರಹಂಕಾರವೇ ಹಸ್ತ, ಪ್ರಾಣಲಿಂಗಿಗೆ ಸುಮನವೇ ಹಸ್ತ, ಶರಣಂಗೆ ಸುಜ್ಞಾನವೇ ಹಸ್ತ, ಐಕ್ಯಂಗೆ ಸದ್ಭಾವವೇ ಹಸ್ತ, ಇಂತೀ ಹಸ್ತಂಗಳ ಭೇದವ ತಿಳಿವುದಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೨) ಕುಚಿತ್ತವಳಿದು ಸುಚಿತ್ತ ನೆಲೆಗೊಂಡು ಆಚಾರಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಭಕ್ತನೆಂಬೆನು. ಕುಬುದ್ಧಿಯನಳಿದು ಸುಬುದ್ಧಿ ನೆಲೆಗೊಂಡು ಗುರುಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಮಹೇಶ್ವರನೆಂಬೆನು. ಅಹಂಕಾರವಳಿದು ನಿರಹಂಕಾರ ನೆಲೆಗೊಂಡು ಶಿವಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯ ಬಲ್ಲಡೆ ಪ್ರಾಣಲಿಂಗಿ ಎಂಬೆನು. ಅಜ್ಞಾನ ವಳಿದು ಸುಜ್ಞಾನ ನೆಲೆಗೊಂಡು ಪ್ರಸಾದಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯ ಬಲ್ಲಡೆ, ಶರಣನೆಂಬೆನು. ದುರ್ಭಾವವಳಿದು ಸದ್ಭಾವ ನೆಲೆಗೊಂಡು ಮಹಾಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ, ಐಕ್ಯನೆಂಬೆನು. ಇಂತೀ ಷಡ್ವಿಧ ಬ್ರಹ್ಮವನೊಡಗೂಡುವ ಮಹಾಶರಣರ ಪಾದಕ್ಕೆ ನಮೋ ನಮೋ ಎಂಬೆನಯ್ಯಾ ಅಖಂಡೇಶ್ವರಾ.

(೩) ಸುಚಿತ್ತ:— ಹೊನ್ನು ಹೆಣ್ಣು ಮಣ್ಣುಗಳ ಮೇಲಣ ವ್ಯಾಮೋಹದೊಡನೆ ಕೂಡಿ ಚರಿಸುವದೇ ಕುಚಿತ್ತ. ಆ ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಪದಾರ್ಥಂಗಳನ್ನು ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ, ಸಕಲ ಕರಣಂಗಳಳಿದು, ಲಿಂಗಕರಣಂಗಳಾಗಿ, ಸತಿ ಸುತಾದಿಗಳ ಮೇಲಣ ವ್ಯಾಮೋಹವಳಿದು ನಿರ್ಮೋಹಿಯಾಗಿರುವವೇ **ಸುಚಿತ.**

ಸುಬುದ್ಧಿ:— ಪರಧನ, ಪರದೈವ, ಪರಸತಿ, ಪರನಿಂದೆ, ಪರಹಿಂಸೆ ಎಂಬ ಪಂಚ ಮಹಾಪಾತಕಂಗಳೊಡನೆ ಕೂಡಿ ಚರಿಸುವುದೇ ಕುಬುದ್ಧಿ. ಇಂತಪ್ಪ ಕುಬುದ್ಧಿ ಎಂಬ ಕರಕಮಲವು ಕೆಟ್ಟು, ಅಷ್ಟಾವರಣವ ಅಂಗವ ಮಾಡಿಕೊಂಡು ಪಂಚಾಚಾರವೇ ಪ್ರಾಣವ ಮಾಡಿಕೊಂಡು ಏಕ ಲಿಂಗನಿಷ್ಠಾ ಪರನಾಗಿ ಆಚರಿಸುವದೇ ಸುಬುದ್ಧಿ.

ನಿರಹಂಕಾರ:— ತನುತ್ರಯ ಸಂಬಂಧವಾದ ರೂಪು, ರುಚಿ, ತೃಪ್ತಿಗಳನ್ನು ಲಿಂಗಾರ್ಪಿತ ವಿಹೀನವಾಗಿ ಜೀವ ಭಾವದಿಂದ ಭುಂಜಿಸಿ ದೇಹೋಹಂ, ಎಂದುಲಿವುದೇ ಅಹಂಕಾರ. ಅಂತಪ್ಪ ಅಹಂಕಾರವೆಂಬ ಕರಕಮಲವು ನಷ್ಟವಾಗಿ ಹೋಗಿ, ಆ ತನುತ್ರಯ ಸಂಬಂಧವಾದ ರೂಪು, ರುಚಿ, ತೃಪ್ತಿಗಳನ್ನು ಇಷ್ಟ ಪ್ರಾಣ ಭಾವಲಿಂಗಂಗಳಿಗೆ ಸಮರ್ಪಿಸಿ ಆ ಇಷ್ಟ ಪ್ರಾಣ ಭಾವಲಿಂಗ ಮುಖದಿಂದ ಉಳುಮೆಯಾಗಿ ಬಂದ ಶುದ್ಧ, ಸಿದ್ಧ ಪ್ರಸಿದ್ಧ ಪ್ರಸಾದವನನುಭವಿಸಿ ನಿರಹಂಕಾರ ಭಾವಿಯಾಗಿರುವದೇ ನಿರಹಂಕಾರ.

ಸುಮನ:— ಹೃದಯ ಕಮಲದ ಅಷ್ಟದಳಾಗ್ರಗತಿಯೊಡನೆ ಕೂಡಿ, ಷಡಾಧಾರ ಚಕ್ರ ಸಂಬಂಧವಾದ ೫೦ ದಳಂಗಳಲ್ಲಿ ದಳಪ್ರಕೃತಿ ಹಿಡಿದು ದೇಹಾರೋಹಂಗಳಿಂದ ಚರಿಸುತ್ತ, ಸಂಚಲ ವ್ಯವಹಾರಿಯಾಗಿರುವುದೇ ಕುಮನ. ಅಂತಪ್ಪ ಕುಮನವೆಂಬ ಕರಕಮಲವು ಅಳಿದು ನಷ್ಟವಾಗಿ ಹೋಗಿ, ಸುಮನವು ಊರ್ಧ್ವ ಮುಖವಾಗಿರುವ ಧರ್ಮ, ಜ್ಞಾನ, ವೈರಾಗ್ಯ ಐಶ್ವರ್ಯವೆಂಬ ಚತುರ್ದಳ ಕಮಲ ಸಿಂಹಾಸನವಲ್ಲಿ ನೆಲೆಗೊಂಡು, ಅಚಲಾನಂದ ಪೂಜೆಯ ಕೈಕೊಂಡೊಪ್ಪುವ ಪರಮಾತ್ಮಲಿಂಗವಲ್ಲಿ ತನ್ನ ಮನಸ್ಸನ್ನು ಸ್ವಸ್ಥಿರ ಮಾಡಿಕೊಂಡಿರುವದೇ ಸುಮನ.

ಸುಜ್ಞಾನ:— ದೇಹವೇ ಸತಿಯಾಗಿ, ಆತ್ಮನೇ ಪತಿಯಾಗಿ, ಸಕಲ ಕರಣಂಗಳೇ ತನ್ನಯ ಪುತ್ರಾದಿಗಳಾಗಿ ಘಟ ಸಂಸಾರಿಗಳಾಗಿ ಆಚರಿಸುವದೇ ಅಜ್ಞಾನವು. ಅಂತಪ್ಪ ಅಜ್ಞಾನವೆಂಬ ಕರಕಮಲವು ನಷ್ಟವಾಗಿ ಹೋಗಿ, ಶರಣನೇ ಸತಿಯಾಗಿ, ಲಿಂಗವೇ ಪತಿಯಾಗಿ ಇಂದ್ರಿಯಂಗಳೆಲ್ಲ ಲಿಂಗೇಂದ್ರಿಯಂಗಳಾಗಿ, ವಿಷಯಂಗಳೆಲ್ಲ ಲಿಂಗ ಪ್ರಸಾದವಾಗಿ, ಅಳವಡಿಸಿಕೊಂಡು ಲಿಂಗಾಂಗ ಸಂಸಾರಿಯಾಗಿ ಆಚರಿಸುವದೇ ಸುಜ್ಞಾನವು.

ಸದ್ಭಾವಃ— ಷಡ್ವರ್ಗಂಗಳೊಡನೆ ಕೂಡಿಕೊಂಡು, ಲಿಂಗಾಂ
ವೆರಡಕ್ಕೆ ಭಿನ್ನವಿಟ್ಟುಕೊಂಡು, ಲಿಂಗವ ಪೂಜಿಸಿ ಫಲಪದಂಗ
ಪಡೆದು, ಅನುಭವಿಸಿ ಭವವನ್ನೈದಿ ಹೋಗುವಂಥಾದ್ದೇ ದುರ್ಭಾವವು.
ಅಂತಪ್ಪ ದುರ್ಭಾವವೆಂಬ ಕರಕಮಲವು ಅಳಿದು ನಷ್ಟವಾಗಿ ಹೋಗಿ
ಸದ್ಭಾವವು ಶಿಖಿಕರ್ಪೂರ ಸಂಯೋಗವಾದ ಹಾಗೆ ಲಿಂಗದಲ್ಲಿ ತಾ ಕೂಡಿ
ತನ್ನಲ್ಲಿ ಲಿಂಗವು ಕೂಡಿ, ತಾನು ಲಿಂಗವೆಂಬ ಉಭಯ ಭಾವವಳಿದು
ತಾನು ತಾನಾಗಿರುವವೇ ಸದ್ಭಾವವು.

(೪) ಕಿಂಕುರ್ವಾಣತೆಯಿಂದ ಉಳ್ಳುದನಿತು ಮಾಡುವಲ್ಲಿ ಭಕ್ತ.
ನಿಷ್ಠೆ ನಿಷ್ಠೆರಸಿ ಗಟ್ಟಿಗೊಂಡು ಅಭಿಲಾಷೆ ಸಮನಿಸದೆ ಪರಿಚ್ಛೇದ ಬುದ್ಧಿ
ಯುಳ್ಳಲ್ಲಿ ಮಹೇಶ್ವರ. ಅನರ್ಪಿತವ ಸಮನಿಸದೆ ಬಂದುದ ಕಾಯದ
ಕರಣದ ಕೈಗಳಲ್ಲಿ ಕೊಟ್ಟು ಲಿಂಗ ಸಹಿತ ಭೋಗಿಸುವಲ್ಲಿ ಪ್ರಸಾದಿ.
ಪ್ರಾಣಕ್ಕೆ ಪ್ರಾಣವಾಗಿ, ಕಾಲಸ್ಥಿತಿಯನರಿದು ಎಚ್ಚರಿಗೆಗುಂದದಿಪ್ಪಲ್ಲಿ
ಪ್ರಾಣಲಿಂಗಿ. ತನಗೆ ಲಿಂಗವಾಗಿ ಲಿಂಗಕ್ಕೆ ತಾನಾಗಿ ಹೆಚ್ಚು ಕುಂದಿಲ್ಲ
ದಿರ್ದಡೆ ಶರಣ. ಸದಾಚಾರ ಸಂಪತ್ತಿನಲ್ಲಿ ಬಂದ ಅನುಭಾವವನು ನಿರು
ಹೆಸರಡಗಿದ ಸುಖವದು ಲಿಂಗೈಕ್ಯ. ಇದು ಕಾರಣ ಚನ್ನಸಂಗಯ್ಯನಲ್ಲಿ
ಬಸವಣ್ಣಂಗಲ್ಲದೆ ಷಟ್‌ಸ್ಥಲವಪೂರ್ವ.

(೫) ಭಕ್ತೆ ಏನಪ್ಪೆನಯ್ಯಾ. ಕರ್ತೃಭೃತ್ಯತ್ವವನರಿಯೆ. ಮಹೇಶ್ವರ
ಏನಪ್ಪೆನಯ್ಯಾ. ವ್ರತ ನೇಮ ಛಲವ ನಾನರಿಯೆ. ಪ್ರಸಾದಿ ಏನಪ್ಪೆನಯ್ಯಾ
ಅರ್ಪಿತ ಅನರ್ಪಿತವೆಂಬ ಭೇದವ ನಾನರಿಯೆ. ಪ್ರಾಣಲಿಂಗಿ ಏನಪ್ಪೆ
ನಯ್ಯಾ. ಅನುಭಾವದ ಗಮನವ ನಾನರಿಯೆ. ಶರಣೆ ಏನಪ್ಪೆನಯ್ಯಾ.
ಶರಣಸತಿ ಲಿಂಗಪತಿ ಎಂಬ ಭಾವವನರಿಯೆ. ಐಕ್ಯ ಏನಪ್ಪೆನಯ್ಯಾ.
ಷಟ್‌ಸ್ಥಲದಲ್ಲಿ ನಿಃಸ್ಥಲವಾಗದಿರ್ಪೆನು.

(೬) ಭಕ್ತಸ್ಥಲಕ್ಕೆ ಒಬ್ಬನು, ಮಹೇಶ್ವರ ಸ್ಥಲಕ್ಕೆ ಇಬ್ಬರು,
ಪ್ರಸಾದಿ ಸ್ಥಲಕ್ಕೆ ಆತನ ತಾಯನಲ್ಲದಿಲ್ಲ; ಪ್ರಾಣಲಿಂಗಿ ಸ್ಥಲಕ್ಕೆ ಮೂವರು.
ಶರಣ ಸ್ಥಲಕ್ಕೆ ನಾಲ್ವರು, ಐಕ್ಯಸ್ಥಲಕ್ಕೆ ಅಕ್ಕನ ತಮ್ಮನಲ್ಲದಿಲ್ಲ. ಇಂತೀ
ಕುರುಹಿನ ಜಂಜಡಯನರಿದು ಬಿಡುವುದ ಬಟ್ಟು ತಡೆಪರ ತಡೆದಿಪ್ಪ
ವೇನೆ ಕೂಡಲಸಂಗಮದೇವರಲಿ ಬಸವಣ ನರಿಕೆಯಾಗಿ.

ಅರ್ಥಃ— ತ್ರಿವಿಧ ಪದಾರ್ಥವ ಗುರುಲಿಂಗ ಜಂಗಮಕ್ಕೆ ನಿರ್ವಂಚ ಕತ್ವದಿಂದ ಸಮರ್ಪಿಸುವ ಭಕ್ತಸ್ಥಲವುಳ್ಳವನೇ ಬಸವೇಶ್ವರನು. ಪಂಚ ಮಹಾಪಾತಕಂಗಳ ಬಿಟ್ಟು ಪಂಚಾಚಾರವನೊಡಲು ಮಾಡಿಕೊಂಡು ಏಕಲಿಂಗ ನಿಷ್ಠೆಯಿಂದಾಚರಿಸುವ ಮಹೇಶ್ವರ ಸ್ಥಲವುಳ್ಳವರೇ ಜಗದೇವ ಮಲ್ಲಿಬೊಮ್ಮಣ್ಣಗಳು. ತ್ರಿವಿಧ ಪದಾರ್ಥವ ತ್ರಿವಿಧಲಿಂಗಕ್ಕರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸುವ ಪ್ರಸಾದಿ ಸ್ಥಲವುಳ್ಳವನೇ ಬಸವೇಶ್ವರನ ಸೋದ ರಳಿಯನಾದ ಚನ್ನಬಸವಣ್ಣನು. ಅಂಗಪ್ರಾಣಂಗಳಲ್ಲಿ ಇಷ್ಟಪ್ರಾಣ ಲಿಂಗಸಂಬಂಧವ ಮಾಡಿಕೊಂಡು ಜ್ಞಾನಕ್ರಿಯಾಯುಕ್ತವಾಗಿ ಆಚರಿಸುವ ಪ್ರಾಣಲಿಂಗಿಸ್ಥಲವುಳ್ಳವರೇ ಸಿದ್ಧರಾಮಯ್ಯ, ನಿಜಗುಣದೇವರು, ಘಟ್ಟಿ ವಾಳಯ್ಯಗಳು. ಶರಣ ಸತಿ ಲಿಂಗಪತಿತ್ವವಿಡಿದಾಚರಿಸುವ ಶರಣಸ್ಥಲ ವುಳ್ಳವರೇ ಪ್ರಭುದೇವರು, ಅಕ್ಕಗಳು, ಗಜೇಶ ಮಸಣಯ್ಯಗಳು, ಉರಿಲಿಂಗಯ್ಯಗಳು. ಉರಿಕರ್ಪೂರಸಂಯೋಗದ ಹಾಗೆ ಮಹಾಲಿಂಗ ದಲ್ಲಿ ಕೂಡುವ ಐಕ್ಯಸ್ಥಲವುಳ್ಳವರೇ ಅಜಗಣ್ಣಯ್ಯಗಳು. ಈ ಕುರು ಹಿಟ್ಟು ಹೇಳುವ ಷಟ್‌ಸ್ಥಲ ಬ್ರಹ್ಮಿಗಳ ಆಚರಣೆಯು ತಿಳಿದು ಷಟ್ ಸ್ಥಲದಾಚರಣೆಯುಳ್ಳವರ ತನ್ನಾಚಾರಕ್ಕೊಳಗು ಮಾಡಿಕೊಂಡು, ಷಟ್ ಸ್ಥಲದಾಚರಣೆ ಇಲ್ಲದವರ ತನ್ನಾಚಾರದಿಂದ ಬೇರ್ಪಡಿಸುತ್ತಿಹನು ಬಸ ವಣ್ಣನಪ್ಪಣೆಯಿಂದ ಎಂಬುದರ್ಥ.

(೭) ತ್ರಿವಿಧ ಕ್ರಿಯಿಂದ ಭೇದವನರಿತು ಮಾಡುವುದು ಭಕ್ತಸ್ಥಲ. ಚತುರ್ವಿಧ ಫಲ ಪ್ರಾಪ್ತಿಯನನುಭವಿಸದೆ ನಿತ್ಯಯ ವಸ್ತುವ ಕಾಂಬು ವುದು ಮಹೇಶ್ವರಸ್ಥಲ. ಪಂಚೇಂದ್ರಿಯಂಗಳಲ್ಲಿ ಸಂಚಿತವಲ್ಲಿ ಬಂದು ದನರಿದು ಲಿಂಗಾರ್ಪಿತವಿಂದ ಕೊಂಬುದು ಪ್ರಸಾದಿ ಸ್ಥಲದಿರವು. ಷಡಾಧಾರಂಗಳಿಂದ ಸುಳಿವ ಸೂಕ್ಷ್ಮದ ನೆಲೆಯನರಿದು ಕೂಡುವ ಕೂಟ ಪ್ರಾಣಲಿಂಗಿಯ ಸ್ಥಲದಿರವು. ಸುಖದುಃಖವೆಂಬ ಉಭಯವನಳಿದು ಜರಗು ನಿಚ್ಚಿರಗಾದುದು ಶರಣಸ್ಥಲದಿರವು. ಸುಗಂಧ ಗಂಧವ ಅಗ್ನಿ ಯಲ್ಲಿ ಸಂಬಂಧಿಸಿ ಅಗ್ನಿ ಅಗ್ನಿಯೊಳಗೆ ಅಡಗಿ, ಗಂಧ ಧೂಮದಲ್ಲಿ ತಲೆದೋರಿ, ಗಂಧ ಹಿಂಗೆ, ಆ ಗಂಧವಲ್ಲಿಯೇ ಅಡಗಿದಂತೆ ನಿಂದುದು ಐಕ್ಯಸ್ಥಲ. ಇಂತೀ ಷಟ್‌ಸ್ಥಲ ತ್ರಿಕರಣ ಶುದ್ಧಾತ್ಮಂಗಲ್ಲದೆ ಸಾಧ್ಯವಲ್ಲ ನೋಡಾ ಶಂಭುವಿಂದಿತ್ತ ಸ್ವಯಂಭುವಿಂದತ್ತ ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು.

(೮) ಅಯ್ಯ, ಇದ್ದುದ ವಂಚನೆಯ ಮಾಡದೆ, ಇಲ್ಲದುದಕೆ ಕಡನ ಮಾಡದೆ, ಪರರ ಕಾಡಿ ಬೇಡಿ ತಂದು ದಾಸೋಹವ ಮಾಡದೆ, ತನ್ನ ಬೇಡಿದವರಿಗೆ ಇಲ್ಲೆನ್ನದಿಹುದು ಭಕ್ತಸ್ಥಲ. ಜಿಹ್ವೇಂದ್ರಿಯ ಗುಹ್ಯೇಂದ್ರಿಯ ಮೊದಲಾದ ಸಕಲ ಸಂಸಾರ ವಿಷಯದಲ್ಲಿ ಮನ ಮಗ್ನವಾಗದಿಹುದೇ ಮಹೇಶ್ವರಸ್ಥಲ. ಲಾಂಛನವ ಧರಿಸಿ ಕಾಂಚನಕ್ಕೆ ಕೈಯ್ಯೊಡ್ಡಿ ಬೇಡುವ ಪಂಚ ಮಹಾಪಾತಕರಲ್ಲಿ ಪಾದೋದಕ ಪ್ರಸಾದ ತೆಗೆದುಕೊಳ್ಳದಿಹುದೇ ಪ್ರಸಾದಿಸ್ಥಲ. ತನ್ನ ತಾನರಿಯದ ಭಿನ್ನ ಜ್ಞಾನ ಕ್ರಿಯಿಂದಾಚರಿಸುವ ನರಗುರಿಗಳಿಗೆ ನಮಸ್ಕರಿಸದೆ, ಪರಲೋಕದ ಪದವಿಗಿಚ್ಛೈಸದಿಹುದೇ ಪ್ರಾಣಲಿಂಗಿಸ್ಥಲ. ಇಹಲೋಕದ ಜಡ ಸಂಸಾರಿಗಳ ಸಂಗವ ಜರಿದು, ಗುರುಲಿಂಗ ಜಂಗಮ ಮೂಲವಾದ ಬಾಹ್ಯಕ್ರಿಗಳ ಮರೆದು, ಜನನ ಮರಣಂಗಳಿಲ್ಲದಿಹುದೇ ಶರಣಸ್ಥಲ. ಅರಿಷಡ್ವರ್ಗಂಗಳ ತೊರೆಯದ ಷಡ್ವಿಧ ಲಿಂಗಾಂಗ ಸಮರಸವರಿಯದ ಮಂಗಹೊಲೆ ಮಾದಿಗರ ಸಂಗವ ತೊರೆದು ತಾನಿದಿರೆಂಬುದನರಿಯದೆ ಇಹುದೇ ಐಕ್ಯಸ್ಥಲ. ತಾನಾಗಿ ಕೊಟ್ಟರೆ ಹಿಡಿವುದೇ ಮಧ್ಯಮ ಗುರುಸ್ಥಲ. ಕೊಟ್ಟರೂ ಹಿಡಿಯದಿಹುದೇ ಪರಮ ವಿರಕ್ತಿ ಸ್ಥಲ. ಕಾಡಿ ಬೇಡುವುದೇ ಕಿರಾತಸ್ಥಲ. ಇಂತೀ ನವವಿಧಸ್ಥಲವ ಹರ ಗುರು ವಾಕ್ಯ ಪುರಾತರ ವಚನ ಪ್ರಮಾಣದಿಂದ ವಿಚಾರಿಸಿ ಪುರಾತರ ಕವಳಿಕೆಗೆ ಯೋಗ್ಯವಾದ ಸ್ಥಲವನಂಗಂಗೊಂಡು, ಪರಿಣಾಮಿ, ನಿರುಪಾಧಿ, ಪರಿಪೂರ್ಣ ಎಂಬ ತ್ರಿವಿಧ ಗುರುಗಳಲ್ಲಿ ತೀರ್ಥ ಪ್ರಸಾದವನುಳಿದು ಆಚರಿಸುವುದು ನಿರ್ಮಯಲ ಪದವನೈದುವದು ಬಸವಾದಿ ಪ್ರಮಥರಿಗಲ್ಲದೆ ಭಿನ್ನ ಜ್ಞಾನಿಗಳಿಗೆಲ್ಲಿಯದೋ ಸದಾಶಿವಮೂರ್ತಿ ಲಿಂಗವೇ?

(೯) ಭಕ್ತನಾದಡೆ, ತನುಮನಧನದಾಶೆಯುಳಿದಿರಬೇಕು. ಮಹೇಶ್ವರನಾದಡೆ, ಪರಧನ ಪರಚಿಂತೆ ಪರಾಂಗನೆಯರ ಎಡೆಯುಳಿದುಳಿದಿರಬೇಕು. ಪ್ರಸಾದಿಯಾದಡೆ, ಸುಖರುಚಿಯುಪಗ್ರಹವಂ ಮರೆದು, ಪ್ರಸಾದಕ್ಕೆ ಘಟವಳಿಯದೆ ಉಳಿದಿರಬೇಕು. ಪ್ರಾಣಲಿಂಗಿಯಾದಡೆ ಘಟದಾಸೆಯ ತೊರೆದು, ಪ್ರಾಣಲಿಂಗದೊಳಗೆ ಬೆರಸಿ, ಬೇರಿಲ್ಲದಿರಬೇಕು. ಶರಣನಾದಡೆ ಸತಿ ರತಿಯ ಸಂಗವಳಿದು, ಲಿಂಗಕ್ಕೆ ತಾ ಸತಿಯಾಗಿರಬೇಕು. ಲಿಂಗೈಕ್ಯನಾದಡೆ, ಆಪ್ಯಾಯನದೆಡೆಯುಡುಗಿ ಸುಖ ದುಃಖಮಂ ತಾಳದೆ ನಿಭ್ರಾಂತನಾಗಿರಬೇಕು. ಮಾತಿನ ಮಾಲೆಯಲ್ಲಿ ಸಿಲುಕುವುದೇ

ಶಿವಾಚಾರ? ಇಂತೀ ಷಟ್‌ಸ್ಥಲವಾರಿಗೆಯೂ ಅಳವಡದು. ಸೊಡ್ಡಳ ದೇವನು ಷಟ್‌ಸ್ಥಲದ ಭಕ್ತಿಯನು ಬಸವಣ್ಣಂಗೆ ಮೂರ್ತಿಯ ಮಾಡಿದನು.

(೧೦) ಭಕ್ತಂಗೆ ಕ್ರಿ, ಮಹೇಶ್ವರಂಗೆ ನಿಶ್ಚಯ, ಪ್ರಸಾದಿಗೆ ಅರ್ಪಣ, ಪ್ರಾಣಲಿಂಗಿಗೆ ಯೋಗ, ಶರಣಂಗೆ ನಿಬ್ಬೆರಗು, ಐಕ್ಯಂಗೆ ನಿರ್ಲೇಪ, ಇಂತೀ ಷಟ್‌ಸ್ಥಲವನವಗ್ರಹಿಸಿ ನಿಂದ ವಿರಕ್ತನ ಏಕಸ್ಥಲದಾಟ, ನಿಜ ತತ್ವದ ಕೂಟ. ಶಂಭುವಿಂದಿತ್ತ, ಸ್ವಯಂಭುವಿಂದತ್ತ ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು.

(೧೧) ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವದೊಳಗಣ ಅರುವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸಭಾವವನೈದಿದ ನಿರ್ಭಾವ ಪದದೊಳು ನಿಂದ ಭೇದವೆಂತಿದ್ದಿತೆಂದಡೆ, ಮುಂದೆ ಐಕ್ಯಸ್ಥಲವಾದುದು.

(೧೨) ಭಕ್ತಂಗೆ ವಿಶ್ವಾಸ, ಮಹೇಶ್ವರಂಗೆ ನೈಷ್ಠೆ, ಪ್ರಸಾದಿಗೆ ಅವಧಾನ, ಪ್ರಾಣಲಿಂಗಿಗೆ ಯೋಗ, ಶರಣಂಗೆ ಮುನ್ನವೇ ಬಿಡುಗಡೆ, ಐಕ್ಯಂಗೆ ಕುರುಹುಗೊಂಬುದಕ್ಕೆ ಮುನ್ನವೇ ನಿರಾಳ, ಇಂತೀ ಷಟ್‌ಸ್ಥಲ ಭೇದ ಎನ್ನಯ್ಯ ಪ್ರಿಯ ನಿಷ್ಕಳಂಕ ಮಲ್ಲಿಕಾರ್ಜುನಾ.

(೧೩) ಕಕ್ಷೆ ಭಕ್ತನ ಸೋಂಕು, ಮುಖ ಸೆಜ್ಜೆ ಮಹೇಶ್ವರನ ಸೋಂಕು, ಅಂಗಸಂಬಂಧ ಪ್ರಸಾದಿಯ ಸೋಂಕು, ಕರಸ್ಥಳ ಪ್ರಾಣಲಿಂಗಿಯ ಸೋಂಕು, ಉತ್ತಮಾಂಗ ಶರಣನ ಸೋಂಕು, ಅಮಳೋಕ್ಯ ಐಕ್ಯನ ಸೋಂಕು. ಭಕ್ತಂಗೆ ಆಚಾರಲಿಂಗ, ಮಹೇಶ್ವರಂಗೆ ಸದಾಚಾರಲಿಂಗ, ಪ್ರಸಾದಿಗೆ ವಿಚಾರಲಿಂಗ, ಪ್ರಾಣಲಿಂಗಿಗೆ ಸರ್ವಾವಧಾನ ಸನ್ನದ್ಧಲಿಂಗ, ಶರಣಂಗೆ ಅವಿರಳ ಸಂಪೂರ್ಣಲಿಂಗ, ಐಕ್ಯಂಗೆ ಪರಮ ಪರಿಪೂರ್ಣಲಿಂಗ, ಇಂತೀ ಆರುಸ್ಥಲ, ಷಟ್‌ಕರ್ಮ, ಆ ಷಡ್ವಿಧಲಿಂಗ ಭೇದಂಗಳಲ್ಲಿ ಮುಂದಣ ವಸ್ತು ಒಂದುಂಟೆಂದು, ಸಂಗವ ಮಾಡುವುದಕ್ಕೆ, ಆರಂಗದ ಪಥಗೂಡಿ ಕಾಂಬಲ್ಲಿ ವಸ್ತುವನೊಡಗೂಡುವದೊಂದೇ

ಭೇದ. ಇಂತೀ ಸ್ಥಲ ವಿವರ, ಕೂಟಸಂಬಂಧ. ಏಕಮೂರ್ತಿ ತ್ರಿವಿಧ ಸ್ಥಲವಾಗಿ, ತ್ರಿವಿಧ ಸ್ಥಲಮೂರ್ತಿ ಷಟ್‌ಸ್ಥಲವಾಗಿ, ಮಿಶ್ರಕ್ಕೆ ಮಿಶ್ರ, ತತ್ವಕ್ಕೆ ತತ್ವ, ಬ್ರಹ್ಮಕ್ಕೆ ಪರಬ್ರಹ್ಮ, ಹಲವು ಹೊಲಬಿನ ಪಥದಲ್ಲಿ ಬಂದಡೂ, ಪಥ ಹಲವಲ್ಲದೆ ನಗರಕ್ಕೊಂದೇ ಹೊಲಬು. ಇಂತೀ ಸ್ಥಲ ವಸ್ತು ನಿರ್ವಾಹ. ಶಂಭುಗಿಂದಿತ್ತ, ಸ್ವಯಂಭುವಿಂದತ್ತ ಆತಿಬಳ ನೋಡಾ ಮಾತುಳಂಗ ಮಧುಕೇಶ್ವರನು.

(೧೪) ಕುಚಿತ್ತವಳಿದು ಸುಚಿತ್ತ ನೆಲೆಗೊಂಡು ಆಚಾರಲಿಂಗ ದಲ್ಲಿ ಅವಿರಳ ಸಮರಸ ಸೌಖ್ಯವ ನರಿಯಬಲ್ಲಡೆ ಭಕ್ತನೆಂಬೆನು. ಕುಬುದ್ಧಿಯಳಿದು ಸುಬುದ್ಧಿ ನೆಲೆಗೊಂಡು ಗುರುಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಮಹೇಶ್ವರನೆಂಬೆನು. ಅಹಂಕಾರ ವಳಿದು ನಿರಹಂಕಾರ ನೆಲೆಗೊಂಡು ಶಿವಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯಬಲ್ಲಡೆ ಪ್ರಾಣಲಿಂಗಿ ಎಂಬೆನು. ಅಜ್ಞಾನವಳಿದು ಸುಜ್ಞಾನ ನೆಲೆಗೊಂಡು ಪ್ರಸಾದಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯ ಬಲ್ಲಡೆ ಶರಣನೆಂಬೆನು. ದುರ್ಭಾವವಳಿದು ಸದ್ಭಾವ ನೆಲೆಗೊಂಡು ಮಹಾಲಿಂಗದಲ್ಲಿ ಅವಿರಳ ಸಮರಸ ಸೌಖ್ಯವನರಿಯ ಬಲ್ಲಡೆ ಐಕ್ಯ ನೆಂಬೆನು. ಇಂತೀ ಷಡ್ವಿಧ ಬ್ರಹ್ಮವನೊಡಗೂಡುವ ಮಹಾಶರಣರ ಪಾದಕ್ಕೆ ನಮೋ ನಮೋ ಎಂಬೆನಯ್ಯ ಅಖಂಡೇಶ್ವರಾ.

(೧೫) ಕಾಯ ಇಂದ್ರಿಯಂಗಳಲ್ಲಿ ಮುಚ್ಚಿಹನ್ನಕ್ಕರ ಭಕ್ತ ಸ್ಥಲ ವಿಲ್ಲ. ಆತ್ಮ ಹಲವು ವಿಷಯಂಗಳಲ್ಲಿ ಹರಿವನ್ನಕ್ಕರ ಮಹೇಶ್ವರಸ್ಥಲವಿಲ್ಲ. ಹಿರಿದು ಕಿರಿದನರಿದು, ರೋಚಕ ಅರೋಚಕನೆಂಬನ್ನಕ್ಕರ ಪ್ರಸಾದಿಸ್ಥಲ ವಿಲ್ಲ. ಜಾಗ್ರದಲ್ಲಿ ಕಂಡು, ಸ್ವಪ್ನದಲ್ಲಿ ತೋರಿ, ಸುಷುಪ್ತಿಯಲ್ಲಿ ತಿಳಿವನ್ನಕ್ಕರ ಪ್ರಾಣಲಿಂಗ ಸಂಬಂಧಿಯಲ್ಲ. ಚತುರ್ವಿಧ ಫಲಪದಂಗಳಲ್ಲಿ ಕಾಂಬ ಕಾಣಿಕೆಯುಳ್ಳನ್ನಕ್ಕರ ಶರಣಸ್ಥಲವಿಲ್ಲ. ಅರಿವೆ ಮರೆವೆ ಎಂಬ ಉಭಯದ ಸಂದೇಹವುಳ್ಳನ್ನಕ್ಕರ ಐಕ್ಯಸ್ಥಲವಿಲ್ಲ. ಇಂತೀ ಷಟ್‌ಸ್ಥಲಂ ಗಳಲ್ಲಿ ಸೋಪಾನದ ಮುಟ್ಟಿನಂತೆ ಒಂದ ಬಿಟ್ಟು ಒಂದನೇರುವನ್ನಕ್ಕ ಸ್ಥಳ ಕುಳ ಭರಿತನಾಗಬೇಕು. ಮೇಲನೇರಿ ಕೆಳಗೆ ಇಳಿವೆನೆಂಬ ಭಾವ ನಿಂದಲ್ಲಿ, ಆರನೆಣಿಸಲಿಲ್ಲ. ಮೂರೊಂದು ಬೇರೊಂದು ಮುಟ್ಟಲಿಲ್ಲ. ಕರಗಿದ ಬಂಗಾರಕ್ಕೆ ಕರಚರಣಾದಿಗಳಿಲ್ಲದಂತೆ ಆತ ಕುರುಹಡಗಿದ ಷಟ್‌ಸ್ಥಲ ಬ್ರಹ್ಮ ನಿಷ್ಕಳಂಕ ಮಲ್ಲಿಕಾರ್ಜುನಾ.

(೧೬) ಭಕ್ತಂಗೆ ತ್ರಿವಿಧಮಲ ನಾಸ್ತಿಯಾಗಿರಬೇಕು. ಮಹೇಶ್ವರಂಗೆ ಬಂದ ಜಪ ನೇಮ ಕರ್ಮಂಗಳು ಹಿಂಗಿರಬೇಕು. ಪ್ರಸಾದಿಗೆ ಬಂದು ಸೋಂಕುವ ಸುಗುಣ ದುರ್ಗುಣ ಉಭಯವು ಸೋಂಕುವದಕ್ಕೆ ಮುನ್ನವೇ ಹಿಡಿದುದ ಹಿಡಿದು, ಬಿಡುವುದ ಬಿಟ್ಟು ಅರ್ಪಿಸಬೇಕು. ಪ್ರಾಣಲಿಂಗಿಯಾದೊಡೆ ಆಯತ, ಸ್ವಾಯತ, ಸನ್ನಿಹಿತವೆಂಬ ಸಂದೇಹಕ್ಕಿಕ್ಕದೆ ಸ್ವಯ ಸನ್ನದ್ಧನಾಗಬೇಕು. ಶರಣನಾದಲ್ಲಿ ಆಗು ಚಾಗೆಂಬುದನರಿಯದೆ, ಸ್ತುತಿ ನಿಂದ್ಯಾದಿಗಳಿಗೆ ಮೈಗೊಡದೆ, ರಾಗ ವಿರಾಗವೆಂಬುದಕ್ಕೆ ಮನವಿಕ್ಕದೆ, ಜಿಹ್ವೆ ಗುಹ್ಯೇಂದ್ರಿಯಕ್ಕೆ ಸಿಲುಕದೆ, ಮದಗಜದಂತೆ ಇದಿರನರಿಯದಿಪ್ಪುದು. ಐಕ್ಯನಾದಲ್ಲಿ ಸುಗಂಧದ ಸುಳುಹಿನಂತೆ, ಪಳುಕಿನ ರಾಜತೇಜದಂತೆ, ಶುಕ್ತಿಯ ಅಪ್ಪುವಿನಂತೆ, ಅಣೋರಣೀಯದಲ್ಲಿ ಆವರಿಸಿ ತಿರುಗುವ ನಿಶ್ಚಯತ್ವದಂತೆ, ಬಿಂಬದೊಳಗಣ ತರಂಗದ ನಿಸ್ತರಂಗದಂತೆ, ಇಂತೀ ಷಟ್‌ಸ್ಥಲಕ್ಕೆ ನಿರ್ವಾಹಕನಾಗಿ ನಿಂದ ವಿಶ್ವಾಸದಿಂದ ಸಂಗನಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರಲಿಂಗವನರಿದವರಿಗಲ್ಲದೆ ಸಾಧ್ಯನಲ್ಲ.

(೧೭) ಭಕ್ತನಾದರೆ, ಕಿಂಕರ ಕಿಂಕರನಾಗಿರಬೇಕು. ಮಹೇಶ್ವರನಾದರೆ, ಆದಿ ಅನಾದಿಯನರಿದಿರಬೇಕು. ಪ್ರಸಾದಿಯಾದರೆ, ಒಡಲುಗುಣ ವಿರಹಿತನಾಗಿರಬೇಕು. ಪ್ರಾಣಲಿಂಗಿಯಾದರೆ, ಬಾಹ್ಯ ವಿಚಾರವಿಲ್ಲದಿರಬೇಕು. ಶರಣನಾದರೆ, ನಿಸ್ಸಂಗಿಯಾಗಿರಬೇಕು. ಐಕ್ಯನಾದರೆ, ಬಯಲು ಬಯಲಾಗಿರಬೇಕು. ಇಂತಪ್ಪ ಸ್ಥಲವನರಿದಲ್ಲದೆ ಕೂಡಲಚನ್ನಸಂಗಯ್ಯನಲ್ಲಿ ಸುಸಂಗತಿ ಎನಿಸಬಾರದು.

(೧೮) ಲಾಂಛನದೆಡೆಯಲ್ಲಿ ಹುಸಿಯ ಸಂಪಾದಿಸುವನ್ನಕ್ಕರ ಭಕ್ತನಲ್ಲ. ಪುರುಡುವಿಡಿದಾತ ಮಹೇಶ್ವರನಲ್ಲ. ಪದಾರ್ಥವನರಿದಾತ ಪ್ರಸಾದಿಯಲ್ಲ. ಖ್ಯಾತಿಯುಳ್ಳನ್ನಕ್ಕರ ಪ್ರಾಣಲಿಂಗಿಯಲ್ಲ. ಸತಿಯುಳ್ಳನ್ನಕ್ಕರ ಶರಣನಲ್ಲ. ಪತಿಯುಳ್ಳನ್ನಕ್ಕರ ಐಕ್ಯನಲ್ಲ. ಇಂತೀ ಷಟ್‌ಸ್ಥಲದ ಸಕೀಲವನರಿಯಬಲ್ಲಡೆ ಕೂಡಲಚನ್ನಸಂಗಯ್ಯನಲ್ಲಿ ಸಾಧಕರಿಗಳವಲ್ಲ ಸಹಜದೊಡೆಯರಿಗಲ್ಲದೆ.

(೧೯) ಭಕ್ತಸ್ಥಲ ಗುರು ರೂಪು, ಮಹೇಶ್ವರಸ್ಥಲ ಲಿಂಗರೂಪು, ಪ್ರಸಾದಿಸ್ಥಲ ಜಂಗಮರೂಪು, ಪ್ರಾಣಲಿಂಗಿಸ್ಥಲ ಆತ್ಮರೂಪು, ಶರಣ

ಸ್ಥಲ ಅರಿವು, ಐಕ್ಯಸ್ಥಲ ಶಬ್ದಮುಗ್ಧ ನಿರ್ನಾಮಭಾವ, ಇಂತೀ ಷಟ್‌ಸ್ಥಲಭಕ್ತಿಯ ನೆಮ್ಮಿ, ವಿಶ್ವಾಸವ ಕಂಡು, ಸತ್ಯದಲ್ಲಿ ನಿಂದು, ಬುದ್ಧಿ, ವಿದ್ಯೆ, ಕೇವಲ ವಿದ್ಯೆ, ಇಂತೀ ತ್ರಿವಿಧದಲ್ಲಿ ಸಂಚಿತ, ಪ್ರಾರಬ್ಧ, ಆಗಾಮಿಗಳ ಸ್ವೀಕರಿಸಿ, ಸುಚಿತ್ತದಲ್ಲಿ ದಿವ್ಯತೇಜ ಪ್ರಕಾಶ, ಕೇವಲವಪ್ಪ ಪರಂಜ್ಯೋತಿಯಲ್ಲಿ ವಿಶ್ವಾಸದಿಂದ ಪರವಶನಾಗಬೇಕು. ಸಂಗನಬಸವಣ್ಣ ಸಾಕ್ಷಿಯಾಗಿ, ಬ್ರಹ್ಮೇಶ್ವರಲಿಂಗವ ಕೂಡಬೇಕು.

(೨೦) ಭಕ್ತ ಬ್ರಹ್ಮತತ್ವ, ಮಹೇಶ್ವರ ವಿಷ್ಣುತತ್ವ, ಪ್ರಸಾದಿ ರುದ್ರ ತತ್ವ, ಪ್ರಾಣಲಿಂಗಿ ಈಶ್ವರತತ್ವ, ಶರಣ ಸದಾಶಿವ ತತ್ವ, ಐಕ್ಯ ಮಹಾ ಭೇದತತ್ವ, ಇಂತೀ ಷಡ್ಭಾವದಾದಿ ಅಂತ್ಯದಿಂದ ಭೇದವ ಹಂಚಿಹಾಕಿ, ನೀನು ಅಸಾಧ್ಯನಾದೆಯಲ್ಲ ಚನ್ನಬಸವಣ್ಣ ಪ್ರಿಯ ಭೋಗಮಲ್ಲಿಕಾರ್ಜುನ ಲಿಂಗವೇ.

(೨೧) ಭಕ್ತನ ಅಂಗವಾವುದು, ಮಹೇಶ್ವರನ ಅಂಗವಾವುದು, ಪ್ರಸಾದಿಯ ಅಂಗವಾವುದು, ಪ್ರಾಣಲಿಂಗಿಯ ಅಂಗವಾವುದು, ಶರಣನ ಅಂಗವಾವುದು, ಐಕ್ಯನ ಅಂಗವಾವುದು, ಎಂದರೆ ಹೇಳಿಹೆನಯ್ಯಾ:— ಭಕ್ತಂಗೆ ಪೃಥ್ವಿಯೇ ಅಂಗ, ಮಹೇಶ್ವರಂಗೆ ಅಪ್ಪುವೇ ಅಂಗ, ಪ್ರಸಾದಿಗೆ ಅಗ್ನಿಯೇ ಅಂಗ, ಪ್ರಾಣಲಿಂಗಿಗೆ ವಾಯುವೇ ಅಂಗ, ಶರಣಂಗೆ ಆಕಾಶವೇ ಅಂಗ, ಐಕ್ಯಂಗೆ ಆತ್ಮನೇ ಅಂಗ, ಇಂತೀ ಅಂಗಸ್ಥಲಂಗಳ ಭೇದವ ತಿಳಿವುದಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೨೨) ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮ ವೊದಲಾದ ಷಟ್‌ಸ್ಥಲಂಗಳ ವಿವರವೆಂತೆಂದೊಡೆ, ಪೃಥ್ವಿ ಭಕ್ತ, ಅಪ್ಪು ಮಹೇಶ, ಅಗ್ನಿ ಪ್ರಸಾದಿ, ವಾಯು ಪ್ರಾಣಲಿಂಗಿ, ಆಕಾಶ ಶರಣ, ಆತ್ಮ ಐಕ್ಯ. ಇದಕ್ಕೆ ಶೃತಿಃ— "ಸದ್ಯೋಜಾತ ಯಥಾ ಭಕ್ತ ವಾಮದೇವ ಮಹೇಶ್ವರಃ ಅಘೋರಂ ಚ ಪ್ರಸಾದೀನಾಂ ತತ್ಪುರುಷಂ ಪ್ರಾಣಲಿಂಗೀ ಈಶಾನಂ ಶರಣಂ ದೃಷ್ಟ್ವಾ ಐಕ್ಯನಾಮಾತ್ಮ ಮಯಂ ಯಥಾ" ಇಂತೆಂದುದಾಗಿ .....ಸೌರಾಷ್ಟ್ರ ಸೋಮೇಶ್ವರಲಿಂಗ ತಾನು ತಾನಾಗಿರಬೇಕಯ್ಯಾ.

(೨೩) ಘ್ರಾಣಕ್ಕೂ, ಗಂಧಕ್ಕೂ ಪೃಥ್ವಿಯೆಂಬ ಮಹಾಭೂತ. ಅಲ್ಲಿ ನಿವೃತ್ತಿ ಎಂಬ ಕಲೆ ಇಹುದು. ಆ ಕಲೆಯಲ್ಲಿ ಕ್ರಿಯಾಶಕ್ತಿಯುಕ್ತ

ವಾದ ಆಚಾರಲಿಂಗವ ಧರಿಸಿದಾತ ಭಕ್ತನು. ಜಿಹ್ವೆಗೂ ಗುಹ್ಯಕ್ಕೂ ಅಪ್ಪುವೆಂಬ ಮಹಾಭೂತ. ಅಲ್ಲಿ ಪ್ರತಿಷ್ಠೆ ಎಂಬ ಕಲೆ ಇಹುದು. ಆ ಕಲೆಯಲ್ಲಿ ಜ್ಞಾನಶಕ್ತಿಯುಕ್ತನಾದ ಗುರುಲಿಂಗವ ಧರಿಸಿದಾತ ಮಹೇಶ್ವರನು. ನೇತ್ರಕ್ಕೂ ಪಾದಕ್ಕೂ ಅಗ್ನಿ ಎಂಬ ಮಹಾಭೂತ. ಅಲ್ಲಿ ವಿದ್ಯೆ ಎಂಬ ಕಲೆ ಇಹುದು. ಆ ಕಲೆಯಲ್ಲಿ ಇಚ್ಛಾಶಕ್ತಿ ಯುಕ್ತವಾದ ಶಿವಲಿಂಗ ಧರಿಸಿಕೊಂಡಾತ ಪ್ರಸಾದಿ. ತ್ವಕ್ಕಿಗೂ ಪಾಣಿಗೂ ವಾಯುವೆಂಬ ಮಹಾಭೂತ. ಅಲ್ಲಿ ಶಾಂತಿ ಎಂಬ ಕಲೆ ಇಹುದು. ಆ ಕಲೆಯಲ್ಲಿ ಆದಿಶಕ್ತಿಯುಕ್ತವಾದ ಜಂಗಮಲಿಂಗವ ಧರಿಸಿಕೊಂಡಾತ ಪ್ರಾಣಲಿಂಗಿ. ಶ್ರೋತ್ರಕ್ಕೂ ವಾಕ್ಕಿಗೂ ಆಕಾಶವೆಂಬ ಮಹಾಭೂತ. ಅಲ್ಲಿ ಶಾಂತ್ಯಾತೀತ ಎಂಬ ಕಲೆ ಇಹುದು. ಆ ಕಲೆಯಲ್ಲಿ ಪರಾಶಕ್ತಿಯುಕ್ತವಾದ ಪ್ರಸಾದಲಿಂಗವ ಧರಿಸಿಕೊಂಡಾತ ಶರಣನು. ಆತ್ಮಾಂಗಕ್ಕೆ ಮನವೆಂಬ ಮಹಾಭೂತ. ಅಲ್ಲಿ ಶಾಂತ್ಯಾತೀತೋತ್ತರ ಎಂಬ ಕಲೆ ಇಹುದು. ಆ ಕಲೆಯಲ್ಲಿ ಚಿಚ್ಛಕ್ತಿಯುಕ್ತವಾದ ಮಹಾಲಿಂಗವ ಧರಿಸಿಕೊಂಡಾತ ಐಕ್ಯನು. ಇಂತೀ ಷಟ್‌ಸ್ಥಲ ಭಕ್ತರು ಷಡ್ವಿಧ ಲಿಂಗವ ಧರಿಸಿ ನಿರಾಳಲಿಂಗಾರ್ಚನೆಯ ಮಾಡುತ್ತಿಹರು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ಶರಣರು.

(೨೪) ಕೂಟದ ಲಕ್ಷಣವುಳ್ಳನ್ನಕ್ಕ ಐಕ್ಯಸ್ಥಲ. ಭಾವದ ಕಲ್ಪಿತವುಳ್ಳನ್ನಕ್ಕ ಶರಣಸ್ಥಲ. ಕೊಂಡಿಹೆ ಕೊಟ್ಟಿಹೆನೆಂಬನ್ನಕ್ಕ ಪ್ರಾಣಲಿಂಗಿಯ ಸ್ಥಲ. ಊಡಿಹೆನುಟ್ಟಿಹೆನೆಂಬನ್ನಕ್ಕ ಪ್ರಸಾದಿಸ್ಥಲ. ಅರಿದಿಹೆನರಿದೆನೆಂಬನ್ನಕ್ಕ ಮಹೇಶ್ವರ ಸ್ಥಲ-ಗುರುವಿಂಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನವ ಕೊಟ್ಟೆನೆಂಬನ್ನಕ್ಕ ಭಕ್ತಸ್ಥಲ. ಇಂತು ಸ್ಥಲದಿಂದ ಸ್ಥಲಲೇಪವಾದ ಮತ್ತೆ ಮೀರಿದ ತೆರನ ನೀವೇ ಬಲ್ಲಿರಿ ನಿಃಕಳಂಕ ಮಲ್ಲಿಕಾರ್ಜುನಾ.

(೨೫) ಸಮದೃಷ್ಟಿಯಾಗದವನ ಭಕ್ತನೆಂತೆಂಬೆ? ವಿಷಯಂಗಳಳಿಯದವನ ಮಹೇಶನೆಂತೆಂಬೆ? ಶಿವಕರುಣ ಹಡೆಯದನ್ನಕ್ಕ ಪ್ರಸಾದಿ ಎಂತೆಂಬೆ? ಅಂಗೇಂದ್ರಿಯಂಗಳಳಿಯದವನ ಪ್ರಾಣಲಿಂಗಿ ಎಂತೆಂಬೆ? ಸಂಕಲ್ಪ ಹರಿಯದನ್ನಕ್ಕ ಶರಣನೆಂತೆಂಬೆ? ನಮ್ಮ ಕಪಿಲಸಿದ್ಧಮಲ್ಲೇಶನ ಕೂಟವನರಿಯದವನ ಐಕ್ಯನೆಂತೆಂಬೆ?

(೨೬) ಭಕ್ತನಾದ ಬಳಿಕ ಜಂಗಮದ ಗುಣವನರಸಲದೇಕೋ? ಮಹೇಶನಾದ ಬಳಿಕ ವಿಷಯಕ್ಕೆ ಎಳಿಸುವದೇತಕೋ? ಪ್ರಸಾದಿಯಾದ ಬಳಿಕ ಕಂಡುದಕ್ಕೆ ಕೈ ದುಡುಕಲದೇಕೋ? ಪ್ರಾಣಲಿಂಗಿಯಾದ ಬಳಿಕ ಪ್ರಪಂಚದ ಹಂಗೇಕೋ? ಶರಣನಾದ ಬಳಿಕ ಮೋಕ್ಷದ ಹಂಗೇಕೋ? ಐಕ್ಯನಾದ ಬಳಿಕ ನಮ್ಮ ಕಪಿಲಸಿದ್ಧಮಲ್ಲಯ್ಯನ ನಾಮಸ್ಮರಣೆಯದೇತಕೋ?

(೨೭) ಭಕ್ತಂಗೆ ಭಕ್ತಿಯೇ ಲಿಂಗಾರ್ಚನೆ. ಮಹೇಶಂಗೆ ಜ್ಞಾನವೈರಾಗ್ಯವೇ ಲಿಂಗಾರ್ಚನೆ. ಪ್ರಸಾದಿಗೆ ಸಮದೃಷ್ಟಿಯೇ ಲಿಂಗಾರ್ಚನೆ. ಪ್ರಾಣಲಿಂಗಿಗೆ ಪಂಚಪ್ರಾಣಾಃ ಪರಶಿವ ಎಂಬುದೇ ಲಿಂಗಾರ್ಚನೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

---

## ಆರು ಅಂಗ ಲಿಂಗಸ್ಥಲಗಳ ಸಾಮಾನ್ಯ ವಿವೇಚನೆ.

(೧) ಪರಬ್ರಹ್ಮ ಅನಾದಿ ವಸ್ತುವೇ ಅನಿರ್ವಾಚ್ಯವಪ್ಪ ಮಹಾ ಶೂನ್ಯವನ್ನೈದಿ ಆನಂದದಿಂ ಸಹಜ ವಸ್ತುವಾಗಿರ್ದ ನಿಮ್ಮ ಮಹಾತ್ಮೆಯು ಅನಿರ್ವಾಚ್ಯದಿಂ ಸ್ವಯಂಭು ಮೂರ್ತಿಯಾಗಿ ನಿಂದಿರಿ. ಇಂತೀ ಸ್ವಯಂಭೂ ಮೂರ್ತಿಯ ಪಂಚಮುಖಂಗಳಿಂ ಪಂಚಭೂತಂಗಳಾಗಿ ರ್ಪುದು. ಆ ಪಂಚಭೂತಂಗಳಿಂದವೇ ಹದಿನಾಲ್ಕು ಭುವನ ಬ್ರಹ್ಮಾಂ ಡಂಗಳ ರಚಿಸಿದಿರಿ. ಪಂಚಭೂತಂಗಳಿಂದವೇ ಪಂಚಭೌತಿಕ ತತ್ವವಾಗಿ ಮಾಯಾಂಶ ಲೀಲಾವಿಲಾಸ ಶರೀರವಾಗಲು, ಈ ಲೀಲಾವತಾರವೆಂ ತಾಯಿತ್ತೆಂದಡೆ,

ಆ ಲೀಲಾವಿಲಾಸದ ನಾದಶಕ್ತಿಯೇ ಅಂಗವಾಗಿ, ಆ ಅಂಗದಲ್ಲಿ ಮೋಹನವಿಲಾಸ ಬಿಂದುವೇ ಜೀವವಾಗಿ, ಆನಂದಕಳಾ ಪ್ರಕಾಶ ಮರವೆಯೇ ಆತ್ಮಹೇತುವಾಗಿ, ನಿಂದ ಮಾಯೆ ಚಿತ್‌ಶಕ್ತಿ ಕೂಡಿ ದಲ್ಲಿ ಆತ್ಮನಾಗಿ, ಭೌತಿಕ ತತ್ವದಲ್ಲಿ ಬೆರೆದು, ಮರಹು ತಲೆದೋರಿ ಪಾಶಬಂಧತ್ವದಿಂ ಜೀವನೆನಿಸಿ, ಅಜ್ಞಾನ ಸಂಬಂಧವಾಗಿ ಮಾಯಾ ಶರೀರವಾದಲ್ಲಿ ಉತ್ಪತ್ತಿ ಸ್ಥಿತಿ ಲಯ ವ್ಯಾಪ್ಯ ಉಂಟಾದ ಆತ್ಮಂಗೆ ಆ ಪರಬ್ರಹ್ಮವು ತಾನೇ ಶ್ರೀಗುರುವಾಗಿ ಬಂದು ತನ್ನಂಶವಾದಾತ್ಮರಿಗೆ ನಿಜಾ ಪಯವ ಸೃಜಿಸಲಾಗಿ ಆತ್ಮನು ತನ್ನ ಮರೆದು ನಿಜಾನಂದ ಸುಖ ದಲ್ಲಿ ತನ್ನ ಸಂಬಂಧವಪ್ಪ ಕಾಯ ಜೀವ ಆತ್ಮ ಪ್ರಾಣ ಮನಂಗ ಳಿಗೆ ಆಶ್ರಯವಾದ ಪಂಚತತ್ವಾಂಗಮಂ ಸಹಜದಲ್ಲಿ ಸಂಬಂಧವ ಮಾಡಿದ ಪರಿ ಎಂತೆಂದೊಡೆ,

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮ ಎಂಬಿ ಷಡ್ಭೂತಂಗಳ ಗುಣಧರ್ಮಕರ್ಮಂಗಳು ತನ್ನ ಕಾಯ ಜೀವ ಆತ ಪ್ರಾಣ ಮನ ಜ್ಞಾನಂಗಳಲ್ಲಿ ಷಡ್ಭೂತಂಗಳ ಸಂಬಂಧದಿಂದ ಕರ್ಮೇಂ ದ್ರಿಯ, ಜ್ಞಾನೇಂದ್ರಿಯ, ವಿಷಯೇಂದ್ರಿಯ, ಪವನೇಂದ್ರಿಯ, ಕರಣೇಂ ದ್ರಿಯಂಗಳೇ ಸ್ಥಳಕುಳಂಗಳಾಗಿ, ಸ್ಥಳವಾರು, ಅಂಗವಾರು, ಲಿಂಗ ವಾರು, ಅಂಗಲಿಂಗದ್ವಯೋರೈಕ್ಯತ್ವದಿಂ ಮಂತ್ರವಾಗಿ ಆ ಮಂತ್ರವೆ ಷಟ್‌ಸ್ಥಲ ಬ್ರಹ್ಮಮೂರ್ತಿಯ ಸಹಜಾನಂದ ವಸ್ತುವೇ ತಾನಾದ ಲೀಲೆ ಎಂತೆಂದೊಡೆ,

ಪೃಥ್ವಿಯಲ್ಲಿ ಕಠಿಣಗುಣ, ಅಪ್ಪುವಿನಲ್ಲಿ ಮೃದುಗುಣ, ಅಗ್ನಿಯಲ್ಲಿ ಉಷ್ಣಗುಣ, ವಾಯುವಿನಲ್ಲಿ ಸ್ಪರ್ಶನಗುಣ, ಆಕಾಶದಲ್ಲಿ ಸಂಚಲಗುಣ, ಆತ್ಮನಲ್ಲಿ ಮರಹುಗುಣ, ಇಂತೀ ಷಡ್ಭೂತಂಗಳು ಅಂಗದಲ್ಲಿ ಸಂಬಂಧವೆಂತೆಂದೊಡೆ, ಪೃಥ್ವಿಯಲ್ಲಿ ಕಠಿಣಗುಣ, ಸ್ಥೂಲಕಾಯದ ಕರ್ಮೇಂದ್ರಿಯಂಗಳಲ್ಲಿ ತಿಳಿದು, ಅಪ್ಪುವಿನಲ್ಲಿ ಮೃದುಗುಣ, ಸೂಕ್ಷ್ಮ ಜೀವದ ಜ್ಞಾನೇಂದ್ರಿಯಂಗಳಲ್ಲಿ ತಿಳಿದು, ಅಗ್ನಿಯಲ್ಲಿ ಉಷ್ಣಗುಣ, ಕಾರಣಾತ್ಮದ ವಿಷಯೇಂದ್ರಿಯಂಗಳಲ್ಲಿ ತಿಳಿದು, ವಾಯುವಿನಲ್ಲಿ ಸ್ಪರ್ಶನಗುಣ ಜಾಗ್ರದ ಪ್ರಾಣ ಪವನೇಂದ್ರಿಯಂಗಳಲ್ಲಿ ತಿಳಿದು, ಆಕಾಶದಲ್ಲಿ ಸಂಚಲಗುಣ, ಸ್ವಪ್ನದ ಮನ ಕರಣೇಂದ್ರಿಯಂಗಳಲ್ಲಿ ತಿಳಿದು, ಆತ್ಮನಲ್ಲಿ ಮರಹುಗುಣ, ಸುಷುಪ್ತಿಯ ಜ್ಞಾನದ ವಿವೇಕದಲ್ಲಿ ತಿಳಿದು,

ವಾಕ್ಕು ಪಾಣಿ ಪಾದ ಪಾಯು ಗುಹ್ಯವೆಂದು ಸ್ಥೂಲ ಕಾಯಾವಸ್ಥೆಯ ಕರ್ಮೇಂದ್ರಿಯಂಗಳ ಕಠಿಣ ಗುಣವ ತಿಳಿದು ಕಾಯ ಕರ್ಮ ನಾಸ್ತಿಯಾಗಿ, ಭೃತ್ಯಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ, ಭಕ್ತಸ್ಥಲ. ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣವೆಂಬ ಸೂಕ್ಷ್ಮ ಜೀವನಾವಸ್ಥೆಯ ಜ್ಞಾನೇಂದ್ರಿಯಂಗಳ ಮೃದುಗುಣವಳಿದು ಕ್ರೋಧ ಕರ್ಮನಾಸ್ತಿಯಾಗಿ ನಿಷ್ಠಾ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಮಾಹೇಶ್ವರಸ್ಥಲ. ಶಬ್ದ, ಸ್ಪರ್ಶ, ರೂಪ, ರುಚಿ, ಗಂಧವೆಂಬ ಕಾರಣಾತ್ಮಾವಸ್ಥೆಯ ವಿಷಯೇಂದ್ರಿಯಂಗಳ ದಹನ ಗುಣವಳಿದು ಲೋಭ ಕರ್ಮನಾಸ್ತಿಯಾಗಿ ವಿಶ್ವಾಸ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಪ್ರಸಾದಿಸ್ಥಲ. ಪ್ರಾಣಾಪಾನ ವ್ಯಾನ ಉದಾನ ವಾಯುವೆಂಬ ಜಾಗ್ರಾವಸ್ಥೆಯಂ ಪ್ರಾಣಾವಸ್ಥೆಯ ಪವನೇಂದ್ರಿಯಂಗಳ ಸ್ಪರ್ಶನ ಗುಣವಳಿದು ಮೋಹಕರ್ಮ ನಾಸ್ತಿಯಾಗಿ ನಿರ್ಮಲಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಪ್ರಾಣಲಿಂಗಿಸ್ಥಲ. ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರವೆಂಬ ಮನಾವಸ್ಥೆಯ ಕರಣೇಂದ್ರಿಯಂಗಳ ಸಂಚಲಗುಣವಳಿದು ಮದ ಕರ್ಮನಾಸ್ತಿಯಾಗಿ ಆನಂದ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಶರಣಸ್ಥಲ. ಅಷ್ಟಾತ್ಮಂಗಳ ಮರಹು ಗುಣವೆಂಬ ಸುಷುಪ್ತಾವಸ್ಥೆಯ ಅಜ್ಞಾನದ ಅಂಧಕಾರದ ಪ್ರಪಂಚು ಗುಣವಳಿದು ಮತ್ಸರ ಕರ್ಮ ನಾಸ್ತಿಯಾಗಿ ಸಮರಸ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಐಕ್ಯಸ್ಥಲ. ಇಂತೀ ಷಡ್ಭೂತಂಗಳ ಗುಣಕರ್ಮ ಧರ್ಮಂಗಳೇ ಕರ್ಮೇಂ

ದ್ರಿಯ, ಜ್ಞಾನೇಂದ್ರಿಯ, ವಿಷಯೇಂದ್ರಿಯ, ಪವನೇಂದ್ರಿಯ, ಕರಣೇಂ
ದ್ರಿಯಂಗಳಲ್ಲಿ ತಿಳಿದು ಅರುಹು ತಲೆದೋರಿ ಆರು ಸ್ಥಲವೇ ಅಂಗವಾಗಿ,

ಮತ್ತಂ, ಅಮಂಗಲ, ಪರದಾರ, ದುರ್ಮಾರ್ಗ ಸ್ತ್ರೀಯಾಲಿಂ
ಗನ, ನಿಂದೆ ಇಂತೀ ದುಃಕ್ರಿಯೆಯ ಕುಚಿತ್ತವಳಿದು, ಶೌಚಶುದ್ಧಿ,
ಸ್ವಸ್ತ್ರೀಗಮನ, ಗುರುಮಾರ್ಗ ಲಿಂಗಧಾರಣ, ಪಂಚಾಕ್ಷರಪಠಣ,
ಇಂತೀ ಸತ್ಕ್ರಿಯೆಯಲ್ಲಿ ಚಿತ್ತವ ನೆಲೆಗೊಳಿಸಿ ನಿಂದುದೇ ಆಚಾರಲಿಂಗ.
ದುರ್ವಾಸನಾಪೇಕ್ಷೆ, ಪರಪಾಕಭಕ್ಷ, ಭವಿನಿರೀಕ್ಷಣ, ಸ್ಥಾವರ ಮೂರ್ತಿ
ಪೂಜಾ ಸ್ಪರ್ಶನ, ಅನ್ಯದೈವಮತ ಪುರಾಣ ಶ್ರವಣ, ಇಂತೀ ಅಜ್ಞಾನದ
ಕುಬುದ್ಧಿಯಳಿದು, ಇಷ್ಟಲಿಂಗ ನಿರ್ಮಾಲ್ಯ ಗಂಧ ಸುವಾಸನೆ, ಚರ
ಪ್ರಸಾದ ಭಕ್ಷಣ, ಸಜ್ಜನಭಕ್ತಿ ನಿರೀಕ್ಷಣ, ಗುರುಪಾದ ಪೂಜಾಸ್ಪರ್ಶನ,
ಶಿವಾಗಮಶ್ರವಣ, ಇಂತೀ ಸುಜ್ಞಾನದಲ್ಲಿ ಸುಬುದ್ಧಿಯ ನೆಲೆಗೊಳಿಸಿ
ನಿಂದುದೇ ಗುರುಲಿಂಗ. ಚಂದ್ರನಾಗರ ಕರ್ಪೂರ ಮೃಗನಾಭಿ ಪತ್ರ
ಪುಷ್ಪಾದಿ ಫಲಂಗಳ ನಾನಾ ದಿವ್ಯ ಗಂಧ ಪರಿಮಳ ನಾಸಿಕ ಲಂಪಟ,
ಭಕ್ಷ್ಯಭೋಜ್ಯಾದಿ ಷಡ್ರುಚಿಗಳು, ಅಧರ ಪಾನಾದಿ ರುಚಿಗಳ ಜಿಹ್ವಾಲಂಪಟ,
ನಾಟ್ಯ ಚಿತ್ರಾಭರಣ ವರ್ಣಾದಿರೂಪು, ನೇತ್ರಲಂಪಟ, ವೀಣಾಮೃದಂಗ
ದೇಹಸ್ಪರ್ಶನಾದಿ ಸ್ಪರ್ಶನತ್ವ, ಗೀತ ಹಾಸ್ಯರಸ ಪ್ರಸಂಗ, ರಾಗಾದಿ ವಚನ
ಶ್ರೋತ್ರಲಂಪಟ, ಇಂತೀ ಅಹಂಕಾರದಿಚ್ಛೆಯಂ ಬಿಟ್ಟು, ಗುರು ನಿರ್ಮಾಲ್ಯ
ಗಂಧ ಸುವಾಸನಾ ವಿಷಯ, ತೀರ್ಥ ಪ್ರಸಾದವೇ ರುಚಿ ವಿಷಯ,
ಪಂಚಪ್ರಣವ ಪಂಚ ಬೀಜ ರೂಪು ವಿಷಯ, ತ್ರಿವಿಧ ಪ್ರಸಾದವೇ
ಸ್ಪರ್ಶನ ವಿಷಯ, ಪ್ರಣವ ನಾದವೇ ಶಬ್ದ ವಿಷಯ, ಇಂತೀ ನಿರಹಂ
ಕಾರದ ಶಿವ ಇಚ್ಛೆಯಿಂ ನೆಲೆಗೊಳಿಸಿ ನಿಂದುದೇ ಶಿವಲಿಂಗ. ಸ್ವಗೃಹ
ಪ್ರವೇಶ ಸ್ವಕ್ಷೇತ್ರಂಗಳಿಂದವೇ ಪ್ರಾಣವಾಯುವಾಗಿ, ಸಂಚಿತದ ಮೋಕ್ಷ
ಸಾಧನಾಭಿಮಾನವಂ ದಾರೇಷಣ ಪುತ್ರೇಷಣ ಮಿತ್ರೇಷಣ ತ್ರಯಂ
ಗಳನೆ ಅಪಾನ ವಾಯುವಾಗಿ, ಸಂಚಿತವ ಮೋಕ್ಷ ಸಾಧನಾಭಿ
ಮಾನವಂ ಧನ ಕನಕ ವಸ್ತ್ರಾಭರಣಂಗಳ ವ್ಯಾನವಾಯುವಾಗಿ, ಸಂಚಿ
ತವ ಮೋಕ್ಷ ಸಾಧನಾಭಿಮಾನವಂ ಆಹಾರ ನಿದ್ರೆ ಭಯ ಮೈಥು
ನಂಗಳ ಉದಾನ ವಾಯುವಾಗಿ, ಸಂಚಿತವ ಮೋಕ್ಷ ಸಾಧನಾಭಿ
ಮಾನವಂ ಜಾಗ್ರತ್ ಸ್ವಪ್ನ ಸುಷುಪ್ತಿ ತುರೀಯಂಗಳ ಸಮಾನ
ವಾಯು ಸಂಚಿತವ ಮೋಕ್ಷ ಸಾಧನಾಭಿಮಾನವಂ ಇಂತೀ ವಾಯು

ವ್ಯಾಕುಲ ಮನವ್ಯಾಧಿಗಳ ಬಿಟ್ಟು, ಶ್ರೀ ಗುರುವಿನಲ್ಲಿ ಪ್ರಾಣಾಭಿ
ಮಾನವಂ ನಿಲ್ಲಿಸಿ, ಷಡುಲಿಂಗಂಗಳಲ್ಲಿ ಅಪಾನ ವಾಯುವಭಿಮಾನವಂ
ನಿಲ್ಲಿಸಿ, ಭಕ್ತ ಜಂಗಮುದಲ್ಲಿ ವ್ಯಾನ ವಾಯುವಭಿಮಾನವಂ ನಿಲ್ಲಿಸಿ
ಇಷ್ಟ ಪ್ರಾಣ ಭಾವಂಗಳಲ್ಲಿ ಉದಾನ ವಾಯುವಭಿಮಾನವಂ ನಿಲ್ಲಿಸಿ,
ಮಂತ್ರ ಧ್ಯಾನ ತೂರ್ಯಂಗಳಲ್ಲಿ ಸಮಾನ ವಾಯುವಭಿಮಾನವಂ
ನಿಲ್ಲಿಸಿ, ಇಂತೀ ಆದಿ ಮೂಲಸ್ಥಾನದಿಂ ಸುಮನವ ನೆಲೆಗೊಳಿಸಿ ನಿಂದುದೇ
ಜಂಗಮಲಿಂಗ. ಯಮ ನಿಯಮಾದಿ ಅಷ್ಟಾಂಗ ಯೋಗಂಗಳ
ಅಂಗಸಾಧನ ತನು ಸಂಚಲವಹ ಹಮ್ಮಿನ ಮತ್ತತ್ವವಂ ಬಿಟ್ಟು, ಚತು
ರ್ಮುದ್ರಾಂಗ ಲಕ್ಷಣ ಜೀವ ಮನ ಸಂಚಲ ಹಮ್ಮಿನ ಮತ್ತತ್ವವಂ
ಬಿಟ್ಟು, ಅಣಿಮಾದ್ಯಷ್ಟ ಸಿದ್ಧಿಗಳಿಂದಾತ್ಮ ಬುದ್ಧಿಹೀನತ್ವದ ಸಂಚಲದ
ಹಮ್ಮಿನ ಮತ್ತತ್ವವಂ ಬಿಟ್ಟು, ವಾಯು ಯೋಗ, ಮನ ಯೋಗ,
ಲಯಯೋಗಂಗಳ ತಸ್ಕರ ಭ್ರಾಂತಿ ಸಂಚಲ ಹಮ್ಮಿನ ಮತ್ತತ್ವವಂ
ಬಿಟ್ಟು, ಪಿಂಡ ಬ್ರಹ್ಮಾಂಡಯೋರೈಕ್ಯಂ ಎಂಬ ಬ್ರಹ್ಮೋಹಂವೆಂಬ
ಅವಧೂತ ಸಂಚಲ ಹಮ್ಮಿನ ಮತ್ತತ್ವವಂ ಬಿಟ್ಟು, ಯತಿ ಯೋಗ
ಸಿದ್ಧತ್ವ, ಮುದ್ರಾ ಲಕ್ಷಣ, ಭ್ರಾಂತ ವೇದಾಂತವೆಂಬ ಅಂಗ ಯೋಗ
ಮಾರ್ಗಂಗಳ ಹಮ್ಮಿನ ಮತ್ತತ್ವವಂ ಬಿಟ್ಟು, ಭೃತ್ಯಾಚಾರ, ಲಿಂಗಾ
ಚಾರ, ಶಿವಾಚಾರ, ಗಣಾಚಾರ, ಸದಾಚಾರಂಗಳೆಂಬ ಪಂಚ ಆಚಾ
ರಂಗಳ ಪರಾಶಕ್ತಿ ತಂತ್ರದ ಸುಜ್ಞಾನವ ನೆಲೆಗೊಳಿಸಿ ನಿಂದುದು ಪ್ರಸಾ
ದಲಿಂಗ. ಪ್ರಪಂಚ, ಸಂಕಲ್ಪ, ಆಶೆ, ಅಜ್ಞಾನ, ಮರಹು, ಇಂತಿವು
ಮಾಯಾ ಮಿಥ್ಯವಂ ಬಿಟ್ಟು, ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ
ಇಂತಿವರಲ್ಲಿ ಅರುಹು ಎಂಬ ಪರಂಜ್ಯೋತಿ ಚಿತ್‌ಶಕ್ತಿ ಸಾವಧಾನವ
ನೆಲೆಗೊಳಿಸಿ ನಿಂದುದೇ ಮಹಾಲಿಂಗ. ಇಂತೀ ಭಾವ, ಜ್ಞಾನ, ಮನ,
ಬುದ್ಧಿ, ಚಿತ್ತ, ಅಹಂಕಾರಗಳಡಗಿ ಅರುಹು ತಲೆದೋರಿದ ಕುಳಂಗಳೇ
ಲಿಂಗವಾಗಿ, ಇಂತೀ ಸ್ಥಳ ಕುಳಂಗಳೇ ಅಂಗ ಲಿಂಗವಾಗಿ, ಆ ಅಂಗ
ದಲ್ಲಿ ಆರು ಸ್ಥಳ ಸಂಬಂಧವಾದ ಪರಿ ಎಂತೆಂದೊಡೆ,

ಪಾದಾದಿ ಗುದಪರಿಯಂತರ ಪೃಥ್ವೀತತ್ವ, ಆ ತತ್ವದ ಕಠಿಣ
ಗುಣವಳಿದು ಕರ್ಮ ಸಾದಾಖ್ಯದಿಂ ಭೃತ್ಯತ್ವವೇ ಭಕ್ತಸ್ಥಲ. ಗುದಾದಿ
ಗುಹ್ಯ ಪರ್ಯಂತರ ಅಪ್ಪು ತತ್ವ, ಆ ತತ್ವದ ಮೃದುಗುಣವಳಿದು,
ಕರ್ತೃ ಸಾದಾಖ್ಯದಿಂ ನಿಷ್ಠತ್ವವೇ ಮಹೇಶ್ವರಸ್ಥಲ. ಗುಹ್ಯಾದಿ ನಾಭಿ

ಪರ್ಯಂತರ ಅಗ್ನಿತತ್ವ, ಆ ತತ್ವದ ದಹನಗುಣವಳಿದು ಮೂರ್ತಿ ಸಾದಾಖ್ಯದಿಂ ವಿಶ್ವಾಸವೇ ಪ್ರಸಾದಿಸ್ಥಲ. ನಾಭ್ಯಾದಿ ಹೃದಯ ಪರಿ ಯಂತರ ವಾಯುತತ್ವ, ಆ ತತ್ವ ಸ್ಪರ್ಶನ ಗುಣವಳಿದು, ಅಮೂರ್ತಿ ಸಾದಾಖ್ಯದಿಂ ನಿರ್ಮಲವೇ ಪ್ರಾಣಲಿಂಗಿಸ್ಥಲ. ಹೃದಯಾದಿ ಕಂಠ ಪರಿ ಯಂತರ ಆಕಾಶ ತತ್ವ, ಆ ತತ್ವದ ಸಂಚಲ ಗುಣವಳಿದು, ಶಿವ ಸಾದಾಖ್ಯದಿಂ ಆನಂದವೇ ಶರಣಸ್ಥಲ. ಕಂಠಾದಿ ಭ್ರೂಮಧ್ಯ ಪರ್ಯಂ ತರ ಆತ್ಮ ತತ್ವ, ಆ ತತ್ವದ ಮರಹು ಗುಣವಳಿದು ಮಹಾ ಸಾದಾ ಖ್ಯದಿಂ ಸಮರಸತ್ವವೇ ಐಕ್ಯಸ್ಥಲ.

ಇಂತೀ ಪಾದಾದಿ ನಾಲ್ವತ್ತೆಂಟು ಅಂಗುಲ ಪ್ರಮಾಣದಿಂದೂರ್ಧ್ವ ಭಕ್ತಸ್ಥಲ. ಆ ಭಕ್ತಸ್ಥಲದಿಂದ ನಾಲ್ಕಂಗುಲ ಊರ್ಧ್ವ ಮಹೇಶ್ವರ ಸ್ಥಲ. ಆ ಮಹೇಶ್ವರ ಸ್ಥಲದಿಂದ ಆರಂಗುಲ ಊರ್ಧ್ವ ಪ್ರಸಾದಿಸ್ಥಲ. ಆ ಪ್ರಸಾದಿಸ್ಥಲದಿಂದ ಎಂಟಂಗುಲ ಊರ್ಧ್ವ ಪ್ರಾಣಲಿಂಗಿಸ್ಥಲ. ಆ ಪ್ರಾಣಲಿಂಗಿ ಸ್ಥಲದಿಂದ ದ್ವಾದಶಾಂಗುಲ ಊರ್ಧ್ವ ಶರಣಸ್ಥಲ. ಆ ಶರಣ ಸ್ಥಲದಿಂದ ಷೋಡಶಾಂಗುಲ ಊರ್ಧ್ವ ಐಕ್ಯಸ್ಥಲ. ಆ ಐಕ್ಯಸ್ಥಲದಲ್ಲಿ ದ್ವಿ ಅಂಗುಲ ಪ್ರಮಾಣದಲ್ಲಿ ಪ್ರಣವ. ಇಂತೀ ತೊಂಭತ್ತಾರು ಅಂಗುಲವೇ ಅಂಗವಾಗಿ ಆ ಅಂಗ ಮುಖದಲ್ಲಿ ಲಿಂಗ ಕುಳ ವಾರು ಅಡಗಿದ ಪರಿ ಎಂತೆಂದೊಡೆ,

ಸುಚಿತ್ತದಿಂ ಘ್ರಾಣದಿಂದ ಗಂಧವನಂಗೀಕರಿಸುವದು ಆಚಾರ ಲಿಂಗ. ಸುಬುದ್ಧಿಯಿಂ ಜಿಹ್ವೆಯಿಂದ ರುಚಿಯನಂಗೀಕರಿಸುವದು ಗುರು ಲಿಂಗ. ನಿರಹಂಕಾರದಿಂ ನೇತ್ರದಿಂದ ರೂಪನಂಗೀಕರಿಸುವದು ಶಿವ ಲಿಂಗ. ಸುಮನದಿಂ ಹಸ್ತದಿಂದ ಸ್ಪರ್ಶನ ಅಂಗೀಕರಿಸುವದು ಜಂಗಮ ಲಿಂಗ. ಸುಜ್ಞಾನದಿಂ ಶ್ರೋತ್ರದಿಂದ ಶಬ್ದವನಂಗೀಕರಿಸುವದು ಪ್ರಸಾದಲಿಂಗ. ಸಾವಧಾನದಿಂ ಹೃದಯದಿಂದ ತೃಪ್ತಿಯನಂಗೀಕರಿಸುವದು ಮಹಾಲಿಂಗ,

ಇಂತೀ ಹದಿನಾರು ಅಂಗುಲ ಪ್ರಮಾಣದಿಂದ ನಾಸಿಕದಿಂ ಇಷ್ಟ ಲಿಂಗದ ಪೀಠದಲ್ಲಿ ಆಚಾರಲಿಂಗವಡಗಿ, ದ್ವಾದಶಾಂಗುಲ ಪ್ರಮಾ ಣದಿಂ ಜಿಹ್ವೆಯಿಂದ ಇಷ್ಟಲಿಂಗದ ಕಲೆಯಲ್ಲಿ ಗುರುಲಿಂಗವಡಗಿ, ಅಷ್ಟಾಂಗುಲ ಪ್ರಮಾಣದಿಂ ನೇತ್ರದಿಂದ ಇಷ್ಟಲಿಂಗದ ಉದರದಲ್ಲಿ

ಶಿವಲಿಂಗವಡಗಿ, ಷಡಂಗುಲ ಪ್ರಮಾಣದಿಂ ತ್ವಕ್ಕುವಿನಿಂದ ಇಷ್ಟಲಿಂಗದ ಗೋಮುಖದಲ್ಲಿ ಜಂಗಮಲಿಂಗವಡಗಿ, ಚತುರಂಗುಲ ಪ್ರಮಾಣದಿಂ ಶ್ರೋತ್ರದಿಂದ ಇಷ್ಟಲಿಂಗದ ನಾಳದಲ್ಲಿ ಪ್ರಸಾದಲಿಂಗವಡಗಿ, ದ್ವಿಯಂಗುಲ ಪ್ರಮಾಣದಿಂದ ಇಷ್ಟಲಿಂಗದ ಮಸ್ತಕದಲ್ಲಿ ಮಹಾಲಿಂಗವಡಗಿ, ಇಂತೀ ನಾಲ್ವತ್ತೆಂಟಂಗುಲ ಪ್ರಮಾಣದಲ್ಲಿ ಆ ಇಷ್ಟಲಿಂಗದಲ್ಲಿ ಆರು ಕುಳವಡಗಿ, ಇಂತೀ ಸ್ಥಳಕುಳಂಗಳ ಗರ್ಭೀಕರಿಸಿಕೊಂಡಿಪ್ಪ ಅಂಗಲಿಂಗವೆರಡು, ಆ ಅಂಗಲಿಂಗವೆರಡು ಮಂತ್ರವಾದ ಪರಿ ಎಂತೆಂದೊಡೆ,

ಇಂತೀ ಅಂಗ ತೊಂಬತ್ತಾರಂಗುಲ ಪ್ರಮಾಣವನಂಗೀಕರಿಸಿಕೊಂಡಿಪ್ಪುದೇ ಓಂಕಾರ ಪ್ರಣವ. ಆ ಪ್ರಣವವೇ ನಾದ, ಆ ನಾದದಲ್ಲಿ ಬಿಂದು ನಿಂದು, ಷಟ್ಕೃತಿಗಳೇ ಪ್ರಾಣವಾಗಿ ಗರ್ಭೀಕರಿಸಿಕೊಂಡಿಪ್ಪ ಪಂಚಾಕ್ಷರಂಗಳು, ಇಂತೀ ಪಂಚಾಕ್ಷರಂಗಳಿಗೆ ಅಂಗವಾಗಿ ಗರ್ಭೀಕರಿಸಿಕೊಂಡಿಪ್ಪ ಷಟ್ಕೃತಿಗಳೇ ಷಡುಲಿಂಗವಾಗಿ, ಆ ಷಡುಲಿಂಗಂಗಳಿಗೆ ಷಡಕ್ಷರಂಗಳೇ ಪ್ರಾಣವಾಗಿ, ಓಂಕಾರವೇ ನಾದಮಯಾಂಗವಾಗಿ. ಪಂಚಾಕ್ಷರಂಗಳೇ ಪಂಚಾಕೃತಿ ಬಿಂದು ಮಯ ಪ್ರಾಣವಾಗಿ, ಮಂತ್ರಾಂಗವಾಗಿ ನಾದ ಬಿಂದು ಕಳಾಕ್ಷರದಲ್ಲಿ ಪ್ರಣವ ಮಂತ್ರವಡಗಲು, ಆ ಕಳೆಯೇ ಬಿಂದುವಾಗಿ, ಆ ಬಿಂದುವೇ ನಾದವಾಗಿ, ನಾದವೇ ನಿಶ್ಶಬ್ದವಾಗಿ, ನಿಶ್ಶಬ್ದವೇ ಪರಬ್ರಹ್ಮವಾಗಿ, ಆ ಪರಬ್ರಹ್ಮವೇ ನಿಜವಾಗಿ, ಆ ನಿಜವೇ ಸಹಜಾನಂದ ವಸ್ತುವಾದ ಘನವೇದ್ಯ ಶರಣನ ಚರಣಕ್ಕೆ ನಮೋ ನಮೋ ಎಂಬೆ ಕಾಣಾ ಮದ್ಗುರು ಬಸವಲಿಂಗ ಪ್ರಭುವೇ.

---

# ಹದಿನೆಂಟು ಸ್ಥಲಗಳು.

ವಿವರಣೆ:— ಕೆಳಗೆ ಕಾಣಿಸಿದ ೧೮ ಸ್ಥಲಗಳು ಸ್ವತಂತ್ರವಾದ ಸ್ಥಲಗಳಲ್ಲ. ಹಿಂದಿನ ಆರು ಸ್ಥಲಗಳ ಆಚರಣೆಗಳನ್ನೇ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿಗೆ ಸಂಬಂಧಿಸಿ ಈ ಸ್ಥಲಗಳಲ್ಲಿ ವಚನಕಾರರು ಹೇಳಿರುವರು. ಹೀಗೆ ಈ ೧೮ ಸ್ಥಲಗಳು ಹಿಂದಿನ ಆರು ಸ್ಥಲಗಳಲ್ಲಿಯೇ ಅಡಕವಾಗಿರುತ್ತವೆ. ಪ್ರತಿಯೊಂದು ಶರೀರವು ಉಳಿದ ಎರಡು ಶರೀರಗಳಿಗೆ ಸಂಬಂಧಪಟ್ಟು ವ್ಯವಹರಿಸುವುದರಿಂದ ಪ್ರತಿಯೊಂದರಲ್ಲಿ ಮೂರು ಮೂರರಂತೆ ಒಟ್ಟು ೧೮ ಸ್ಥಲಗಳು ವಚನಕಾರರಿಂದ ಇವರಲ್ಲಿ ಕಲ್ಪಿಸಲ್ಪಟ್ಟಿರುತ್ತವೆ. ಹೀಗೆ ಅಂಗಸ್ಥಲದಲ್ಲಿ ೧೮, ಲಿಂಗಸ್ಥಲದಲ್ಲಿ ೧೮, ಹೀಗೆ ೩೬ ಸ್ಥಲಗಳು ಉಂಟಾಗಿರುತ್ತವೆ. ಮೊದಲಿನ ಮೂರು ಸ್ಥಲಗಳು ಸಾಕಾರವಾಗಿದ್ದು ಅವುಗಳನ್ನು ಅಂಗದಲ್ಲಿ ಆಚರಿಸುತ್ತಲೂ ಎರಡನೆಯ ಮೂರು ಸ್ಥಲಗಳು ನಿರಾಕಾರವಾಗಿದ್ದು ಅವುಗಳನ್ನು ಆತ್ಮನಲ್ಲಿ ಆಚರಿಸುತ್ತಲೂ ಹೋದಲ್ಲಿ ಈ ಉಭಯ ಸ್ಥಲಗಳು ಒಂದಾಗಿ ನಿಲ್ಲುವವು. ಮೊದಲಿನ ಮೂರು ಸ್ಥಲಗಳು ಭಕ್ತಸ್ಥಲಗಳೆಂದೆನಿಸಿಕೊಳ್ಳುವವು. ಎರಡನೆಯ ಮೂರು ಸ್ಥಲಗಳು ಜಂಗಮಸ್ಥಲಗಳೆನಿಸಿಕೊಳ್ಳುವವು. ಜಂಗಮ ಸ್ಥಲಗಳು ಸ್ಥೂಲವಾದ ಭಕ್ತಸ್ಥಲಗಳಿಗೆ ಚೈತನ್ಯಸ್ವರೂಪವಾಗಿರುವವು. ಆದರೂ ಅವು ಪರಸ್ಪರಾವಲಂಬಿಗಳು. ಒಂದನ್ನು ಒಂದು ಬಿಟ್ಟು ಅವು ವ್ಯವಹರಿಸಲಾರವು. ಅವುಗಳ ಈ ಸಾಮರಸ್ಯ ಸ್ಥಿತಿಯು ಭಕ್ತನ ಪ್ರಗತಿಯ ದ್ಯೋತಕವಾಗಿದೆ.

## (೧) ಲಿಂಗಸ್ಥಲಗಳು.

ಇನ್ನು ಲಿಂಗಸ್ಥಲವಾವುದೆಂದಡೆ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಇಂತು ಲಿಂಗ ಸ್ಥಲ ಆರಕ್ಕಂ ವಿವರಃ—

(೧) ಆಚಾರಲಿಂಗ ತ್ರಿವಿಧಃ- ಸದಾಚಾರ ನಿಯತಾಚಾರ ಗಣಾಚಾರ. ಇವಕ್ಕೆ ವಿವರಃ— ಎಲ್ಲ ಜನವಹುದೆಂಬುದೇ ಸದಾಚಾರ. ಹಿಡಿದ ವ್ರತ ನಿಯಮವ ಬಿಡದಿಹುದೇ ನಿಯತಾಚಾರ. ಶಿವ ನಿಂದೆಯ ಕೇಳದಿಹುದೇ ಗಣಾಚಾರ.

ಗುರುಲಿಂಗ ತ್ರಿವಿಧಃ—ದೀಕ್ಷೆ, ಶಿಕ್ಷೆ, ಸ್ವಾನುಭಾವ. ಇವಕ್ಕೆ ವಿವರಃ ದೀಕ್ಷೆ ಎಂದಡೆ ಗುರು. ಶಿಕ್ಷೆ ಎಂದಡೆ ಜಂಗಮ. ಸ್ವಾನುಭಾವವೆಂದಡೆ ತನ್ನಿಂದ ತಾನರಿವುದು.

ಶಿವಲಿಂಗ ತ್ರಿವಿಧಃ— ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗ. ಇವಕ್ಕೆ ವಿವರಃ- ಶ್ರೀಗುರು ಕರಸ್ಥಲದಲ್ಲಿ ಅನುಗ್ರಹವ ಮಾಡಿಕೊಟ್ಟು ದೀಗ ಇಷ್ಟಲಿಂಗ. ತನುಗುಣ ನಾಸ್ತಿಯಾದುದೀಗ ಪ್ರಾಣಲಿಂಗ. ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ಲಿಂಗವಲ್ಲದೆ, ಪೆರತೊಂದನರಿಯದಿಪ್ಪುದೀ ತೃಪ್ತಿಲಿಂಗ.

ಜಂಗಮಲಿಂಗ ತ್ರಿವಿಧಃ– ಸ್ವಯಂ, ಚರ, ಪರ. ಇವಕ್ಕೆ ವಿವರಃ– ಸ್ವಯಂ ವೆಂದಡೆ ತಾನು. ಚರವೆಂದಡೆ ಲಾಂಛನ ಮುಂತಾಗಿ ಚರಿಸುವುದು. ಪರವೆಂದಡೆ, ಅರಿವು ಮುಂತಾಗಿ ಚರಿಸುವುದು.

ಪ್ರಸಾದಲಿಂಗ ತ್ರಿವಿಧಃ— ಶುದ್ಧ, ಸಿದ್ಧ, ಪ್ರಸಿದ್ಧ. ಇವಕ್ಕೆ ವಿವರಃ- ಶುದ್ಧವೆಂದಡೆ ಗುರುಮುಖದಿಂದ ಮಲತ್ರಯವ ಕಳೆದುಳಿದ ಶೇಷ. ಸಿದ್ಧವೆಂದಡೆ ಲಿಂಗ ಮುಖದಿಂದ ಕರಣ ಮಥನಂಗಳ ಕಳೆದುಳಿದ ಶೇಷ. ಪ್ರಸಿದ್ಧವೆಂದಡೆ, ಜಂಗಮ ಮುಖದಿಂದ ಸರ್ವ ಚೈತನ್ಯಾತ್ಮಕ ತಾನೆಯಾಗಿ ಖಂಡಿತವಳಿದುಳಿದ ಶೇಷ.

ಮಹಾಲಿಂಗ ತ್ರಿವಿಧಃ— ಪಿಂಡಜ, ಅಂಡಜ, ಬಿಂದುಜ. ಪಿಂಡಜ ವೆಂದರೆ ಘಟಾಕಾಶ. ಅಂಡಜವೆಂದಡೆ, ಬ್ರಹ್ಮಾಂಡ. ಬಿಂದುಜವೆಂದಡೆ, ಮಹಾದಾಕಾಶ. ಇಂತು ಲಿಂಗಸ್ಥಲ ಆರಕ್ಕಂ ಹದಿನೆಂಟು ಸ್ಥಲವಾಯಿತ್ತು.

## (೨) ಅಂಗಸ್ಥಲಗಳು.

ಇನ್ನು ಅಂಗಸ್ಥಲವಾವುದೆಂದಡೆ, ಭಕ್ತ ಮಹೇಶ್ವರ ಪ್ರಸಾದಿ ಪ್ರಾಣ ಲಿಂಗಿ ಶರಣ ಐಕ್ಯ ಇಂತು ಅಂಗಸ್ಥಲ ಆರಕ್ಕಂ ವಿವರಃ—

(೨) ಭಕ್ತ ಸ್ಥಲ ತ್ರಿವಿಧಃ- ಗುರುಭಕ್ತ, ಲಿಂಗಭಕ್ತ, ಜಂಗಮ ಭಕ್ತ. ಇವಕ್ಕೆ ವಿವರಃ– ತನುಕ್ರಿಯೆಯಿಂದ ತನುಮನಧನವನರ್ಪಿಸುವನಾಗಿ ಗುರುಭಕ್ತ. ಮನಕ್ರಿಯೆಯಿಂದ ಮನತನುಧನವನರ್ಪಿಸುವ ನಾಗಿ ಲಿಂಗಭಕ್ತ. ಧನಕ್ರಿಯೆಯಿಂದ ಧನಮನತನುವನರ್ಪಿಸುವ ನಾಗಿ ಜಂಗಮಭಕ್ತ.

ಮಹೇಶ್ವರ ಸ್ಥಲ ತ್ರಿವಿಧಃ— ಇಹಲೋಕವೀರ, ಪರಲೋಕವೀರ, ಲಿಂಗವೀರ. ಇವಕ್ಕೆ ವಿವರಃ—ಮರ್ತ್ಯಲೋಕದ ಮಹಾಗಣಂಗಳು ಮೆಚ್ಚುವಂತೆ ಷಡ್ದರ್ಶನಂಗಳ ನಿರಸನವಂ ಮಾಡಿ, ತನ್ನ ಪ್ರಾಣವ ಮೆಚ್ಚಿಸುವನಾಗಿ ಇಹಲೋಕವೀರ. ದೇವಲೋಕದ ದೇವಗಣಂಗಳು ಮೆಚ್ಚುವಂತೆ ಸರ್ವಸಂಗ ಪರಿತ್ಯಾಗವ ಮಾಡಿ, ಚತುರ್ವಿಧ ಪದಂಗಳು ಧರ್ಮಾರ್ಥ ಕಾಮ ಮೋಕ್ಷಂಗಳ ಬಿಟ್ಟಹನಾಗಿ ಪರಲೋಕವೀರ. ಅಂಗ ಲಿಂಗ ಸಂಗದಿಂದ ಸರ್ವ ಕರಣಂಗಳು ಸನ್ನಿಹಿತವಾಗಿಪ್ಪನಾಗಿ ಲಿಂಗವೀರ.

ಪ್ರಸಾದಿಸ್ಥಲ ತ್ರಿವಿಧಃ— ಅರ್ಪಿತ ಪ್ರಸಾದಿ, ಅವಧಾನ ಪ್ರಸಾದಿ, ಪರಿಣಾಮ ಪ್ರಸಾದಿ. ಇವಕ್ಕೆ ವಿವರಃ—ಕಾಯದ ಕೈಯ್ಯಲ್ಲಿ ಸಕಲ ಪದಾರ್ಥಂಗಳ ಇಷ್ಟಲಿಂಗಕ್ಕೆ ಕೊಟ್ಟು ಕೊಂಬನಾಗಿ ಅರ್ಪಿತ ಪ್ರಸಾದಿ. ಪಂಚೇಂದ್ರಿಯಂಗಳಲ್ಲಿ ಪಂಚಲಿಂಗಪ್ರತಿಷ್ಠೆಯಂ ಮಾಡಿ, ಅಲ್ಲಲ್ಲಿ ಬಂದ ಸುಖವನಲ್ಲಲ್ಲಿ ಮನದ ಕೈಯ್ಯಲ್ಲಿ ಕೊಟ್ಟು ಕೊಂಬನಾಗಿ ಅವಧಾನಪ್ರಸಾದಿ. ಅಂಗಾಶ್ರಯವಳಿದು, ಲಿಂಗಾಶ್ರಯ ಉಳಿದು ಭಾವಭರಿತವಾದುದು ಪರಿಣಾಮ ಪ್ರಸಾದಿ.

ಪ್ರಾಣಲಿಂಗಿಸ್ಥಲ ತ್ರಿವಿಧಃ— ಆಚಾರ ಪ್ರಾಣಿ, ಲಿಂಗಪ್ರಾಣಿ, ಜಂಗಮಪ್ರಾಣಿ. ಇವಕ್ಕೆ ವಿವರಃ— ಮನ ಕಾಯದಲ್ಲಿ ಆಚಾರವನು ಅವಗ್ರಹಿಸಿದವನಾಗಿ ಆಚಾರ ಪ್ರಾಣಿ. ಬಾಹ್ಯೋಪಚಾರಂಗಳ ಮರೆದು, ಲಿಂಗಕ್ಕೆ ತನ್ನ ಪ್ರಾಣವನೇ ಪೂಜೆಯ ಮಾಡುವನಾಗಿ ಲಿಂಗಪ್ರಾಣಿ. ಬಾಹ್ಯ ಭಕ್ತಿಯ ಮರೆದು, ಜಂಗಮಕ್ಕೆ ತನ್ನ ತನು, ಮನ, ಪ್ರಾಣಂಗಳ ನಿವೇದಿಸುವನಾಗಿ ಜಂಗಮಪ್ರಾಣಿ.

ಶರಣಸ್ಥಲ ತ್ರಿವಿಧಃ— ಇಷ್ಟ ಲಿಂಗಾರ್ಚಕ, ಪ್ರಾಣಲಿಂಗಾರ್ಚಕ, ತೃಪ್ತಿಲಿಂಗಾರ್ಚಕ. ಇವಕ್ಕೆ ವಿವರಃ— ಅನಿಷ್ಟ ನಷ್ಟವಾಯಿತ್ತಾಗಿ, ಇಷ್ಟ ಲಿಂಗಾರ್ಚಕ. ಸ್ವಯಪರವನರಿಯನಾಗಿ ಪ್ರಾಣಲಿಂಗಾರ್ಚಕ. ಇಹಪರವನರಿಯನಾಗಿ ತೃಪ್ತಿಲಿಂಗಾರ್ಚಕ.

ಐಕ್ಯಸ್ಥಲ ತ್ರಿವಿಧಃ— ಕಾಯಲಿಂಗೈಕ್ಯ, ಜೀವಲಿಂಗೈಕ್ಯ, ಭಾವ ಲಿಂಗೈಕ್ಯ. ಇವಕ್ಕೆ ವಿವರಃ— ಕ್ರಿಯಾಕಾರವರತುದೇ ಕಾಯ ಲಿಂಗೈಕ್ಯ.

ಅನುಭಾವವರತುದೇ ಜೀವಲಿಂಗೈಕ್ಯ. ಅರಿವು ಶೂನ್ಯವಾದುದೇ ಭಾ
ಲಿಂಗೈಕ್ಯ. ಇಂತೀ ಅಂಗಸ್ಥಲ ಆರಕ್ಕೆ ಹದಿನೆಂಟು ಸ್ಥಲವಾಯಿತ್ತು.

ಉಭಯ ಸ್ಥಲ ಮೂವತ್ತಾರರೊಳಗಾದ ಸರ್ವಾಚಾರ ಸಂಪತ್ತಿನ
ಕೂಡಲಚನ್ನಸಂಗಯ್ಯನಲ್ಲಿ ಬಸವಣ್ಣನೇಬಲ್ಲ.

## (೩) ಹದಿನೆಂಟು ಅಂಗ ಹದಿನೆಂಟು ಲಿಂಗಸ್ಥಲಗಳು.
## ಪರಸ್ಪರ ಕೂಡುವ ಪ್ರಕಾರ.

(೩) ಸಾಕಾರ ಹದಿನೆಂಟು ಸ್ಥಲ ಅಂಗದಲ್ಲಿ ಆಚರಿಸುತ್ತ ಅಲ್ಲಲ್ಲಿ
ಭಕ್ತ, ಅಲ್ಲಲ್ಲಿಗೆ ಮಹೇಶ್ವರ, ಅಲ್ಲಲ್ಲಿಗೆ ಪ್ರಸಾದಿಯಾಗಿಪ್ಪ ಆ ಸಾಕಾರ
ನೇನೆಂದು ಉಪಮಿಸುವೆನಯ್ಯ? ನಿರಾಕಾರ ಹದಿನೆಂಟು ಸ್ಥಲವ ಆತ
ನಲ್ಲಿ ಆಚರಿಸುತ್ತ, ಅಲ್ಲಲ್ಲಿಗೆ ಪ್ರಾಣಲಿಂಗಿ, ಅಲ್ಲಲ್ಲಿಗೆ ಶರಣ, ಅಲ್ಲಲ್ಲಿಗೆ ಐಕ್ಯ
ನಾಗಿರ್ಪ ಆ ನಿರಾಕಾರವನೇನೆಂದುಪಮಿಸುವೆನಯ್ಯ ? ಆ ಸಾಕಾರ
ಹದಿನೆಂಟು ಸ್ಥಲವ ಅಂಗದಲ್ಲಿ ಆಚರಿಸುವುದು ಭಕ್ತಸ್ಥಲ. ಆ ನಿರಾ
ಕಾರ ಹದಿನೆಂಟು ಸ್ಥಲವ ಆತ್ಮನಲ್ಲಿ ಆಚರಿಸುವುದು ಜಂಗಮಸ್ಥಲ.
ಇಂತೀ ಉಭಯಸ್ಥಲ ಒಂದಾಗಿ ನಿಂದ ನಿಜದ ನಿಲವು ನಮ್ಮ ಕೂಡಲ
ಚನ್ನಸಂಗಯ್ಯನಲ್ಲಿ ಲಿಂಗೈಕ್ಯವು.

# ಮೂವತ್ತಾರು ಸ್ಥಲಗಳು.

ವಿವರಣೆ:— ಮೂವತ್ತಾರು ಸ್ಥಲಗಳ ನಿಶ್ಚಿತ ವ್ಯಾಖ್ಯೆಗಳು ದೊರೆತಿಲ್ಲ. ಆದರೆ ಈ ಸ್ಥಲಗಳನ್ನನುಸರಿಸಿಯೇ ಬಹುಜನ ವಚನಕಾರರು ತಮ್ಮ ವಚನಗಳನ್ನು ರಚಿಸಿರುವದು ಕಂಡುಬರುತ್ತದೆ. ಬಸವೇಶ್ವರ, ಚನ್ನ ಬಸವೇಶ್ವರ, ಸಿದ್ಧರಾಮ ಮೊದಲಾದ ವಚನಕಾರರ ವಚನಗಳು ೩೬ ಸ್ಥಲಗಳನ್ನನುಸರಿಸಿಯೇ ರಚಿಸಿದವುಗಳಿರುತ್ತವೆ. ಆದರೆ ಈ ಸ್ಥಲಗಳಲ್ಲಿ ನಿರೂಪಿಸಲ್ಪಟ್ಟ ವಚನಗಳು ಆಯಾ ಸ್ಥಲಗಳ ವ್ಯಾಖ್ಯೆಯನ್ನು ಸ್ಪಷ್ಟ ವಾಗಿ ವಿಶದಪಡಿಸುವಂಥವಿರುವದಿಲ್ಲ. ಯಾಕಂದರೆ ಒಂದು ಸ್ಥಲದಲ್ಲಿ ಹೇಳಿದ ವಚನಗಳ ಭಾವವು ಬೇರೊಂದು ಸ್ಥಲದಲ್ಲಿಯೂ ತೋರಿಬರು ತ್ತದೆ. ಅಥವಾ ವಚನಕಾರರು ಅದೇ ವಚನವನ್ನು ಬೇರೆ ಸ್ಥಲಗಳ ಲ್ಲಿಯೂ ಸೇರಿಸಿರುವದು ತೋರಿಬರುತ್ತದೆ. ಇದರಿಂದ ಈ ೩೬ ಸ್ಥಲ ಗಳ ಭಾವವನ್ನು ಸ್ಪಷ್ಟವಾಗಿ ವಿಂಗಡಿಸುವದು ಕಠಿಣವಿರುತ್ತದೆ.

ಆದರೂ ಈ ೩೬ ಸ್ಥಲಗಳ ಮೂಲತತ್ವಗಳನ್ನು ನಾವು ಸಾಮಾ ನ್ಯವಾಗಿ ಕಂಡು ಹಿಡಿಯುವದು ಶಕ್ಯವಿರುತ್ತದೆ. ಪ್ರತಿಯೊಂದು ಸ್ಥಲ ದಲ್ಲಿ ಪುನಃ ಆರು ಸ್ಥಲಗಳು ಅಂತರ್ಗತವಾಗಿದ್ದು ಇವುಗಳ ಪರಸ್ಪರ ಭೇದ ಭಾವವನ್ನು ನಾವು ಸ್ಥೂಲವಾಗಿ ಕಂಡು ಹಿಡಿಯಬಹುದಾಗಿದೆ. ಈ ಬಗ್ಗೆ ಕೆಲವು ವಚನಗಳೂ ದೊರೆಯುತ್ತವೆ. ಇವುಗಳನ್ನು ನಾವು ಮುಂದೆ ಆರಂಭದಲ್ಲಿ ಕೊಟ್ಟಿರುತ್ತೇವೆ.

ನಾವು ಒಂದೇ ಒಂದು ಸ್ಥಲದಲ್ಲಿ ಅಂಟಿಕೊಂಡಿದ್ದರೆ ಅದು ಪ್ರಗ ತಿಗೆ ಕಾರಣವಲ್ಲವೆಂದು ವಚನಕಾರರ ಅಭಿಪ್ರಾಯಗಳಿವೆ. ಇದರಿಂದ ಒಂದೇ ಬಗೆಯ ಶಕ್ತಿ, ಭಕ್ತಿ, ಲಿಂಗಗಳು ಉತ್ಕೃಷ್ಟತೆಯನ್ನು ಹೊಂದು ತ್ತವೆ. ಇದು ಪೂರ್ಣತೆಯಲ್ಲ. ಆದ್ದರಿಂದ ಒಂದು ಸ್ಥಲದಲ್ಲಿದ್ದವನು ಉಳಿದ ಸ್ಥಲಗಳಲ್ಲಿಯೂ ದೃಷ್ಟಿಯನ್ನಿಟ್ಟು ಆಚರಿಸಬೇಕು. ಇದರಿಂದ ಮನುಷ್ಯನಲ್ಲಿಯ ಎಲ್ಲ ಗುಣಗಳು ವಿಕಾಸವನ್ನು ಹೊಂದುತ್ತವೆ. ಉದಾ:— ಆಚಾರವೇ ಮುಖ್ಯವಾಗಿದ್ದ ಭಕ್ತನು ಆ ಆಚಾರದ ಜ್ಞಾನ ವನ್ನು ಅರಿತು ಭಕ್ತನ ಶರಣನಾಗಬೇಕು. ಹಾಗೆಯೇ ಜ್ಞಾನಿಯಾದ ಶರಣನು ತನ್ನ ಜ್ಞಾನವನ್ನು ಆಚರಣೆಯಲ್ಲಿ ತಂದುಕೊಂಡು ಶರಣನ ಭಕ್ತನಾಗಲೂ ಬೇಕು. ಶ್ರದ್ಧಾಭಕ್ತಿಯುಳ್ಳವನು ಯಾವಾಗಲೂ ಶ್ರದ್ಧೆಯ

ಲ್ಲಿಯೇ ಇರಬಾರದು. ಈ ಶ್ರದ್ಧಾ ಭಕ್ತಿಯೊಡನೆ ಬೇರೆ ಸ್ಥಲಗಳಿಗೆ ಸಂಬ
ಧಿಸಿದ ಅವಧಾನ ಭಕ್ತಿ, ಸುಜ್ಞಾನಭಕ್ತಿ ಮೊದಲಾದವುಗಳನ್ನೂ ಹೊಂ
ಬೇಕು. ಹೀಗೆ ಭಕ್ತನು ಆರು ಸ್ಥಲಗಳಲ್ಲೆಲ್ಲ ನಿಂತು ಅಲ್ಲಲ್ಲಿಯ ಆಚ
ರಣೆಗಳನ್ನೆಲ್ಲ ಆಚರಿಸುತ್ತ ಹೋಗಬೇಕು.

ಈ ಪ್ರಕಾರ ಪ್ರತಿಯೊಂದು ಸ್ಥಲದಲ್ಲಿ ಆರು ಆರು ವಿಭಾಗಗಳಾಗಿ
ಒಟ್ಟು ೩೬ ಸ್ಥಲಗಳಾಗುವವು. ಅವು ಯಾವವೆಂದರೆ:—

(೧) ಭಕ್ತ:— ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯ.

(೨) ಮಹೇಶ:— ಮಹೇಶನ ಮಹೇಶ, ಮಹೇಶನ ಭಕ್ತ, ಮಹೇಶನ ಪ್ರಸಾದಿ, ಮಹೇಶನ ಪ್ರಾಣಲಿಂಗಿ, ಮಹೇಶನ ಶರಣ, ಮಹೇಶನ ಐಕ್ಯ.

(೩) ಪ್ರಸಾದಿ:— ಪ್ರಸಾದಿಯ ಪ್ರಸಾದಿ, ಪ್ರಸಾದಿಯ ಭಕ್ತ, ಪ್ರಸಾದಿಯ ಮಹೇಶ, ಪ್ರಸಾದಿಯ ಪ್ರಾಣಲಿಂಗಿ, ಪ್ರಸಾದಿಯ ಶರಣ, ಪ್ರಸಾದಿಯ ಐಕ್ಯ.

(೪) ಪ್ರಾಣಲಿಂಗಿ:— ಪ್ರಾಣಲಿಂಗಿಯ ಪ್ರಾಣಲಿಂಗಿ, ಪ್ರಾಣಲಿಂಗಿಯ ಭಕ್ತ, ಪ್ರಾಣಲಿಂಗಿಯ ಮಹೇಶ, ಪ್ರಾಣಲಿಂಗಿಯ ಪ್ರಸಾದಿ, ಪ್ರಾಣಲಿಂಗಿಯ ಶರಣ, ಪ್ರಾಣಲಿಂಗಿಯ ಐಕ್ಯ.

(೫) ಶರಣ:— ಶರಣನ ಶರಣ, ಶರಣನ ಭಕ್ತ, ಶರಣನ ಮಹೇಶ, ಶರಣನ ಪ್ರಸಾದಿ, ಶರಣನ ಪ್ರಾಣಲಿಂಗಿ, ಶರಣನ ಐಕ್ಯ.

(೬) ಐಕ್ಯ:— ಐಕ್ಯನ ಐಕ್ಯ, ಐಕ್ಯನ ಭಕ್ತ, ಐಕ್ಯನ ಮಹೇಶ, ಐಕ್ಯನ ಪ್ರಸಾದಿ, ಐಕ್ಯನ ಪ್ರಾಣಲಿಂಗಿ, ಐಕ್ಯನಶರಣ.

ಈ ಪ್ರಕಾರ ೩೬ ಸ್ಥಲಗಳಾಗಿದ್ದು, ಅವುಗಳಲ್ಲಿ ಕಟ್ಟ ಕಡೆಯ
ಸ್ಥಲವು ಐಕ್ಯನ ಶರಣ ಇರುತ್ತದೆ.

ಮನುಷ್ಯನು ಈ ೩೬ ಸ್ಥಲಗಳಲ್ಲಿ ಕೆಳಗಿನಿಂದಲೇ ಮೇಲಕ್ಕೆ ಹೋಗ ಬೇಕೆಂಬ ನಿಯಮವಿಲ್ಲ. ಅವನು ಬೇಕಾದ ಸ್ಥಲದಿಂದ ಆರಂಭ ಮಾಡಬಹುದು. ಉದಾ:— ಒಬ್ಬನಲ್ಲಿ ಸ್ಥೂಲಸ್ಥಲವೆನಿಸಿಕೊಂಡ ಭಕ್ತ ಸ್ಥಲದ ಗುಣಗಳು ಹೆಚ್ಚಿಗೆ ಪ್ರಕಟವಾಗಿರಬಹುದು. ಇಂಥವನು ಸೂಕ್ಷ್ಮ ವಾದ ಉಳಿದ ಸ್ಥಲಗಳನ್ನು ತನ್ನಲ್ಲಿ ಪ್ರಕಾಶ ಪಡಿಸುತ್ತ ಹೋಗಬೇಕು. ಆದರೆ ಬೇರೊಬ್ಬನಲ್ಲಿ ಭಕ್ತನ ಗುಣಗಳಿಗಿಂತಲೂ ಹೆಚ್ಚಿಗೆ ಸೂಕ್ಷ್ಮ ಸ್ಥಲ ವಾದ ಪ್ರಾಣಲಿಂಗಿಯ ಗುಣಗಳು ಮಿಗಿಲಾಗಿ ಇರಬಹುದು. ಅವನು ಆದರ ಗುಣಗಳನ್ನು ಸ್ಥಿರಪಡಿಸಿಕೊಂಡು ಅಂದರೆ ಪ್ರಾಣಲಿಂಗಿಯು ಪ್ರಾಣಲಿಂಗಿಯಾಗಿ ಉಳಿದ ಸ್ಥಳಗಳ ಆಚರಣೆಗಳನ್ನು ಆಚರಿಸುತ್ತ ಅವುಗಳ ಗುಣಗಳನ್ನು ತನ್ನಲ್ಲಿ ಬರಮಾಡಿಕೊಳ್ಳಬೇಕು. ಇವನು ಭಕ್ತ ಸ್ಥಲದಿಂದ ತನ್ನ ಪ್ರಗತಿಯನ್ನು ಆರಂಭಿಸದೆ, ಪ್ರಾಣಲಿಂಗಿಯು ಪ್ರಾಣಲಿಂಗಿ ಸ್ಥಲದಿಂದ ಆರಂಭಿಸುವನು. ಇವನಾದರೂ ಕೂಡ ಭಕ್ತ ಮೊದಲಾದ ಎಲ್ಲ ಸ್ಥಳಗಳೊಳಗಿಂದ ಹಾಯ್ದು ಹೋಗಬೇಕು. ಹೀಗೆ ಅವನು ಕಡೆಗೆ ಐಕ್ಯನ ಶರಣನಾಗಬೇಕು.

ನಿಜವಾಗಿ ಸ್ಥಲಗಳಲ್ಲಿ ಮೇಲೆ ಕೆಳಗೆಂಬ ವಿಚಾರವಿಲ್ಲ. ಅವೆಲ್ಲವೂ ಅಷ್ಟೇ ಮಹತ್ವವಾದವುಗಳು. ಮನುಷ್ಯನಲ್ಲಿಯ ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳು ಪರಸ್ಪರಾವಲಂಬಿಗಳು. ಅವುಗಳಲ್ಲಿಯ ಎಲ್ಲ ತರದ ವ್ಯಾಪಾರ ಗಳೂ ಗುಣಗಳೂ, ಶಕ್ತಿಗಳೂ, ಲಿಂಗಗಳೂ, ಆಚಾರಗಳೂ, ಕ್ರಿಯೆಗಳೂ ಸರಿಯಾಗಿ ಉತ್ಕೃಷ್ಟತೆಯನ್ನು ಹೊಂದಬೇಕು. ಷಟ್‌ಸ್ಥಲ ಶಾಸ್ತ್ರದ ಧ್ಯೇಯವು ಇದನ್ನುಂಟುಮಾಡುವದೇ ಇದೆ. ಈ ಉದ್ದೇಶದಿಂದಲೇ ಮೂವತ್ತಾರು ಸ್ಥಲಗಳು ಕಲ್ಪಿಸಲ್ಪಟ್ಟಿರುತ್ತವೆ.

(೧) ಪ್ರಥಮದಲ್ಲಿ ಭಕ್ತನಾದೆನೆಂಬರು, ದ್ವಿತೀಯದಲ್ಲಿ ಮಹೇಶ್ವರ ನಾದೆನೆಂಬರು, ತ್ರಿತೀಯದಲ್ಲಿ ಪ್ರಸಾದಿಯಾದೆನೆಂಬರು, ಚತುರ್ಥದಲ್ಲಿ ಪ್ರಾಣಲಿಂಗಿಯಾದೆನೆಂಬರು, ಐದನೆಯದರಲ್ಲಿ ಶರಣನಾದೆನೆಂಬರು, ಆರನಯದರಲ್ಲಿ ಐಕ್ಯನಾದೆನೆಂಬರು, ಆರು ಸ್ಥಲವ ಮೀರಿ ನಿರವಯ ಸ್ಥಲವನೈದಿಹೆನೆಂಬರು. ಇದು ಖಂಡಿತ. ಷಟ್‌ಸ್ಥಲ ಜ್ಞಾನ ನಿರ್ಣಯವಲ್ಲ. ಆವಾವ ಸ್ಥಲವಂಗಂಗೊಂಡಡೂ, ಆ ಸ್ಥಲದಲ್ಲಿ ಷಡ್ವಿಧ ಲಿಂಗದಲ್ಲಿ ಬೆರಿಸಿ ಬೇರಿಲ್ಲದಿರಬಲ್ಲಡೆ, ಸದ್ಭಕ್ತನೆಂಬೆವಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೨) ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯರೆಂಬ ಬೇರೆ ಮಾಡಿ ನಡೆದು, ಬೇರೆ ಮಾಡಿ ನುಡಿವ ಭಿನ್ನವಿಲ್ಲ. ಅಂತರಂಗದಲ್ಲಿ ಅರಿವು ಪರಿಪೂರ್ಣ, ಬಹಿರಂಗದಲ್ಲಿ ದಾಸೋಹಸಂಪನ್ನ ಮನೋ ವಾಕ್ಕಾಯ ಕರ್ಮಂಗಳಲ್ಲಿ ಸದ್ಭಕ್ತಿ ಸಂಪನ್ನ ಎಡತೆರಹಿಲ್ಲದೆ ಲಿಂಗ ಸಂಪನ್ನ ,ಸರ್ವಾಂಗದಲ್ಲಿ ಸರ್ವಾಚಾರ ಸಂಪನ್ನ ಕೂಡಲ ಸಂಗಮದೇ ವರಲ್ಲಿ ಬಸವಣ್ಣನ ಶ್ರೀಪಾದಕ್ಕೆ ನಮೋ, ನಮೋ ಎನುತಿರ್ದೆನು.

(೩) ಆವ ವರ್ಣ ಕೂಡಿದಡೂ, ಅಪ್ಪುಮಯ ತಪ್ಪದಂತೆ, ಸರ್ವ ಗುಣಸಂಪನ್ನನಾದಲ್ಲಿ ಭಕ್ತನೆಂದಡೂ ತಾನಾಗಿ, ಮಹೇಶ್ವರನೆಂದಡೂ ತಾನಾಗಿ, ಪ್ರಾಣಲಿಂಗಿ ಎಂದಡೂ ತಾನಾಗಿ, ಶರಣನೆಂದಡೂ ತಾನಾಗಿ, ಐಕ್ಯನೆಂದಡೂ, ತಾನಾಗಿ, ಒಂದನಹುದು, ಒಂದನಲ್ಲ ಎನ್ನದೆ, ಕತ್ತಲೆ ಯಲ್ಲಿ ಹಾಲಕೊಂಡಡೆ ಸಿಹಿ ತಪ್ಪುವದೇ ? ಸತ್ತು ಚಿತ್ತಾನಂದವೆಂಬ ಗೊತ್ತ ಹರಿದವಂಗೆ, ತಟ್ಟು ಮುಟ್ಟು ಹತ್ತುವ ಭಾವ ಒಂದೂ ಇಲ್ಲ. ಕಾಮ ಭೀಮ ಜೀವದನದೊಡೆಯ ತಾನು ತಾನೆ.

ಅರ್ಥಃ—ಷಡ್ವರ್ಣಂಗಳೊಳಗೆ ಆವ ವರ್ಣದಲ್ಲಿ ಉದಕವು ಕೂಡಿ ದಡೂ, ಉದಕವು ಆ ವರ್ಣವಾಗುವದು ಹುಸಿಯದು. ಹಾಗೆ ಸರ್ವಾ ಚಾರ ಸಂಪತ್ತಿನ ಆಚರಣೆಯಲ್ಲಿ ಲೋಲುಪ್ತಿಯುಳ್ಳವನಾದಲ್ಲಿ ಶ್ರದ್ಧಾ ಭಕ್ತಿಯನುಳ್ಳ ಭಕ್ತನೆಂದಡೂ ಶರಣ ತಾನೆಯಾಗಿಪ್ಪನು. ನೈಷ್ಠಿಕಾ ಭಕ್ತಿಯನುಳ್ಳ ಮಾಹೇಶ್ವರನೆಂದಡೂ, ತಾನೆಯಾಗಿಪ್ಪನು. ಸಾವಧಾನ ಭಕ್ತಿಯನುಳ್ಳ ಪ್ರಸಾದಿ ಎಂದಡೂ ತಾನೆಯಾಗಿಪ್ಪನು. ಅನುಭಾವ ಭಕ್ತಿಯನುಳ್ಳ ಪ್ರಾಣಲಿಂಗಿ ಎಂದಡೂ ತಾನೆಯಾಗಿಪ್ಪನು. ಆನಂದ ಭಕ್ತಿಯನುಳ್ಳ ಶರಣನೆಂದಡೂ ತಾನೆಯಾಗಿಪ್ಪನು. ಸಮರಸ ಭಕ್ತಿಯ ನುಳ್ಳ ಐಕ್ಯನೆಂದಡೂ ತಾನೆಯಾಗಿಪ್ಪನು. ಶರಣನು ಷಟ್‌ಸ್ಥಲಂಗಳು ತನಗಂಗವಾದ ಕಾರಣ ಮಾಹೇಶ್ವರ ಸ್ಥಲವೇ ಮೋಕ್ಷಕ್ಕೆ ಕಾರಣವಹುದು ಭಕ್ತಸ್ಥಲವಲ್ಲ, ಪ್ರಸಾದಿ ಸ್ಥಲವೇ ಮೋಕ್ಷಕ್ಕೆ ಕಾರಣವಹುದು ಮಾಹೇಶ್ವರ ಸ್ಥಲವಲ್ಲ, ಪ್ರಾಣಲಿಂಗಿಸ್ಥಲವೇ ಮೋಕ್ಷಕ್ಕೆ ಕಾರಣವಹುದು ಪ್ರಸಾದಿ ಸ್ಥಲವಲ್ಲ, ಶರಣಸ್ಥಲವೇ ಮೋಕ್ಷಕ್ಕೆ ಕಾರಣಹುದು ಪ್ರಾಣಲಿಂಗಿಸ್ಥಲವಲ್ಲ, ಐಕ್ಯಸ್ಥಲವೇ ಮೋಕ್ಷಕ್ಕೆ ಕಾರಣವಹುದು ಶರಣಸ್ಥಲ ಮೋಕ್ಷಕ್ಕೆ ಕಾರಣ ವಲ್ಲ, ಎನ್ನದೆ ತಾ ಸರ್ವಾಚಾರ , ಸಂಪನ್ನನಾದಲ್ಲಿ ಆವ ಸ್ಥಲದಲ್ಲಿ

ನಿಂದು ಆಚರಿಸಿದಡೂ ಮೋಕ್ಷವಹುದು. ಅದು ಹೇಗೆಂದಡೆ, ಕಾವಳ ದಲ್ಲಿ ಕ್ಷೀರವ ಸ್ವೀಕರಿಸಿದಡೆ, ಸ್ವಾದ ಕೆಡದು ಎಂಬ ಹಾಗೆ, ತಾನು ಆವ ಸ್ಥಲವಿಡಿದು ಆಚರಿಸಿದಡೂ, ಆ ಸ್ಥಲದಲ್ಲಿ ಷಟ್‌ಸ್ಥಲಂಗಳು ಉಂಟಾದ ಕಾರಣ ಮೋಕ್ಷ ಉಂಟು. ಸದ್ರೂಪವಾದ ಅಂಗ, ಚಿದ್ರೂಪವಾದ ಲಿಂಗ ಆನಂದ ಸ್ವರೂಪವಾದ ಭಕ್ತಿ ಈ ಅಂಗಭಕ್ತಿಗಳೆಂಬ ಭಿನ್ನವ ನಷ್ಟವ ಮಾಡಿ ಲಿಂಗವಲ್ಲಿ ಕೂಡಿದ ಶರಣಂಗೆ ಇದು ಅಂಗ, ಇದು ಲಿಂಗ, ಇದು ಭಕ್ತಿ, ಎಂಬುದೊಂದೂ ಇಲ್ಲ. ಲಿಂಗವೇ ತಾನು, ತಾನೇ ಲಿಂಗ ವಾಗಿಪ್ಪನೆಂಬುದರ್ಥ.

(೪) ಸ್ಥಳಕುಳವನರಿಯಬೇಕೆಂಬರು. ಭಕ್ತನಾಗಿ ಮಹೇಶ್ವರ ನಾಗಬೇಕೆಂಬರು. ಮಹೇಶ್ವರನಾಗಿ ಪ್ರಸಾದಿಯಾಗಬೇಕೆಂಬರು. ಪ್ರಸಾ ದಿಯಾಗಿ ಪ್ರಾಣಲಿಂಗಿಯಾಗಿ, ಶರಣನಾಗಬೇಕೆಂಬರು. ಶರಣನಾಗಿ ಐಕ್ಯನಾಗಬೇಕೆಂಬರು, ಐಕ್ಯನಾಗಿ. ಏತರಿಂದ ಕೂಟ ನಾನರಿಯೆ. ಒಳಗಣ ಮಾತು ಹೊರಹೊಮ್ಮಿಯಲ್ಲದೆ ಎನಗರಿಯಬಾರದು. ಎನಗೈಕ್ಯ ನಾಗಿ ಶರಣನಾಗಬೇಕು. ಶರಣನಾಗಿ ಪ್ರಾಣಲಿಂಗಿಯಾಗಬೇಕು. ಪ್ರಾಣಲಿಂಗಿಯಾಗಿ ಪ್ರಸಾದಿಯಾಗಬೇಕು. ಪ್ರಸಾದಿಯಾಗಿ ಮಹೇಶ್ವರ ನಾಗಬೇಕು. ಮಹೇಶ್ವರನಾಗಿ ಭಕ್ತನಾಗಬೇಕು ಭಕ್ತನಾಗಿ ಸಕಲ ಯುಕ್ತನಾಗಬೇಕು. ಯುಕ್ತಿ ನಿಶ್ಚಯವಾದಲ್ಲಿಯೇ ಐಕ್ಯಸ್ಥಲ ಒಳ ಹೊರಗಾಯಿತ್ತು. ಅಲೇಕವೇ ಲೇಕವಾಯಿತ್ತು. ಎನಗೆ ಕಾಣಬಂ ದಿತ್ತು. ಅಲೇಕನಾದ ಶೂನ್ಯ ಶಿಲೆಯ ಹೊರಹೊಮ್ಮಿ ಕಂಡೆ ನಿನ್ನನು.

(೫) ಕುಂಭದಲ್ಲಿ ಅಪ್ಪುವಿನ ಸಂಗದಲ್ಲಿ ತಂಡುಲವ ಹಾಕಿ, ಅಗ್ನಿ ಪುಟದಿಂ ಬೇಯಿಸಲಿಕ್ಕಾಗಿ, ಒಂದೊಂದು ತಂಡುಲ ಹಿಂಗಿ ಬೆಂದಂತೆ, ಆ ಅಪ್ಪು ಬೆಂಕಿಯ ಸಂಗವ ಮಾಡಿತ್ತು. ಆ ಅಗ್ನಿ ತಂಡುಲ ಕ್ಕೊಂದೊಂದು ಬಾರಿ ಉರಿಯಿತ್ತು. ಇಂತೀ ವಿವರಂಗಳ ಭೇದವ ನರಿತು, ಅಂಗದಲ್ಲಾರು ಸ್ಥಲವನಂಗೀಕರಿಸಿದಲ್ಲಿ, ಬೇರೆ ಒಂದೊಂದರಲ್ಲಿ ಹಿಂಗಿ ನೋಡಿಹೆವೆಂದೊಡೆ, ಮೂರಕ್ಕಾರು, ಆರಕ್ಕೆ ಮೂವತ್ತಾರು, ಮತ್ತವರೊಳಗಾದ ಗುಣ ನಾಮ ಅತೀತಕ್ಕೆ ಅತೀತವಾಗಿಪ್ಪುದು. ಇಂತೀ ಸ್ಥಲಂಗಳ ಅಹುದೆಂದು ಒಪ್ಪದೆ, ಅಲ್ಲ ಎಂದು ಬಿಡದೆ, ಅಲ್ಲಿಯ ಸ್ಥಲದಲ್ಲಿ ಏಕೀ ಕರಿಸಿ, ಅಲ್ಲಿಯ ಭಾವವ ತೋರಿದಲ್ಲಿಯೇ, ಲೇಪವ ಮಾಡಿ, ಹಿಡಿದಡೆ ಹಿಡಿಕಿಗೆ ಬಾರದೆ, ಬಿಟ್ಟಡೆ ಹರವರಿಯಲ್ಲಿ ಹರಿಯದೆ,

ವಸ್ತುಕದಲ್ಲಿ ವರ್ಣಕ ತೋರಿ, ಆ ವರ್ಣಕಕ್ಕೆ ವಸ್ತುಕ ಅಧೀನವಾ
ಇಪ್ಪ ಉಭಯಸ್ಥಲವನು ಅರಿತಲ್ಲಿ ವಿಶ್ವಸ್ಥಲ ನಾಶವಾಗಿ ಸದ್ಯೋಜಾ
ಲಿಂಗವು ವಿನಾಶವಾಗಬೇಕು.

(೬) ಭಕ್ತಿವಿಡಿದು, ಭಕ್ತನಾದ ಪ್ರಸಾದಿ. ಧೈರ್ಯವಿಡಿದು
ಭಕ್ತಂಗೆ ಮಹೇಶ್ವರನಾದ ಪ್ರಸಾದಿ. ಕರಣವಿಡಿದು ಅವಧಾನ ತಪ್ಪ
ಆ ಭಕ್ತಂಗೆ ಪ್ರಸಾದಿಯಾದ ಪ್ರಸಾದಿ. ಕರ್ಮರಹಿತನಾಗಿ ಕಾಲ ಕಲ್ಪಿ
ವಿಲ್ಲದೆ, ಆ ಭಕ್ತಂಗೆ ಪ್ರಾಣಲಿಂಗಿಯಾದ ಪ್ರಸಾದಿ. ಪತಿಭಕ್ತಿವಿಡಿ
ಧರ್ಮಾರ್ಥ ಕಾಮ ಮೋಕ್ಷಂಗಳ ಆಶೆ ನಿವೃತ್ತಿಯಂ ಮಾಡಿ,
ಭಕ್ತಂಗೆ ಶರಣನಾದ ಪ್ರಸಾದಿ. ಈ ಉಭಯ ಸಮರಸ ಏಕವೆಂ
ತಿಳಿದು, ಉಭಯ ಭಾವ ಉರಿ ಕರ್ಪುರ ಸಂಯೋಗವಾದ ಆ ಭಕ್ತಂ
ಐಕ್ಯನಾದ ಪ್ರಸಾದಿ. ನಮ್ಮ ಕಪಿಲಸಿದ್ಧಮಲ್ಲಿನಾಥನಲ್ಲಿ ಸರ್ವಕ್ಕೆ ಚೈ
ನ್ಯವಾದ ನಿಮ್ಮ ಚನ್ನಬಸವಣ್ಣನೆಂಬ ಅಚ್ಚಪ್ರಸಾದಿ.

(೭) ಭಕ್ತಾದ್ಯೈಕ್ಯಂತವಹ ಷಡಂಗಕ್ಕೆ ಭಕ್ತಿ ಅಂಗವೇ ಆ
ಯಾಗಿ, ಆ ಭಕ್ತಂಗೆ ಪೃಥ್ವಿಯೇ ಅಂಗವಾಗಿ, ಆ ಪೃಥ್ವಿ ಅಂಗ
ನುಳ್ಳ ಭಕ್ತನಲ್ಲಿಯೇ ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ
ಐಕ್ಯನಪ್ಪ ಅಂಗಪಂಚಕವು ಗರ್ಭೀಕೃತವಾಗಿ, ಆಚಾರಲಿಂಗವೇ ಕಾ
ಣವಾಗಿ ಇಂತೀ ಷಡ್ವಿಧಲಿಂಗದಲ್ಲಿಯೇ ಬೆರಿಸಿ ಬೇರಿಲ್ಲದಿರಬಲ್ಲಡೆ, ಭಕ್ತ
ನೆಂಬೆನಯ್ಯ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ.

(೮) ಲಿಂಗಸ್ಥಲ ೩೬, ಅಂಗಸ್ಥಲಂಗಳು ೩೬ ಪ್ರಕಾರವು. ಅವಾ
ವಯ್ಯ ಎಂದು ಶಿವಯೋಗಿ ಸಿದ್ಧರಾಮೇಶ್ವರನು ಶಂಕಿಸಿ ಬೆಸಗೊಂಡಲ್ಲಿ
ಕೇಳೈ ಯೋಗಿ ಭಕ್ತ, ಶ್ರದ್ಧಾಭಕ್ತಿಯನುಳ್ಳ ಭಕ್ತ ಮಹೇಶ್ವರ, ನೈಷ್ಠಿಕಾ
ಭಕ್ತಿಯುಕ್ತವಾದ ಮಹೇಶ್ವರ ಪ್ರಸಾದಿ, ಸಾವಧಾನ ಭಕ್ತಿಯುಕ್ತವಾದ
ಪ್ರಸಾದಿ ಪ್ರಾಣಲಿಂಗಿ, ಅನುಭಾವಭಕ್ತಿಯುಕ್ತವಾದ ಪ್ರಾಣಲಿಂಗಿ
ಶರಣ, ಆನಂದಭಕ್ತಿಯುಕ್ತವಾದ ಶರಣ ಐಕ್ಯ, ಸಮರಸ ಭಕ್ತಿಯುಕ್ತ
ವಾದ ಐಕ್ಯನು. ಈ ಆರು ಈ ಷಡ್ವಿಧವು ಅಂಗಸ್ಥಲಂಗಳು. ಅಲ್ಲಿ ಭಕ್ತನ
ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧ ಲಿಂಗದಲ್ಲಿ ಷಡ್ವಿಧಭಕ್ತಿಯಿಂದೆ
ಕೂಟಸ್ಥವಾದಂತಹ ಅಂಗಸ್ಥಲವಾರು, ಅವಾವೆಂದೊಡೆ, ಕೇಳಯ್ಯ
ಯೋಗಿಸದ್ಭಕ್ತ.

ಶ್ರದ್ಧಾ ಭಕ್ತಿಯುಕ್ತವಾದಭಕ್ತ. ಆ ಭಕ್ತನ ಸ್ವಾಧಿಷ್ಠಾನ ಚಕ್ರದಾರೆ ಸಳ ಕಂಜದಲ್ಲಿರ್ದ ಆಚಾರಲಿಂಗದೊಳಗಣ ಗುರುಲಿಂಗದಲ್ಲಿ ಶ್ರದ್ಧಾ ಭಕ್ತಿಯೊಳಗಣ ನೈಷ್ಠಿಕಾಭಕ್ತಿಯಿಂದೆ ಕೂಟಸ್ಥವಾದಂಥಾತನೇ ಭಕ್ತನೊಳ ಗಣ ಮಹೇಶ್ವರ. ಆ ಭಕ್ತನ ಯೋಗ ಪ್ರಸಾದಿ. ಆ ಭಕ್ತನ ಮಣಿ ಪೂರಕದ ಹತ್ತೆಸಳಕಂಜದಲ್ಲಿರ್ದ ಆಚಾರಲಿಂಗದೊಳಗಣ ಶಿವಲಿಂಗ ದಲ್ಲಿ ಶ್ರದ್ಧಾ ಭಕ್ತಿಯೊಳಗಣ ಸಾವಧಾನ ಭಕ್ತಿಯಿಂದೆ ಕೂಟಸ್ಥವಾದಂ ಥಾತನೇ ಭಕ್ತನ ಪ್ರಸಾದಿ. ಆ ಭಕ್ತನ ಯೋಗ ಪ್ರಾಣಲಿಂಗಿ. ಆ ಭಕ್ತನ ಶ್ರದ್ಧಾಭಕ್ತಿಯುಕ್ತವಾದ ಭಕ್ತನ ಅನಾಹತ ಚಕ್ರದ ಹನ್ನೆರಡೆಸಳ ಕಂಜದಲ್ಲಿರ್ದ ಆಚಾರಲಿಂಗದೊಳಗಣ ಜಂಗಮಲಿಂಗದಲ್ಲಿ ಶ್ರದ್ಧಾಭಕ್ತಿ ಯೊಳಗಣ ಅನುಭಾವಭಕ್ತಿಯಿಂದೆ ಕೂಟಸ್ಥವಾದಂಥಾತನೇ ಭಕ್ತನೊಳ ಗಣ ಪ್ರಾಣಲಿಂಗಿಯು. ಆ ಭಕ್ತನ ಯೋಗ ಶರಣ. ಆ ಶ್ರದ್ಧಾಭಕ್ತಿ ಯುಕ್ತವಾದ ಭಕ್ತನ ವಿಶುದ್ಧಿ ಚಕ್ರದ ಹದಿನಾರೆಸಳಕಂಜದಲ್ಲಿರ್ದ ಆಚಾ ರಲಿಂಗದೊಳಗಣ ಪ್ರಸಾದ ಲಿಂಗದಲ್ಲಿ ಶ್ರದ್ಧಾಭಕ್ತಿಯೊಳಗಣ ಆನಂದ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಭಕ್ತನೊಳಗಣ ಶರಣನು. ಆ ಭಕ್ತನ ಯೋಗ ಐಕ್ಯನು. ಆ ಶ್ರದ್ಧಾಭಕ್ತಿಯುಕ್ತವಾದ ಭಕ್ತನ ಜ್ಞಾನ ಚಕ್ರದ ಎರಡೆಸಳಕಂಜದಲ್ಲಿರ್ದ ಆಚಾರಲಿಂಗದೊಳಗಣ ಮಹಾಲಿಂಗ ದಲ್ಲಿ ಶ್ರದ್ಧಾಭಕ್ತಿಯೊಳಗಣ ಸಮರಸ ಭಕ್ತಿಯಿಂದೆ ಕೂಟಸ್ಥವಾದಂ ಥಾತನೇ ಭಕ್ತನೊಳಗಣ ಐಕ್ಯನು. ಇಂತು ಭಕ್ತನ ಯೋಗಾಂಗ ಸ್ಥಲವಾರು. ಭಕ್ತನ ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧ ಲಿಂಗ ಗಳಲ್ಲಿ ಷಡ್ವಿಧ ಭಕ್ತಿಯಿಂದೆ ಕೂಡಿದಂಥ .ಶರೀರ ಸ್ಥಲಂಗಳು ಷಟ್ ಪ್ರಕಾರವು.

ಇನ್ನು ಇಪ್ಪತ್ತರ ಮೇಲೆ ಷಡಂಗವೇದ್ಯನೇ ಮಹೇಶ್ವರ. ಆ ಮಹೇ ಶ್ವರನ ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧ ಭಕ್ತಿಯಿಂದೆ, ಷಡ್ವಿಧಾಂ ಗವನು ವ್ಯಾಪಿಸಲ್ಪತಕ್ಕಾತನೇ ನೈಷ್ಠಿಕಾಭಕ್ತಿಯನುಳ್ಳ ಮಹೇಶ್ವರನು. ಆ ಮಹೇಶ್ವನ ಯೋಗಭಕ್ತ, ನೈಷ್ಠಿಕಾ ಭಕ್ತಿಯನುಳ್ಳ ಮಹೇಶ್ವರನ ಆಧಾರ ಚಕ್ರದ ನಾಲ್ಕೆಸಳಕಂಜದಲ್ಲಿ ಗುರುಲಿಂಗದೊಳಗಣ ಆಚಾರ ಲಿಂಗದಲ್ಲಿ ನೈಷ್ಠಿಕಾಭಕ್ತಿಯೊಳಗಣ ಶ್ರದ್ಧಾ ಭಕ್ತಿಯಿಂದೆ ಕೂಟಸ್ಥವಾ ದಾತನೇ ಮಹೇಶ್ವರನೊಳಗಣ ಭಕ್ತನು. ಆ ಮಹೇಶ್ವನ ಯೋಗ ಪ್ರಸಾದಿ, ನೈಷ್ಠಿಕಾ ಭಕ್ತಿಯನುಳ್ಳ ಮಹೇಶ್ವರನ ಮಣಿಪೂರಕ ಚಕ್ರದ

ದಂಥಾದ್ದೇ ಪ್ರಾಣಲಿಂಗಿಯೊಳಗಣಭಕ್ತ. ಆ ಪ್ರಾಣಲಿಂಗಿಯೋಗ ಮಾಹೇಶ್ವರ, ಅನುಭಾವಭಕ್ತಿಯನುಳ್ಳ ಪ್ರಾಣಲಿಂಗಿಯ ಸ್ವಾಧಿಷ್ಠಾನ ಚಕ್ರದ ಆರೆಸಳ ಕಂಜದಲ್ಲಿರ್ದ ಜಂಗಮಲಿಂಗದೊಳಗಣ ಗುರುಲಿಂಗದಲ್ಲಿ ಅನುಭಾವಭಕ್ತಿಯೊಳಗಣ ನೈಷ್ಠಿಕಾ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಪ್ರಾಣಲಿಂಗಿಯೊಳಗಣ ಮಹೇಶ್ವರನು. ಆ ಪ್ರಾಣಲಿಂಗಿ ಯೋಗಪ್ರಸಾದಿ, ಅನುಭಾವ ಭಕ್ತಿಯನುಳ್ಳ ಪ್ರಾಣಲಿಂಗಿಯ ಮಣಿಪೂರಕ ಚಕ್ರದ ಹತ್ತೆಸಳ ಕಂಜದಲ್ಲಿರ್ದ ಜಂಗಮಲಿಂಗದೊಳಗಣ ಶಿವಲಿಂಗದಲ್ಲಿ ಅನುಭಾವ ಭಕ್ತಿಯೊಳಗಣ ಭಕ್ತಿ ಸಾವಧಾನದಿಂದೆ ಕೂಟಸ್ಥವಾದಂಥಾದ್ದೇ ಪ್ರಾಣಲಿಂಗಿಯೊಳಗಣ ಪ್ರಸಾದಿ. ಆ ಪ್ರಾಣಲಿಂಗಿ ಯೋಗ ಶರಣ, ಅನುಭಾವ ಭಕ್ತಿಯನುಳ್ಳ ಅಸುಲಿಂಗಿಯ ವಿಶುದ್ಧಿ ಚಕ್ರದ ಹದಿನಾರೆಸಳ ಕಂಜದಲ್ಲಿರ್ದ ಜಂಗಮಲಿಂಗದೊಳಗಣ ಪ್ರಸಾದದಲ್ಲಿ ಅನುಭಾವಭಕ್ತಿಯೊಳಗಣ ಆನಂದ ಭಕ್ತಿಯಿಂದೆ ಕೂಟಸ್ಥವಾದಂಥಾದ್ದೇ ಪ್ರಾಣಲಿಂಗಿಯೊಳಗಣ ಶರಣನು. ಆ ಪ್ರಾಣಲಿಂಗಿಯೋಗ ಐಕ್ಯ, ಅನುಭಾವಭಕ್ತಿಯನುಳ್ಳ ಅಸುಲಿಂಗಿಯ ಆಜ್ಞಾಚಕ್ರದ ಎರಡೆಸಳ ಕಂಜದಲ್ಲಿರ್ದ ಜಂಗಮಲಿಂಗದೊಳಗಣ ಮಹಾಲಿಂಗದಲ್ಲಿ ಅನುಭಾವ ಭಕ್ತಿಯೊಳಗಣ ಸಮರಸ ಭಕ್ತಿಯಿಂದೆ ಕೂಟಸ್ಥವಾದಂಥಾದ್ದೇ ಪ್ರಾಣಲಿಂಗಿಯೊಳಗಣ ಐಕ್ಯನು. ಇಂತು ಈ ಪ್ರಕಾರದ ದೆಸೆಯಿಂದ ಪ್ರಾಣಲಿಂಗಿ ಯೋಗಾಂಗಸ್ಥಲವಾರು. ಪ್ರಾಣಲಿಂಗಿಯ ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧಲಿಂಗದಲ್ಲಿ ಷಡ್ವಿಧಾಂಗವನು ಷಡ್ವಿಧ ಭಕ್ತಿಯಿಂದೆ ಕೂಡುವಂಥ ಶರೀರಸ್ಥಲಂಗಳು ಷಟ್ ಪ್ರಕಾರವು.

ಇನ್ನು ಇವುಗಳ ಮೇಲೆ ಷಡಂಗ ವೇದ್ಯನೇ ಶರಣ. ಆ ಶರಣನ ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧ ಲಿಂಗದಲ್ಲಿ ಷಡ್ವಿಧಾಂಗವನು ಷಡ್ವಿಧ ಭಕ್ತಿಯಿಂದೆ ವ್ಯಾಪಿಸಲ್ಲಕ್ಕಂಥಾತನೇ ಆನಂದ ಭಕ್ತಿಯನುಳ್ಳ ಶರಣ. ಆ ಶರಣನ ಯೋಗ ಭಕ್ತ, ಆ ಶರಣನ ಆಧಾರ ಚಕ್ರದ ನಾಲ್ಕೆಸಳಕಂಜದಲ್ಲಿರ್ದ ಪ್ರಸಾದಲಿಂಗದೊಳಗಣ ಆಚಾರಲಿಂಗದಲ್ಲಿ ಆನಂದ ಭಕ್ತಿಯೊಳಗಣ ಶ್ರದ್ಧಾ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಶರಣನೊಳಗಣ ಭಕ್ತ. ಆ ಶರಣ ಯೋಗ ಮಹೇಶ್ವರ, ಆನಂದಭಕ್ತಿಯನುಳ್ಳ ಶರಣನ ಸ್ವಾಧಿಷ್ಠಾನ ಚಕ್ರದ ಆರೆಸಳಕಂಜದಲ್ಲಿರ್ದ ಪ್ರಸಾದಲಿಂಗದೊಳಗಣ ಗುರುಲಿಂಗದಲ್ಲಿ ಆನಂದಭಕ್ತಿಯೊಳಗಣ ನೈಷ್ಠಿಕಾ ಭಕ್ತಿಯಿಂದೆ

ಕೂಟಸ್ಥವಾದಂಥಾತನೇ ಶರಣನೊಳಗಣ ಮಹೇಶ್ವರ. ಆ ಶರಣನ ಯೋಗಪ್ರಸಾದಿ, ಆನಂದಭಕ್ತಿಯುನುಳ್ಳ ಶರಣನ ಮಣಿಪೂರಕ ಚಕ್ರದ ಹತ್ತೆಸಳಕಂಜದಲ್ಲಿರ್ದ ಪ್ರಸಾದದೊಳಗಣ ಶಿವಲಿಂಗದಲ್ಲಿ ಆನಂದ ಭಕ್ತಿಯೊಳಗಣ ಸಾವಧಾನಭಕ್ತಿಯಿಂದೆ ಕೂಟಸ್ಥವಾದಂಥಾತನೇ ಶರಣನೊಳಗಣ ಪ್ರಸಾದಿ. ಆ ಶರಣನ ಯೋಗ ಪ್ರಾಣಲಿಂಗಿ, ಆನಂದಭಕ್ತಿಯುನುಳ್ಳ ಶರಣನ ಅನಾಹತ ಚಕ್ರದ ಹನ್ನೆರಡೆಸಳಕಂಜದಲ್ಲಿರ್ದ ಪ್ರಸಾದಲಿಂಗದೊಳಗಣ ಜಂಗಮಲಿಂಗದಲ್ಲಿ ಆನಂದ ಭಕ್ತಿಯೊಳಗಣ ಅನುಭಾವಭಕ್ತಿಯಿಂದ ಕೂಟಸ್ಥವಾದಂಥಾದ್ದೇ ಶರಣನೊಳಗಣ ಪ್ರಾಣಲಿಂಗಿ. ಆ ಶರಣನ ಯೋಗ ಐಕ್ಯ, ಆನಂದ ಭಕ್ತಿಯುನುಳ್ಳ ಶರಣನ ಆಜ್ಞಾ ಚಕ್ರದ ಎರಡೆಸಳಕಂಜದಲ್ಲಿರ್ದ ಪ್ರಸಾದಲಿಂಗದೊಳಗಣ ಮಹಾಲಿಂಗದಲ್ಲಿ ಆನಂದಭಕ್ತಿಯೊಳಗಣ ಸಮರಸ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಶರಣನೊಳಗಣ ಐಕ್ಯನು. ಇನ್ನು ಈ ಪ್ರಕಾರದ ದೆಸೆಯಿಂದೆ ಶರಣನ ಯೋಗಾಂಗಸ್ಥಲವಾರು. ಶರಣನ ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧಲಿಂಗದಲ್ಲಿ ಷಡ್ವಿಧಾಂಗವನು ಷಡ್ವಿಧಭಕ್ತಿಯಿಂದ ಕೂಟಸ್ಥವಾದಂಥ ಶರಣಸ್ಥಲಂಗಳು ಷಟ್ ಪ್ರಕಾರವು. ದ್ವಿತೀಯಾಂಗಸ್ಥಲ೧೨. ಎರಡು ಅಂಗಸ್ಥಲವು ದ್ವಾದಶವು.

ಇನ್ನು ಇಪ್ಪತ್ತರ ಮೇಲೆ ಷಡಂಗ ವೇದ್ಯನೇ ಐಕ್ಯ. ಐಕ್ಯನ ಷಡಾಧಾರ ಚಕ್ರಕಂಜದಲ್ಲಿರ್ದ ಷಡ್ವಿಧ ಲಿಂಗದಲ್ಲಿ ಷಡ್ವಿಧ ಭಕ್ತಿಯಿಂದೆ ಷಡ್ವಿಧಾಂಗವನು ವ್ಯಾಪಿಸಲ್ಪಟ್ಟಂಥಾತನೇ ಸಮರಸ ಭಕ್ತಿಯುನುಳ್ಳ ಐಕ್ಯನು. ಆ ಐಕ್ಯನ ಯೋಗ ಭಕ್ತ. ಆ ಐಕ್ಯನ ಆಧಾರ ಚಕ್ರದ ನಾಲ್ಕೆಸಳಕಂಜದಲ್ಲಿರ್ದ ಮಹಾಲಿಂಗದೊಳಗಣ ಆಚಾರಲಿಂಗದಲ್ಲಿ ಸಮರಸ ಭಕ್ತಿಯೊಳಗಣ ಶ್ರದ್ಧಾ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಐಕ್ಯನೊಳಗಣ ಭಕ್ತ. ಆ ಐಕ್ಯನ ಮಹೇಶ್ವರ, ಆ ಐಕ್ಯನ ಸ್ವಾಧಿಷ್ಠಾನ ಚಕ್ರದ ಆರೆಸಳಕಂಜದಲ್ಲಿರ್ದ ಮಹಾಲಿಂಗದೊಳಗಣ ಗುರುಲಿಂಗದಲ್ಲಿ ಸಮರಸ ಭಕ್ತಿಯೊಳಗಣ ನೈಷ್ಠಿಕಾಭಕ್ತಿಯಿಂದೆ ಕೂಟಸ್ಥವಾದಂಥಾತನೇ ಐಕ್ಯನೊಳಗಣ ಮಹೇಶ್ವರ. ಆ ಐಕ್ಯನಯೋಗ ಪ್ರಸಾದಿ, ಆ ಐಕ್ಯನ ಮಣಿಪೂರಕ ಚಕ್ರದ ಹತ್ತೆಸಳಕಂಜದಲ್ಲಿರ್ದ ಮಹಾಲಿಂಗದೊಳಗಣ ಶಿವಲಿಂಗದಲ್ಲಿ ಸಮರಸಭಕ್ತಿಯೊಳಗೆ ಸಾವಧಾನ ಭಕ್ತಿಯಿಂದೆ ಕೂಟಸ್ಥವಾದಂಥಾತನೇ ಐಕ್ಯನೊಳಗಣ ಪ್ರಸಾದಿ. ಆ ಐಕ್ಯನ ಯೋಗ ಪ್ರಾಣ

ರೆಂಬ ಅತಿಕ್ರಮಿಸಿದ ಪದ್ಧತಿ ಕೃತ್ಯಾಂಗವೆಂದು ಹೇಳಿಸುವ ಎರಡು ವಿಧದ ಭಕ್ತಿ ಜ್ಞಾನಕ್ಕೆ ನಿಲುಕದಿಹ ನಿರ್ಭಾವ ಸ್ಥಾನದಲ್ಲಿ ನಿರಾಶ್ರಯು ವಾದ ಮಹಾಘನಲಿಂಗದ ಅಯುನಂಗಲಿಂಗ ಮೂಲವು ಚಿದಂಗ ಲಿಂಗದ ಮೊದಲು ಪರಮಾನಂದ ಪ್ರಭೆಯು ಪರಾಶಕ್ತಿ ಪ್ರಣಮುದಲ್ಲಿ ರಮಿಸು ತ್ತಿರ್ದಂಥ ಮಹಾಲಿಂಗ ಪ್ರಕಾಶದ ಅತಿಂದ್ರಿಯತ್ವವನ್ನೈದಿರುತ್ತವಿಹ ಘನ ಬ್ರಹ್ಮರಂಧ್ರವೆಂಬ ಹೃಷೀಕತ್ವವನು ಆಶ್ರಯಿಸುತ್ತಿಹ ಹರಮಂತ್ರವು ಎಲ್ಲಕ್ಕೂ ತಾನಾಶ್ರಯವಾಗಿ ನಿರುಪಮಲಿಂಗದಲ್ಲಿ ಲೀಯ್ಯವಾದ ಬಳಿಕ ಉಪಮಿಸಬಾರದ ಮಹಾಲಿಂಗದಲ್ಲಿ ಲೀಢವಾದ ಮೇಲೆ ಇಂದ್ರಿಯಂಗ ಳಿಗೆ ನಿಲುಕದ ಸ್ಥಾನದಲ್ಲಿರ್ದು ಚಿತ್ತೇ ಅಂಗ ಚಿದ್ಘನಲಿಂಗವೇ ಪ್ರಾಣ ವಾಗಿರ್ದ ಪರಮಾನಂದ ಪ್ರಭೆಯು ಪ್ರಜ್ವಲಿಸುತ್ತಿರಲು ಆಚಾರಾದಿ ಮಹಾಲಿಂಗಾಂತ್ಯವಹ ಪಂಚಾಚಾರ ಸ್ವರೂಪವಾದ ಆಚಾರಲಿಂಗವೇ ಆದಿಯಾಗಿ ವೇಧಾ ಸ್ವರೂಪವಾದ ಮಹಾಲಿಂಗವೇ ಕಡೆಯಾದಂಥ ಷಟ್‌ಸ್ಥಲಲಿಂಗ ಮೂಲವಹ ಪರಮಾನಂದವೆಂಬ ಕಿರಣಂಗಳನ್ನು ಎಲ್ಲಕ್ಕೂ ತಾನಾಶ್ರಯವಾಗಿ ನಿರುಪಮಲಿಂಗದ ಪ್ರಭಾಕಿರಣವೇ ತಾನಾ ಗಿರ್ದನೆಂದು ಚನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.



# ಮೂವತ್ತಾರು ಅಂಗಸ್ಥಲಗಳ ಮತ್ತು ಲಿಂಗಸ್ಥಲಗಳ ವಿಕಾಸವು.

ಮೂವತ್ತಾರು ಸ್ಥಲಗಳಲ್ಲಿ ಹೇಗೆ ಪ್ರಗತಿಯು ಉಂಟಾಗುತ್ತ ಹೋಗುತ್ತದೆಂಬದು ಈ ಸ್ಥಲಗಳಲ್ಲಿ ಹೇಳಲ್ಪಟ್ಟಿದೆ. ಮೊದಲು ಅಂಗ ಸ್ಥಲಗಳ ಪ್ರಗತಿಯೂ ಆಮೇಲೆ ಲಿಂಗಸ್ಥಲಗಳ ಪ್ರಗತಿಯೂ ಕೆಳಗಿನ ವಚನಗಳಲ್ಲಿ ಹೇಳಲ್ಪಟ್ಟಿವೆ. ಇವುಗಳಲ್ಲಿ ೩೬ ಅಂಗಸ್ಥಲಗಳ ಪ್ರಗ ತಿಯ ವ್ಯಾಖ್ಯೆಗಳು ನಮಗೆ ದೊರೆದಿರುವದಿಲ್ಲ. ಆದರೂ ಅವುಗಳ ಹೆಸರುಗಳ ಮೇಲಿಂದ ಅವುಗಳ ಪ್ರಗತಿಯ ಸ್ವರೂಪವನ್ನು ನಾವು ಊಹಿ ಸಬಹುದಾಗಿದೆ. ಆದರೆ ೩೬ ಲಿಂಗಸ್ಥಲಗಳ ಪ್ರಗತಿಯ ವ್ಯಾಖ್ಯೆಗಳು ನಮಗೆ ದೊರೆದಿವೆ. ಅವುಗಳ ಮೇಲಿಂದ ಮನುಷ್ಯನಲ್ಲಿ ವಿಕಾಸವು ಹೇಗೆ ಉಂಟಾಗುತ್ತ ಹೋಗುತ್ತದೆಂಬದನ್ನು ನಾವು ಅರಿಯಬಹು ದಾಗಿದೆ.

**ಅಂಗಸ್ಥಲಗಳ ವಿಕಾಸವುः—** ಅಂಗಸ್ಥಲಗಳಲ್ಲಿಯ ವಿಕಾಸವು ಆ ಅಂಗಸ್ಥಲಗಳಿಗೆ ಸಂಬಂಧಿಸಿದ ಲಿಂಗಗಳ ಹೆಸರುಗಳ ಮೂಲಕ ಹೇಳಲ್ಪಡುತ್ತದೆ. ಲಿಂಗಗಳಲ್ಲಿ ಆಚಾರ, ಗುರು, ಲಿಂಗ ಅಥವಾ ಶಿವ, ಚರ, ಪ್ರಸಾದ, ಮತ್ತು ಕಡೆಗೆ ಮಹತ್ ಎಂಬ ತರಗತಿಗಳು ಅನುಕ್ರಮವಾಗಿ ಇರುತ್ತವೆ. ಇವುಗಳ ವಿವರಣೆಗಳು ಹಿಂದೆಯೇ ಷಟ್ಲಿಂ ಲಿಂಗಗಳ ವಿವೇಚನೆಯಲ್ಲಿ ಬಂದಿವೆ.

ಮೊದಲನೆಯದಾದ ಭಕ್ತಸ್ಥಲದ ಪ್ರಗತಿಗಳು ಆಚಾರಾಂಗ, ಗೌರವಾಂಗ, ಶಿವಾಂಗ, ಚರಾಂಗ, ಪ್ರಸಾದಾಂಗ, ಮಹದಂಗವೆಂದು ವಿವರಿಸಲ್ಪಟ್ಟಿವೆ.

ಎರಡನೆಯದಾದ ಮಹೇಶ್ವರ ಸ್ಥಲದ ಮುಖ್ಯ ವೈಶಿಷ್ಟ್ಯವು ನಿಷ್ಠೆ ಇರುತ್ತದೆ. ಆದ್ದರಿಂದ ಈ ಸ್ಥಲದ ಪ್ರಗತಿಗಳು ಆಚಾರನಿಷ್ಠೆ, ಗುರು ನಿಷ್ಠೆ, ಲಿಂಗನಿಷ್ಠೆ, ಚರನಿಷ್ಠೆ. ಪ್ರಸಾದನಿಷ್ಠೆ, ಮತ್ತು ಮಹನ್ನಿಷ್ಠೆ ಎಂದು ಹೇಳಲ್ಪಟ್ಟಿವೆ.

ಮೂರನೆಯದಾದ ಪ್ರಸಾದಿಯ ಮುಖ್ಯ ವೈಶಿಷ್ಟ್ಯವು ಅವಧಾನ ಭಕ್ತಿ ಇರುತ್ತದೆ. ಆದ್ದರಿಂದ ಈ ಸ್ಥಲದ ಪ್ರಗತಿಗಳು ಆಚಾರಾವಧಾನಿ, ಗೌರವಾವಧಾನಿ, ಲಿಂಗಾವಧಾನಿ, ಚರಾವಧಾನಿ, ಪ್ರಸಾದಾವಧಾನಿ, ಮಹದಾವಧಾನಿ ಎಂದು ಹೇಳಲ್ಪಟ್ಟಿವೆ.

ನಾಲ್ಕನೆಯದಾದ ಪ್ರಾಣಲಿಂಗಿ ಸ್ಥಲದ ವೈಶಿಷ್ಟ್ಯವು ಅನುಭಾವ ಭಕ್ತಿ ಇರುತ್ತದೆ. ಈ ಸ್ಥಲದಲ್ಲಿ ಅಂತ್ಯಸ್ಥಿತಿಯನ್ನು ಹೊಂದಿದವನಿಗೆ ಮಹಾನುಭಾವಿ ಎಂಬ ಹೆಸರು ಇರುತ್ತದೆ. ಈ ಸ್ಥಿತಿಗೆ ಬರುವ ಪೂರ್ವದಲ್ಲಿ ಪ್ರಾಣಲಿಂಗಿಯು ಸಾಧ್ಯ, ವೇಧ್ಯ, ಭೇದ್ಯ, ಯೋಗ್ಯ, ಸನ್ನಿಹಿತ ವೆಂಬ ಐದು ಸ್ಥಲಗಳೊಳಗಿಂದ ಹಾಯ್ದು ಬರಬೇಕಾಗುವದು.

ಐದನೆಯದಾದ ಶರಣಸ್ಥಲದ ತರಗತಿಗಳಿಗೆ ಅಯುತ, ಸ್ವಾಯುತ, ಸನ್ನಿಹಿತ, ಕಳಾಗ್ರಾಹಕ, ಮನೋಮುಗ್ನತೆ ಎಂಬ ಹೆಸರುಗಳಿವೆ. ಅವೆಲ್ಲವು ಶರಣನಲ್ಲಿಯ ಲಿಂಗ ವಿಕಾಸಸ್ಥಿತಿಯನ್ನು ಸೂಚಿಸುತ್ತವೆ.

ಕಡೆಯದಾದ ಐಕ್ಯಸ್ಥಲದ ವೈಶಿಷ್ಟ್ಯವು ತೃಪ್ತಿ ಇರುತ್ತದೆ. ಆದ್ದರಿಂದ ಇದರ ವಿಕಾಸಸ್ಥಿತಿಗಳಿಗೆ ಆಚಾರತೃಪ್ತಿ, ಗೌರವತೃಪ್ತಿ, ಲಿಂಗತೃಪ್ತಿ, ಚರತೃಪ್ತಿ, ಪ್ರಸಾದತೃಪ್ತಿ, ಮತ್ತು ನಿರ್ಭಾವತೃಪ್ತಿ ಎಂಬ ಹೆಸರುಗಳಿರುತ್ತವೆ.

ಇವು ೩೬ ಅಂಗಸ್ಥಲಗಳ ಪ್ರಗತಿಯ ಹೆಸರುಗಳಿರುತ್ತವೆ.

**ಲಿಂಗಸ್ಥಲಗಳ ವಿಕಾಸವು:—** ಆಚಾರಲಿಂಗದ ವಿಕಾಸದ ಸ್ವರೂಪ ಕ್ರಿಯೆ, ಮಂತ್ರ, ನಿರೀಕ್ಷಣ, ಯಜನ, ಈಳನ, ವೇಧಾ ಎಂದು ಇರುತ್ತದೆ ಆರಂಭದಲ್ಲಿ ಸತ್‌ಕ್ರಿಯೆಯಾಗಿಯೂ, ಆಮೇಲೆ ಮಂತ್ರರೂಪವಾಗಿಯೂ, ಆಮೇಲೆ ಅವಧಾನಕ್ಕೊಳ್ಳುವ ನಿರೀಕ್ಷಣರೂಪವಾಗಿಯೂ, ಆಮೇಲೆ ಪೂಜಾಕ್ರಿಯಾರೂಪವಾಗಿಯೂ, ಆಮೇಲೆ ಪ್ರಾರ್ಥನಾರೂಪವಾಗಿಯೂ, ಕಡೆಗೆ ಜ್ಞಾನರೂಪವಾಗಿಯೂ ಪ್ರಕಟವಾಗುತ್ತ ಹೋಗುತ್ತದೆ.

ಗುರುಲಿಂಗವು ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ವೇಧಾದೀಕ್ಷೆ, ತರುವಾಯ ಬೋಧಾದೀಕ್ಷೆ, ಪ್ರಸನ್ನದೀಕ್ಷೆ, ಆಮೇಲೆ ನಿರ್ವಾಣದೀಕ್ಷೆ ಎಂಬ ಹೆಸರುಗಳಿಂದ ವಿಕಾಸ ಹೊಂದುತ್ತ ಹೋಗುತ್ತದೆ.

ಶಿವಲಿಂಗವು ಮೊದಲು ಕರಸ್ಥಲ, ಆಮೇಲೆ ಕ್ರಮವಾಗಿ ಹೃದಯಸ್ಥಲ, ನಯನಸ್ಥಲ, ಮಂತ್ರಸ್ಥಲ, ತ್ರಿಕೂಟಸ್ಥಲ, ಲಯಸ್ಥಲ ಈ ವರೆಗೆ ಅಲ್ಲಲ್ಲಿ ಪ್ರಕಟವಾಗುತ್ತ ಹೋಗುವದು.

ಚರಲಿಂಗವು ಸ್ವಯ, ಚರ, ಪರ, ಪರಿಣಾಮಿ, ನಿರುಪಾಧಿಕ, ಪರಿಪೂರ್ಣ ಎಂಬ ಆಯಾ ಸ್ಥಿತಿಗಳನ್ನು ಹೊಂದಿ ಕಡೆಗೆ ಪರಿಣಾಮ ಸ್ಥಿತಿಯನ್ನು ಹೊಂದುವದು.

ಪ್ರಸಾದಲಿಂಗವು ಇಂದ್ರಿಯಾನಂದ, ಪ್ರಾಣಾನಂದ, ಜ್ಞಾನಾನಂದ, ಭಾವಾನಂದ, ತೂರ್ಯಾನಂದ ಎಂದು ಆನಂದದ ಸ್ಥಿತಿಗಳೊಳಗಿಂದ ಹಾಯ್ದು ಕಡೆಗೆ ಮಹದಾನಂದ ಸ್ಥಿತಿಗೆ ಬರುವದು.

ಮಹಾಲಿಂಗವು ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ, ಭಾವಗಮ್ಯ, ಸರ್ವತತ್ವಾಶ್ರಯ, ಎಂಬ ಸ್ಥಿತಿಗಳೊಳಗಿಂದ ಹಾಯ್ದು ಕಡೆಗೆ ಪರಿಪೂರ್ಣ ಪ್ರಕಾಶವನ್ನು ಹೊಂದುವದು. ಹೀಗೆ ೩೬ ಸ್ಥಲಗಳಲ್ಲಿ ಲಿಂಗ ವಿಕಾಸ ಸ್ಥಿತಿಯು ತನ್ನಲ್ಲಿ ತಲೆದೋರುತ್ತದೆ.

(೧) ಆಚಾರಾಂಗ, ಗೌರವಾಂಗ, ಶಿವಾಂಗ, ಚರಾಂಗ, ಪ್ರಸಾದಾಂಗ, ಮಹದಂಗವೆಂಬ ಭಕ್ತನಂಗವಾರು. ಆಚಾರನಿಷ್ಠೆ, ಗುರುನಿಷ್ಠೆ, ಲಿಂಗನಿಷ್ಠೆ, ಚರನಿಷ್ಠೆ, ಪ್ರಸಾದನಿಷ್ಠೆ, ಮಹನ್ನಿಷ್ಠೆ ಎಂಬ ಮಹೇಶನಂಗವಾರು. ಆಚಾರಾವಧಾನಿ, ಗೌರವಾವಧಾನಿ, ಲಿಂಗಾವಧಾನಿ, ಚರಾವಧಾನಿ, ಪ್ರಸಾದಾವಧಾನಿ, ಮಹದಾವಧಾನಿ ಎಂಬ ಪ್ರಸಾದಿಯಂಗವಾರು. ಸಾಧ್ಯ, ವೇದ್ಯ, ಭೇದ್ಯ, ಯೋಗ್ಯ, ಸನ್ನಿಹಿತ, ಮಹಾನುಭಾವಿ ಎಂಬ ಪ್ರಾಣಲಿಂಗಿಯಂಗವಾರು. ಆಯುತ, ಸ್ವಾಯುತ, ಸನ್ನಿಹಿತ, ಕಳಾಗ್ರಾಹಕ, ಮನೋಮುಗ್ಧತೆ, ಘನಸಾಮರಸ್ಯವೆಂಬ ಶರಣನಂಗವಾರು. ಆಚಾರತೃಪ್ತಿ, ಗೌರವತೃಪ್ತಿ, ಲಿಂಗತೃಪ್ತಿ, ಚರತೃಪ್ತಿ, ಪ್ರಸಾದತೃಪ್ತಿ, ನಿರ್ಭರವತೃಪ್ತಿ, ಎಂಬ ಐಕ್ಯನಂಗವಾರು.

ಇಂತಿದರಲ್ಲಿ ಅಂತರ್ಗತವಾದ ಲಿಂಗಸ್ಥಳ ಷಟ್‌ತ್ರಿಂಶವಕ್ಕೆ ವಿವರಃ— ಕ್ರಿಯೆ, ಮಂತ್ರ, ನಿರೀಕ್ಷಣ, ಯಜನ, ಈಳನ, ವೇಧಾ ಎಂಬ ಆಚಾರಲಿಂಗ ಸ್ಥಳವಾರು. ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ವೇಧಾದೀಕ್ಷೆ ಬೋಧಾದೀಕ್ಷೆ, ಪ್ರಸನ್ನದೀಕ್ಷೆ, ನಿರ್ವಾಣದೀಕ್ಷೆ, ಎಂಬ ಗುರುಲಿಂಗ ಸ್ಥಳವಾರು. ಕರಸ್ಥಳ, ನಯನಸ್ಥಳ, ಹೃದಯಸ್ಥಳ, ಮಂತ್ರಸ್ಥಳ, ತ್ರಿಕೂಟಸ್ಥಳ, ಲಯಸ್ಥಳವೆಂಬ ಶಿವಲಿಂಗಸ್ಥಳವಾರು. ಸ್ವಯಂ, ಚರ, ಪರ,ಪರಿ ಣಾಮಿ, ನಿರುಪಾಧಿಕ, ಪರಿಪೂರ್ಣವೆಂಬ ಚರಲಿಂಗಸ್ಥಳವಾರು. ಇಂದ್ರಿಯಾನಂದ, ಪ್ರಾಣಾನಂದ, ಜ್ಞಾನಾನಂದ, ಭಾವಾನಂದ, ತೂರ್ಯಾನಂದ, ಮಹದಾನಂದವೆಂಬ ಪ್ರಸಾದಲಿಂಗ ಸ್ಥಳವಾರು. ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ, ಭಾವಗವ್ಯ, ಸರ್ವತತ್ವಾಶ್ರಯ, ಪರಿಪೂರ್ಣ ಪ್ರಕಾಶವೆಂಬ ಮಹಾಲಿಂಗಸ್ಥಳವಾರು. ಇಂತಿವು ಸ್ಥಲ ತನು ಸಂಬಂಧವಾಗಿಹವೆಂಬರಿವುದು .....ಅಲೇಕನಾದ ಶೂನ್ಯಶಿಲೆಯ ಹೊರ ಹೊಮ್ಮಿ ಕಂಡೆ ನಿನ್ನನು.

(೨) ಆಚಾರಲಿಂಗಸ್ಥಲ ಷಡ್ವಿಧ, ಗುರುಲಿಂಗಸ್ಥಲ ಷಡ್ವಿಧ, ಶಿವಲಿಂಗಸ್ಥಲ ಷಡ್ವಿಧ, ಜಂಗಮಲಿಂಗಸ್ಥಲ ಷಡ್ವಿಧ, ಪ್ರಸಾದಲಿಂಗಸ್ಥಲ ಷಡ್ವಿಧ, ಮಹಾಲಿಂಗಸ್ಥಲ ಷಡ್ವಿಧ, ಅಂತು ಲಿಂಗಸ್ಥಲವು ೩೬ ಪ್ರಕಾರವು.

ಆಚಾರಲಿಂಗ, ಪಂಚಾಚಾರಸ್ವರೂಪವಾದ ಆಚಾರಲಿಂಗ, ಗುರುಲಿಂಗ, ಮಂತ್ರಾತ್ಮಕ ಸ್ವರೂಪವಾದ ಗುರುಲಿಂಗ, ಶಿವಲಿಂಗ, ನಿರೀಕ್ಷಣ ಸ್ವರೂಪವಾದ ಶಿವಲಿಂಗ, ಜಂಗಮಲಿಂಗ, ಯಜನಸ್ವರೂಪವಾದ ಜಂಗಮಲಿಂಗ, ಪ್ರಸಾದಲಿಂಗ, ಸ್ತೋತ್ರ ಸ್ವರೂಪವಾದ ಪ್ರಸಾದಲಿಂಗ, ಮಹಾಲಿಂಗ, ವೇಧಾಸ್ವರೂಪವಾದ ಮಹಾಲಿಂಗವು, ಈ ಪ್ರಕಾರ ದೃಶ್ಯಾದೃಶ್ಯ ಭಾವಲಿಂಗಸ್ಥಲವಾರು, ಮಾರ್ಗಕ್ರಿಯಾತ್ರಿವಿಧಲಿಂಗಸ್ಥಲ, ಮೀರಿದ ಕ್ರಿಯಾತ್ರಿವಿಧಲಿಂಗಸ್ಥಲ, ಅಲ್ಲಿ ಆ ಮೀರಿದ ಕ್ರಿಯಾಸ್ಥಲದಲ್ಲಿ ಆಚಾರಲಿಂಗ ಷಡ್ವಿಧ.

ಮತ್ತು ಭಕ್ತನಿಗೆ ಆಚಾರಲಿಂಗವು, ಆಚಾರಲಿಂಗವೆಂದರೂ ಕ್ರಿಯಾಲಿಂಗವೆಂದರೂ ಒಂದೇ. ಆ ಕ್ರಿಯಾಲಿಂಗವೇ ಇಷ್ಟಲಿಂಗವು, ಆ ಇಷ್ಟಲಿಂಗವೇ ಪ್ರಾಣಲಿಂಗವು, ಆ ಪ್ರಾಣಲಿಂಗವೇ ಭಾವಲಿಂಗವು, ಆ ಭಾವ

ಲಿಂಗವೇ ಮಹಾಲಿಂಗವು, ಆ ಮಹಾಲಿಂಗವೇ ನಿಃಕಲಲಿಂಗವು, ಆ ನಿಃಕಲಲಿಂಗವೇ ಇಷ್ಟಲಿಂಗವಾಗಲು, ಆ ಇಷ್ಟಲಿಂಗದ ಷಡ್ವಿಧಾಚರಣೆಯೇ ಆ ಲಿಂಗದ ಷಟ್‌ಸ್ಥಾನದಲ್ಲಿರ್ದ ಷಡ್ವಿಧಲಿಂಗಸ್ವರೂಪವು. ಅವಕ್ಕೆ ವಿವರಃ—

ಕ್ರಿಯೆ, ಲಿಂಗದ ಮೇಲೆ ಸಾಕಾರ ಸ್ವರೂಪಿನಿಂದ ತ್ರಿಕಾಲ ಪೂಜಾಕ್ರಿಯೆಗಳ ಕೈಕೊಂಡು ಒಪ್ಪುವಂತಹ ಇಷ್ಟಲಿಂಗವು. ಮಂತ್ರ, ಮನೋಮಧ್ಯದಲ್ಲಿ ನೆಲೆಗೊಂಡು ಮಂತ್ರಜ್ಞಾನ ಜಪಸ್ತೋತ್ರ ನಿರ್ಗುಣ ಪೂಜಾಕ್ರಿಗಳನು ಕೈಕೊಂಡು ಒಪ್ಪುವಂತಹ ಮಂತ್ರಸ್ವರೂಪವಾದ ಪ್ರಾಣಲಿಂಗವು. ನಿರೀಕ್ಷಣ, ಆತ್ಮಾಂಗದಲ್ಲಿ ನೆಲೆಗೊಂಡು ಮನೋಲಯ ನಿರಂಜನ ಭಕ್ತಿಪೂಜಾಕ್ರಿಗಳನು ಕೈಕೊಂಡು ಒಪ್ಪುವಂತಹ ಮಹಾಜ್ಞಾನ ನಿರೀಕ್ಷಣ ಸ್ವರೂಪವಾದ ಭಾವಲಿಂಗವು.

ಮತ್ತಂ ಕ್ರಿಯೆ, ಸತ್ಕ್ರಿಯಾಸ್ವರೂಪವಾದಿಷ್ಟಲಿಂಗವೇ ಭಕ್ತಂಗಾಚಾರಲಿಂಗ, ಆ ಆಚಾರಲಿಂಗವೇ ಕ್ರಿಯಾಲಿಂಗ, ಆ ಕ್ರಿಯಾಲಿಂಗವೇ ಇಷ್ಟಲಿಂಗ ಆ ಇಷ್ಟಲಿಂಗದ ಶಕ್ತಿಪೀಠದಲ್ಲಿರ್ದ ಆಚಾರಲಿಂಗದೊಳಗಣ ಆಚಾರಲಿಂಗವು. ಮಂತ್ರವು, ಮಂತ್ರಸ್ವರೂಪವಾದ ಪ್ರಾಣಲಿಂಗವೇ ಭಕ್ತನಿಗೆ ಗುರುಲಿಂಗವು, ಆ ಗುರುಲಿಂಗವೇ ಇಷ್ಟಲಿಂಗದ ಕಟಿಯಲ್ಲಿರ್ದ ಆಚಾರಲಿಂಗದೊಳಗಣ ಗುರುಲಿಂಗವು. ನಿರೀಕ್ಷಣ, ಮಹಾಜ್ಞಾನ ನಿರೀಕ್ಷಣ ಸ್ವರೂಪವಾದ ಭಾವಲಿಂಗವೇ ಭಕ್ತನಿಗೆ ಶಿವಲಿಂಗವು. ಆ ಶಿವಲಿಂಗವೇ ಇಷ್ಟಲಿಂಗದ ವರ್ತುಳದಲ್ಲಿರ್ದ ಆಚಾರಲಿಂಗದೊಳಗಣ ಶಿವಲಿಂಗವು. ಯಜನ, ಜಂಗಮಲಿಂಗವೇ ಆ ಇಷ್ಟಲಿಂಗದ ಗೋಮುಖದಲ್ಲಿರ್ದ ಆಚಾರಲಿಂಗದೊಳಗಣ ಯಜನಸ್ವರೂಪವಾದ ಜಂಗಮಲಿಂಗವು. ಈಳನ, ಆ ಪ್ರಸಾದಲಿಂಗವೇ ಇಷ್ಟಲಿಂಗದ ನಾಳದಲ್ಲಿರ್ದ ಆಚಾರಲಿಂಗದೊಳಗಣ ಸ್ತೋತ್ರಸ್ವರೂಪವಾದ ಪ್ರಸಾದಲಿಂಗವು. ವೇಧಾ, ಆ ಮಹಾಲಿಂಗವೇ ಆ ಇಷ್ಟಲಿಂಗದ ಆಜ್ಯಪ್ರದಾಯಕದಲ್ಲಿರ್ದ ಆಚಾರಲಿಂಗದೊಳಗಣ ವೇಧಾಸ್ವರೂಪವಾದ ಮಹಾಲಿಂಗವು.

ಮತ್ತಂ ಕ್ರಿಯೆ, ಆ ಭಕ್ತನ ಆಧಾರ ಚಕ್ರದ ನಾಲ್ಕೆಸಳ ಕಂಜದ ಮಧ್ಯದಲ್ಲಿರ್ದ ಆಚಾರಲಿಂಗದೊಳಗಣ ಪಂಚಾಚಾರ ಸ್ವರೂಪವಾದ ಆಚಾರಲಿಂಗವು. ಮಂತ್ರ, ಆ ಭಕ್ತನ ಸ್ವಾಧಿಷ್ಠಾನ ಚಕ್ರದ

ಆರೆಸಳ ಕಂಜವಲ್ಲಿರ್ದ ಆಚಾರಲಿಂಗದೊಳಗಣ ಮಂತ್ರಸ್ವರೂಪವಾದ ಗುರುಲಿಂಗವು. ನಿರೀಕ್ಷಣ, ಆ ಭಕ್ತನ ಮಣಿಪೂರಕ ಚಕ್ರದ ಹತ್ತೆಸಳ ಕಂಜದಲ್ಲಿರ್ದ ಆಚಾರಲಿಂಗದೊಳಗಣ ನಿರೀಕ್ಷಣ ಸ್ವರೂಪವಾದ ಶಿವ ಲಿಂಗವು. ಯಜನ, ಆ ಭಕ್ತನ ಅನಾಹತ ಚಕ್ರದ ಹನ್ನೆರಡೆಸಳ ಕಂಜ ದಲ್ಲಿರ್ದ ಆಚಾರಲಿಂಗದೊಳಗಣ ಯಜನ ಸ್ವರೂಪವಾದ ಜಂಗಮ ಲಿಂಗವು. ಈಳನ, ಆ ಭಕ್ತನ ವಿಶುದ್ಧಿ ಚಕ್ರದ ಹದಿನಾರೆಸಳಕಂಜದಲ್ಲಿರ್ದ ಆಚಾರಲಿಂಗದೊಳಗಣ ಸ್ತೋತ್ರಸ್ವರೂಪವಾದ ಪ್ರಸಾದಲಿಂಗವು. ವೇಧಾ, ಆ ಭಕ್ತನ ಆಜ್ಞಾಚಕ್ರದ ಎರಡೆಸಳಕಂಜದಲ್ಲಿರ್ದ ಆಚಾರಲಿಂಗದೊಳ ಗಣ ವೇಧಾ ಸ್ವರೂಪವಾದ ಮಹಾಲಿಂಗವು.

ಮತ್ತಂ ಕ್ರಿಯೆ, ಆ ಭಕ್ತನು ತನ್ನ ಇಷ್ಟಲಿಂಗಕ್ಕೆ ತ್ರಿಕಾಲಪೂಜಾ ಕ್ರಿಯೆಗಳ ತಪ್ಪದೆಮಾಡುವಂತಹದ್ದೇ ಅದೇ ಆಚಾರಲಿಂಗದೊಳಗಣ ಸತ್ಕ್ರಿಯಾಸ್ವರೂಪವಾದ ಆಚಾರಲಿಂಗವು. ಮಂತ್ರ, ಆ ಭಕ್ತನು ತನ್ನ ಇಷ್ಟಲಿಂಗದ ಸ್ವಯಾಭಿಧಾನವಾದ ಪಂಚಾಕ್ಷರೀ ಮಂತ್ರವನು ವಾಚಕ ಮಾನಸ ಉಪಾಸಿಕಂಗಳಲ್ಲಿ ಸ್ಮರಿಸುವಂತಹದ್ದೇ ಆಚಾರಲಿಂಗದೊಳಗಣ ಗುರುಲಿಂಗವು. ವೇಧಾ, ಆ ಭಕ್ತನು ತನ್ನ ಇಷ್ಟಲಿಂಗವನ್ನ ಧ್ಯಾನಿಸುವದೇ ಆಚಾರಲಿಂಗದೊಳಗಣ ಶಿವಲಿಂಗವು. ಯಜನ, ಆ ಭಕ್ತನು ತನ್ನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳನು ಮಾಡು ವಂತಹದ್ದೇ ಆಚಾರಲಿಂಗದೊಳಗಣ ಜಂಗಮಲಿಂಗವು. ಈಳನ, ಆ ಭಕ್ತನು ತನ್ನ ಇಷ್ಟಲಿಂಗಕ್ಕೆ ಬಾಣ ಮಯೂರ ಹಲಾಯುಧೋದ್ಭಟ ಕಾಳಿದಾಸನ ಹಾಗೆ ಕಂದ ವೃತ್ತ ಗದ್ಯ ಪದ್ಯಾದಿಗಳಿಂದೆ ಸ್ತೋತ್ರ ಮಂತ್ರಾದಿಗಳನು ಮಾಡುವಂತಹದ್ದೇ ಆಚಾರಲಿಂಗದೊಳಗಣ ಪ್ರಸಾದ ಲಿಂಗವು. ನಿರೀಕ್ಷಣ, ಆ ಭಕ್ತನು ತನ್ನ ಇಷ್ಟಲಿಂಗವನು ಎವೆಹಳಚದೆ ಅನುಮಿಷ ದೃಷ್ಟಿಯಿಂದೆ ನಿರೀಕ್ಷಿಸುವಂತಹದ್ದೇ ಆಚಾರಲಿಂಗದೊಳಗಣ ಮಹಾಲಿಂಗವು. ಇಂತು ಈ ಪ್ರಕಾರದ ದೆಸೆಯಿಂದೆ ಆಚಾರಲಿಂಗ ಷಡ್ವಿಧ.

ಇನ್ನು ಮುಂದೆ ಗುರುಲಿಂಗವಾರುಸ್ಥಲ, ಮಂತ್ರನಿಷ್ಠಾ ಸ್ವರೂಪ ವಾದ ಗುರುಲಿಂಗವು ಷಟ್‌ಪ್ರಕಾರಲಿಂಗವು. ಆ ನಿಃಕಲಲಿಂಗವೇ ಇಷ್ಟ ಲಿಂಗವಾಗಲು, ಆ ಇಷ್ಟಲಿಂಗದ ಷಡ್ವಿಧಾಚರಣೆಯೇ ಆ ಲಿಂಗದ ಷಟ್ ಸ್ಥಾನದಲ್ಲಿರ್ದ ಷಡ್ವಿಧಲಿಂಗ ಸ್ವರೂಪವು. ಅದಕ್ಕೆ ವಿವರ:— ಕ್ರಿಯಾ

ದೀಕ್ಷೆ, ನಾಲ್ಕು ದಿಕ್ಕಿನಲ್ಲಿ ನಾಲ್ಕಾರ್ಯರು ಸಹವಾಗಿ ಗಣಸಾಕ್ಷಿಯಾಗಿ ಪಂಚಕಲಶವ ಹೂಡಿ ಅಂಗದ ವರ್ತನೆಯ ನಷ್ಟವಮಾಡಿ ಆಚಾರಾಂಗ ಸ್ವರೂಪವನೆಯ್ದಿಸಿ ಅಲ್ಲಿ ಇಷ್ಟಲಿಂಗದ ಕಳೆಯ ಪ್ರತಿಷ್ಠೆಯ ಮಾಡಿ ದಂತಹದ್ದೇ ಕ್ರಿಯಾದೀಕ್ಷೆ. ಆ ಸತ್ಕ್ರಿಯೋಪದೇಶ ಸ್ವರೂಪವಾದ ಇಷ್ಟ ಲಿಂಗವೇ ಗುರುಲಿಂಗವು. ಆ ಗುರುಲಿಂಗವೇ ಆ ಮಹೇಶ್ವರಂಗೆ ಇಷ್ಟ ಲಿಂಗವಾಗಲು, ಆ ಇಷ್ಟದ ಶಕ್ತಿಪೀಠದಲ್ಲಿಹ ಗುರುಲಿಂಗದೊಳಗಣ ಆಚಾರಲಿಂಗವು. ಮಂತ್ರದೀಕ್ಷೆ:— ಆ ಜ್ಞಾನ ಗುರುಸ್ವಾಮಿಯು ಅನಾ ಹತ ಕರ್ಣದ್ವಾರದಲ್ಲಿ ಪಂಚಾಕ್ಷರೀ ಮಂತ್ರವನುಪದೇಶಿಸಿ, ಪ್ರಾಣನ ಪ್ರಕೃತಿಯ ನಷ್ಟವಮಾಡಿ ಚಿತ್ ಪ್ರಾಣ ಸ್ವರೂಪವನೆಯ್ದಿಸಿ ಪ್ರಾಣ ಲಿಂಗದ ಕಳೆಯ ಪ್ರತಿಷ್ಠೆಯಮಾಡಿ ಕೊಡುವಂತಹದ್ದೇ ಮಂತ್ರಾನು ಗ್ರಹ. ಆ ಮಂತ್ರಾನುಗ್ರಹ ಸ್ವರೂಪವಾದ ಪ್ರಾಣಲಿಂಗವು, ಆ ಪ್ರಾಣ ಲಿಂಗವೇ ಮಹೇಶ್ವರಂಗೆ ಗುರುಲಿಂಗವಾಗಲು, ಆ ಗುರುಲಿಂಗವೇ ಇಷ್ಟಲಿಂಗದ ಕಟಿಯಲ್ಲಿರ್ದ ಗುರುಲಿಂಗದೊಳಗಣ ಗುರುಲಿಂಗವು. ವೇಧಾದೀಕ್ಷೆ:— ಶಿಷ್ಯ ಮಸ್ತಕ ಹಸ್ತ ವಿನ್ಯಸ್ತ ಸದ್ಗುರುವೆ ಎಂದು ಆ ಜ್ಞಾನ ಗುರುಮೂರ್ತಿಯು ಆ ಶಿಷ್ಯನ ಮಸ್ತಕದ ಮೇಲೆ ತನ್ನ ಹಸ್ತ ಕಮ ಲವನು ವಿನ್ಯಸ್ತವಮಾಡಿ ಆತ್ಮನ ವರ್ತನೆಯ ನಷ್ಟವ ಮಾಡಿ ಚಿದಾತ್ಮ ಸ್ವರೂಪವನೆಯ್ದಿಸಿ ಅಲ್ಲಿ ಭಾವಲಿಂಗದ ಕಳೆಯ ಪ್ರತಿಷ್ಠೆಯ ಮಾಡಲು ಅಂತಹವೇ ವೇಧಾದೀಕ್ಷೆ. ಆ ವೇಧಾಸ್ವರೂಪವಾದ ಭಾವಲಿಂಗವು ಆ ಭಾವಲಿಂಗವೇ ಮಾಹೇಶ್ವರಂಗೆ ಶಿವಲಿಂಗವಾಗಲು, ಆ ಶಿವಲಿಂಗವೇ ಇಷ್ಟಲಿಂಗದ ವರ್ತುಳದಲ್ಲಿಹ ಗುರುಲಿಂಗದೊಳಗಣ ಶಿವಲಿಂಗವು. ಬೋಧಾದೀಕ್ಷೆ:— ತ್ರಿವಿಧ ಲಿಂಗಾನುಭಾವವನು ಓದಿಸುವಂತಹದ್ದೇ ಬೋಧಾನುಗ್ರಹವು. ಅಂತದೇ ಇಷ್ಟಲಿಂಗ, ಆ ಇಷ್ಟಲಿಂಗದ ಗೋಮು ಖದಲ್ಲಿರ್ದ ಗುರುಲಿಂಗದೊಳಗಣ ಜಂಗಮಲಿಂಗವು. ಪ್ರಸನ್ನದೀಕ್ಷೆ:— ಪ್ರತ್ಯಕ್ಷ ನಿರ್ಮಲಸ್ವರೂಪವಾದ ವಸ್ತುವೇ ನೀನೆಂದನುಗ್ರಹಿಸುವಂತಹದ್ದೇ ಪ್ರಸನ್ನದೀಕ್ಷೆ. ಅಂತಹದೇ ಇಷ್ಟಲಿಂಗ. ಆ ಇಷ್ಟಲಿಂಗದ ನಾಳದ ಲ್ಲಿರ್ದ ಗುರುಲಿಂಗದೊಳಗಣ ಪ್ರಸಾದ ಲಿಂಗವು. ನಿರ್ವಾಣದೀಕ್ಷೆ:— ಮೋಕ್ಷಾಸ್ವರೂಪವಾದ ವಸ್ತುವೇ ತಾನೆಂದು ಅನುಗ್ರಹಿಸುವಂತಹದ್ದೇ ನಿರ್ವಾಣದೀಕ್ಷೆ. ಅಂತಹದೇ ಇಷ್ಟಲಿಂಗದ ಆಜ್ಯಪ್ರದಾರಿಕೆಯಲ್ಲಿರ್ದ ಗುರು ಲಿಂಗದೊಳಗಣ ಮಹಾಲಿಂಗವು.

ಮತ್ತಂ ಕ್ರಿಯಾದೀಕ್ಷೆ:— ಆ ಮಹೇಶ್ವರನ ಆಧಾರ ಚಕ್ರದ ನಾಲ್ಕೆಸಳಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ಸತ್ಕ್ರಿಯಾನುಗ್ರಹ ಸ್ವರೂಪವಾದ ಆಚಾರಲಿಂಗವು. ಮಂತ್ರದೀಕ್ಷೆ:— ಮಹೇಶ್ವರನ ಸ್ವಾಧಿಷ್ಠಾನ ಚಕ್ರದ ಆರೆಸಳಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ಮಂತ್ರಾನುಗ್ರಹ ಸ್ವರೂಪವಾದ ಪ್ರಾಣಲಿಂಗವು. ವೇಧಾದೀಕ್ಷೆ:— ಆ ಮಹೇಶ್ವರನ ಮಣಿಪೂರಕ ಚಕ್ರದ ಹತ್ತೆಸಳಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ವೇಧಾನುಗ್ರಹ ಸ್ವರೂಪವಾದ ಶಿವಲಿಂಗವು. ಬೋಧಾದೀಕ್ಷೆ:— ಆ ಮಹೇಶ್ವರನ ಅನಾಹತ ಚಕ್ರದ ಹನ್ನೆರಡೆಸಳಕಂಜ ವಲ್ಲಿರ್ದ ಗುರುಲಿಂಗದೊಳಗಣ ಬೋಧಾನುಗ್ರಹ ಸ್ವರೂಪವಾದ ಜಂಗಮಲಿಂಗವು. ಪ್ರಸನ್ನದೀಕ್ಷೆ:— ಆ ಮಾಹೇಶ್ವರನ ವಿಶುದ್ಧಿ ಚಕ್ರದ ಹದಿನಾರೆಸಳಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ಪ್ರತ್ಯಕ್ಷಾನುಗ್ರಹ ಸ್ವರೂಪವಾದ ಪ್ರಸಾದಲಿಂಗವು. ನಿರ್ವಾಣದೀಕ್ಷೆ:— ಆ ಮಾಹೇಶ್ವರನ ಆಜ್ಞಾಚಕ್ರದ ಎರಡೆಸಳಕಂಜ ಮಧ್ಯದಲ್ಲಿರ್ದ ಗುರುಲಿಂಗದೊಳಗಣ ಮೋಕ್ಷಾನುಗ್ರಹ ಸ್ವರೂಪವಾದ ಮಹಾಲಿಂಗವು.

ಮತ್ತಂ ಕ್ರಿಯಾದೀಕ್ಷೆ, ಅಂಗಕ್ಕೆ ಲಿಂಗೋಪದೇಶವಿತ್ತಂತಹದ್ದೇ ಗುರುಲಿಂಗದೊಳಗಣ ಆಚಾರಲಿಂಗವು. ಮಂತ್ರದೀಕ್ಷೆ, ಮನಕ್ಕೆ ಮಂತ್ರೋಪದೇಶವಿತ್ತಂತಹದ್ದೇ ಗುರುಲಿಂಗದೊಳಗಣ ಗುರುಲಿಂಗವು. ವೇಧಾದೀಕ್ಷೆ, ಮಸ್ತಕದ ಮೇಲೆ ಹಸ್ತವ ಮಡಗುವಂತಹದ್ದೇ ವೇಧಾದೀಕ್ಷೆ, ಅದೇ ಗುರುಲಿಂಗದೊಳಗಣ ಶಿವಲಿಂಗವು. ಬೋಧಾದೀಕ್ಷೆ. ಶಿವಾನುಭವವನು ಬೋಧಿಸುವಂತಹದ್ದೇ ಬೋಧಾದೀಕ್ಷೆ, ಅಂತಹದೇ ಗುರುಲಿಂಗದೊಳಗಣ ಜಂಗಮಲಿಂಗವು. ಪ್ರಸನ್ನದೀಕ್ಷೆ, ಪ್ರತ್ಯಕ್ಷಾನುಗ್ರಹ ಸ್ವರೂಪವಾದುದೇ ಪ್ರಸನ್ನದೀಕ್ಷೆ, ಅಂತಹದೇ ಗುರುಲಿಂಗದೊಳಗಣ ಪ್ರಸಾದಲಿಂಗವು. ನಿರ್ವಾಣ ದೀಕ್ಷೆ, ನಿಜಮೋಕ್ಷಾನುಗ್ರಹಸ್ವರೂಪವೇ ನೀನೆಂದನುಗ್ರಹಿಸುವಂತಹದ್ದೇ ನಿರ್ವಾಣದೀಕ್ಷೆ. ಅದೇ ಗುರುಲಿಂಗದೊಳಗಣ ಮಹಾಲಿಂಗವು. ಇಂತು ಈ ಪ್ರಕಾರದ ಪೆಸೆಯಿಂದೆ ಗುರುಲಿಂಗಸ್ಥಲವಾರು, ದ್ವಿತೀಯ ಲಿಂಗಸ್ಥಲ ೧೨.

ಇನ್ನು ಇಷ್ಟರ ಮೇಲೆ ಶಿವಲಿಂಗವಾರು ಸ್ಥಲವಾರು ನಿರೀಕ್ಷಣ ಸ್ವರೂಪವಾದ ಶಿವಲಿಂಗಸ್ಥಲವು ಷಟ್ ಪ್ರಕಾರವು. ಪ್ರಸಾದಿಗೆ ಶಿವಲಿಂಗವು.

ಆ ಶಿವಲಿಂಗವೇ ಇಷ್ಟಲಿಂಗವು. ಆ ಇಷ್ಟಲಿಂಗವೇ ಪ್ರಾಣಲಿಂಗವು.
ಆ ಪ್ರಾಣಲಿಂಗವೇ ಭಾವಲಿಂಗವು. ಆ ಭಾವಲಿಂಗವೇ ಮಹಾಲಿಂಗವು.
ಆ ಮಹಾಲಿಂಗವೇ ನಿಃಕಲಲಿಂಗವು. ಆ ನಿಃಕಲಲಿಂಗವೇ ಇಷ್ಟಲಿಂಗ
ವಾಗಲು, ಆ ಇಷ್ಟಲಿಂಗದ ಷಡ್ವಿಧಾಚರಣೆಯೇ ಆ ಇಷ್ಟಲಿಂಗದ ಷಟ್
ಸ್ಥಾನದಲ್ಲಿರ್ದ ಷಡ್ವಿಧಲಿಂಗ ಸ್ವರೂಪು. ಅದಕ್ಕೆ ವಿವರ —

ಕರಸ್ಥಲಃ— ಶ್ರೀಗುರು ಸ್ವಾಮಿಯನುಗ್ರಹಿಸಿಕೊಟ್ಟ ಪಾಣಿ ತಾಣದ
ಲ್ಲಿರ್ದ ಇಷ್ಟಲಿಂಗವು. ಹೃದಯಸ್ಥಲಃ—ಹೃದಯ ತಾಣದಲ್ಲಿರ್ದ ಪ್ರಾಣಲಿಂ
ಗವು. ನಯನಸ್ಥಲಃ— ಮಹಾಜ್ಞಾನ ನಿರೀಕ್ಷಣ ನೇತ್ರತಾಣದಲ್ಲಿರ್ದ ಭಾವ
ಲಿಂಗವು. ಮಂತ್ರಸ್ಥಲಃ— ತ್ರಿವಿಧಲಿಂಗವನೊಳಕೊಂಡು ಮಂತ್ರತಾಣದ
ಲ್ಲಿರ್ದ ಮಹಾಲಿಂಗವು. ತ್ರಿಕೂಟಸ್ಥಲಃ—ಅದೇ ತ್ರಿಕೂಟಸ್ಥಲದಲ್ಲಿರ್ಪುದು.
ಲಯಸ್ಥಲಃ- ಅದೇ ವಿಶ್ರಾಂತಿಸ್ಥಲವು.

ಮತ್ತಂ ಕರಸ್ಥಲಃ— ಆ ಇಷ್ಟಲಿಂಗವೇ ಪ್ರಸಾದಿಯೊಳಗಣ ಭಕ್ತ
ನಿರಹಂಕಾರ ಹಸ್ತದೊಳಗಣ ಸುಚಿತ್ತವೆಂಬ ಕರತಾಣದಲ್ಲಿರ್ದ ಶಿವಲಿಂಗ
ದೊಳಗಣ ಆಚಾರಲಿಂಗವು. ಮಂತ್ರಸ್ಥಲಃ- ಮಂತ್ರಸ್ವರೂಪವಾದ ಪ್ರಾಣ
ಲಿಂಗವೇ ಆ ಪ್ರಸಾದಿಯೊಳಗಣ ಮಹೇಶ್ವರನ ನಿರಂಹಕಾರ ಹಸ್ತದೊ
ಳಗಣ ಸುಬುದ್ಧಿ ಎಂಬ ಮಂತ್ರ ಕರತಾಣದಲ್ಲಿರ್ದ ಶಿವಲಿಂಗದೊಳಗಣ
ಗುರುಲಿಂಗವು. ನಯನಸ್ಥಲಃ— ಆ ಭಾವಲಿಂಗವೇ ಪ್ರಸಾದಿಯೊಳಗಣ
ಪ್ರಸಾದಿಯ ನಿರಹಂಕಾರ ಹಸ್ತದೊಳಗಣ ನಿರಹಂಕಾರ ನೇತ್ರದ
ತಾಣದಲ್ಲಿರ್ದ ಶಿವಲಿಂಗದೊಳಗಣ ಶಿವಲಿಂಗವು. ಹೃದಯಸ್ಥಲಃ— ತ್ರಿವಿ
ಧಲಿಂಗವನೊಳಕೊಂಡು ತೋರುವ ಮಹಾಲಿಂಗವೇ ಪ್ರಸಾದಿಯೊಳ
ಗಣ ಪ್ರಾಣಲಿಂಗಿಯ ನಿರಹಂಕಾರ ಹಸ್ತದೊಳಗಣ ಸುಮನವೆಂಬ
ಕರತಾಣದಲ್ಲಿರ್ದ ಶಿವಲಿಂಗದೊಳಗಣ ಜಂಗಮಲಿಂಗವು. ತ್ರಿಕೂಟ
ಸ್ಥಲಃ— ಆ ಮಹಾಲಿಂಗವೇ ಆ ಪ್ರಸಾದಿಯೊಳಗಣ ಶರಣನ ನಿರಹಂ
ಕಾರ ಹಸ್ತದೊಳಗಣ ತಾನು ತನ್ನರಿವು ಶಿವತತ್ವವೆಂಬ ತ್ರಿಪುಟಿ ಏಕ
ವಾದ ಸುಜ್ಞಾನ ಕರತಾಣದಲ್ಲಿರ್ದ ಶಿವಲಿಂಗದೊಳಗಣ ಪ್ರಸಾದಲಿಂಗವು.
ಲಯಸ್ಥಲಃ— ಆ ಮಹಾಲಿಂಗವೇ ಪ್ರಸಾದಿಯೊಳಗಣ ಐಕ್ಯನ ನಿರಹಂ
ಕಾರ ಹಸ್ತದೊಳಗಣ ಸದ್ಭಾವವೆಂಬ ವಿಶ್ರಾಂತಿ ಕರತಾಣದಲ್ಲಿರ್ದ ಶಿವ
ಲಿಂಗದೊಳಗಣ ಮೂಲಲಿಂಗವು.

ಮತ್ತಂ ಕರಸ್ಥಲಃ— ಆ ಪ್ರಸಾದಿಯ ಕರಸ್ಥಲದಲ್ಲಿ ಸಂಬಂಧವಾದ ಇಷ್ಟಲಿಂಗವೇ ಶಿವಲಿಂಗದೊಳಗಣ ಆಚಾರ ಲಿಂಗವು. ನಯನಸ್ಥಲಃ— ಆ ಇಷ್ಟಲಿಂಗವನು ಎವೆಹಳಚದೆ ಅನುಮಿಷ ದೃಷ್ಟಿಯಿಂದ ನಿರೀಕ್ಷಿಸುವ ನೇತ್ರತಾಣವೇ ಆ ಪ್ರಸಾದಿಯ ಶಿವಲಿಂಗದೊಳಗಣ ಗುರುಲಿಂಗವು. ಹೃದಯಸ್ಥಲಃ— ಇಷ್ಟಲಿಂಗಕ್ಕಾಶ್ರಯವಾದ ಹೃದಯ ತಾಣವೇ ಆ ಪ್ರಸಾದಿಯ ಶಿವಲಿಂಗದೊಳಗಣ ಶಿವಲಿಂಗವು. ಮಂತ್ರಸ್ಥಲಃ-ಆ ಇಷ್ಟಲಿಂಗದ ದ್ವಯಾಭಿಧಾನವಾದ ಪಂಚಾಕ್ಷರೀ ಮನ ತಾಣವೇ ಆ ಪ್ರಸಾದಿಯ ಶಿವಲಿಂಗದೊಳಗಣ ಜಂಗಮಲಿಂಗವು. ತ್ರಿಕೂಟಸ್ಥಲಃ— ಆ ಇಷ್ಟ ಲಿಂಗದ ತ್ರಿಪುಟಿ ಒಂದಾದ ಸಮ್ಯಜ್ಞಾನದ ತಾಣವೇ ಆ ಪ್ರಸಾದಿಯ ಶಿವಲಿಂಗದೊಳಗಣ ಪ್ರಸಾದಲಿಂಗವು. ಮತ್ತಂ ಆ ಪ್ರಸಾದಿಯು ತನ್ನ ಇಷ್ಟಲಿಂಗಕ್ಕೆ ಮಾಡುವಾತ ಕೈಕೊಳ್ಳುವಾತ ನಡುವೆ ಸಲುವ ಪೂಜಾ ದ್ರವ್ಯವು ಒಂದೇ ಎಂದು ಆಚರಿಸುವಂತಹದ್ದೇ ಶಿವಲಿಂಗದೊಳಗಣ ಪ್ರಸಾದಲಿಂಗವು. ಲಯಸ್ಥಲಃ— ಸೀಲಲೋಚನೆಯುಮ್ಮನವರು ತಮ್ಮಂಗವನಡಗಿಸುವುದಕ್ಕೆ ಇಷ್ಟಲಿಂಗವೇ ಹೇಗೆ ಆಶ್ರಯವಾಗಿರ್ಪುದು ಹಾಗೆ ತಮ್ಮಂಗವನಡಗಿಸುವುಕ್ಕೆ ಇಷ್ಟಲಿಂಗವೇ ವಿಶ್ರಾಂತಿ ಸ್ಥಳವೆಂದರಿವುದೇ ಪ್ರಸಾದಿಯ ಶಿವಲಿಂಗದೊಳಗಣ ಮಹಾಲಿಂಗವು. ಅದೇ ಇಷ್ಟಲಿಂಗ ಮಾಜ್ಯಪ್ರದೋರಿಕೆಯಲ್ಲಿರ್ದ ಶಿವಲಿಂಗದೊಳಗಣ ಮಹಾಲಿಂಗವು. ಇಂತು ಶಿವಲಿಂಗಸ್ಥಲವಾರು ಆಚಾರಲಿಂಗಸ್ಥಲ, ಗುರುಲಿಂಗಸ್ಥಲ, ಶಿವಲಿಂಗ ಸ್ಥಲ ಅಷ್ಟಾದಶವು.

ಇನ್ನು ಇಷ್ಟರ ಮೇಲೆ ಜ್ಞಾನಭಾವನಿರಾಶ್ರಯದಲೊದಗಿದ ಮೀರಿದ ಕ್ರಿಯಾ ಅರಿವಿನಾಚರಣೆಯಲ್ಲಿ ಉಂಟಾದ ಚರಲಿಂಗಸ್ಥಲವಾರು. ಯಜನ ಸ್ವರೂಪವಾದ ಜಂಗಮಲಿಂಗಸ್ಥಲವು ಷಟ್‌ಪ್ರಕಾರವು. ಮತ್ತಂ ಪ್ರಾಣ ಲಿಂಗಿಗೆ ಜಂಗಮಲಿಂಗವು, ಆ ಜಂಗಮಲಿಂಗವೇ ಇಷ್ಟಲಿಂಗವು, ಆ ಇಷ್ಟಲಿಂಗವೇ ಪ್ರಾಣಲಿಂಗವು, ಆ ಪ್ರಾಣಲಿಂಗವೇ ಭಾವಲಿಂಗವು, ಆ ಭಾವಲಿಂಗವೇ ಮಹಾಲಿಂಗವು, ಆ ಮಹಾಲಿಂಗವೇ ನಿಃಕಲಲಿಂಗವು, ಆ ನಿಃಕಲಲಿಂಗವೇ ಇಷ್ಟಲಿಂಗವಾಗಲು, ಆ ಇಷ್ಟಲಿಂಗದ ಷಡ್ವಿಧಾಚ ರಣೆಯೇ ಆ ಲಿಂಗದ ಷಟ್‌ಸ್ಥಾನದಲ್ಲಿರ್ದ ಷಡ್ವಿಧಲಿಂಗ ಸ್ವರೂಪವು. ಅವಕ್ಕೆ ವಿವರಃ—

ಸ್ವಯಃ— ನದಿಯ ತೀರದಲ್ಲಿಯಾಗಲಿ, ಅರಣ್ಯಾಶ್ರಮದಲ್ಲಿಯಾಗಲಿ, ಪರ್ವತದ ತಪ್ಪಲಂಗಳಲ್ಲಿಯಾಗಲಿ ಆಶ್ರಮವ ಮಾಡಿಕೊಂಡು ಕಂದಮೂಲಾದಿಗಳ ಸೇವಿಸಿಕೊಂಡು, ಶಿವಾನುಭವವನು ಬೋಧಿಸುತ್ತ ಸ್ವಸ್ಥಾನದಲ್ಲಿರುವಾತನೇ ಸ್ವಯುಜಂಗಮವು. ಚರಃ— ಅಂತರಂಗದ ಪಂಚಮುದ್ರೆ, ಬಹಿರಂಗದ ಪಂಚಮುದ್ರೆ ಸಮೇತವಾಗಿ ಭಕ್ತರುಗಳ ಮನೆಗೆ ಹೋಗಿ ಗುರುಧರ್ಮಭಿಕ್ಷಾ ಎಂದು ಅವರು ವಿಭೂತಿ ಮುಂತಾಗಿ ತಂದಂತಹ ಭಿಕ್ಷವನು ಜೋಳಿಗೆಯಲ್ಲಿ ನೀಡಿಸಿಕೊಂಡು ನದೀಸ್ಥಾನಕ್ಕೆ ಹೋಗಿ ಆ ಭಿಕ್ಷವನು ಆ ಜಂಗಮಕ್ಕೆ ನೀಡಿ ಅವರ ವಾಕ್‌ಜ್ಞಾನಾನುಭವ ಪ್ರಸಾದವನು ತೆಗೆದುಕೊಂಡು ಅನುಭವಿಸುವಂತಹಾತನೇ ಚರ ಜಂಗಮವು. ಪರಃ— ಬೇಡದೆ ಜೋಳುಮಸ್ತಕ ತೋಳಿಗೆ ಕಟ್ಟಿದಾಘಾರಂಗಳಿಗೆ ಭಕ್ತಿಜ್ಞಾನ ವೈರಾಗ್ಯವಿಡಿದು ಆಚರಿಸುವಂತಹನೇ ಪರ ಜಂಗಮವು.

ಮತ್ತಂ ಸ್ವಯು, ಅನ್ಯಾಧೀನವಿಲ್ಲದೆ ಸ್ವಯಾಧೀನವುಳ್ಳಾತನಾಗಿಹುದೇ ಸ್ವಯು ಜಂಗಮವು. ಚರ, ಜಗತ್ಪಾವನ ಮೂರ್ತಿಯಾಗಿ ಆಚರಿಸುವಂತಹನೇ ಚರಜಂಗಮವು. ಪರ, ಪರಾಪರ ಮೋಕ್ಷ ಸ್ವರೂಪವಾಗಿಹುದೇ ಪರಜಂಗಮವು.

ಮತ್ತಂ ಸ್ವಯು, ಶಿವತತ್ವಜ್ಞಾನಾನುಭವಿಯಾಗಿ ಏಕಾಂತಾಶ್ರಮಿಯಾಗೆಯು ನಿರ್ಗಮನಿಯಾಗಿಯು, ಶಿವಧ್ಯಾನಪರಾಯಣನಾಗಿಯು ಇಹುದೇ ಸ್ವಯು ಜಂಗಮವು. ಅಂತಪ್ಪ ಸ್ವಯುಜಂಗಮವೇ ಪ್ರಾಣಲಿಂಗಿಯೊಳಗಣ ಭಕ್ತನ ಸುಮನವೆಂಬ ಹಸ್ತದೊಳಗಣ ಸುಚಿತ್ತವೆಂಬ ಹಸ್ತದಲ್ಲಿ ಸಂಬಂಧವಾದ ಜಂಗಮಲಿಂಗದೊಳಗಣ ಆಚಾರಲಿಂಗವು. ಚರ, ಬಹಿರಂಗದ ಪಂಚಮುದ್ರೆ ಅಂತರಂಗದ ಪಂಚಮುದ್ರೆ ಸಂಪನ್ನನಾಗಿ ದೇಶಾಂತರಿಯಾಗಿ ಚರಿಸುವಂತಹನೀಗ ಚರಜಂಗಮವು. ಅಂತಪ್ಪ ಚರ ಜಂಗಮವೇ ಆ ಪ್ರಾಣಲಿಂಗಿಯೊಳಗಣ ಮಹೇಶ್ವರನ ಸುಮನವೆಂಬ ಹಸ್ತದೊಳಗಣ ಸುಬುದ್ಧಿ ಎಂಬ ಹಸ್ತದಲ್ಲಿ ಸಂಬಂಧವಾದ ಜಂಗಮ ಲಿಂಗದೊಳಗಣ ಗುರುಲಿಂಗವು. ಪರ, ಪರಾಪರ ನಿರ್ಗಮನಿ ಎನಿಸಿಯುಸ್ಥಾವರಜಂಗಮವಾತ್ಮಂಗಳಿಗೆ ಅಧಿಷ್ಠಾನಕರ್ತವೂ ಆಗಿ ಸಯಾದಿಯ ಳ್ಳಾತನಾಗಿಹುದೇ ಪರಜಂಗಮವು. ಅಂತಪ್ಪ ಪರಜಂಗಮವೇ ಆ

ಪ್ರಾಣಲಿಂಗಿಯೊಳಗಣ ಪ್ರಸಾದಿಯ ಸುಮನವೆಂಬ ಹಸ್ತದೊಳಗಣ ನಿರಹಂಕಾರ ಹಸ್ತದಲ್ಲಿ ಸಂಬಂಧವಾದ ಜಂಗಮಲಿಂಗದೊಳಗಣ ಶಿವಲಿಂಗವು. ಪರಿಣಾಮಿ, ಸುಖದುಃಖಗಳು ಶೂನ್ಯವಾಗಿ ಮಹಾಜ್ಞಾನ ಪರಿಣಾಮ ಪರಿತೋಷವುಳ್ಳಾತನಾಗಿಹುದೇ ಪರಿಣಾಮಿ ಜಂಗಮವು. ಅಂತಪ್ಪ ಪರಿಣಾಮಿ ಜಂಗಮವೇ ಪ್ರಾಣಲಿಂಗಿಯೊಳಗಣ ಪ್ರಾಣಲಿಂಗಿಯ ಸುಮನವೆಂಬ ಹಸ್ತದೊಳಗಣ ಸಮಾನವೆಂಬ ಹಸ್ತದಲ್ಲಿ ಸಂಬಂಧವಾದ ಜಂಗಮಲಿಂಗದೊಳಗಣ ಜಂಗಮಲಿಂಗವು. ನಿರುಪಾಧಿಕ, ಅನ್ಯಾಧೀನವಪ್ಪ ಯಾಚನಾ ವೃತ್ತಿಯನಳಿದು ಯಥಾಲಾಭ ಸಂತುಷ್ಟನಾಗಿ ತನ್ನಾಧೀನವಪ್ಪ ನಿರ್ಯಾಚನಾವೃತ್ತಿಯುಳ್ಳಾತನಾಗಿಹುದೇ ನಿರುಪಾಧಿಕ ಜಂಗಮವು. ಪರಿಪೂರ್ಣ ಸರ್ವಾಚಾರಸಂಪತ್ತಿನಾಚಾರಣೆಯಲ್ಲಿ ವ್ಯಾಪಿಸಿದುವುಳ್ಳಾತನಾಗಿಹುದೇ ಪರಿಪೂರ್ಣ ಜಂಗಮವು. ಅಂತಪ್ಪ ಪರಿಪೂರ್ಣ ಜಂಗಮವೇ ಪ್ರಾಣಲಿಂಗಿಯೊಳಗಣ ಐಕ್ಯನಪ್ಪ ಸುಮನವೆಂಬ ಹಸ್ತದೊಳಗಣ ಸದ್ಭಾವವೆಂಬ ಹಸ್ತದಲ್ಲಿ ಸಂಬಂಧವಾದ ಜಂಗಮಲಿಂಗದೊಳಗಣ ಮಹಾಲಿಂಗವು.

ಮತ್ತಂ ಸ್ವಯ, ವಸ್ತುವೇ ತಾನಾಗಿಹುದೇ ಜಂಗಮಲಿಂಗದೊಳಗಣ ಆಚಾರಲಿಂಗವು. ಚರ, ಸ್ವತಂತ್ರಪರಾಧೀನವಿಲ್ಲದೆ ಸ್ವಯಾಧೀನವುಳ್ಳಾತನಾಗಿಹುದೇ ಜಂಗಮಲಿಂಗದೊಳಗಣ ಗುರುಲಿಂಗವು. ಪರ, ಜಗತ್ಪಾವನ ಮೂರ್ತಿಯಾಗಿ ಆಚರಿಸುವಂತಹನೇ ಜಂಗಮಲಿಂಗದೊಳಗಣ ಶಿವಲಿಂಗವು. ಪರಿಣಾಮಿ, ವಿಷಯ ವಿಮುಖಮಾನಸ ಸಂತೋಷವುಳ್ಳಾತನಾಗಿಹುದೇ ಜಂಗಮಲಿಂಗದೊಳಗಣ ಜಂಗಮಲಿಂಗವು. ನಿರುಪಾಧಿಕ, ಜೀವಾಧೀನವಳಿದು ಪರಮಾನಾಧೀನವುಳ್ಳಾತನಾಗಿಹುದೇ ಜಂಗಮಲಿಂಗದೊಳಗಣ ಪ್ರಸಾದಲಿಂಗವು. ಪರಿಪೂರ್ಣ ಲಿಂಗದಲ್ಲಿ ನಿರುತಭರಿತನಾಗಿಹುದೇ ಜಂಗಮಲಿಂಗದೊಳಗಣ ಮಹಾಲಿಂಗವು. ಇಂತು ಚರಲಿಂಗಸ್ಥಲವಾರು.

ಇನ್ನು ಮುಂದೆ ಪ್ರಸಾದಲಿಂಗ ಸ್ಥಲವಾರು. ಈಳನ ಸ್ವರೂಪವಾದ ಪ್ರಸಾದಲಿಂಗಸ್ಥಲವು ಷಟ್ಪ್ರಕಾರವು. ಶರಣನಿಗೆ ಪ್ರಸಾದಲಿಂಗವು. ಆ ಪ್ರಸಾದಲಿಂಗವೇ ಇಷ್ಟಲಿಂಗವು. ಆ ಇಷ್ಟಲಿಂಗವೇ ಪ್ರಾಣಲಿಂಗವು. ಆ ಪ್ರಾಣಲಿಂಗವೇ ಭಾವಲಿಂಗವು, ಆ ಭಾವಲಿಂಗವೇ ಮಹಾ

ಲಿಂಗವು, ಆ ಮಹಾಲಿಂಗವೇ ನಿಷ್ಕಲಲಿಂಗವು. ಆ ನಿಷ್ಕಲಲಿಂಗವೇ ಇಷ್ಟಲಿಂಗವಾಗಲು, ಆ ಇಷ್ಟಲಿಂಗದ ಷಡ್ವಿಧಾಚರಣೆಯೇ ಆ ಲಿಂಗದ ಷಟ್ ಸ್ಥಾನದಲ್ಲಿರ್ದ ಷಡ್ವಿಧಲಿಂಗಸ್ವರೂಪವು. ಅವಕ್ಕೆ ವಿವರಃ—

ಇಂದ್ರಿಯಾನಂದ, ಹೃಷೀಕಾಹ್ಲಾದ ಸ್ವರೂಪವಾಗಿಹುದೇ ಪ್ರಸಾದ ಲಿಂಗದೊಳಗಣ ಗುರುಲಿಂಗವು. ಪ್ರಾಣಾನಂದ, ಪ್ರಕೃತ ಹರಣಾನಂದ ಸ್ವರೂಪವಾಗಿಹುದೇ ಪ್ರಸಾದಲಿಂಗದೊಳಗಣ ಗುರುಲಿಂಗವು. ಜ್ಞಾನಾನಂದ, ಶಿವತತ್ವಾಗಮದಲ್ಲಿ ನಿಶ್ಚಿತವಾದ ಆಸ್ತಿಕ್ಯಜ್ಞಾನದರಿವಿನಲ್ಲಿ ವಿನೋದಿಸುವಂತಹದೇ ಪ್ರಸಾದಲಿಂಗದೊಳಗಣ ಶಿವಲಿಂಗವು. ಭಾವಾನಂದ, ಏಕಧ್ಯಾನ ಸಮಚಿತ್ತದಲ್ಲಿ ಆನಂದಿಸುವದೇ ಪ್ರಸಾದಲಿಂಗದೊಳಗಣ ಜಂಗಮಲಿಂಗವು. ತೂರ್ಯಾನಂದ, ಶರಣಸತಿ ಲಿಂಗಪತಿತ್ವವನರಿದು ಚರಿಸಬೇಕೆಂಬರ್ಥವನರಿದು ವಿನೋದಿಸುವದೇ ಪ್ರಸಾದಲಿಂಗದೊಳಗಣ ಪ್ರಸಾದಲಿಂಗವು. ಮಹದಾನಂದ, ಛಿನ್ನಕ್ರಿಯಾಗಮದಿಂ ಬಿಡುಗಡೆಯಾದ ಮೋಕ್ಷಾಹ್ಲಾದ ಸ್ವರೂಪವಾಗಿಹುದೇ ಪ್ರಸಾದಲಿಂಗದೊಳಗಣ ಮಹಾಲಿಂಗವು.

ಮತ್ತಂ, ಇಂದ್ರಿಯಾನಂದ, ಶರಣನೊಳಗಣ ಭಕ್ತನ ಕ್ರಿಯಾ ಹೃಷೀಕಂಗಳಲ್ಲಿ ಆಹ್ಲಾದಿಸುವಂತಹದೇ ಪ್ರಸಾದಲಿಂಗದೊಳಗಣ ಆಚಾರಲಿಂಗವು. ಪ್ರಾಣಾನಂದ, ಶರಣನೊಳಗಣ ಮಹೇಶ್ವರನ ಹರಣದಲ್ಲಿ ಆನಂದಿಸುವಂತಹದೇ ಪ್ರಸಾದಲಿಂಗದೊಳಗಣ ಗುರುಲಿಂಗವು. ಜ್ಞಾನಾನಂದ, ಶರಣನೊಳಗಣ ಪ್ರಸಾದಿಯ ಅರಿವಿನಲ್ಲಿ ಆಹ್ಲಾದಿಸುವಂತಹದೇ ಪ್ರಸಾದಲಿಂಗದೊಳಗಣ ಶಿವಲಿಂಗವು. ಭಾವಾನಂದ, ಶರಣನೊಳಗಣ ಪ್ರಾಣಲಿಂಗಿಯ ಶಿವಭಾವದಲ್ಲಿ ಆಹ್ಲಾದಿಸುವಂತಹದೇ ಪ್ರಸಾದಲಿಂಗದೊಳಗಣ ಜಂಗಮಲಿಂಗವು. ತೂರ್ಯಾನಂದ, ಶರಣನೊಳಗಣ ಶರಣನ ಸ್ಫುರಿತ ಜ್ಞಾನದಲ್ಲಿ ಆಹ್ಲಾದಿಸುವಂತಹದೇ ಪ್ರಸಾದಲಿಂಗದೊಳಗಣ ಪ್ರಸಾದಲಿಂಗವು. ಮಹದಾನಂದ, ಶರಣನೊಳಗಣ ಐಕ್ಯನ ಮಹಾಜ್ಞಾನದಲ್ಲಿ ಆಹ್ಲಾದಿಸುವಂತಹದೇ ಪ್ರಸಾದಲಿಂಗದೊಳಗಣ ಮಹಾಲಿಂಗವು. ಇಂತು ಪ್ರಸಾದಲಿಂಗಸ್ಥಲ ಆರು, ದ್ವಿತೀಯಲಿಂಗಸ್ಥಲ ೧೨, ಎರಡು ಲಿಂಗಸ್ಥಲವು ದ್ವಾದಶವು.

ಇನ್ನು ಮಹಾಲಿಂಗಸ್ಥಲವಾರು. ವೇಧಾ ಸ್ವರೂಪವಾದ ಮಹಾ ಲಿಂಗಸ್ಥಲವು ಷಟ್ ಪ್ರಕಾರವು. ಐಕ್ಯನಿಗೆ ಮಹಾಲಿಂಗವೇ ಇಷ್ಟಲಿಂಗವು. ಆ ಇಷ್ಟಲಿಂಗವೇ ಪ್ರಾಣಲಿಂಗವು. ಆ ಪ್ರಾಣಲಿಂಗವೇ ಮಹಾಲಿಂಗವು. ಮಹಾಲಿಂಗವೇ ನಿಃಕಲಲಿಂಗವು. ಆ ನಿಃಕಲಲಿಂಗವೇ ಇಷ್ಟಲಿಂಗವಾಗಲು, ಆ ಇಷ್ಟಲಿಂಗದ ಷಡ್ವಿಧಾಚರಣೆಯೇ ಆ ಲಿಂಗದ ಷಟ್ ಸ್ಥಾನದಲ್ಲಿರ್ದ ಷಡ್ವಿಧಲಿಂಗದ ಸ್ವರೂಪವು. ಅವಕ್ಕೆ ವಿವರಃ—

ಪಿಂಡಾಕಾಶ, ಪಿಂಡಕ್ಕೆ ಅಕಾಶ ಸ್ಥಾನವಾದಂತಹದೇ ಮಹಾ ಲಿಂಗದೊಳಗಣ ಆಚಾರಲಿಂಗವು. ಬಿಂದ್ವಾಕಾಶ, ಮನಸ್ಸಿಗೆ ಅವಕಾಶ ಸ್ಥಾನವಾದಂತಹದೇ ಮಹಾಲಿಂಗದೊಳಗಣ ಗುರುಲಿಂಗವು. ಮಹದಾಕಾಶ, ಆತ್ಮನಿಗೆ ಸ್ಥಾನವಾದಂತಹದೇ ಮಹಾಲಿಂಗದೊಳಗಣ ಶಿವ ಲಿಂಗವು. ಭಾವಗವ್ಯ, ಶಿವಭಾವದಲ್ಲಿ ಗಮಿಸಿ ತೋರುವಂತಹದೇ ಮಹಾಲಿಂಗದೊಳಗಣ ಜಂಗಮಲಿಂಗವು. ಸರ್ವ ತತ್ವಾಶ್ರಯ, ಸಮಸ್ತಜ್ಞಾನ ತತ್ವಂಗಳಿಗೆ ಆಶ್ರಯವಾದಂತಹದೇ ಮಹಾಲಿಂಗದೊಳಗಣ ಪ್ರಸಾದಲಿಂಗವು. ಪರಿಪೂರ್ಣ ಪ್ರಕಾಶ, ವ್ಯಾಪಕ ಮಹಾಜ್ಞಾನ ಪ್ರಕಾಶ ಸ್ವರೂಪವಾದಂತಹದೇ ಮಹಾಲಿಂಗದೊಳಗಣ ಮಹಾಲಿಂಗವು.

ಮತ್ತಂ ಪಿಂಡಾಕಾಶ, ಐಕ್ಯನೊಳಗಣ ಭಕ್ತನ ಸಮರಸ ಭಕ್ತಿಯಲ್ಲಿ ಶ್ರದ್ಧಾಭಕ್ತಿ ಪಿಂಡಕ್ಕೆ ಅವಕಾಶ ಸ್ಥಾನವಾದಂತಹದೇ ಮಹಾ ಲಿಂಗದೊಳಗಣ ಆಚಾರಲಿಂಗವು. ಬಿಂದ್ವಾಕಾಶ, ಐಕ್ಯನೊಳಗಣ ಮಹೇಶ್ವರನ ಸಮರಸ ಭಕ್ತಿಯಲ್ಲಿಯ ಚಿದ್ಬಿಂದು ನೈಷ್ಠಿಕಾ ಭಕ್ತಿಗೆ ಅವಕಾಶ ಸ್ಥಾನವಾದಂತಹದೇ ಮಹಾಲಿಂಗದೊಳಗಣ ಗುರುಲಿಂಗವು. ಮಹದಾಕಾಶ, ಐಕ್ಯನೊಳಗಣ ಪ್ರಸಾದಿಯ ಸಮರಸ ಭಕ್ತಿಯಲ್ಲಿಯ ನಿರಹಂಕಾರ ಪೂಜಾ ಭಕ್ತಿಗೆ ಅವಕಾಶ ಸ್ಥಾನವಾದಂತಹದೇ ಮಹಾ ಲಿಂಗದೊಳಗಣ ಶಿವಲಿಂಗವು. ಭಾವಗವ್ಯ, ಐಕ್ಯನೊಳಗಣ ಪ್ರಾಣ ಲಿಂಗಿಯ ಸಮರಸ ಭಕ್ತಿಯಲ್ಲಿಯ ಅನುಭಾವ ಭಕ್ತಿಗೆ ಗಮಿಸಿ ತೋರು ವಂತಹದೇ ಮಹಾಲಿಂಗದೊಳಗಣ ಜಂಗಮಲಿಂಗವು. ಸರ್ವತತ್ವಾ ಶ್ರಯ, ಐಕ್ಯನೊಳಗಣ ಶರಣನ ಸಮರಸ ಭಕ್ತಿಯಲ್ಲಿಯ ಸಕಳಕಳಾ ನಂದ ಭಕ್ತಿಗೆ ಅವಕಾಶ ಸ್ಥಾನವಾದಂತಹದೇ ಮಹಾಲಿಂಗದೊಳಗಣ ಪ್ರಸಾದಲಿಂಗವು. ಪರಿಪೂರ್ಣ, ಐಕ್ಯನೊಳಗಣ ಐಕ್ಯನ ಸಮರಸ

ಕ್ತಿಯಲ್ಲಿ ವ್ಯಾಪಕವಾಗಿ ಪ್ರಭಾವಿಸುವಂತಹದೇ ಮಹಾಲಿಂಗದೊಳಗ
ಮಹಾಲಿಂಗವು. ಇಂತು ಮಹಾಲಿಂಗ ಸ್ಥಲವಾರು, ತೃತೀಯ ಲಿಂಗಸ್ಥ
೧೮, ಮೀರಿದ ಕ್ರಿಯಾ ತ್ರಿವಿಧಲಿಂಗ ಸ್ಥಲವು ಅಷ್ಟಾದಶವು.

ಹೃದಯದಲೊದಗಿದ ಲಿಂಗ ಸ್ಥಲವು ೧೮, ಜ್ಞಾನಭಾವ ನಿರಾಶ್ರಯ
ಲೊದಗಿದ ಲಿಂಗಸ್ಥಲವು ೧೮, ದ್ವಿತೀಯ ಲಿಂಗಸ್ಥಲ ೩೬. ಇಂತು ಲಿ
ಸ್ಥಲ ೩೬. ಇದರ ಮೇಲೆ ಪರಾತ್ಪರದಾಚೆಯಲ್ಲಿ ನಿಸ್ಸಂಗ ಲಿಂಗಸ್ಥ
೩೬. ೩೬ ಅಂಗದಲ್ಲಿ ೩೬ ಲಿಂಗ ಸಂಬಂಧವ ಮಾಡಿಕೊಂಡು ೩೬ ಭ
ವಿಡಿದಾಚರಿಸಿ, ಆ ೩೬ ಲಿಂಗವನೊಳಕೊಂಡ ಬಚ್ಚಬರಿಯ ಲಿಂಗಸ್ಥಲ ೩



# ಸರ್ವಾಂಗ ಲಿಂಗಸ್ಥಲ.

ಈ ಮೇರೆಗೆ ೩೬ ಅಂಗಸ್ಥಲಗಳಲ್ಲಿಯೂ ೩೬ ಲಿಂಗಸ್ಥಲಗಳಲ್ಲಿಯೂ ಮನುಷ್ಯನು ಪೂರ್ಣ ವಿಕಾಸವನ್ನು ಹೊಂದಿದ ಬಳಿಕ ಸರ್ವಾಂಗ ಲಿಂಗ ಸ್ಥಲವು ಪ್ರಾಪ್ತವಾಗುವದು. ಆಮೇಲೆ ಅವನು ನಿರಾಮಯ ಷಟ್ ಸ್ಥಲ, ಆಮೇಲೆ ನಿರಂಜನಾತೀತ ಷಟ್‌ಸ್ಥಲ, ಎಂಬ ಷಟ್‌ಸ್ಥಲ ಸ್ಥಿತಿಗ ಳನ್ನು ಹೊಂದಿ ಮುಂದೆ ಸಂಪೂರ್ಣ ಪರಿಪೂರ್ಣತೆಯನ್ನು ಪಡೆಯುತ್ತಾನೆ.

ಸರ್ವಾಂಗ ಲಿಂಗಸ್ಥಲದ ಮಹತ್ವವು ವಚನಶಾಸ್ತ್ರದಲ್ಲಿ ಬಹಳ ಇದೆ. ಇದು ಮೇಲಿಂದ ಮೇಲೆ ವಚನಕಾರರಿಂದ ವಿವರಿಸಲ್ಪಡುವ ದುಂಟು. ನಿರಾಮಯ ಷಟ್‌ಸ್ಥಲವು ಸೂಕ್ಷ್ಮಕ್ಕೆ ಸೂಕ್ಷ್ಮವಾಗಿರುತ್ತದೆ. ನಿರಂಜನಾತೀತ ಷಟ್‌ಸ್ಥಲವು ಅಖಂಡಿತವೂ ಅಗೋಚರವೂ ಅಪ್ರಮೇ ಯವೂ ಆಗಿ, ವಾಙ್ಮನಗೋಚರಕ್ಕತ್ತತ್ತವಾಗಿರುವದು. ಇವೆರಡು ಅತ್ಯಂತ ಸೂಕ್ಷ್ಮವಾದ ಷಟ್‌ಸ್ಥಲ ವಿಭೇದಗಳಾಗಿವೆ. ಇವು ಮನುಷ್ಯನಲ್ಲಿ ಆಗ ಬಹುದಾದ ಸಂಪೂರ್ಣ ವಿಕಾಸ ಭಾವವನ್ನು ತೋರಿಸುತ್ತವೆ. ಈ ಪ್ರಕಾರ ಮನುಷ್ಯನು ತನ್ನ ಪ್ರಗತಿಯನ್ನು ಹೊಂದಿದ ಬಳಿಕ ಅವನು ನಿವೃತ್ತಿಯನ್ನು ಹೊಂದಲು ಶಕ್ತನಾಗುವನು.

(೧) ಗುರುವಿಂದಾಯಿತ್ತೆನ್ನ ಗುರುಸಂಬಂಧ. ಲಿಂಗದಿಂದಾಯಿ ತ್ತೆನ್ನ ಲಿಂಗ ಸಂಬಂಧ. ಜಂಗಮದಿಂದಾಯಿತ್ತೆನ್ನ ಜಂಗಮಸಂಬಂಧ ಅದು ಹೇಗೆಂದೊಡೆ, ತನುವಿಕಾರವನಳಿದನಾಗಿ, ಗುರುಸಂಬಂಧಿ. ಮನ ವಿಕಾರವನಳಿದನಾಗಿ ಲಿಂಗಸಂಬಂಧಿ. ಧನವಿಕಾರವನಳಿದನಾಗಿ ಜಂಗಮ ಸಂಬಂಧಿ. ಇಂತೀ ತ್ರಿವಿಧವಿಕಾರವನಳಿದನಾಗಿ, ಗುರುವಾಗಿ ಗುರು ಭಕ್ತಿ ಸಂಪನ್ನ. ಲಿಂಗವಾಗಿ ಲಿಂಗಭಕ್ತಿ ಸಂಪನ್ನ. ಜಂಗಮವಾಗಿ ಜಂಗಮಭಕ್ತಿ ಸಂಪನ್ನ. ಅದು ಕಾರಣ, ಅರಿವೇ ಗುರು, ಅನುಭಾವವೇ ಲಿಂಗ, ಆನಂದವೇ ಜಂಗಮ.

ಅದು ಹೇಗೆಂದೊಡೆ, ಅರಿವೆಂಬ ಗುರುವಿನಿಂದ ಇಷ್ಟಲಿಂಗಸಾಹಿತ್ಯ. ಅನುಭಾವವೆಂಬ ಲಿಂಗದಿಂದ ಪ್ರಾಣಲಿಂಗಸಾಹಿತ್ಯ, ಆನಂದವೆಂಬ ಜಂಗಮದಿಂದ ತೃಪ್ತಿಲಿಂಗಸಾಹಿತ್ಯ.

ಅರಿವಿನಿಂದ ಅನುಭಾವ, ಅನುಭಾವದಿಂದ ಅರಿವು, ಅರಿವು ಅನುಭಾವ ಸಮರಸವಾದುದೇ ಆನಂದ. ಆನಂದಕ್ಕೆ ಅರಿವೇ ಸಾಧನ.

ಇಷ್ಟದಿಂದ ಪ್ರಾಣ, ಪ್ರಾಣದಿಂದ ಇಷ್ಟ. ಇಷ್ಟ ಪ್ರಾಣಯೋಗಾಪ್ಲುತವಾದುದೇ ತೃಪ್ತಿ. ತೃಪ್ತಿಗೆ ಇಷ್ಟಲಿಂಗದ ಅರಿವೇ ಸಾಧನ.

ಅದು ಹೇಗೆಂದಡೆ, ಇಷ್ಟಲಿಂಗದ ವಿನಯ, ಪ್ರೇಮ, ಭಯ, ಭಕ್ತಿ ಕರುಣ, ಕಿಂಕುರ್ವಾಣ, ಸಮರಸವಾದುದೇ ಆಚಾರಲಿಂಗ. ಮತ್ತಾ ಇಷ್ಟಲಿಂಗದ ದೃಢಸ್ನೇಹ, ನಿಷ್ಠೆಯು, ನಿಶ್ಚಲ, ವಿಶ್ವಾಸ, ಸಮರಸವಾದುದೇ ಗುರುಲಿಂಗ. ಮತ್ತಾ ಇಷ್ಟಲಿಂಗದ ಎಚ್ಚರಿಕೆ, ಸೌಜನ್ಯ, ಸುವಿವೇಕ ಸಾವಧಾನ, ಸನ್ನಿಹಿತ, ಸಮರಸವಾದುದೇ ಪ್ರಸಾದಲಿಂಗ. ಮತ್ತಾ ಇಷ್ಟಲಿಂಗದ ಪರವಶತೆ, ಗೂಢ, ಏಕಾಗ್ರಚಿತ್ತ, ಉತ್ತರಯೋಗ, ಪರಿಪೂರ್ಣತ್ವ, ಸಚ್ಚಿದಾನಂದ ಸಮರಸವಾದುದೇ ಪ್ರಸಾದಲಿಂಗ. ಮತ್ತಾ ಇಷ್ಟಲಿಂಗದ ಮನೋವಿಲಯ, ಭಾವಾಪ್ಲುತ, ಅನುಪಮಚಿತ್ತ, ಆತ್ಮೈಕದೃಷ್ಟಿ, ಸುನಾದಘೋಷ, ಸಮರಸವಾದುದೇ ಮಹಾಲಿಂಗ.

ಇಂತಪ್ಪ ಮಹಾಲಿಂಗದಿಂದ ಪ್ರಸಾದಲಿಂಗ, ಪ್ರಸಾದಲಿಂಗದಿಂದ ಜಂಗಮಲಿಂಗ, ಜಂಗಮಲಿಂಗದಿಂದ ಶಿವಲಿಂಗ, ಶಿವಲಿಂಗದಿಂದ ಗುರುಲಿಂಗ, ಗುರುಲಿಂಗದಿಂದ ಆಚಾರಲಿಂಗ. ಆಚಾರಲಿಂಗದಲ್ಲಿ ಅನುಭಾವಿಯಾದೊಡೆ, ಇಪ್ಪತ್ತೈದು ಕರಣಂಗಳನರಿದು ಆಚರಿಸಬೇಕು. ಗುರುಲಿಂಗದಲ್ಲಿ ಅನುಭಾವಿಯಾದೊಡೆ, ಇಪ್ಪತ್ತು ಕರಣಂಗಳನರಿದು ಆಚರಿಸಬೇಕು. ಶಿವಲಿಂಗದಲ್ಲಿ ಅನುಭಾವಿಯಾದೊಡೆ ಹದಿನೈದು ಕರಣಂಗಳನರಿದು ಆಚರಿಸಬೇಕು. ಜಂಗಮಲಿಂಗದಲ್ಲಿ ಅನುಭಾವಿಯಾದೊಡೆ, ಹತ್ತು ಕರಣಂಗಳನರಿದು ಆಚರಿಸಬೇಕು. ಪ್ರಸಾದಲಿಂಗದಲ್ಲಿ ಅನುಭಾವಿಯಾದೊಡೆ, ಐದು ಕರಣಂಗಳನರಿದು ಆಚರಿಸಬೇಕು. ಮಹಾಲಿಂಗದಲ್ಲಿ ಅನುಭಾವಿಯಾದಡೆ, ಎಲ್ಲ ಕರಣಂಗಳನರಿದು ಆಚರಿಸಬೇಕು.

ಇಂತಪ್ಪ ಮಹಾಲಿಂಗವೇ ಇಷ್ಟಲಿಂಗವಾಗಿ, ಆ ಇಷ್ಟಲಿಂಗದ ಕಠಿಣತೆಗಳು ಆರು ಮುಖಂಗಳಾಗಿ, ಆ ಮುಖಂಗಳ ತತ್ತತ್ ಸ್ಥಾನದ್ರವ್ಯಂಗಳನರಿದು ಅರ್ಪಿಸಿಕೊಳಬಲ್ಲಡೆ ಆಚಾರಲಿಂಗ ಭೋಗಿ. ಮತ್ತಾ ಇಷ್ಟಲಿಂಗದ ರಸಗಳಾರು ಮುಖಂಗಳಾಗಿ, ಆ ಮುಖಂಗಳ ತತ್ತತ್

ಸ್ಥಾನ ದ್ರವ್ಯಂಗಳನರಿದು ಅರ್ಪಿಸಿಕೊಳ್ಳಬಲ್ಲಡೆ ಗುರುಲಿಂಗ ಭೋಗಿ. ಮತ್ತಾ ಇಷ್ಟಲಿಂಗದ ಉಷ್ಣಂಗಳಾರು ಮುಖಂಗಳಾಗಿ, ಆ ಮುಖಂಗಳ ತತ್ತತ್ ಸ್ಥಾನದ ದ್ರವ್ಯಂಗಳನರಿದು ಅರ್ಪಿಸಿಕೊಳ್ಳಬಲ್ಲಡೆ ಶಿವಲಿಂಗಭೋಗಿ. ಮತ್ತಾ ಇಷ್ಟಲಿಂಗದ ಚಲನೆಗಳಾರು ಮುಖಂಗಳಾಗಿ, ಆ ಮುಖಂಗಳ ತತ್ತತ್ ಸ್ಥಾನ ದ್ರವ್ಯಂಗಳನರಿದು ಅರ್ಪಿಸಿಕೊಳ್ಳಬಲ್ಲಡೆ ಜಂಗಮಲಿಂಗಭೋಗಿ. ಮತ್ತಾ ಇಷ್ಟಲಿಂಗದ ಶಬ್ದಂಗಳಾರು ಮುಖಂಗಳಾಗಿ, ಆ ಮುಖಂಗಳ ತತ್ತತ್ ಸ್ಥಾನ ದ್ರವ್ಯಂಗಳನರಿದು ಅರ್ಪಿಸಿಕೊಳಬಲ್ಲಡೆ ಪ್ರಸಾದಲಿಂಗ ಭೋಗಿ. ಮತ್ತಾ ಇಷ್ಟಲಿಂಗದ ನಿರ್ಭಾವ ಮುಖಂಗಳಾರು ಮುಖಂಗಳಾಗಿ, ಆ ಮುಖಂಗಳ ತತ್ತತ್ ಸ್ಥಾನ ದ್ರವ್ಯಂಗಳನರಿದು ಅರ್ಪಿಸಿಕೊಳಬಲ್ಲಡೆ ಮಹಾಲಿಂಗಭೋಗಿ.

ಇಂತಪ್ಪ ಇಷ್ಟಲಿಂಗವೇ ಮಹಾಲಿಂಗವಾಗಿ, ಮಹಾಲಿಂಗವೇ ಇಷ್ಟಲಿಂಗವಾಗಿ, ಆ ಇಷ್ಟಲಿಂಗದ ಸದ್ಯೋಜಾತ ಮುಖವಪ್ಪ ಪ್ರಾಣಂಗಳಾರು ದ್ರವ್ಯಂಗಳಲ್ಲಿ ಷಟ್‌ತ್ರಿಂಶಲಿಂಗವದಾಗಿಯಾಗಿ, ಮತ್ತಾ ಇಷ್ಟಲಿಂಗದ ವಾಮದೇವ ಮುಖವಪ್ಪ ಜಿಹ್ವೆಗಳಾರು ದ್ರವ್ಯಂಗಳಲ್ಲಿ ಷಟ್‌ತ್ರಿಂಶ ಲಿಂಗವದಾಗಿಯಾಗಿ, ಮತ್ತಾ ಇಷ್ಟಲಿಂಗದ ಅಘೋರ ಮುಖವಪ್ಪ ನೇತ್ರಂಗಳಾರು ದ್ರವ್ಯಂಗಳಲ್ಲಿ ಷಟ್‌ತ್ರಿಂಶ ಲಿಂಗವದಾಗಿಯಾಗಿ, ಮತ್ತಾ ಇಷ್ಟಲಿಂಗದ ತತ್ಪುರುಷ ಮುಖವಪ್ಪ ಲಿಂಗಂಗಳಾರು ದ್ರವ್ಯಂಗಳಲ್ಲಿ ಷಟ್‌ತ್ರಿಂಶ ಲಿಂಗವದಾಗಿಯಾಗಿ, ಮತ್ತಾ ಇಷ್ಟಲಿಂಗದ ಗೋಪ್ಯ ಮುಖವಪ್ಪ ಹೃದಯಂಗಳಾರು ದ್ರವ್ಯಂಗಳಲ್ಲಿ ಷಟ್‌ತ್ರಿಂಶ ಲಿಂಗವದಾಗಿಯಾಗಿ,

ಇಂತಪ್ಪ ತೃಪ್ತಿಪದಾರ್ಥಂಗಳಿಂದ ಶಬ್ದಪದಾರ್ಥಂಗಳು, ಶಬ್ದ ಪದಾರ್ಥಂಗಳಿಂದ ಸ್ಪರ್ಶಪದಾರ್ಥಂಗಳು ಸ್ಪರ್ಶ ಪದಾರ್ಥಂಗಳಿಂದ ರೂಪು ಪದಾರ್ಥಂಗಳು, ರೂಪು ಪದಾರ್ಥಂಗಳಿಂದ ರುಚಿ ಪದಾರ್ಥಂಗಳು, ರುಚಿ ಪದಾರ್ಥಂಗಳಿಂದ ಗಂಧ ಪದಾರ್ಥಂಗಳು.

ಗಂಧ ಪದಾರ್ಥಂಗಳನಾರು ಸೋಂಕುವಲ್ಲಿ ಅಷ್ಟಾದಶಲಿಂಗ ಶೇಷ ಭುಕ್ತನಾಗಿ, ರುಚಿ ಪದಾರ್ಥಂಗಳನಾರು ರುಚಿಸುವಲ್ಲಿ ಅಷ್ಟಾದಶಲಿಂಗ ಶೇಷ ಭುಕ್ತನಾಗಿ, ರೂಪು ಪದಾರ್ಥಂಗಳನಾರು ನಿರೀಕ್ಷಿಸುವಲ್ಲಿ ಅಷ್ಟಾದಶಲಿಂಗ ಶೇಷ ಭುಕ್ತನಾಗಿ, ಸ್ಪರ್ಶನ ಪದಾರ್ಥಂಗಳನಾರು ನಿರೀಕ್ಷಿಸು

ವಲ್ಲಿ ಅಷ್ಟಾದಶಲಿಂಗ ಶೇಷಭಕ್ತನಾಗಿ, ಶಬ್ದ ಪದಾರ್ಥಂಗಳನಾರು ಲಾಲಿಸುವಲ್ಲಿ ಅಷ್ಟಾದಶಲಿಂಗ ಶೇಷ ಭುಕ್ತನಾಗಿ, ತೃಪ್ತಿಪದಾರ್ಥಂಗಳನಾರು ಪರಿಣಾಮಿಸುವಲ್ಲಿ ಅಷ್ಟಾ ದಶಲಿಂಗ ಶೇಷ ಭುಕ್ತನಾಗಿ,

ಇಂತೀ ಅರ್ಪಿತ ಪ್ರಸಾದ ಸಮಾಧಾನ ಸ್ಥಲ ಕುಳ ಅನುಭಾವ ಆಚರಣೆ ಎಲ್ಲವನು ಇಷ್ಟಲಿಂಗದಲ್ಲಿಯೇ ಕಂಡು ಸುಖಿಸುತಿರ್ಪ ಮಹಾ ಮಹಿಮನನೇನೆಂದುಪಮಿಸುವೆನಯ್ಯ? ಇಂತಪ್ಪ ಮಹಾಘನವನೊಳಕೊಂಡಿರ್ಪ ಇಷ್ಟ ಬ್ರಹ್ಮವನೇನೆಂದುಪಮಿಸುವೆನಯ್ಯ?

ಫಲ ಪತ್ರ ಕುಸುಮ ರಸ ಗಂಧ ಕ್ಷಾರ ಒಗರು ಹುಳಿ ಮಧುರ ಸಕ್ಕರೆ ಜಲ ಒಂದೇ ಹಲವು ತೆರನಾದಂತೆ, ಮಸಿವಲಗು ಸಾಸಿರ ಸೋಹಿಸುವಲ್ಲಿ ರಸ ಗುಟಿಕೆಯೊಂದೇ ಮೊನೆಮೊನೆಗೆ ಬಂದಾನುವಂತೆ, ಬಂಗಾರ ಒಂದೇ ಹಲವು ಆಭರಣವಾದಂತೆ, ಹತ್ತೆಂಟು ಬಾಯ ಹುತ್ತಿನೊಳಗೆ ಸರ್ಪನೊಂದೇ ತಲೆದೋರುವಂತೆ, ಹಲವು ಕರಣಂಗಳ ಕೊನೆಯ ಮೊನೆಯ ಮೇಲೆ ತೊಳಗಿ ಬೆಳಗುವ ಪರಂಜ್ಯೋತಿಲಿಂಗವು ಅನುಪಮ, ಅನ್ವಯ, ಅವಿರಳ, ಅಪ್ರಮೇಯ, ಚಿನ್ಮಯ, ನಿರಾವರಣ, ನಿರುಪಾಧಿ, ನಿರ್ಗುಣ, ವಾಙ್ಮನಾತೀತ, ನಿರ್ಭೇದ್ಯ ಕೂಡಲ ಚನ್ನ ಸಂಗಮದೇವಯ್ಯ ನಿಮ್ಮ ಶರಣ ಸರ್ವಾಂಗಲಿಂಗಿ.

(೨) ಶರಣನ ಸರ್ವಾಂಗವೆಲ್ಲವು ಲಿಂಗವಾದ ಕ್ರಮವೆಂತೆಂದೊಡೆ, ಶ್ರೀಗುರುನಾಥನುಪದೇಶಿಸಿದ ಇಷ್ಟ ಲಿಂಗವೇ ತನ್ನ ಸರ್ವಾಂಗದಲ್ಲಿ ಭಿನ್ನ ನಾಮಂಗಳಿಂದ ಪ್ರಕಾಶಿಸುತ್ತಿಹುದು. ಅದು ಹೇಗೆಂದೊಡೆ,

ಸ್ಥೂಲಾಂಗದಲ್ಲಿ ಇಷ್ಟ ಲಿಂಗವೆಂದು, ಸೂಕ್ಷ್ಮಾಂಗದಲ್ಲಿ ಪ್ರಾಣ ಲಿಂಗವೆಂದು, ಕಾರಣಾಂಗದಲ್ಲಿ ಭಾವಲಿಂಗವೆಂದು, ತ್ರಿಭೇದವಾಗಿಹುದು. ಇಂತು ಅಂಗದ ಕುರಿತು ಮೂರು ತೆರನಾಗಿಹುದು.

ಇನ್ನು ಇಂದ್ರಿಯಂಗಳ ಕುರಿತು ಆರುತೆರನಾಗಿಹುದು. ಅದು ಹೇಗೆಂದೊಡೆ, ಹೃದಯದಲ್ಲಿ ಮಹಾಲಿಂಗವೆಂದು, ಶ್ರೋತ್ರದಲ್ಲಿ ಪ್ರಸಾದಲಿಂಗವೆಂದು, ತ್ವಕ್ಕಿನಲ್ಲಿ ಜಂಗಮಲಿಂಗವೆಂದು, ನೇತ್ರದಲ್ಲಿ ಶಿವಲಿಂಗವೆಂದು, ಜಿಹ್ವೆಯಲ್ಲಿ ಗುರುಲಿಂಗವೆಂದು, ಘ್ರಾಣದಲ್ಲಿ ಆಚಾರಲಿಂಗವೆಂದು, ಷಡಿಂದ್ರಿಯಂಗಳಲ್ಲಿ ಷಡ್ಲಿಂಗವಾಗಿ ತೋರುತ್ತಿಹುದು.

ಮಯವಾಗಿ, ಅದೇ ಲಿಂಗಾಂಗವಾಗಿ ಒಳಹೊರಗೆ ತೆರಹಿಲ್ಲದೆ ಸರ್ವಾಂಗವೆಲ್ಲವು ಲಿಂಗವಾದ ಇರವು ಅದು ತಾನೆ ಶಿವನ ಇರವು, ಅದು ತಾನೆ ಶಿವನ ವಿಶ್ರಾಮಸ್ಥಾನ. ಇಂತು ಷಡುಸ್ಥಲಬ್ರಹ್ಮವನರಿದಾತನೇ ಶರಣ, ಆತನೇ ಲಿಂಗೈಕ್ಯ. ಇಂತೀ ಷಡುಸ್ಥಲಬ್ರಹ್ಮವೆಂಬ ಅಪ್ರಮಾಣ ಅಗೋಚರ ಅನಿರ್ವಾಚ್ಯವಾದ ಕಾರಣ ವಚಿಸುವ ಚಿತ್ತ ವಚನಗೆಟ್ಟಿತು. ಉಪ್ಪು ನೀರೊಳಗೆ ಕೂಡಿದಂತೆ, ವಾರಿಕಲ್ಲು ಅಂಬುಧಿಯೊಳಗೆ ಬೆರಸಿದಂತೆ, ಶಿಖಿಕರ್ಪೂರ ಯೋಗದಂತಾದೆನಯ್ಯಾ ಕೂಡಲಚೆನ್ನಸಂಗಮದೇವಯ್ಯಾ.



# ನಿರಾಮಯ ಷಟ್‌ಸ್ಥಲ ಭೇದ.

(೧) ನಿರಾಮಯ ಭಕ್ತ ನಿರಾಮಯ ಮಹೇಶ್ವರ ನಿರಾಮಯ ಪ್ರಸಾದಿ, ನಿರಾಮಯ ಪ್ರಾಣಲಿಂಗಿ, ನಿರಾಮಯ ಶರಣ, ನಿರಾಮಯ ಐಕ್ಯ ಈ ನಿರಾಮಯ ಷಟ್ ಸ್ಥಲವು ಸೂಕ್ಷ್ಮಕ್ಕೆ ಅತ್ಯಂತ ಸೂಕ್ಷ್ಮ, ರಹಸ್ಯಕ್ಕೆ ಅತ್ಯಂತ ರಹಸ್ಯವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೨) ನಿರಾಮಯ ಭಕ್ತಂಗೆ ನಿರಾಮಯವೇ ಲಿಂಗ, ನಿರಾಮಯವೇ ಹಸ್ತ, ನಿರಾಮಯವೇ ಆಚಾರಲಿಂಗ, ನಿರಾಮಯವೆಂಬ ಮುಖದಲ್ಲಿ ನಿರಾಮಯಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೇ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೩) ನಿರಾಮಯವೆಂಬ ಮಹೇಶ್ವರಂಗೆ ನಿರಾಮಯವೇ ಅಂಗ, ನಿರಾಮಯವೇ ಹಸ್ತ, ನಿರಾಮಯವೇ ಗುರುಲಿಂಗ, ನಿರಾಮಯ ಮುಖದಲ್ಲಿ ನಿರಾಮಯಾನಂದವೆಂಬ ಸುಖವನೇ ಸಮರ್ಪಣವಂ ಮಾಡಿ ತೃಪ್ತಿಯನೇ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೪) ನಿರಾಮಯ ಪ್ರಸಾದಿಗೆ ನಿರಾಮಯವೇ ಅಂಗ, ನಿರಾಮಯವೇ ಹಸ್ತ, ನಿರಾಮಯವೇ ಶಿವಲಿಂಗ, ನಿರಾಮಯವೆಂಬ ಮುಖದಲ್ಲಿ ನಿರಾಮಯಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೫) ನಿರಾಮಯ ಪ್ರಾಣಲಿಂಗಿಗೆ ನಿರಾಮಯವೇ ಅಂಗ, ನಿರಾಮಯವೇ ಹಸ್ತ, ನಿರಾಮಯವೇ ಜಂಗಮಲಿಂಗ, ನಿರಾಮಯವೆಂಬ ಮುಖದಲ್ಲಿ ನಿರಾಮಯಾನಂದವೆಂಬ ಸುಖವನೆ ಸಮರ್ಪಣವಂ ಮಾಡಿ ತೃಪ್ತಿಯನೇ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೬) ನಿರಾಮಯ ಶರಣಂಗೆ ನಿರಾಮಯವೇ ಅಂಗ, ನಿರಾಮಯವೇ ಹಸ್ತ, ನಿರಾಮಯವೇ ಪ್ರಸಾದಲಿಂಗ, ನಿರಾಮಯವೆಂಬ ಮುಖ

ದಲ್ಲಿ ನಿರಾಮಯಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೭) ನಿರಾಮಯ ಐಕ್ಯಂಗೆ ನಿರಾಮಯವೇ ಅಂಗ, ನಿರಾಮಯವೇ ಹಸ್ತ, ನಿರಾಮಯವೇ ಮಹಾಲಿಂಗ, ನಿರಾಮಯವೆಂಬ ಮುಖದಲ್ಲಿ ನಿರಾಮಯಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸಿ ನಿರಾಮಯಾತೀತವೆಂಬ ನಿರ್ಣಯವ ನಯ್ದಿದನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

---

## ನಿರಂಜನಾತೀತ ಷಟ್‌ಸ್ಥಲಬ್ರಹ್ಮ.

(೧) ನಿರಂಜನಾತೀತ ಭಕ್ತ, ನಿರಂಜನಾತೀತ ಮಹೇಶ್ವರ, ನಿರಂಜನಾತೀತ ಪ್ರಸಾದಿ, ನಿರಂಜನಾತೀತ ಪ್ರಾಣಲಿಂಗಿ, ನಿರಂಜನಾತೀತ ಶರಣ, ನಿರಂಜನಾತೀತ ಐಕ್ಯ. ಈ ನಿರಂಜನಾತೀತ ಷಟ್‌ಸ್ಥಲ ಅಖಂಡಿತ ಅಪ್ರಮಾಣ ಅಗೋಚರ, ಅಪ್ರಮೇಯ, ವಾಚಾಮಗೋಚರ ಸ್ವತ್ರತ್ತವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

(೨) ನಿರಂಜನಾತೀತ ಭಕ್ತಂಗೆ ನಿರಂಜನಾತೀತವೇ ಅಂಗ, ನಿರಂಜನಾತೀತವೇ ಹಸ್ತ, ನಿರಂಜನಾತೀತವೇ ಆಚಾರಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವನೆ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ಅಪ್ರಮಾಣ ಕೂಡಲ ಸಂಗಮದೇವಾ.

(೩) ನಿರಂಜನಾತೀತ ಮಹೇಶ್ವರಂಗೆ, ನಿರಂಜನಾತೀತವೇ ಲಿಂಗ, ನಿರಂಜನಾತೀತವೇ ಹಸ್ತ, ನಿರಂಜನಾತೀತವೇ ಗುರುಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೪) ನಿರಂಜನಾತೀತ ಪ್ರಸಾದಿಗೆ ನಿರಂಜನಾತೀತವೇ ಅಂಗ, ನಿರಂಜನಾತೀತವೇ ಹಸ್ತ, ನಿರಂಜನಾತೀತವೇ ಶಿವಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೫) ನಿರಂಜನಾತೀತ ಪ್ರಾಣಲಿಂಗಿಗೆ, ನಿರಂಜನಾತೀತವೇ ಅಂಗ, ನಿರಂಜನಾತೀತವೇ ಹಸ್ತ, ನಿರಂಜನಾತೀತವೇ ಜಂಗಮಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೬) ನಿರಂಜನಾತೀತ ಶರಣಂಗೆ, ನಿರಂಜನಾತೀತವೇ ಅಂಗ, ನಿರಂಜನಾತೀತವೇ ಹಸ್ತ, ನಿರಂಜನಾತೀತವೇ ಪ್ರಸಾದಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೭) ನಿರಂಜನಾತೀತ ಐಕ್ಯಂಗೆ ನಿರಂಜನಾತೀತವೇ ಅಂಗ, ನಿರಂಜನಾತೀತವೇ ಹಸ್ತ, ನಿರಂಜನಾತೀತವೇ ಮಹಾಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೮) ನಿರಂಜನಾತೀತ ಷಟ್‌ಸ್ಥಲವಂಗವಾಗಿ, ಆ ನಿರಂಜನಾತೀತ ಷಟ್‌ಸ್ಥಲ ಬ್ರಹ್ಮವನೊಡಗೂಡಿದ ಮಹಾಶರಣಂಗೆ ನಮೋ ನಮೋ ಎಂದು ಬದುಕಿದೆನು ಕಾಣಾ ಅಪ್ರಮಾಣ ಕೂಡಲ ಸಂಗಮದೇವಾ.

# ನಿವೃತ್ತಿ.

ವಿವರಣೆ:— ಹಿಂದೆ ಹೇಳಿದ ಪ್ರಕಾರ ವಚನಕಾರರು ಪ್ರವೃತ್ತಿಯ ಮಾರ್ಗಗಳನ್ನು ವಿವರಿಸಿ, ಅವುಗಳ ಮೂಲಕ ಮನುಷ್ಯನು ಪೂರ್ಣ ವಿಕಾಸವನ್ನು ಹ್ಯಾಗೆ ಹೊಂದುತ್ತ ಹೋಗುತ್ತಾನೆಂಬದನ್ನು ವರ್ಣಿಸುತ್ತಾರೆ. ಹೀಗೆ ವಿಕಾಸವನ್ನು ಹೊಂದಿದ ಬಳಿಕ ಮನುಷ್ಯನು ನಿವೃತ್ತಿಯನ್ನು ಹೊಂದಲು ಅರ್ಹನಾಗುತ್ತಾನೆ. ಆಗ ಅವನಲ್ಲಿರುವ ಚಕ್ರಗಳು, ಪದ್ಮಗಳು, ಅಕ್ಷರಗಳು, ಪ್ರಣವಗಳು, ಮಂತ್ರಗಳು, ದ್ರವ್ಯಗಳು, ಮುಖಗಳು, ತತ್ವಗಳು, ಹಸ್ತಗಳು, ಭಕ್ತಿಗಳು, ಲಿಂಗಗಳು, ಅಂಗಗಳು, ಶಕ್ತಿಗಳು, ಕಲೆಗಳು, ನಾದಗಳು, ಸಾದಾಖ್ಯಗಳು, ಭೂತಗಳು, ಆತ್ಮಗಳು ಮೊದಲಾದವೆಲ್ಲ ಯಾವ ಮಹಾಲಿಂಗದೊಳಗಿಂದ ಮೊದಲು ಹೊರಟಿದ್ದವೋ ಅಲ್ಲಿಯೇ ಅವು ಲಯವಾಗುವವು. ಲಯವಾಗುವ ಮುಂದೆ ಅವು ಯಾವುದು ಸ್ಥೂಲವಾದುದೋ ಅದು ಸೂಕ್ಷ್ಮದೊಳಗೆ, ಸೂಕ್ಷ್ಮವಾದುದು ಯಾವುದೋ ಅದು ತನ್ನಕಿಂತಲೂ ಸೂಕ್ಷ್ಮವಾದುದರಲ್ಲಿ ಬೆರೆಯುತ್ತ ಬೆರೆಯುತ್ತ ಕಡೆಗೆ ಮಹಾಲಿಂಗದಲ್ಲಿ ಎಲ್ಲವು ಅಡಗಿ ಹೋಗುತ್ತವೆ.

## ಚಕ್ರಗಳ ನಿವೃತ್ತಿ.

ಆಧಾರ ಚಕ್ರ ಸ್ವಾಧಿಷ್ಠಾನ ಚಕ್ರದಲ್ಲಿ ಅಡಗಿತ್ತು. ಸ್ವಾಧಿಷ್ಠಾನ ಚಕ್ರ ಮಣಿಪೂರಕ ಚಕ್ರದಲ್ಲಿ ಅಡಗಿತ್ತು. ಮಣಿಪೂರಕ ಚಕ್ರ ಅನಾಹತ ಚಕ್ರದಲ್ಲಿ ಅಡಗಿತ್ತು. ಅನಾಹತಚಕ್ರ ವಿಶುದ್ಧಿಚಕ್ರದಲ್ಲಡಗಿತ್ತು. ವಿಶುದ್ಧಿಚಕ್ರ ಆಜ್ಞೆಚಕ್ರದಲ್ಲಿ ಅಡಗಿತ್ತು. ಆಜ್ಞೆಚಕ್ರ ಬ್ರಹ್ಮಚಕ್ರದಲ್ಲಡಗಿತ್ತು. ಬ್ರಹ್ಮಚಕ್ರ ಶಿಖಾಚಕ್ರದಲ್ಲಡಗಿತ್ತು. ಶಿಖಾಚಕ್ರ ಪಶ್ಚಿಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಪದ್ಮಗಳ ನಿವೃತ್ತಿ.

ಚತುರ್ದಳ ಪದ್ಮ ಷಡುದಳ ಪದ್ಮದಲ್ಲಿ ಅಡಗಿತ್ತು. ಷಡುದಳ ಪದ್ಮ ದಶದಳ ಪದ್ಮದಲ್ಲಿ ಅಡಗಿತ್ತು. ದಶದಳ ಪದ್ಮ ದ್ವಾದಶದಳ ಪದ್ಮದಲ್ಲಿ ಅಡಗಿತ್ತು. ದ್ವಾದಶದಳ ಪದ್ಮ ಷೋಡಶದಳ ಪದ್ಮದಲ್ಲಿ ಅಡಗಿತ್ತು. ಷೋಡಶದಳ ಪದ್ಮ ದ್ವಿದಳ ಪದ್ಮದಲ್ಲಿ ಅಡಗಿತ್ತು. ದ್ವಿದಳ ಪದ್ಮ ಸಹಸ್ರ

ದಳ ಪದ್ಮದಲ್ಲಿ ಅಡಗಿತ್ತು. ತ್ರಿದಳ ಪದ್ಮ ಏಕದಳ ಪದ್ಮದಲ್ಲಿ ಅಡಗಿತ್ತು. ಆ ಏಕದಳ ಪದ್ಮ ನಿರಂಜನಾತೀತವೆಂಬ ಪದ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಐವತ್ತೆರಡಕ್ಕರಗಳ ನಿವೃತ್ತಿ.

ವ ಶ ಷ ಸ ಎಂಬ ಚತುರಕ್ಷರವು ಆಧಾರ ಚಕ್ರದ ನಕಾರ ಬೀಜದಲ್ಲಿ ಅಡಗಿತ್ತು. ಬ ಭ ಮ ಯ ರ ಲ ಎಂಬ ಷಡಕ್ಷರಂಗಳು ಸ್ವಾಧಿಷ್ಠಾನ ಚಕ್ರದ ಮಕಾರ ಬೀಜದಲ್ಲಿ ಅಡಗಿತ್ತು. ಡ ಢ ಣ ತ ಥ ದ ಧ ನ ಪ ಫ ಎಂಬ ದಶಾಕ್ಷರವು ಮಣಿಪೂರಕ ಚಕ್ರದ ಶಿಕಾರ ಬೀಜದಲ್ಲಿ ಅಡಗಿತ್ತು. ಕ ಖ ಗ ಘ ಙ ಚ ಛ ಜ ಝ ಞ ಟ ಠ ಎಂಬ ದ್ವಾದಶಾಕ್ಷರವು ಅನಾಹತ ಚಕ್ರದ ವಕಾರ ಬೀಜದಲ್ಲಿ ಅಡಗಿತ್ತು. ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ ಷೋಡಶಾಕ್ಷರವು ವಿಶುದ್ಧಿಚಕ್ರದ ಯಕಾರ ಬೀಜದಲ್ಲಿ ಅಡಗಿತ್ತು. ಹಂ ಳಂ ಹಂ ಕ್ಷಂ ಎಂಬ ಚತುರಕ್ಷರವು ಆಜ್ಞಾಚಕ್ರದ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಬೀಜದ ಜ್ಯೋತಿ ಸ್ವರೂಪದಲ್ಲಿ ಪರಮಾತ್ಮನಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಪಂಚಾಕ್ಷರಗಳ ನಿವೃತ್ತಿ.

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾಕೃತಿಯಲ್ಲಿಹ ನಕಾರದಲ್ಲಿ ನಕಾರವಡಗಿತ್ತು. ಆ ಪ್ರಣವದ ದಂಡಕಾಕೃತಿಯಲ್ಲಿಹ ಮಕಾರದಲ್ಲಿ ಮಕಾರವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿಹ ಶಿಕಾರ ಪ್ರಣವದಲ್ಲಿ ಶಿಕಾರವಡಗಿತ್ತು. ಆ ಪ್ರಣವದ ಅರ್ಧ ಚಂದ್ರಾಕೃತಿಯಲ್ಲಿಹ ವಕಾರ ಪ್ರಣವದಲ್ಲಿ ವಕಾರವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿಹ ಯಕಾರ ಪ್ರಣವದಲ್ಲಿ ಯಕಾರವಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಪ್ರಣವದ ಮುಖದಲ್ಲಿಹ ಪಂಚಾಕ್ಷರಂಗಳ ನಿವೃತ್ತಿ.

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾಕೃತಿಯಲ್ಲಿಹ ನಕಾರವು ಆ ಪ್ರಣವದ ತಾರಕಾಕೃತಿಯಲ್ಲಿಯೇ ಐಕ್ಯ

ವಾಗಿತ್ತು. ಆ ಪ್ರಣವನ ದಂಡಕಾಕೃತಿಯಲ್ಲಿಹ ಮಕಾರವು ಆ ಪ್ರಣವವ ದಂಡಕಾಕೃತಿಯಲ್ಲಿಯೇ ಐಕ್ಯವಾಗಿತ್ತು. ಆ ಪ್ರಣವದ ಕುಂಡಲಾಕೃತಿಯಲ್ಲಿಹ ಶಿಕಾರವು ಆ ಪ್ರಣವವ ಕುಂಡಲಾಕೃತಿಯಲ್ಲಿ ಐಕ್ಯವಾಗಿತ್ತು. ಆ ಪ್ರಣವದ ಅರ್ಧಚಂದ್ರಾಕೃತಿಯಲ್ಲಿಹ ವಕಾರ ಪ್ರಣವವು ಆ ಪ್ರಣವವ ಅರ್ಧಚಂದ್ರಾಕೃತಿಯಲ್ಲಿಯೇ ಐಕ್ಯವಾಯಿತ್ತು. ಆ ಪ್ರಣವದ ದರ್ಪಣಾಕೃತಿಯಲ್ಲಿಹ ಯಕಾರವು ಆ ಪ್ರಣವವ ದರ್ಪಣಾಕೃತಿಯಲ್ಲಿಯೇ ಐಕ್ಯವಾಯಿತ್ತು. ಆ ಪ್ರಣವದ ಜ್ಯೋತಿಸ್ತಂಭಾಕೃತಿಯಲ್ಲಿಯೇ ಐಕ್ಯವಾಯಿತ್ತು ಓಂ ಇತ್ಯೇಕಾಕ್ಷರಂ ಬ್ರಹ್ಮವೆಂಬುದಾಗಿ ಅಪ್ರಮಾಣ ಕೂಡಲ ಸಂಗಮದೇವಾ.

## ಸಹಸ್ರಾಕ್ಷರ, ತ್ರ್ಯಕ್ಷರ, ಏಕಾಕ್ಷರಗಳ ನಿವೃತ್ತಿ

ಸಹಸ್ರಾಕ್ಷರ ತ್ರ್ಯಕ್ಷರದಲ್ಲಿಯೇ ಅಡಗಿತ್ತು. ತ್ರ್ಯಕ್ಷರ ಏಕಾಕ್ಷರದಲ್ಲಿಯೇ ಅಡಗಿತ್ತು. ಆ ಏಕಾಕ್ಷರ ನಿಶ್ಶಬ್ದ ಬ್ರಹ್ಮ ಮುಚ್ಯತೆ ಎಂಬ ಪರಬ್ರಹ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ವೇದಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಸ್ವರೂಪದಲ್ಲಿ ಋಗ್ವೇದವಡಗಿತ್ತು. ಆ ಪ್ರಣವದ ದಂಡ ಸ್ವರೂಪದಲ್ಲಿ ಯಜುರ್ವೇದವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಸಾಮವೇದವಡಗಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಅಥರ್ವಣವೇದವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಗಾಯತ್ರಿಯಡಗಿತ್ತು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ಅಜಪೆಯಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ದ್ರವ್ಯಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಸ್ವರೂಪದಲ್ಲಿ ಗಂಧವಡಗಿತ್ತು. ಆ ಪ್ರಣವದ ದಂಡ ಸ್ವರೂಪದಲ್ಲಿ ರಸವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ರೂಪವಡಗಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಸ್ಪರ್ಶನವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಬ್ದವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ತೃಪ್ತಿಯಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ

## ಮುಖಂಗಳ ನಿವೃತ್ತಿ

ಆ ಪ್ರಣವದ ತಾರಕಸ್ವರೂಪದಲ್ಲಿ ಘ್ರಾಣೇಂದ್ರಿಯವಡಗಿತ್ತು. ಆ ಪ್ರಣವದ ದಂಡ ಸ್ವರೂಪದಲ್ಲಿ ಜಿಹ್ವೇಂದ್ರಿಯವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ನೇತ್ರೇಂದ್ರಿಯವಡಗಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ತ್ವಗಿಂದ್ರಿಯವಡಗಿತ್ತು ಆ ಪ್ರಣವದ ದರ್ಪಣಾಕಾರದಲ್ಲಿ ಶ್ರೋತ್ರೇಂದ್ರಿಯವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಮನೇಂ ದ್ರಿಯವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

## ತತ್ವಗಳ ನಿವೃತ್ತಿ

ಭಾವ ಅಂತರ ಚೈತನ್ಯ ಕರ್ತ ಕ್ಷೇತ್ರಜ್ಞ ಶಿವ ಈ ಯಾರು ತತ್ವಂಗಳು ಅಖಂಡ ಮಹಾಜ್ಯೋತಿ ಪ್ರಣವದ ಜ್ಯೋತಿ ಸ್ವರೂಪವಾಗಿಹ ಪರಬ್ರಹ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ವಾಕ್ಕು ಶ್ರೋತ್ರ ಜ್ಞಾನ ಶಬ್ದ ಮಹಾಕಾಶ ಸದಾಶಿವನು ಈ ಯಾರು ತತ್ವಂಗಳು ಅಖಂಡ ಮಹಾಜ್ಯೋತಿ ಪ್ರಣವದ ದರ್ಪಣಾಕಾರವಾಗಿಹ ವಿಜ್ಞಾನ ಬ್ರಹ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಪಾಣಿ ತ್ವಕ್ಕು ಮನಸ್ ಸ್ಪರ್ಶ ವಾಯು ಈಶ್ವರ ಈ ಯಾರು ತತ್ವಂಗಳು ಅಖಂಡ ಮಹಾಜ್ಯೋತಿ ಪ್ರಣವದ ಅರ್ಧ ಚಂದ್ರಕದಲ್ಲಿ ಸ್ವರೂಪವಾಗಿಹ ಬ್ರಹ್ಮಾನಂದ ಬ್ರಹ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಪಾದ, ನೇತ್ರ, ಅಹಂಕಾರ, ರೂಪು, ಅಗ್ನಿ, ರುದ್ರ ಈಯಾರು ತತ್ವಂಗಳು ಆ ಅಖಂಡ ಮಹಾಜ್ಯೋತಿ ಪ್ರಣವದ ದಂಡಾಕಾರವಾಗಿಹ ಪಿಂಡಬ್ರಹ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಗುದ, ಘ್ರಾಣ, ಚಿತ್ತ, ಗಂಧ, ಪೃಥ್ವಿ, ಬ್ರಹ್ಮ ಈಯಾರು ತತ್ವಂಗಳು ಆ ಅಖಂಡ ಮಹಾಜ್ಯೋತಿ ಪ್ರಣವದ ತಾರಕಸ್ವರೂಪವಾಗಿಹ

ಮೂರ್ತಿ ಬ್ರಹ್ಮದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

## ಹಸ್ತಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿ ಸುಚಿತ್ತ ಹಸ್ತವಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಸುಬುದ್ಧಿ ಹಸ್ತವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ನಿರಹಂಕಾರ ಹಸ್ತವಡಗಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಸುಮನವೆಂಬ ಹಸ್ತವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಸುಜ್ಞಾನ ಹಸ್ತವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಭಾವಹಸ್ತವಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಭಕ್ತಿಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿ ಸದ್ಭಕ್ತಿಯಡಗಿತ್ತು. ಆ ಪ್ರಣವದ ದಂಡ ಸ್ವರೂಪದಲ್ಲಿ ನೈಷ್ಠಿಕಾ ಭಕ್ತಿಯಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಅವಧಾನ ಭಕ್ತಿಯಡಗಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಅನುಭಾವ ಭಕ್ತಿಯಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಆನಂದ ಭಕ್ತಿಯಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಸಮರಸ ಭಕ್ತಿಯಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಲಿಂಗಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿ ಆಚಾರಲಿಂಗವಡಗಿತ್ತು. ಆ ಪ್ರಣವದ ದಂಡಕ ಸ್ವರೂಪದಲ್ಲಿ ಗುರುಲಿಂಗವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಶಿವಲಿಂಗವಡಗಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಜಂಗಮಲಿಂಗವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಪ್ರಸಾದಲಿಂಗವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಮಹಾಲಿಂಗವಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಅಂಗಗಳ ನಿವೃತ್ತಿ

ಆ ಪ್ರಣವದ ತಾರಕಸ್ವರೂಪದಲ್ಲಿ ಭಕ್ತನಡಗಿದನು. ಆ ಪ್ರಣವದ ದಂಡಸ್ವರೂಪದಲ್ಲಿ ಮಹೇಶ್ವರನಡಗಿದನು. ಆ ಪ್ರಣವದ ಕುಂಡಲಾಕಾರದಲ್ಲಿ ಪ್ರಸಾದಿಯುಡಗಿದನು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಪ್ರಾಣಲಿಂಗಿಯುಡಗಿದನು. ಆ ಪ್ರಣವದ ದರ್ಪಣಾಕಾರದಲ್ಲಿ ಶರಣನಡಗಿದನು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ಐಕ್ಯನಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಷಡಂಗ ನಿವೃತ್ತಿ

ಶಿವನು, ಸದಾಶಿವನು, ಈಶ್ವರ, ರುದ್ರ, ವಿಷ್ಣು, ಬ್ರಹ್ಮ, ಈಯಾರು ಶಿವಾಂಗವು ಚಿತ್‌ಶಕ್ತಿಯಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಕ್ಷೇತ್ರಜ್ಞ, ಆಕಾಶ, ವಾಯು, ತೇಜ, ಅಪ್ಪು, ಪೃಥ್ವಿ ಈಯಾರು ಭೂತಾಂಗವು ಪರಾಶಕ್ತಿಯಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಕರ್ತನು, ಶಬ್ದ, ಸ್ಪರ್ಶ, ರೂಪು, ರಸ, ಗಂಧ, ಈಯಾರು ಭೋಗಾಂಗವು ಆದಿಶಕ್ತಿಯಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಚೈತನ್ಯ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ ಈಯಾರು ಕರ್ಮಾಂಗವು ಜ್ಞಾನಶಕ್ತಿಯಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಅಂತರ, ವಾಕ್, ಪಾದ, ವಾಯು, ಪಾಣಿ, ಗುಹ್ಯ ಈಯಾರು ಕರ್ಮಾಂಗಳು ಕ್ರಿಯಾಶಕ್ತಿಯಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಭಾವ, ಜ್ಞಾನ, ಮನಸ್ಸು, ಅಹಂಕಾರ, ಬುದ್ಧಿ, ಚಿತ್ತ ಈಯಾರು ಕಾಮಾಂಗವು ಇಚ್ಛಾಶಕ್ತಿಯಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಶಕ್ತಿಗಳ ನಿವೃತ್ತಿ

ಜ್ಞಾನಶಕ್ತಿಯು ಸಹಸ್ರಾಂಶದಲ್ಲಿ ಕ್ರಿಯಾಶಕ್ತಿ ಅಡಗಿದಳು. ಇಚ್ಛಾಶಕ್ತಿಯು ಸಹಸ್ರಾಂಶದಲ್ಲಿ ಜ್ಞಾನಶಕ್ತಿಯಡಗಿದಳು. ಆದಿಶಕ್ತಿಯು ಸಹಸ್ರಾಂಶದಲ್ಲಿ ಇಚ್ಛಾಶಕ್ತಿಯಡಗಿದಳು. ಪರಾಶಕ್ತಿಯು ಸಹಸ್ರಾಂಶದಲ್ಲಿ ಆದಿಶಕ್ತಿಯಡಗಿದಳು. ಚಿತ್‌ಶಕ್ತಿಯು ಸಹಸ್ರಾಂಶದಲ್ಲಿ ಪರಾಶಕ್ತಿಯಡಗಿದಳು. ನಿಃಶಬ್ದವೆಂಬ ಪರಬ್ರಹ್ಮದ ಚಿತ್‌ಶಕ್ತಿಯು ಸಹಸ್ರಾಂಶದಲ್ಲಿ ಚಿತ್‌ಶಕ್ತಿಯಡಗಿದಳು. ಆ ನಿಃಶಬ್ದವೆಂಬ ಬ್ರಹ್ಮನ ಚಿಂತೆಯು ಅಡಗಿ ಶೂನ್ಯ ನಿಶ್ಶೂನ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಕಲೆಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿ ನಿವೃತ್ತಿ ಕಲೆಯಡಗಿತ್ತು ಆ ಪ್ರಣವದ ದಂಡಸ್ವರೂಪ ದಲ್ಲಿ ಪ್ರತಿಷ್ಠಾ ಕಲೆಯಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ವಿದ್ಯಾ ಕಲೆಯಡಗಿತ್ತು ಆ ಪ್ರಣವದ ಅರ್ಧ ಚಂದ್ರಕದಲ್ಲಿ ಶಾಂತಿ ಕಲೆಯಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಾಂತ್ಯಾತೀತ ಕಲೆಯಡಗಿತ್ತು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ಶಾಂತ್ಯಾತೀತೋತ್ತರ ಕಲೆಯಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ನಾದಗಳ ನಿವೃತ್ತಿ

ಪೆಣ್ಬುಂಬಿನಾದ ವೀಣಾನಾದದಲ್ಲಿ ಅಡಗಿತ್ತು. ಆ ವೀಣಾನಾದ ಘಂಟಾನಾದದಲ್ಲಿ ಅಡಗಿತ್ತು. ಆ ಘಂಟಾನಾದ ಭೇರೀನಾದ ದಲ್ಲಿ ಅಡಗಿತ್ತು. ಆ ಭೇರೀನಾದ ಮೇಘಧ್ವನಿಯಲ್ಲಿ ಅಡಗಿತ್ತು. ಆ ಮೇಘಧ್ವನಿ ಪ್ರಣವನಾದದಲ್ಲಿ ಅಡಗಿತ್ತು. ಆ ಪ್ರಣವನಾದ ದಿವ್ಯ ನಾದದಲ್ಲಿ ಅಡಗಿತ್ತು. ಆ ದಿವ್ಯನಾದ ಸಿಂಹನಾದದಲ್ಲಿ ಅಡಗಿತ್ತು. ಆ ಸಿಂಹನಾದ ನಿಃಶಬ್ದವೆಂಬ ಪರಬ್ರಹ್ಮದ ನೆನಹು ಮಂತ್ರದಲ್ಲಿ ಅಡಗಿತ್ತು. ಆ ನಿಶ್ಶಬ್ದ ಪರಬ್ರಹ್ಮದ ನೆನಹು ಅಡಗಿ ನಿಃಶೂನ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಸಾದಾಖ್ಯಗಳ ನಿವೃತ್ತಿ.

ನಿವೃತ್ತಿ ಕಳೆಯಲ್ಲಿ ಕರ್ಮ ಸಾದಾಖ್ಯವಡಗಿತ್ತು. ಪ್ರತಿಷ್ಠಾ ಕಳೆಯಲ್ಲಿ ಕರ್ತೃ ಸಾದಾಖ್ಯವಡಗಿತ್ತು. ವಿದ್ಯಾ ಕಳೆಯಲ್ಲಿ ಮೂರ್ತಿ ಸಾದಾಖ್ಯವಡಗಿತ್ತು. ಶಾಂತಿ ಕಳೆಯಲ್ಲಿ ಅಮೂರ್ತಿ ಸಾದಾಖ್ಯವಡಗಿತ್ತು. ಶಾಂತ್ಯಾತೀತ ಕಳೆಯಲ್ಲಿ ಶಿವ ಸಾದಾಖ್ಯವಡಗಿತ್ತು. ಶಾಂತ್ಯಾತೀತೋತ್ತರ ಕಳೆಯಲ್ಲಿ ನಿರ್ಮುಕ್ತಿ ಎಂಬ ಮಹಾ ಸಾದಾಖ್ಯವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

## ಮಹಾಭೂತಗಳ ನಿವೃತ್ತಿ.

(೧) ಸದ್ಯೋಜಾತವೆಂಬ ಮುಖದಲ್ಲಿ ಪೃಥ್ವಿ ಎಂಬ ಮಹಾಭೂತವಡಗಿತ್ತು. ವಾಮದೇವ ಮುಖದಲ್ಲಿ ಅಪ್ಪು ಎಂಬ ಮಹಾಭೂತವಡಗಿತ್ತು. ಅಘೋರ ಮುಖದಲ್ಲಿ ಅಗ್ನಿ ಎಂಬ ಮಹಾಭೂತವಡಗಿತ್ತು. ತತ್ಪುರುಷ ಮುಖದಲ್ಲಿ ವಾಯುವೆಂಬ ಮಹಾಭೂತವಡಗಿತ್ತು. ಈಶಾನ್ಯನೆಂಬ ಮುಖದಲ್ಲಿ ಆಕಾಶವೆಂಬ ಮಹಾಭೂತವಡಗಿತ್ತು. ಪ್ರಣವದ ಅರ್ಧಚಂದ್ರಕದಲ್ಲಿ ಮನವೆಂಬ ಮಹಾಭೂತವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

(೨) ಪರಬ್ರಹ್ಮ ಸ್ವರೂಪವಾಗಿಹ ಪರಮ ಪ್ರಣವದ ತಾರಕ ಸ್ವರೂಪದಲ್ಲಿ ಪೃಥ್ವಿ ಎಂಬ ಮಹಾಭೂತವಡಗಿತ್ತು. ಆ ಪ್ರಣವದ ದಂಡ ಸ್ವರೂಪದಲ್ಲಿ ಅಪ್ಪುವೆಂಬ ಮಹಾಭೂತವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ತೇಜವೆಂಬ ಮಹಾಭೂತವಡಗಿತ್ತು. ಆ ಪ್ರಣವದ ಅರ್ಧ ಚಂದ್ರಾಕಾರದಲ್ಲಿ ವಾಯುವೆಂಬ ಮಹಾಭೂತವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಆಕಾಶವೆಂಬ ಮಹಾಭೂತವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಆತ್ಮನೆಂಬ ಮಹಾಭೂತವಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಆತ್ಮರ ನಿವೃತ್ತಿ

ಅಂತರಾತ್ಮನೆಂಬ ಮಹಾಗುರು ಪರಮಾತ್ಮನೆಂಬ ಮಹಾಲಿಂಗದಲ್ಲಿ ಅಡಗಿತ್ತು. ಆ ಪರಮಾತ್ಮನೆಂಬ ಮಹಾಲಿಂಗವು ಸರ್ವಾಶ್ರಯ

ವೆಂಬ ಮಹಾಜಂಗಮದಲ್ಲಿ ಅಡಗಿತ್ತು. ಆ ಸರ್ವಾತ್ಮವೆಂಬ ಮಹಾ ಜಂಗಮ ತಾನೆ ಸಿತ್ಪನಿರಂಜನ ನಿರಾಮಯಾತೀತನಾಗಿರ್ದನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಮುಖಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವ ತಾರಕ ಸ್ವರೂಪದಲ್ಲಿ ಸದ್ಯೋಜಾತ ಮುಖವಡಗಿತ್ತು. ಆ ಪ್ರಣವ ದಂಡಸ್ವರೂಪದಲ್ಲಿ ವಾಮದೇವ ಮುಖವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಅಘೋರ ಮುಖವಡಗಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ತತ್ಪುರುಷ ಮುಖವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಈಶಾನ್ಯ ಮುಖವಡಗಿತ್ತು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ನಿರ್ಭಾವ ಮುಖವಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಪಂಚಬ್ರಹ್ಮಮೂರ್ತಿಗಳ ನಿವೃತ್ತಿ

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವ ತಾರಕ ಸ್ವರೂಪದಲ್ಲಿ ಬ್ರಹ್ಮನಡಗಿದನು. ಆ ಪ್ರಣವದ ದಂಡಸ್ವರೂಪದಲ್ಲಿ ವಿಷ್ಣುವಡಗಿದನು. ಆ ಪ್ರಣವದ ಕುಂಡಲಾಕಾರದಲ್ಲಿ ರುದ್ರನಡಗಿದನು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಈಶ್ವರನಡಗಿದನು. ಆ ಪ್ರಣವದ ದರ್ಪಣಾಕಾರದಲ್ಲಿ ಸದಾಶಿವನಡಗಿದನು. ಆ ಪ್ರಣವ ಜ್ಯೋತಿಸ್ವರೂಪದಲ್ಲಿ ಆತ್ಮನಡಗಿದನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.



# ಬಯಲು.

ಈ ಮೇರೆಗೆ ಭಕ್ತನು ಸಂಪೂರ್ಣ ವಿಕಾಸವನ್ನು ಹೊಂದಿ ಕಟ್ಟಕಡೆಗೆ ಶೂನ್ಯ ನಿರಾಲಂಬ ಸ್ಥಿತಿಯನ್ನು ಹೊಂದುವನು. ಇದೇ ಲಿಂಗಾಂಗ ಸಾದೃಶ್ಯವು, ನಿರವಯವು, ಬಯಲು.

(೧) ಏನೆಂಬೆನೇನೆಂಬೆ, ಏನೆಂಬೆನೇನೆಂಬೆ ಎರಡೊಂದಾದುದ? ಸೆಂಬನೇನೆಂಬೆನವಿರಳ ಘನವ? ಮಹಾದಾನಿ ಕೂಡಲ ಸಂಗಮದೇವ ನೇ ಬಲ್ಲ.

(೨) ಆದಿ ಇಲ್ಲದ ಬಯಲು, ಅನಾದಿ ಇಲ್ಲದ ಬಯಲು. ಶೂನ್ಯ ಲ್ಲದ ಬಯಲು, ನಿಶ್ಶೂನ್ಯವಿಲ್ಲದ ಬಯಲು, ಮರಾಳವಿಲ್ಲದ ಬಯಲು, ರಾಳವಿಲ್ಲದ ಬಯಲು, ಸಾವಯವಿಲ್ಲದ ಬಯಲು, ನಿರವಯವಿಲ್ಲದ ಯಲು, ಅಖಂಡೇಶ್ವರನೆಂಬ ಬಯಲಲ್ಲಿಯ ಬಯಲು ಮಹಾಘನ ಚ್ಚಬಯಿಯ ಬಯಲೊಳಗೆ ಎಚ್ಚರವಡಗಿ ನಾನೆತ್ತ ಹೋದೆನೆಂದರಿಯೆ.

(೩) ಅವನಿಯ ಪಿಂಡವ ನುಂಗಿ ಉದಕದ ಪಾನವಮಾಡಿ ಅಗ್ನಿಯ ಟ್ಟಿ ವಾಯುವ ಹಿಡಿದು ಆಕಾಶವನಡರಿ ಮಹದಾಕಾಶದ ಬಯಲೊ ಗೆ ನಿಂದು ನೋಡಲು ಸರ್ವಶೂನ್ಯ ನಿರಾಕಾರವೆಂಬ ಬಯಲು ಕಾಣ ಬಂದಿತ್ತು. ಆ ಬಯಲ ಬೆರಸಿಹೆನೆಂದು ಬಸವಪ್ರಭು ಮೊದಲಾದ ಂಗಳ ಮಹಾನುಭಾವ ಸಂಪಾದನೆಯಿಂದು ನಿಜಗುರು ಸ್ವತಂತ್ರ ಲಿಂಗೇಶ್ವರನೆಂಬ ಬಯಲ ಬೆರಸಿದೆನು.

(೪) ಅಯ್ಯಾ ಒಳಗೆ ನೋಡಿದರೆ ಬಯಲು, ಹೊರಗೆ ನೋಡಿ ರೆ ಬಯಲು, ನೆನೆದಿಹೆನೆಂದರೆ ಬಯಲು, ನೆನಹಿಸಿಕೊಂಡಿಹೆನೆಂದರೆ ವಿಲ್ಲಾಗಿ ನಾನು ಬಯಲು, ನೀನು ಬಯಲು ನೋಡಾ. ಭಾವಿಸಿ ನೆಂಬ ವಸ್ತುವಿಲ್ಲಾಗಿ ಭಾವ ಬಯಲೆಂಬೆನು ನೋಡಾ. ಮರಹು ಶೂನ್ಯವಾಯಿತ್ತಾಗಿ ಅರುಹು ಶೂನ್ಯವಾಯಿತ್ತು ನೋಡಾ. ತನುವುಳ್ಳನ್ನಕ್ಕರ ನ್ನ ಸಾವಯವೆಂದೆ. ಮನವುಳ್ಳನ್ನಕ್ಕರ ನಿನ್ನ ಸಾವಯವ ನಿರವಯನೆಂದೆ. ನುಭಾವವುಳ್ಳನಕ್ಕರ ನಿನ್ನ ನಿರವಯನೆಂದೆ. ನಾನುಳ್ಳನ್ನಕ್ಕರ ನೀನೆಂದೆ

ನಾ ಸತ್ತ ಬಳಿಕ ನೀನೆಲ್ಲಿಯುವನು ಹೇಳಾ? ಇದು ಕಾರಣ ಸಾಯುವವೆನ್ನೆ ನಿರವಯುವೆನ್ನೆ ನೋಡಾ. ನಿಶ್ಚಲವೆಂಬ ನಿರ್ದೇಹಿಯ ಮೇಲೆ ಸಚ್ಚಿದಾನದವೆಂಬ ಪದವು ಬಂದೆರಗಿ ಐದಿ ನುಂಗಿತ್ತು ನೋಡಾ. ಐದಿ ನುಂಗಲಾ ಕಾರ್ಯವೆನಲಿಲ್ಲ, ಕಾರಣವೆನಲಿಲ್ಲ, ಪರಮ ಕಾರಣವೆನಲಿಲ್ಲ, ಜೀವವೆನಲಿಲ್ಲ, ಪರಮನೆನಲಿಲ್ಲ, ಜೀವಪರಮೈಕ್ಯವನೊಳಕೊಂಡು ತೀವಿ ಪರಿಪೂರ್ಣ ಪರಾಪರವೆನಲಿಲ್ಲ, ಲಕ್ಷ್ಯನೆನಲಿಲ್ಲ, ನಿರ್ಲಕ್ಷ್ಯನೆನಲಿಲ್ಲ, ಅಲಕ್ಷ್ಯನದ್ವಯ ನಿಶ್ಶೂನ್ಯನೆನಲಿಲ್ಲ, ಮಹಾ ಶೂನ್ಯನೆನಲಿಲ್ಲ. ಏನೂ ಎನಲಿಲ್ಲದ ನಿರಾಕಾರ ಬಯಲು, ನಿಶ್ಶಬ್ದಮಯ ಪರಬೊಮ್ಮನು, ಚಿದಾದಿತ್ಯ ಸಂಗನಬಸವಣ್ಣನ ಬಯಲ ಬೆಳಗಿನೊಳು ಬಯಲಾದ ಗುಹೇಶ್ವರ ಲಿಂಗಕ್ಕಾವ ತೊಡಕುಂಟು ಹೇಳಾ?

# ಏಕೋತ್ತರ ಶತಸ್ಥಲ.



ವಿವರಣೆ:— ಏಕೋತ್ತರ ಶತಸ್ಥಲ ಅಥವಾ ನೂರೊಂದು ಸ್ಥಲಗಳಿಗೆ ವಚನಶಾಸ್ತ್ರದಲ್ಲಿ ಬಹು ಮಹತ್ವದ ಸ್ಥಾನವಿದೆ. ಅವುಗಳಂತೆ ಆಚರಿಸುವವನೇ ಷಟ್‌ಸ್ಥಲಗಳ ಮರ್ಮವನ್ನರಿತವನೆಂದು ತಿಳಿಯಲ್ಪಟ್ಟಿರುತ್ತದೆ. ಷಟ್‌ಸ್ಥಲಗಳಲ್ಲಿ ಮುಖ್ಯವಾಗಿ ಸಾಮಾನ್ಯ ತಾತ್ವಿಕ ವಿಚಾರಗಳು ಬರುವದುಂಟು. ಆದರೆ ಅವುಗಳಿಗೆ ಸಂಬಂಧಿಸಿದ ಕ್ರಿಯೆಗಳ ವಿಸ್ತೃತ ವಿವೇಚನೆಯು ಏಕೋತ್ತರ ಶತಸ್ಥಲದಲ್ಲಿಯೇ ಬರುತ್ತದೆ. ವೀರಶೈವನ ಧಾರ್ಮಿಕ ಮತ್ತು ಆಚಾರ ವಿಷಯಕ ವಿಷಯಗಳೂ ಸಾಮಾಜಿಕ ವಿಚಾರಗಳೂ ಈ ಸ್ಥಲಗಳಲ್ಲಿ ವಿಶೇಷವಾಗಿ ನಿರೂಪಿಸಲ್ಪಡುವದುಂಟು.

ಏಕೋತ್ತರವು ಷಟ್‌ಸ್ಥಲಗಳ ತಾತ್ವಿಕ ಜ್ಞಾನಕ್ಕೂ ಆಚಾರ ವಿಷಯಕ್ಕೂ ಸಂಬಂಧಪಡಿಸುವ ಒಂದು ಸೇತುವೆಯಂತೆ ಇದೆ. ಇದರ ಸಹಾಯದಿಂದಲೇ ಮನುಷ್ಯನು ತನ್ನಲ್ಲಿ ಲಿಂಗ ವಿಷಯಕ ಜ್ಞಾನವನ್ನೂ ಪ್ರಗತಿಯನ್ನೂ ಉಂಟುಮಾಡಿಕೊಳ್ಳತಕ್ಕದ್ದು.

ಏಕೋತ್ತರ ಶತಸ್ಥಲದಲ್ಲಿ ಹೇಳಲ್ಪಟ್ಟ ಈ ಭಾಗದಲ್ಲಿಯ ವಚನಗಳು ಅವುಗಳಿಗೆ ಸಂಬಂಧಿಸಿದ ಒಂದೊಂದು ಸ್ಥಲದ ಪೂರ್ಣ ವ್ಯಾಖ್ಯೆಗಳಲ್ಲವೆಂಬದನ್ನು ವಾಚಕರು ಲಕ್ಷಿಸಬೇಕು. ಅವುಗಳೆಲ್ಲವನ್ನೂ ಅವರು ಒಟ್ಟಾಗಿ ನಿರೀಕ್ಷಿಸಿ ಆ ಸ್ಥಲದ ಮರ್ಮವನ್ನು ಕಂಡುಹಿಡಿಯತಕ್ಕದ್ದು. ಪ್ರತಿಯೊಂದು ಸ್ಥಲದ ಕಡೆಯಲ್ಲಿ ವಚನಕಾರರು ಒಂದು ಸಂಕ್ಷಿಪ್ತ ವಿವರಣೆಯನ್ನು ಕೊಟ್ಟಿರುತ್ತಾರೆ. ಇದರಲ್ಲಿ ಮುಂದಿನ ಸ್ಥಲದ ಮರ್ಮವನ್ನು ಸೂಚಿಸತಕ್ಕ ಅಭಿಪ್ರಾಯಗಳಿರುತ್ತವೆ. ವಾಚಕರು ಅವುಗಳನ್ನು ಲಕ್ಷಿಸಿ ಆಯಾ ಸ್ಥಲಗಳ ವಿಷಯಗಳನ್ನು ಅರಿತುಕೊಳ್ಳಬೇಕು.



## ಅಂಗಸ್ಥಲಗಳು ಮತ್ತು ಲಿಂಗಸ್ಥಲಗಳು.

ಈ ನೂರೊಂದು ಸ್ಥಲಗಳಲ್ಲಿ ಅಂಗಸ್ಥಲಗಳು ಮತ್ತು ಲಿಂಗಸ್ಥಲಗಳು ಎಂಬ ಎರಡು ಮುಖ್ಯ ಭಾಗಗಳಿರುತ್ತವೆ. ಅಂಗಸ್ಥಲಗಳು ೪೪ ಮತ್ತು ಲಿಂಗಸ್ಥಲಗಳು ೫೭ ಹೀಗೆ ಒಟ್ಟು ೧೦೧ ಸ್ಥಳಗಳಿವೆ.

ಅಂಗಸ್ಥಲಗಳಲ್ಲಿ ಭಕ್ತನು ಯಾವ ರೀತಿಯಾಗಿ ಆಚರಿಸಬೇಕೆಂಬುವರ ವಿವರಣೆ ಇದೆ. ಲಿಂಗಸ್ಥಲಗಳಲ್ಲಿ ಈ ಆಚರಣೆಗಳಿಂದ ಯಾವ ವಿಧದ ಪರಿಣಾಮಗಳು ಮನುಷ್ಯನ ಮೇಲೆ ಉಂಟಾಗುತ್ತವೆಂಬದರ ವಿವರಣೆ ಇದೆ. ಅಂಗಸ್ಥಲಗಳು ಕ್ರಿಯೆಗಳನ್ನು ಹೇಳುತ್ತವೆ ಮತ್ತು ಆ ಕ್ರಿಯೆಗಳಿಂದ ಮನುಷ್ಯನಲ್ಲಿ ಪ್ರಗತಿಯು ಹ್ಯಾಗೆ ಆಗುತ್ತದೆಂಬುದು ಲಿಂಗಸ್ಥಲಗಳಲ್ಲಿ ಹೇಳಲ್ಪಟ್ಟಿರುತ್ತದೆ.

ಅಂಗಸ್ಥಲಗಳಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಮುಖ್ಯ ವಿಭಾಗಗಳಿರುತ್ತವೆ. ಈ ಪ್ರತಿಯೊಂದರಲ್ಲಿಯೂ ವಿಷಯಾನುಸಾರವಾಗಿ ಪುನಃ ಬೇರೆ ಬೇರೆ ವಿಭಾಗಗಳಾಗಿದ್ದು ಅವುಗಳ ಮೂಲಕ ಆಯಾ ಸ್ಥಲಗಳು ವಿವೇಚಿಸಲ್ಪಟ್ಟಿರುತ್ತವೆ. ಈ ಪ್ರಕಾರ ಭಕ್ತಸ್ಥಲದಲ್ಲಿ ೧೫, ಮಹೇಶ್ವರ ಸ್ಥಲದಲ್ಲಿ ೯, ಪ್ರಸಾದಿ ಸ್ಥಲದಲ್ಲಿ ೭, ಪ್ರಾಣಲಿಂಗಿಸ್ಥಲದಲ್ಲಿ ೫, ಶರಣಸ್ಥಲದಲ್ಲಿ ೪, ಐಕ್ಯಸ್ಥಲದಲ್ಲಿ ೪ ಹೀಗೆ ಒಟ್ಟು ೪೪ ಸ್ಥಲಗಳಾಗಿರುತ್ತವೆ.

### ಭಕ್ತಸ್ಥಲ.

ಇದರಲ್ಲಿ ಪಿಂಡಸ್ಥಲವನ್ನು ಮೊದಲುಮಾಡಿಕೊಂಡು ಕಡೆಗೆ ಸಹಜ ಮಾಟಸ್ಥಲದ ವರೆಗೆ ೧೫ ಸ್ಥಲಗಳು ಇರುತ್ತವೆ. ಇವುಗಳಲ್ಲಿ ದೀಕ್ಷೆಯ ವಿಚಾರಗಳು ಮೊದಲು ಹೇಳಲ್ಪಡುವದುಂಟು. ಆ ಮೇಲೆ ಗುರು, ಲಿಂಗ, ಜಂಗಮ, ಪ್ರಸಾದ, ಈ ವಿಷಯಗಳು ತಾತ್ವಿಕ ರೀತಿಯಿಂದ ವಿವೇಚಿಸಲ್ಪಟ್ಟವೆ. ಆ ಮೇಲೆ ಮಾಟಗಳನ್ನು ಅಂದರೆ ಕ್ರಿಯೆಗಳನ್ನು ಹ್ಯಾಗೆ ನಿರ್ವಹಿಸಬೇಕೆಂಬದು ಹೇಳಲ್ಪಟ್ಟಿದೆ. ಈ ಮಾಟದಲ್ಲಿ ಉಪಾಧಿ ಮಾಟ, ನಿರುಪಾಧಿಮಾಟ ಮತ್ತು ಸಹಜಮಾಟ ಎಂದು ಮೂರು ವಿಭಾಗಗಳಿವೆ. ಇವುಗಳಲ್ಲಿ ಸಹಜಮಾಟವೇ ಕ್ರಿಯೆಗಳ ಅಂತಿಮ ಸ್ಥಿತಿಯನ್ನು ತೋರಿಸುತ್ತದೆ. ಹೀಗೆ ಈ ಸ್ಥಲದಲ್ಲಿ ಭಕ್ತನ ಆಚರಣೆಗಳು ಹೇಳಲ್ಪಟ್ಟವೆ.

## ಮಹೇಶ್ವರಸ್ಥಲ.

ಇದರಲ್ಲಿ ಭಕ್ತನು ಒಬ್ಬನೇ ದೇವನಿದ್ದಾನೆಂದು ಭಾವಿಸಿ ತನ್ನ ಕ್ರಿಯೆಗಳನ್ನು ಅತ್ಯಂತ ನಿಷ್ಠೆಯಿಂದ ಮಾಡಬೇಕು. ಈ ಸ್ಥಲದ ಕಡೆಯ ಮಟ್ಟಲು ಭಕ್ತದೇಹಿಕ ಲಿಂಗವಿರುತ್ತದೆ. ಎಂದರೆ ಪರಮಾತ್ಮನು ಭಕ್ತನ ದೇಹವೇ ತನ್ನ ದೇಹವನ್ನಾಗಿ ಮಾಡಿಕೊಂಡಿರುತ್ತಾನೆಂದು ಮಹೇಶ್ವರ ಸ್ಥಲದಲ್ಲಿಯ ಕಡೆಯ ಸ್ಥಿತಿಯ ವರ್ಣನೆ ಇರುತ್ತದೆ.

## ಪ್ರಸಾದಿಸ್ಥಲ.

ಇದರಲ್ಲಿ ಭಕ್ತನು ತನ್ನದನ್ನೆಲ್ಲ ಪರಮಾತ್ಮನಿಗೆ ಅರ್ಪಿಸಿ ಪ್ರಸಾದ ರೂಪಾಗಿ ಜಗತ್ತಿನಲ್ಲಿ ವ್ಯವಹರಿಸುತ್ತಾನೆ. ಈ ಸ್ಥಲದಲ್ಲಿ ಗುರುಲಿಂಗ ಜಂಗಮರ ಮರ್ಮವನ್ನು ಅರಿಯಬೇಕು. ಇದನ್ನು ಅರಿತು ಅರ್ಪ ಣದ ರೀತಿಗಳನ್ನು ಅನುಸರಿಸಿದರೆ, ಅವನು ಪ್ರಸಾದಿಯಾಗುವನು.

ಮೇಲ್ಕಂಡ ಮೂರು ಸ್ಥಲಗಳ ಕ್ರಿಯೆಗಳಿಗೆ ಮಾರ್ಗಕ್ರಿಯೆಗ ಳೆಂಬ ಹೆಸರು. ಮುಂದಿನ ಮೂರು ಸ್ಥಲಗಳ ಕ್ರಿಯೆಗಳಿಗೆ ಮೀರಿದ ಕ್ರಿಯೆಗಳೆಂಬ ಹೆಸರು ಇದೆ.

## ಪ್ರಾಣಲಿಂಗಿಸ್ಥಲ.

ಇದರ ಆರಂಭಸ್ಥಲವು ಪ್ರಾಣಲಿಂಗಾರ್ಚನೆ ಇದ್ದು ಅದರ ಮೂಲಕ ಶಿವಯೋಗವನ್ನು ಸಾಧಿಸಿ ಆ ಮೇಲೆ ಅಂಗಲಿಂಗಸ್ಥಲವನ್ನು ಹೊಂದ ಬೇಕು. ಈ ಕಡೆಯ ಸ್ಥಲದಲ್ಲಿ ಪ್ರಾಣವೇ ಲಿಂಗವಾಗಿ ಆಚರಿಸುವ ದನ್ನು ತಿಳಿಯಬೇಕು.

## ಶರಣಸ್ಥಲ.

ಈ ಸ್ಥಲದ ವಿವೇಚನೆಯಲ್ಲಿ ವಚನಕಾರರು ವಾಡಿಕೆಯಾಗಿ ಜಂಗ ಮರಲ್ಲಿ ಕಂಡುಬರುವ ತಾಮಸ ವೃತ್ತಿಗಳನ್ನು ಟೀಕಿಸುವದುಂಟು. ಶರಣನು ಪ್ರಪಂಚದ ಕೀಳು ವ್ಯವಹಾರಗಳನ್ನು ತೊರೆಯಬೇಕು. ಇದ ರಲ್ಲಿ ಆರಂಭದ ಸ್ಥಲವು ತಾಮಸನಿರಸನವಿದ್ದು, ಕಡೆಯ ಸ್ಥಲವು ಶೀಲ ಸಂಪಾದನೆ ಇರುತ್ತದೆ. ಈ ಕಡೆಯದರಲ್ಲಿ ಶೀಲದ ಅತಿರೇಕಗಳು ಟೀಕಿ ಸಲ್ಪಡುತ್ತವೆ. ಇಂಥವುಗಳನ್ನು ಶರಣನು ತ್ಯಜಿಸಬೇಕು.

## ಐಕ್ಯಸ್ಥಲ.

ಇದರಲ್ಲಿ ಸರ್ವಾಚಾರ ಸಂಪತ್ತು ಮೊದಲನೆಯ ಸ್ಥಲವಾಗಿದ್ದು ಕಡೆಗೆ ಏಕಭಾಜನ ಮತ್ತು ಸಹಭೋಜನ ಸ್ಥಲಗಳನ್ನು ಅಂದರೆ ಲಿಂಗಾಂಗ ಸಾಮ್ಯಸ್ಯತ್ವವನ್ನು ಹೊಂದಬೇಕೆಂದು ಹೇಳಿರುತ್ತದೆ.

ಈ ಎಲ್ಲ ವಿವರಣೆಗಳಲ್ಲಿ ಅಂಗಸ್ಥಲಗಳಲ್ಲಿ ಭಕ್ತನು ಆಚರಿಸಬೇಕಾದ ವರ್ತನೆಗಳೂ ಆಚಾರಗಳೂ ಕ್ರಿಯೆಗಳೂ ಹೇಳಲ್ಪಟ್ಟಿರುವದಾಗಿ ಕಂಡುಬರುತ್ತದೆ. ಈ ಆಚರಣೆಗಳಂತೆ ವರ್ತಿಸಿದ್ದಾದರೆ ಭಕ್ತನಲ್ಲಿಯ ಲಿಂಗದ ಪರಿಸ್ಥಿತಿಯು ಕ್ರಮೇಣ ಪ್ರಗತಿಯನ್ನು ಹೊಂದುತ್ತ ಹೋಗುತ್ತದೆ.

ಲಿಂಗದಲ್ಲಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂಬ ಆರು ವಿಭಾಗಗಳು. ಈ ಲಿಂಗಗಳು ಭಕ್ತನಲ್ಲಿ ಹೆಚ್ಚೆಚ್ಚು ಹೇಗೆ ಜಾಗ್ರತವಾಗುತ್ತ ಹೋಗುತ್ತವೆಂಬದರ ತಿಳುವಳಿಕೆಯು ಲಿಂಗಸ್ಥಲದ ೫೭ ಸ್ಥಲಗಳಲ್ಲಿ ಹೇಳಲ್ಪಡುತ್ತದೆ.

ಆಚಾರಲಿಂಗದಲ್ಲಿ ೯, ಗುರುಲಿಂಗದಲ್ಲಿ ೯, ಶಿವಲಿಂಗದಲ್ಲಿ ೯, ಜಂಗಮಲಿಂಗದಲ್ಲಿ ೧೨, ಪ್ರಸಾದಲಿಂಗದಲ್ಲಿ ೯, ಮಹಾಲಿಂಗದಲ್ಲಿ ೯ ಹೀಗೆ ೫೭ ಲಿಂಗಸ್ಥಲಗಳಿರುತ್ತವೆ. ಈ ಲಿಂಗಗಳ ನಿಜಸ್ಥಿತಿಯನ್ನು ಭಕ್ತನು ಅರಿತು ಆಚರಿಸಬೇಕು.

ಮೇಲೆ ವಿವರಿಸಿದ ಮೇರೆಗೆ ಲಿಂಗಸ್ಥಲಗಳಲ್ಲಿ ೯ ಅಥವಾ ೧೨ ವಿಭಾಗಗಳು ಮಾಡಲ್ಪಟ್ಟಿದ್ದು ಇವುಗಳಲ್ಲಿ ಪುನಃ ಮೂರು ಅಥವಾ ನಾಲ್ಕು ವಿಭಾಗಗಳನ್ನು ಮಾಡಬಹುದು. ಜಂಗಮಲಿಂಗದಲ್ಲಿ ೪ ವಿಭಾಗಗಳು ಮತ್ತು ಉಳಿದವುಗಳಲ್ಲಿ ಮೂರು ಮೂರು ವಿಭಾಗಗಳು ಕಲ್ಪಿಸಲ್ಪಟ್ಟಿರುತ್ತವೆ.

### ಆಚಾರಲಿಂಗ

ಇದು ಗುರೂಪದೇಶ ಸ್ಥಾನವಾದ ದೀಕ್ಷೆಯಿಂದ ಆರಂಭವಾಗಿ ಗುರುಲಿಂಗ ಜಂಗಮಕ್ಕೆ ಸಂಬಂಧಿಸಿದ ಪ್ರಗತಿಯ ರೀತಿಗಳನ್ನು ಹೇಳಿ ಕಡೆಗೆ ಜಂಗಮದ ಅಂತ್ಯ ಸ್ಥಲವಾದ ಪರ ಎಂದರೆ ಭಕ್ತನು ಲಿಂಗ

ಶಕ್ತಿ ಪರವಶ ಹೊಂದುವ ಸ್ಥಿತಿಯನ್ನು ನಿರೂಪಿಸುತ್ತವೆ. ಈ ಸ್ಥಲದಲ್ಲಿಯು ಗುರು, ಲಿಂಗ, ಜಂಗಮ ಈ ಪ್ರತಿಯೊಂದರಲ್ಲಿ ಪುನಃ ಮೂರು ಮೂರು ವಿಭಾಗಗಳಾಗಿದ್ದು ಅವೆಲ್ಲವೂ ಕೂಡಿ ಒಂಬತ್ತು ವಿಭಾಗಗಳು ಆಗಿರುತ್ತವೆ. ಇವೆಲ್ಲವು ಕ್ರಿಯಾರೂಪವಾದ ಆಚಾರ ಲಿಂಗಕ್ಕೆ ಸಂಬಂಧಿಸಿದ ಪ್ರಗತಿಯ ಮೆಟ್ಟಲುಗಳಾಗಿವೆ.

## ಗುರುಲಿಂಗ

ಗುರುಲಿಂಗವು ಆಚಾರ ಲಿಂಗದ ಕ್ರಿಯೆಗಳನ್ನು ಹೆಚ್ಚಿಗೆ ದೃಢಪಡಿಸುತ್ತದೆ. ಇದೇ ಅದರ ಮುಖ್ಯ ಕಾರ್ಯವು. ಇದರಲ್ಲಿ ಕ್ರಿಯೆಗಳನ್ನು ಹೇಳುವ 'ಆಗಮ ಲಿಂಗ'ದ ಮೂರು ವಿಭಾಗಗಳು, ಆಮೇಲೆ ಅವುಗಳಿಂದ ಕಾಯದ ಮೇಲೆ ಉಂಟಾಗುವ ಮೂರು ಪರಿಣಾಮಗಳು, ಆಮೇಲೆ ಮನುಷ್ಯನ ವರ್ತನೆಯಲ್ಲಿಯ ಮೂರು ವಿಭಾಗಗಳಾದ ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಈ ಎಲ್ಲವೂ ಕೂಡಿ ಒಂಬತ್ತು ವಿಭಾಗಗಳಾಗಿವೆ. ಇವುಗಳಲ್ಲಿ ಜ್ಞಾನಾಚಾರವೇ ಗುರುಲಿಂಗಕ್ಕೆ ಕಡೆಯದಾಗಿದೆ. ಗುರುಲಿಂಗವು ಪೂರ್ಣತೆಯನ್ನು ಹೊಂದಿದ ಸ್ಥಿತಿಯೇ ಇದು.

## ಶಿವಲಿಂಗ

ಶಿವಾರ್ಪಣದ ಮೂಲಕ ಕಾಯ, ಇಂದ್ರಿಯ ಮತ್ತು ಪ್ರಾಣ ಇವುಗಳ ಮೇಲೆ ಆಗುವ ಪರಿಣಾಮಗಳು ಮೂರು ಇವೆ. ಇವು ಇಲ್ಲಿ ಹೇಳಲ್ಪಟ್ಟಿವೆ. ಆಮೇಲೆ ಇವುಗಳಿಗನುಸಾರವಾಗಿ ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತಗಳು ಮೂರು ಇವೆ. ಆಮೇಲೆ ಶಿಷ್ಯ ಮತ್ತು ಗುರು ಇವರಲ್ಲಿರುವ ಸಂಬಂಧದ ಮೂರು ವಿಷಯಗಳು ಹೀಗೆ ೯ ವಿಷಯಗಳು ಈ ಸ್ಥಲದಲ್ಲಿ ಹೇಳಲ್ಪಡುತ್ತವೆ. ಇದರಲ್ಲಿ ಕಡೆಗೆ ಶಿಷ್ಯ ಮತ್ತು ಗುರು ಇವರಲ್ಲಿ ಸಾಮರಸ್ಯ ಸ್ಥಿತಿಯು ಪ್ರಾಪ್ತವಾಗುವದು. ಇದೇ ಈ ಸ್ಥಲದ ಕಡೆಯ ಮೆಟ್ಟಲು.

## ಜಂಗಮಲಿಂಗ.

ಈ ಸ್ಥಲದ ವಿಭಾಗಗಳಲ್ಲಿ ಜೀವ ಭಾವವನ್ನು ನಿವೃತ್ತಿಮಾಡಲು ಪ್ರವೃತ್ತವಾದ ಜೀವಾತ್ಮ ಸ್ಥಲವೇ ಮೊದಲನೆಯದು. ಒಲವು ಲಿಂಗ ಎಂಬ ಹೆಸರುಳ್ಳ ಜೀವಾತ್ಮ, ಅಂತರಾತ್ಮ, ಪರಮಾತ್ಮಗಳೂ, ನಿರ್ದೇಹಾಗಮ,

ನಿಭಾರ್ಗವಾಗವು, ನಷ್ಟಾಗವುವೆಂಬ ದೇಹದ ಮೂರು ಪರಿಸ್ಥಿತಿಗಳೂ, ಆ ಮೇಲೆ ಆದಿ ಪ್ರಸಾದಿ, ಅಂತ್ಯಪ್ರಸಾದಿ, ಸೇವ್ಯಪ್ರಸಾದಿಗಳೂ, ಆ ಮೇಲೆ ಸಾಮರಸ್ಯ ಜೋಧಕವಾದ ಪಾದೋದಕದ ಮೂರು ವಿಭಾಗಗಳು ಎಂದರೆ ದೀಕ್ಷಾ ಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ ಇವುಗಳೂ ವಿವರಿಸಲ್ಪಟ್ಟಿರುತ್ತವೆ. ಇವುಗಳಲ್ಲಿ ಕಡೆಯದು ಮಹಾಜ್ಞಾನ ಮುಖದಿಂದ ಪರಮಾನಂದೋದಕವನ್ನು ಪಡೆಯುವದೇ ಇರುತ್ತದೆ. ಇದು ಜ್ಞಾನ ಪಾದೋದಕವೆನಿಸುತ್ತದೆ. ಇದು ಜಂಗಮಲಿಂಗದ ಕಡೆಯ ಮೆಟ್ಟಲು

## ಪ್ರಸಾದಲಿಂಗ.

ಆರಂಭದಲ್ಲಿ ನಿಷ್ಪತ್ತಿ ಲಿಂಗದ ಮೂರು ವಿಭಾಗಗಳು, ಆ ಮೇಲೆ ಆಕಾಶಲಿಂಗದ ಮೂರು ವಿಭಾಗಗಳು, ಆ ಮೇಲೆ ಪ್ರಕಾಶ ಲಿಂಗದ ಮೂರು ವಿಭಾಗಗಳು, ಹೀಗೆ ೯ ಸ್ಥಲಗಳಿರುತ್ತವೆ. ಮೊದಲು ಭಕ್ತನು ಕ್ರಿಯೆಗಳ ನಿಷ್ಪತ್ತಿಯಿಂದ ಆರಂಭಿಸಿ ಕಡೆಗೆ ಜ್ಞಾನ ಪ್ರಕಾಶವನ್ನು ಹೊಂದಬೇಕು. ಇವು ಈ ಪ್ರಸಾದಲಿಂಗದಲ್ಲಿ ನಿರೂಪಿಸಲ್ಪಟ್ಟ ವಿಷಯುಗಳಾಗಿವೆ. ಅವು ಗಳಲ್ಲಿ ಶರಣನ ಜ್ಞಾನ ಪ್ರಕಾಶವೇ ಕಡೆಯ ಸ್ಥಿತಿಯಾಗಿದೆ.

## ಮಹಾಲಿಂಗ

ಇದರಲ್ಲಿ ಒಂಬತ್ತು ವಿಭಾಗಗಳಿರುತ್ತವೆ. ಈ ಒಂಬತ್ತು ವಿಭಾಗಗಳನ್ನು ಪುನಃ ಮೂರು ವಿಭಾಗಗಳಾಗಿ ವಿಂಗಡಿಸಬಹುದಾಗಿದೆ.

ಮೊದಲನೆಯ ವಿಭಾಗದಲ್ಲಿ ಕೊಂಡುನು ಪ್ರಸಾದಿಸ್ಥಲ, ನಿಂದು ದೋಗರಸ್ಥಲ, ಚರಾಚರ ನಾಸ್ತಿಸ್ಥಲ, ಇವುಗಳು ಬರುತ್ತವೆ. ಇವುಗಳಲ್ಲಿ ಅಂಗದ ಉತ್ಕೃಷ್ಟ ಸ್ಥಿತಿಗಳಾದ ಸೃಷ್ಟಿ, ಸ್ಥಿರತೆ ಮತ್ತು ಲಿಂಗದೊಡನೆ ಐಕ್ಯತೆ ಇವುಗಳು ಅನುಕ್ರಮವಾಗಿ ಹೇಳಲ್ಪಡುತ್ತವೆ. ಎರಡನೆಯ ವಿಭಾಗದಲ್ಲಿ ಬರುವ ಭಾಂಡಸ್ಥಲ, ಭಾಜನಸ್ಥಲ, ಅಂಗಲೇಪನಸ್ಥಲ, ಇವುಗಳಲ್ಲಿ ಅಂಗ ಲಿಂಗ ಸಂಬಂಧಗಳು ಹೇಳಲ್ಪಡುತ್ತವೆ. ಮೂರನೆಯ ವಿಭಾಗದಲ್ಲಿ ಬರುವ ಸ್ವಯುಪರವರಿಯುದಸ್ಥಲ, ಭಾವಾಭಾವ ನಷ್ಟಸ್ಥಲ, ಮತ್ತು ಜ್ಞಾನಶೂನ್ಯಸ್ಥಲ ಇವುಗಳಲ್ಲಿ ಶೂನ್ಯಸ್ಥಲಗಳ ವಿಚಾರಗಳು ಹೇಳಲ್ಪಡುತ್ತವೆ. ಇವುಗಳಲ್ಲಿ ಜ್ಞಾನಶೂನ್ಯವೇ ಕಡೆಯ ಸ್ಥಳವಾಗಿದೆ

ಈ ಪ್ರಕಾರ ನೂರೊಂದು ಸ್ಥಲಗಳಲ್ಲಿ ಆರಂಭದಲ್ಲಿ ಪಿಂಡಸ್ಥಲವು ವಿವರಿಸಲ್ಪಟ್ಟು ಅಲ್ಲಿಂದ ಮುಂದೆ ಅದರ ಕ್ರಿಯೆಗಳಾವವು, ಆ ಕ್ರಿಯೆಗಳಿಂದ ಲಿಂಗದ ಪ್ರಗತಿಯು ಹೇಗೆ ಹೇಗೆ ಆಗುತ್ತ ಹೋಗುತ್ತದೆ, ಈ ಮೊದಲಾದ ಮಹತ್ವದ ವಿಷಯಗಳು ಕ್ರಮವಾಗಿ ಹೇಳಲ್ಪಡುತ್ತವೆ. ಈ ಪ್ರಕಾರ ಮನುಷ್ಯನು ವರ್ತಿಸುತ್ತ ಹೋದಲ್ಲಿ ಯಾವ ಮೂಲಸ್ಥಲದಿಂದ ಅವನು ಮೊದಲು ಹೊರಟಿದ್ದನೋ ಅದರಲ್ಲಿಯೇ ಕಡೆಗೆ ಲಯಹೊಂದುವನು. ಈ ಕಡೆಯದೇ ಲಿಂಗಾಂಗ ಸಾಮ್ಯೈಕ್ಯವು.

ಈ ವಿಷಯಗಳ ವಿಸ್ತಾರವಾದ ವಿವೇಚನೆಯು ಏಕೋತ್ತರ ಶತಸ್ಥಲ ಅಥವಾ ನೂರೊಂದು ಸ್ಥಲಗಳಲ್ಲಿ ಬಂದಿರುತ್ತದೆ.

ಈ ವಿಷಯದಲ್ಲಿ ಕೆಲವು ವಿಶೇಷ ಸಂಗತಿಗಳನ್ನು ನಾನು ಇಲ್ಲಿ ಉಲ್ಲೇಖಿಸುವದು ಅವಶ್ಯವಾಗಿರುತ್ತದೆ. ಅವು ಯಾವವೆಂದರೆ:—

ಷಟ್‌ಸ್ಥಲಗಳ ಮೂಲ ತಾತ್ವಿಕ ವಿವರಣೆಯಲ್ಲಿ ಅಂದರೆ ಆರಂಭದ ೧, ೨, ೩, ೬, ೧೪, ೩೬ ಈ ಸ್ಥಲಗಳ ನಿರೂಪಣೆಯಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗನುಸಾರವಾಗಿ ಹೆಸರುಗಳು ಇವೆ. ಇವು ಇಷ್ಟ, ಪ್ರಾಣ, ಭಾವವೆಂತಲೂ, ಅಥವಾ ಕಾಯ, ಕರಣ, ಭಾವವೆಂತಲೂ ಬಹುತರವಾಗಿ ಇರುವದು ಕಂಡುಬರುತ್ತದೆ. ಆದರೆ ಏಕೋತ್ತರ ಶತಸ್ಥಲದಲ್ಲಿ ಮಾಡಿದ ವಿಭಾಗಗಳ ಹೆಸರುಗಳು ಮಾತ್ರ ಬಹುಕಡೆಗೆ ಬೇರೆ ಇರುವದಾಗಿ ಕಂಡುಬರುತ್ತದೆ. ಅವು ಆವವೆಂದರೆ:—

೧. (ಅ) ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ.
   (ಬ) ಕ್ರಿಯಾಗಮ, ಭಾವಾಗಮ, ಜ್ಞಾನಾಗಮ.
   (ಕ) ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನನಿಷ್ಪತ್ತಿ.
   (ಡ) ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ.
   (ಇ) ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ.
   (ಫ) ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ.

ಇಲ್ಲಿ ಭಾವ ಈ ಶಬ್ದವು ಕಡೆಯಲ್ಲಿರದೆ ಮಧ್ಯದಲ್ಲಿ ಬಂದಿದೆ.

ಅಲ್ಲದೆ ಕೆಳಗೆ ಕಾಣಿಸಿದಂತೆ ಬೇರೆ ಹೆಸರಿನ ವಿಭಾಗಗಳೂ ಇರುತ್ತವೆ. ಅವು ಯಾವವೆಂದರೆ:—

೧. ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ.

೨. ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ.

ಇವುಗಳಲ್ಲಿ ೧ನೇ ೨ನೇ ವಿಭಾಗಗಳು ಮೂಲ ಷಟ್‌ಸ್ಥಲಗಳಲ್ಲಿ ಯಂತೆಯೇ ಇವೆ.

ಈ ಎಲ್ಲ ವಿಭಾಗಗಳು ಶಾಬ್ದಿಕ ಭೇದಗಳಾಗಿವೆಯೇ ಹೊರತು ಅವುಗಳ ವಿವೇಚನೆಯಲ್ಲಿ ಮಾತ್ರ ವಚನಕಾರರು ಯಾವ ಬಗೆಯ ಭೇದವನ್ನು ಮಾಡಿಲ್ಲ. ಅವುಗಳ ನಿರೂಪಣೆಯನ್ನು ಅವರು ಸ್ಥೂಲ, ಸೂಕ್ಷ್ಮ, ಕಾರಣ ಈ ಶರೀರಗಳ ವ್ಯಾಪಾರಗಳಿಗನುಸಾರವಾಗಿಯೇ ಮಾಡುತ್ತಾರೆ.

ನೂರೊಂದು ಸ್ಥಲಗಳಲ್ಲಿಯ ಮೇಲ್ಕಂಡ ವಿಭಾಗಗಳು ಕ್ರಿಯಾದೃಷ್ಟಿಯಿಂದ ಮಾಡಲ್ಪಟ್ಟಿದ್ದಾಗಿ ತೋರುತ್ತದೆ. ಇಲ್ಲಿ ಭಾವ ಎಂಬುದು ೨ನೆಯ ಸ್ಥಲದಲ್ಲಿ ಬರುವ ೨ನೆಯದಾಗಿ ಹೇಳಲ್ಪಟ್ಟಿದೆ. ಇಲ್ಲಿ ಇದರ ಅರ್ಥವು ಮನ, ಚಿತ್ತ ಎಂದು ಮಾತ್ರ ಇದೆ. ಇದು ಇಲ್ಲಿ ಕಾರಣ ಶರೀರಕ್ಕೆ ಸಂಬಂಧಪಟ್ಟಿರದೆ ಸೂಕ್ಷ್ಮ ಸ್ಥಲಕ್ಕೆ ಸಂಬಂಧಿಸಿದ ಕರಣಗಳು, ಇಂದ್ರಿಯಗಳು ಇವುಗಳಿಗೆ ಸಂಬಂಧಪಟ್ಟಿದೆ.

ಆದರೆ ೩೬ ಸ್ಥಲಗಳುಳ್ಳ ಷಟ್‌ಸ್ಥಲದ ವಿವೇಚನೆಯಲ್ಲಿ ಬರುವ ಭಾವವು ೩ನೆಯದಾದ ಕಾರಣಶರೀರಕ್ಕೆ ಸಂಬಂಧಪಟ್ಟು ಅದಕ್ಕೆ ಜ್ಞಾನ, ತೃಪ್ತಿ, ಪರಿಣಾಮ ಎಂದು ವಚನಕಾರರು ಅರ್ಥವನ್ನು ಕೊಟ್ಟಿರುತ್ತಾರೆ. ಹೀಗೆ ಭಾವ ಶಬ್ದಕ್ಕೆ ಎರಡು ಅರ್ಥಗಳಿದ್ದು ಅವುಗಳನ್ನು ನಾವು ಇಲ್ಲಿ ಏಕೋತ್ತರದ ವಿವೇಚನೆಯಲ್ಲಿ ವಿಂಗಡಿಸುವದು ಅವಶ್ಯವಿರುತ್ತದೆ.

ನೂರೊಂದು ಸ್ಥಲಗಳ ವಿವೇಚನೆಯಲ್ಲಿ ಕೆಲವು ಕಡೆಗೆ ಸ್ಥಲಗಳ ಹೆಸರುಗಳು ಪೂರ್ಣ ಕನ್ನಡ ಶಬ್ದಗಳಿರುವದು ಕಂಡುಬರುತ್ತದೆ. ಬೇರೆ ಕೆಲವೆಡೆ ಕನ್ನಡ ಮಿಶ್ರಿತ ಶಬ್ದಗಳೂ ಇರುತ್ತವೆ. ಉದಾ:— ಉಪಾಧಿ

ಮಾಟಸ್ಥಲ, ನಿರುಪಾಧಿಮಾಟಸ್ಥಲ, ಸಹಜಮಾಟಸ್ಥಲ, ಕೊಂಡುದು ಪ್ರಸಾದಿಸ್ಥಲ, ನಿಂದುದೋಗರಸ್ಥಲ, ಒಲಿಪ್ರಲಿಂಗ, ಇತ್ಯಾದಿ. ಆದರೆ ಸಂಸ್ಕೃತ ಗ್ರಂಥಗಳಲ್ಲಿ ಈ ಕನ್ನಡ ಶಬ್ದಗಳ ಬದಲು ಪೂರ್ಣ ಸಂಸ್ಕೃತ ಶಬ್ದಗಳೇ ಉಪಯೋಗಿಸಲ್ಪಟ್ಟಿರುತ್ತವೆ.

ನಾವು ಇಲ್ಲಿ ನೂರೊಂದುಸ್ಥಲದ ವಿವೇಚನೆಯಲ್ಲಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ ಮೊದಲಾದ ಪ್ರತಿಯೊಂದು ಸ್ಥಲದ ಆರಂಭದಲ್ಲಿ ಆಯಾ ಸ್ಥಲಗಳ ರೀತಿ, ಮರ್ಮ, ವಿಚಾರಗಳನ್ನು ಸೂಚನಾತ್ಮಕವಾಗಿ ಮಾತ್ರ ಕೊಟ್ಟಿರುತ್ತೇವೆ. ಅವುಗಳನ್ನು ವಾಚಕರು ಲಕ್ಷಿಸಿ ಆ ದೃಷ್ಟಿಯಿಂದ ಪ್ರತಿಯೊಂದು ಸ್ಥಲದಲ್ಲಿ ಹೇಳಿದ ವಚನಗಳನ್ನು ಅವರು ಅವಲೋಕಿಸಿ. ಅವುಗಳ ಮರ್ಮವನ್ನು ಅರಿತುಕೊಳ್ಳಬೇಕೆಂದು ನಾವು ಸೂಚಿಸುತ್ತೇವೆ.

# ಅಂಗಸ್ಥಲಗಳು.

ಈ ಸ್ಥಲಗಳು ೪೪ ಇದ್ದು ಇವುಗಳಲ್ಲಿ ಷಟ್‌ಸ್ಥಲಗಳ ಪ್ರಕಾ[ರ] ಆರು ವಿಭಾಗಗಳಿವೆ. ಇವುಗಳಲ್ಲಿ ಮೊದಲನೆಯದು ಭಕ್ತಸ್ಥಲವು.

## ಭಕ್ತಸ್ಥಲ.

ವಿವರಣೆ:— ಭಕ್ತನ ಆಚರಣೆಯಲ್ಲಿ ೧೫ ಸ್ಥಲಗಳಿರುತ್ತವೆ. ಈ ಆಚರಣೆಗಳಲ್ಲಿ ೪ ವಿಭಾಗಗಳನ್ನು ನಾವು ಕಲ್ಪಿಸಬಹುದು. ಅವು ಯಾವ ವೆಂದರೆ ಮೊದಲನೆಯ ವಿಭಾಗದಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ ಮತ್ತು ಸಂಸಾರ ಹೇಯಸ್ಥಲ ಇವು ಬರುತ್ತವೆ. ಎರಡನೆಯ ವಿಭಾಗದಲ್ಲಿ ಗುರುಕರುಣಸ್ಥಲ, ಲಿಂಗಧಾರಣಸ್ಥಲ, ವಿಭೂತಿಸ್ಥಲ, ರುದ್ರಾಕ್ಷಿ ಸ್ಥಲ, ಪಂಚಾಕ್ಷರಿಸ್ಥಲ, ಭಕ್ತಿಸ್ಥಲ, ಈ ಆರು ಸ್ಥಲಗಳು ಬರುತ್ತವೆ. ಮೂರನೆಯ ವಿಭಾಗದಲ್ಲಿ ಉಭಯಸ್ಥಲ, ತ್ರಿವಿಧ ಸಂಪತ್ತಿಸ್ಥಲ, ಚತು ರ್ವಿಧ ಸಾರಾಯಸ್ಥಲ ಈ ಮೂರು ಬರುವವು. ಮತ್ತು ನಾಲ್ಕನೆಯ ವಿಭಾಗದಲ್ಲಿ ಉಪಾಧಿಮಾಟಸ್ಥಲ, ನಿರುಪಾಧಿಮಾಟಸ್ಥಲ, ಸಹಜಮಾಟ ಸ್ಥಲ ಈ ಮೂರು ಬರುವವು.

ಹೇಗೆ ಜಗತ್ತಿನಲ್ಲೆಲ್ಲ ಮೊದಲು ಸರ್ವರೂಪ ನಿರಾಲಂಬ ಸ್ಥಿತಿ ಯಲ್ಲಿ ಪರಮಾತ್ಮನು ಇರುವನೋ, ಹಾಗೆಯೇ ಮನುಷ್ಯನಲ್ಲಿಯೂ ಅವನು ಪ್ರಕಟವಾಗದೆ ನಿರಾಕಾರ ಸ್ಥಿತಿಯಲ್ಲಿ ಇರುತ್ತಾನೆ. ಈ ಸ್ಥಿತಿಯು ಪಿಂಡಸ್ಥಲವು. ಆ ಮೇಲೆ ಮುಂದೆ ಈ ಜಗತ್ತಿನಲ್ಲಿ ಮೂಲ ಚಿತ್ತು ಹೇಗೆ ಉದಯವಾಯಿತೋ ಹಾಗೆಯೇ ಮನುಷ್ಯನಲ್ಲಿಯೂ ಚಿತ್ತು ಉದಯವಾಗಲು ಅದೇ ಜ್ಞಾನೋದಯವೆನಿಸಿಕೊಳ್ಳುವದು. ಮುಂದೆ ಈ ಜ್ಞಾನೋದಯದಿಂದ ಮನುಷ್ಯನು ತನ್ನ ಹೀನತರದ ಸ್ಥಿತಿಯನ್ನು ತಿಳಿದು ಶ್ರೇಷ್ಠ ಸ್ಥಿತಿಯನ್ನು ಹೊಂದಲು ಅಪೇಕ್ಷೆಯುಳ್ಳವನಾಗುವನು. ಇವು ಗಳಿಗೆ ಅನುಕ್ರಮವಾಗಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಮತ್ತು ಸಂಸಾರ ಹೇಯಸ್ಥಲ ಎಂಬ ಹೆಸರುಗಳಿರುತ್ತವೆ. ಈ ಸ್ಥಲಗಳು ಭಕ್ತನಲ್ಲಿಯ ಪ್ರಗತಿಯ ಪ್ರಥಮ ಚಿನ್ಹಗಳಾಗಿವೆ. ಇದು ಮೊದಲನೆಯ ವಿಭಾಗವು.

ಆ ಮೇಲೆ ಮನುಷ್ಯನು ಹೆಚ್ಚಿನ ಸ್ಥಿತಿಯನ್ನು ಹೊಂದಲು ಅಪೇ ಕ್ಷಿಸಿ ಗುರುವಿನ ಮೂಲಕ ದೀಕ್ಷೆಯನ್ನು ಹೊಂದುವನು. ಇಲ್ಲಿ ಅವನು

ಲಿಂಗ, ವಿಭೂತಿ, ರುದ್ರಾಕ್ಷಿ ಮಂತ್ರಗಳಿಂದ ಕೂಡಿದವನಾಗಿ ತನ್ನ ಪೂರ್ವ ಸ್ಥಿತಿಯನ್ನು ಬಿಟ್ಟು ಭಕ್ತಿಭಾವದಿಂದ ಆಚರಿಸುವನು. ಇದು ಭಕ್ತಸ್ಥಲದಲ್ಲಿಯ ಎರಡನೆಯ ವಿಭಾಗವು.

ತರುವಾಯ ಅವನು ತನ್ನ ದೇಹ ಮತ್ತು ತನ್ನ ಪ್ರಾಣಗಳಲ್ಲಿ ಕರ್ತೃ ಭೃತ್ಯಭಾವವನ್ನು ಹೊಂದಿ ಆಚರಿಸುತ್ತಾನೆ. ತನ್ನ ದೇಹವೇ ಭಕ್ತನೆಂತಲೂ, ಪ್ರಾಣವೇ ಜಂಗಮವೆಂತಲೂ ಭಾವಿಸಿ ವರ್ತಿಸುತ್ತಾನೆ. ಇದು ಭಕ್ತ ಜಂಗಮವನ್ನು ಒಳಕೊಂಡ ಉಭಯ ಸ್ಥಲವು. ಹೀಗೆ ಭಕ್ತ ಜಂಗಮವನ್ನು ತಿಳಿದು ತನ್ನ ತನುವಿನಲ್ಲಿ ಆಚಾರ, ತನ್ನ ಪ್ರಾಣದಲ್ಲಿ ಲಿಂಗ, ಮತ್ತು ತನ್ನ ಅರಿವಿನಲ್ಲಿ ಜಂಗಮವನ್ನು ಸಂಬಂಧಿಸಿಕೊಂಡು ಆಚರಿಸಬೇಕು. ಇಲ್ಲಿ ಚಿಚ್ಛಕ್ತಿಮಯವಾದ ಜ್ಞಾನವೇ ಜಂಗಮವೆಂದು ತಿಳಿಯಬೇಕು. ಇದು ತ್ರಿವಿಧ ಸಂಪತ್ತುಸ್ಥಲವಾಗಿದೆ. ಹೀಗೆ ಅಂಗದಲ್ಲಿ ಗುರು, ಮನದಲ್ಲಿ ಲಿಂಗ, ಅರಿವಿನಲ್ಲಿ ಜಂಗಮವನ್ನು ಸಂಬಂಧಿಸಿಕೊಂಡು ಆಚರಿಸಿದಲ್ಲಿ ಅವನಲ್ಲಿ ಪ್ರಸಾದವು ಹೊರಹೊಮ್ಮಿ ಅದರ ಪ್ರಭಾವದಲ್ಲಿಯೇ ಅವನು ಎಲ್ಲ ಬಗೆಯ ಕ್ರಿಯೆಗಳನ್ನು ಮಾಡುವನು. ಇದು ಚತುರ್ವಿಧ ಸಾರಾಯಸ್ಥಲವು. ಇದು ಭಕ್ತಸ್ಥಲದಲ್ಲಿಯ ಮೂರನೆಯ ವಿಭಾಗವಾಗಿದೆ.

ಇಂತಹ ಭಕ್ತನು ಆಚರಿಸುವ ಕ್ರಿಯೆಗಳಲ್ಲಿ ಮುಂದೆ ಮೂರು ವಿಧಗಳು ಕಲ್ಪಿಸಲ್ಪಟ್ಟಿವೆ. ಅವು ಉಪಾಧಿಮಾಟ, ನಿರುಪಾಧಿಮಾಟ ಮತ್ತು ಸಹಜಮಾಟ ಎಂದು ಹೇಳಲ್ಪಟ್ಟಿವೆ. ಸಕಲರ ಹಿತಕ್ಕಾಗಿ ಕಾರ್ಯ ಮಾಡುವದೇ ಮೊದಲನೆಯದಾದ ಉಪಾಧಿಮಾಟವೆನಿಸುತ್ತದೆ. ಕೇವಲ ದಾಸೋಹ ಭಾವದಿಂದ ಕಾರ್ಯಮಾಡುವದೇ ನಿರುಪಾಧಿಮಾಟವು. ಮತ್ತು ಸಮರಸಭಾವದಿಂದ ಅಂದರೆ, ತಾನು, ತಾನು ಮಾಡುವ ಕ್ರಿಯೆ, ಮತ್ತು ಮಾಡಿಸಿಕೊಂಬ ವಸ್ತು ಇವುಗಳಲ್ಲಿ ಅವಿನಾಭಾವದಿಂದ ಕಾರ್ಯಮಾಡುವದೇ ಸಹಜಮಾಟವಾಗಿದೆ. ಇದು ಅವನ ಕ್ರಿಯೆಗಳ ಅಂತಿಮ ಸ್ಥಿತಿಯು. ಇದು ನಾಲ್ಕನೆಯ ವಿಭಾಗವು.

ಹೀಗೆ ಭಕ್ತಸ್ಥಲದಲ್ಲಿ ೧೫ ಸ್ಥಲಗಳನ್ನು ವಚನಕಾರರು ಕಲ್ಪಿಸಿ ಭಕ್ತನಾರೆಂಬುದನ್ನು ಕುರಿತು ವಿವೇಚಿಸಿರುವರು.

---

# ೧. ಪಿಂಡಸ್ಥಲ.

(೧) ಶಿಲೆಯೊಳಗಣ ಪಾವಕನಂತೆ ಉದಕದೊಳಗಣ ಪ್ರತಿಬಿಂ
ಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಶಬ್ದದಂತೆ,
ಗುಹೇಶ್ವರಾ ನಿಮ್ಮ ಶರಣ ಸಂಬಂಧ.

ಟೀಕು:– ಶಿಲೆಯೊಳಗಿದ್ದ ಅಗ್ನಿ ಮೈದೋರದ ಹಾಗೆ, ಪರಬ್ರ
ಪಿಂಡಸ್ಥಲವಾಗಿಯೂ ಕಾಣಿಸಬಾರದೆಂಬುದೀಗ ಶಿಲೆಯೊಳಗಣ ಪಾವಕ
ನಂತೆ ಎಂಬ ಶಬ್ದಕ್ಕರ್ಥ. ಅವುದಾನೊಂದು ಪ್ರತಿಬಿಂಬವು ಉದಕ
ದೊಳಗಿದ್ದರೂ, ಉದಕದ ಗುಣಧರ್ಮ ಕರ್ಮವ ಹೊದ್ದದ ಹಾಗೆ, ಆ
ಪರಬ್ರಹ್ಮವು ಪಿಂಡಸ್ಥವಾಗಿದ್ದರೂ ಆ ಪಿಂಡದ ಗುಣಧರ್ಮ ಕರ್ಮವ
ಹೊದ್ದದಿಪ್ಪುದೀಗ ಉದಕದೊಳಗಣ ಪ್ರತಿಬಿಂಬದಂತೆ ಎಂಬ ಶಬ್ದ
ಕ್ಕರ್ಥ. ಬೀಜದೊಳಗಿಪ್ಪ ವೃಕ್ಷದ ಹಾಗೆ, ಆ ಪರಬ್ರಹ್ಮವು ಪಿಂಡ
ಮಧ್ಯದಲ್ಲಿ ಗೂಢವಾಗಿಪ್ಪುದೆಂಬುದೀಗ ಬೀಜದೊಳಗಣ ವೃಕ್ಷದಂತೆ
ಎಂಬ ಶಬ್ದಕ್ಕರ್ಥ. ಶಬ್ದದೊಳಗೆ ನಿಶ್ಶಬ್ದವಿಪ್ಪುದನು ಭೇದಿಸಬಾರದ
ಹಾಗೆ ಆ ಪರಬ್ರಹ್ಮವು ಪಿಂಡಸ್ಥಲವಾಗಿದ್ದರೂ ಅಭೇದವಾಗಿಪ್ಪುದೀಗ
ಶಬ್ದದೊಳಗಣ ನಿಶ್ಶಬ್ದದಂತೆ ಎಂಬ ಶಬ್ದಕ್ಕರ್ಥ.

(೨) ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು. ಸ
ಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮ
ದಂತೆ ಇದ್ದಿತ್ತು. ಕೂಡಲ ಸಂಗಮದೇವ ಕನ್ನೆಯ ಸ್ನೇಹದ
ತಿದ್ದಿತ್ತು.

(೩) ಫಲದೊಳಗಣ ಮಧುರದ ಗೋಪ್ಯದಂತಿದ್ದಿತ್ತು. ಚಂ
ಕಾಂತದ ಉದಕದ ಪರಿಯಂತಿದ್ದಿತ್ತು. ಶಿಸು ಕಂಡ ಕನಸಿನ ತೆರದ
ದ್ದಿತ್ತು ಕೂಡಲ ಚನ್ನಸಂಗಯ್ಯ ನಿಮ್ಮ ನಿಲವು.

(೪) ಮರೀಚಿಯೊಳಗಡಗಿದ ಬಿಸಿಲಿನಂತೆ ಇದ್ದಿತ್ತು. ಕ್ಷೀರದೊ
ಳಗಣ ತುಪ್ಪದಂತಿದ್ದಿತ್ತು, ಚಿತ್ರಿಕನೊಳಡಗಿದ ಚಿತ್ರದಂತಿದ್ದಿತ್ತು. ಅ
ಯೊಳಗಡಗಿದ ತೇಜದಂತಿದ್ದಿತ್ತು. ನುಡಿಯೊಳಡಗಿದ ಅರ್ಥದಂತಿದ್ದಿತ್ತು
ಕೂಡಲ ಚನ್ನಸಂಗಯ್ಯ ನಿಮ್ಮ ನಿಲವು.

ಇಂತಪ್ಪ ಮಹತ್ ಪಿಂಡಸ್ಥಲವು ತನ್ನ ಲೀಲೆಯಿಂ ತನ್ನೊಳಡಗಿದ ಸಕಲ ನಿಷ್ಕಲಾತ್ಮಕ ತತ್ವಂಗಳನುಂಟುಮಾಡಿ ತೋರಬೇಕೆಂದಿಚ್ಛಿಸಲು ಅಲ್ಲಿ ಜ್ಞಾನೋದಯವಾಯಿತ್ತಾಗಿ ಮುಂದೆ ಪಿಂಡಜ್ಞಾನ ಸ್ಥಲವಾದುದು.

---

## ೨. ಪಿಂಡಜ್ಞಾನ ಸ್ಥಲ.

(೧) ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ಸಾಕಾರವಾಗಿರ್ದಲ್ಲಿ ನಾನು ವೃಷಭನೆಂದು ವಾಹನವಾಗಿರ್ದೆ ಕಾಣಾ. ಅಯ್ಯಾ ನೀನೆನ್ನ ಭವವ ಕೊಂದಿಹೆನೆಂದು ಬಂದಲ್ಲಿ ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ ಕೂಡಲ ಸಂಗಮದೇವಾ.

(೨) ಅಂಕುರ, ಫಲ, ತರು, ಕುಸುಮ, ಪರಿಮಳ, ಫಳರಸ ಸಾರಾಯ ಇನಿತಿನಿತೆಲ್ಲಿರ್ದುದೋ, ಬೀಜ ಮೊಳೆಮೊರೆದಂದು? ನಾಭಿಗಳಿಯದ ಪಶುವಿನ ಅಮೃತವೆಲ್ಲಿರ್ದುದೋ, ವೃಷಭ ಮುಟ್ಟದಂದು? ಜಲಧಿಯ ಸಿಂಪಿನ ರತ್ನವೆಲ್ಲಿರ್ದುದೋ, ಸ್ವಾತಿಯ ಸಲಿಲವಿಲ್ಲದಂದು? ಸಪ್ತಸ್ವರ ಅಕ್ಷರ ಪುಸ್ತಕ ವರ್ಣಕವೆಲ್ಲಿರ್ದುದೋ, ಜ್ಞಾನ ಉದಯಿಸದಂದು? ತ್ರಿಜಗದುತ್ಪತ್ತಿ ಸ್ಥಿತಿ ಲಯ ಕಾರಣ ಸಚರಾಚರ ಗಂಭೀರವೆಲ್ಲಿರ್ದುದೋ, ಶಿವನ ಅಷ್ಟ ತನು ಮೂರ್ತಿಗಳಿಲ್ಲದಂದು? ಶರಣಪಥ ಲಿಂಗೈಕ್ಯವೆಲ್ಲಿರ್ದುದೋ ಆರಾಧ್ಯಲಿಂಗ ಸಕಳೇಶ್ವರ ಮಹಾ ಘನಲಿಂಗವಿಹನೆಂದು ಅರಿಯದಂದು?

(೩) ಅಯ್ಯಾ, ನೀನು ನಿರಾಕ ನಿರ್ಮಾಯನಾಗಿಪ್ಪೆಯಾಗಿ, ಆಕಾಶ ಪ್ರಕಾರವಿಲ್ಲದಂದು, ಸಾಕ್ಷಿ ಸಭೆಗಳಿಲ್ಲದಂದು, ಸಚರಾಚರಂಗಳೆಲ್ಲ ರಚನೆಗೆ ಬಾರದಂದು, ಆಧಾರಮೊಳಗಣ ವಿಭೂತಿಯನೆ ತೆಗೆದು ಭೂಮಿಯ ನೆಲೆಗೊಳಿಸಿ, ಪಂಚಾಶತ್ ಕೋಟಿ ವಿಸ್ತೀರ್ಣ ಭೂಮಂಡಲಕ್ಕೆ ಸುತ್ತಿ ಹರಿವವು ಸಪ್ತ ಸಾಗರಂಗಳು. ಎಂಬತ್ತಾರು ಕೋಟಿಯೂ ತೊಂಬತ್ತೇಳು

ಲಕ್ಷ ಕಾಲ ಭುವನ ಮಂಡಲಕ್ಕೆ ಉದಯ ಬ್ರಹ್ಮಾಂಡ ಅರುವತ್ತಾ
ಕೋಟಿ ತಾರಾ ಮಂಡಲವೆಂದರೆ, ಬೆಳಗಿ ತೋರಿದ ಹನ್ನೆರಡು ಜ್ಯೋತಿ
ನಿಲಿಸಿ ತೋರಿಸಿದ ಹದಿನಾಲ್ಕು ಭುವನವ. ಈ ಜಗದ ಜಂಗು
ಕಾವ ಗೋವಳ ತಾನಾಗಿ ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳಿಗೆ ಪ್ರಾ
ನಾಥ ತಾನಾಗಿ, ಸಕಲದ ಅಳಿವಿನ, ಉಳಿವಿನ ನಿಂದ ನಿಲವ ನೋ
ಕಂಡೆ. _ಗುಹೇಶ್ವರಾ ನಿಮ್ಮ ಶ್ರೀ ಪಾದಕ್ಕೆ ನಮೋನಮೋ ಎ
ತಿರ್ದೆನು.

ಇಂತು ಪಿಂಡ ಜ್ಞಾನ ಉದಯವಾದ ಮಹಾತ್ಮನು ನಿತ್ಯಾನಿತ್ಯ
ವಿವೇಕವನರಿದು ಅನಿತ್ಯವಾದ ಸಂಸಾರ ಹೇಯೋಪಾಯವಂ ತಾನು
ನಿರಸನವಂ ಮಾಡುತ್ತಿರಲು ಮುಂದೆ ಸಂಸಾರ ಹೇಯ ಸ್ಥಲವಾದುದು.

---

## ೩. ಸಂಸಾರ ಹೇಯ ಸ್ಥಲ.

(೧) ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ. ಸಂಸಾರವೆಂಬ
ರಾಹು ಸರ್ವ ಗ್ರಾಸಿಯಾಗಿ ನುಂಗಿತ್ತಯ್ಯ. ಇಂತೆನ್ನ ದೇಹಕ್ಕೆ ಗ್ರಹ
ಣವಾಯಿತ್ತು. ಇನ್ನೆಂದಿಂಗೆ ಮೋಕ್ಷವಹುದೋ ಕೂಡಲ ಸಂಗಮದೇವಾ!

(೨) ಒಂದು ಯೋನಿಯಲ್ಲಿ ಬಂದ ದುಃಖವ ನಾನೆಂದೆಂದಿಗೂ
ಕಳೆಯಲಾರೆ. ಎಂಬತ್ತು ನಾಲ್ಕು ಲಕ್ಷ ಯೋನಿ ಎಂದರೆ ಇನ್ನೇವೆನಯ್ಯಾ!
ನೊಂದೆನಯ್ಯ, ನೊಂದೆನಯ್ಯ, ಮತ್ತೊಂದನರಿಯದ ಶಿಸು ಬಂದೆ
ನಯ್ಯ! ಶಿವಶಿವಾ, ಎನ್ನ ಕಂದ ನೀ ಬಾರೆಂದು ಕಂಬನಿಯ ತೊಡೆದು
ಎತ್ತಿ ಎತ್ತಿ ಆನಂದದಿಂದ ಕಣ್ದೆರೆ ಉಳಿಯುಮೇಶ್ವರಾ.

ಇಂತೀ ಸಂಸಾರ ಹೇಯವಂ ನಿರಸನವಂ ಮಾಡಿ ತನ್ನ ನಿಜವ
ತಾನೇ ನೋಡಿಹೆನೆಂದರೆ ಇದಿರಿಟ್ಟಲ್ಲದೆ ತನ್ನ ಕಾಣಬಾರದು. ಅದೆಂ
ತೆಂದೊಡೆ, ತನ್ನ ಮುಖವ ತಾ ನೋಡಿಹೆನೆಂದರೆ, ಇದಿರಿಟ್ಟಲ್ಲದೆ ತನ್ನ
ತಾ ಕಾಣಬಾರದು. ಅದೆಂತೆಂದೊಡೆ, ತನ್ನ ಮುಖವ ತಾ ನೋಡಿಹೆ
ನೆಂಬುವನು ಇದಿರಿಂಗೆ ಕನ್ನಡಿಯ ಪಿಡಿದಲ್ಲದೆ ತನ್ನ ಕಾಣೆನೆಂದು ಕನ್ನಡಿ

ಮುಸುಂಟುಮಾಡಿಕೊಂಡು ನೋಡುವನಂತೆ ತನ್ನಸಿದರಿಂಗೆ ಗುರುವ ಸಂಟುಮಾಡಿಕೊಂಡು ಉಪಾವಸ್ಥೆಯಂ ಮಾಡಲು ಮುಂದೆ ಗುರುಕರುಣಸ್ಥಲಮಾದುದು.

---

## ೪. ಗುರುಕರುಣ ಸ್ಥಲ.

(೧) ಶ್ರೀಸದ್ಗುರುವ ನೆನೆವ ಮನಕ್ಕೆ ತಕ್ಕ ಕಿವಿಯಾದವಾಗಿ ಗುರುವಚನ ರತಿಸುಖ ಸಾರಾಯ ಸಂಬಂಧದ ಅನುಭಾವಿಯಾಗಿ ಶರಣ ಸತಿ ಗರ್ಭವತಿಯಾದಳು. ಇರುಳಿಲ್ಲ, ಹಗಲಿಲ್ಲ. ನವಮಾಸವರಿಯಳು. ದೀಕ್ಷಾ ಪ್ರಿಯನಾಗಿನಾಥನಯೋನಿ ಸಂಭವನಾಗಿ ಪ್ರಸೂತಿ ಕಾಯನಲ್ಲ.

(೨) ಎಂಬತ್ತುನಾಲ್ಕು ಲಕ್ಷ ಜೀವ ರಾಶಿಯೊಳು ಜನಿಸುವುದೇ ಜನಿತವೆಲ್ಲರಿಗು. ಆ ಜನ್ಮಾಂತರ ಯೋನಿಯೊಳು ಜನಿಸದಾತನೆ ಶಿವಯೋಗಿ. ಆ ಯೋನಿ ಜನ್ಮಾಂತರವ ಕಳೆವನು ಹೇಗೆಂದಡೆ, ಶ್ರೀಗುರು ಕಾರುಣ್ಯ ಕರಪಲ್ಲವದೊಳಗೆ ಜನಿಸಲಾಯಿತ್ತಾಗಿ, ಅಂತಹ ಯೋನಿ ಮುಖ ಜನ್ಮಾಂತರವ ಕಳೆದ ಶರಣಂಗೆ ಭವಮಾಲೆಯುಂಟೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

(೩) ಪೂರ್ವ ಜನ್ಮದ ನಿವೃತ್ತಿಯ ಮಾಡಿ. ಶ್ರೀಗುರುವಿನ ಕರಕಮಲದಲ್ಲಿ ಜನಿಸಿದ ಭಕ್ತನ ಪಂಚಭೌತಿಕದ ತನುವಿನಂತೆ, ವರ್ಣಿಸಿ ನುಡಿಯಬಹುದೆ? ಉತ್ತಮದ ತೃಣ ಮೊದಲಾದವೆಲ್ಲವು ಜ್ಯೋತಿಯ ಮುಟ್ಟಿ ಜ್ಯೋತಿಯಪ್ಪವು ಕೇಳಿರೆ. ಜ್ಯೋತಿರ್ಮಯಲಿಂಗವ ಮುಟ್ಟಿದಾತನು ಕೇವಲ ಜ್ಯೋತಿರ್ಮಯ ಲಿಂಗ. ಆಧಾರ ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ, ಬ್ರಹ್ಮರಂಧ್ರ, ದಳ ವರ್ಣ ಅಕ್ಷರ ಅಧಿದೇವತೆ ಎಂದು, ಅಸ್ಥಿ ಶುಕ್ಲ ಶ್ರೋಣಿತಾತ್ಮಕನಂತೆ ವರ್ಣಿಸಿ ನುಡಿಯಬಹುದೆ, ಶಿವಲಿಂಗ ತನುವ? ಷಡಾಧಾರ ಚಕ್ರವನು ಎನ್ನ ಸರ್ವಾಂಗದಲ್ಲಿ ಪ್ರತಿಷ್ಠೆಯಂ ಮಾಡಿ, ಅಂತರ್ಬಾಹ್ಯದಲ್ಲಿ ಭರಿತನಾಗಿ ಸರ್ವಾಂಗವ ಲಿಂಗವ ಮಾಡಿದ ಕೂಡಲ ಚನ್ನಸಂಗಾ ಶ್ರೀಗುರುಲಿಂಗವು.

(೪) ಮಹಾ ಜ್ಯೋತಿಯ ಸೋಂಕಿದ ತೃಣ ಮೊದಲಾದವೆಲ್ಲ ಮಹಾ ಜ್ಯೋತಿಯಪ್ಪವು. ನೋಡಿದರೆ ದೃಷ್ಟವ? ಮತ್ತೆ ಅಂತಿಂತಹುದೆಂದುಪಮಿಸಲುಂಟೆ? ಪರಂಜ್ಯೋತಿ ಸದ್ಗುರುಲಿಂಗವ ಸೋಂಕಿದ ಸದ್ಭಕ್ತನ ಅಂತರಂಗ, ಬಹಿರಂಗ, ಸರ್ವಾಂಗ, ಪರಂಜ್ಯೋತಿ ಲಿಂಗ. ಮತ್ತೆ ದೇಹವೆಂದು ಪ್ರಾಣವೆಂದು, ಆಧಾರ, ಸ್ವಾಧಿಷ್ಠಾನ ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ, ಬ್ರಹ್ಮರಂಧ್ರವೆಂದು ವರ್ಣ ದಳ ಅಧಿದೇವತೆ ಎಂದು ವಿವರಿಸಿ ನುಡಿಯಲುಂಟೇ ಪಂಚಭೌತಿಕ ತನುವಿನಂತೆ? ಪಂಚವಿಂಶತಿ ತತ್ವಂಗಳ ಸಂಬಂಧಿಸಿ ನುಡಿಯಲುಂಟೇ ಕೇವಲ ಜ್ಯೋತಿರ್ಮಯಲಿಂಗ ತನುವಿಂಗೆ? ಸದ್ಭಕ್ತನಂಗ ಲಿಂಗ, ಮನ ಲಿಂಗ, ಪ್ರಾಣ ಲಿಂಗ, ಭಾವ ಲಿಂಗ, ಪಂಚವಿಂಶತಿ ತತ್ವಂಗಳೆಲ್ಲವೂ ಲಿಂಗ ತತ್ವ. ಇದು ಕಾರಣ ಲಿಂಗವಂತನನು ಸರ್ವಾಂಗಲಿಂಗವೆಂಬುದು, ಬರಿಲಿಂಗವೆಪ್ಪ ಪ್ರಿಯವಿಶ್ವೇಶ್ವರಾ.

ಇಂತಪ್ಪ ಗುರು ಕಾರುಣ್ಯವಂ ಪಡೆದ ಮಹಿಮನು ತನ್ನ ಸ್ಥೂಲ ತನುವಿನ ವ್ಯವಹಾರವಂ ಕೆಡಿಸಿ ಸತ್ ಕ್ರಿಯಾ ವರ್ತನೆಗೆ ಸಾಧನವೆನಿಸಿ ತನ್ನ ಅಂಗದ ಮೇಲೆ ನಿರಂತರ ಶ್ರೀಮದಿಷ್ಟಲಿಂಗ ಸ್ವಾಯತವಾದ ಭೇದವೆಂತಿರ್ದೆಂದೊಡೆ ಮುಂದೆ ಲಿಂಗಧಾರಣ ಸ್ಥಲವಾದುದು.

---

## ೫ ಲಿಂಗಧಾರಣಸ್ಥಲ.

(೧) ಕಂಗಳ ಮುಂದಿನ ಶ್ರೀಗುರುಲಿಂಗವು ಹಿಂಗಿದಡೆ ವ್ರತಕ್ಕೆ ಭಂಗವಾದಪುದೆಂದು ತಂದು ಕೊಟ್ಟ ಶ್ರೀಗುರು ಕರಸ್ಥಲದಲ್ಲಿ ಪ್ರಾಣಲಿಂಗವ. ಅದು ಮುಟ್ಟಲೊಡನೆ ತನುಪ್ರಸಾದ, ಮನಪ್ರಸಾದ, ಧನಪ್ರಸಾದವಾಯಿತ್ತು. ಇಂತು ಸರ್ವಾಂಗ ಪ್ರಸಾದವಾಯಿತ್ತು. ಕೂಡಲಸಂಗಮದೇವಾ.

(೨) ಶ್ರೀ ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ. ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕೆ ಕಳುಹಿದರೆಮ್ಮವರು. ಭಸ್ಮವನೆ ಹೂಸಿ ಕಂಕಣವ ಕಟ್ಟಿದರು ಚನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು.

(೩) ಶಿವಭಕ್ತರ ಶಿಸುವು ಧರಣಿಯ ಮೇಲೆ ಬಿದ್ದಾಗಲೆ, ವಿಭೂತಿ ಪಟ್ಟವ ಕಟ್ಟಿ, ಕೊರಳಲಿ ಲಿಂಗಸ್ವಾಯತವ ಮಾಡಿ, ಪಾದೋದಕದಿಂದ ಮಜ್ಜನವ ಮಾಡಿಸಿ, ಪ್ರಸಾದವೆಣ್ಣೆ ಬೆಣ್ಣೆಯ ಹಾಲ ನೆರೆದು, ಸಲುಹುವುದು ಸದಾಚಾರ. ಅದಕ್ಕೆ ಸೂತಕವ ಮಾಡಲಾಗದು. ಭೂತ, ಪ್ರೇತ, ಪಿಶಾಚ ಸೋಂಕಿತೆಂದು ಗಣಕ ಭೇಷಜರ ಮಾತ ಕೇಳಲಾಗದು. ಕೇಳಿ ಮಾಡುವ ಭಕ್ತಂಗೆ ಪಂಚ ಮಹಾ ಪಾತಕ ತಪ್ಪದು. ಇದು ಕಾರಣ ಕೂಡಲಚನ್ನಸಂಗಯ್ಯ ನಿಮ್ಮ ನಚ್ಚಿದ ಮಚ್ಚು ಅಚ್ಚೊತ್ತಿದಂತಿಪ್ಪವರ ಕಂಡರೆ ನಾನೊಲ್ಲೆನಯ್ಯ.

(೪) ಲಿಂಗಪ್ರಾಣಿಯ ಲಿಂಗವಂತನ ಉದರದಲ್ಲಿ ಒಂದು ಲಿಂಗಪಿಂಡ ಉದಯಿಸಿದಡೆ, ಆಕ್ಷಣವೆ ಲಿಂಗಸ್ವಾಯತವ ಮಾಡಿ ಆ ಶಿಸುವ ತನ್ನ ಶಿಸುವೆಂದು ಮುಖವ ನೋಡುವುದು ಸದಾಚಾರವಲ್ಲದೆ, ಬರಿಯ ವಿಭೂತಿಯ ಪಟ್ಟವ ಕಟ್ಟಿ ಗುರು ಕಾರುಣ್ಯವಾಯಿತ್ತೆಂದು ಅನುಸರಣೆಯಲ್ಲಿ ಅಡಿಕೊಂಬುದು ಕ್ರಮವಲ್ಲ. ಅದೇನು ಕಾರಣವೆಂದಡೆ, ತಾ ಲಿಂಗವೇದಿಯಾದುದಕ್ಕೆ ಕುರುಹು. ಲಿಂಗವುಳ್ಳವರು ತನ್ನವರೆಂದೆನಬೇಕಲ್ಲದೆ, ಲಿಂಗವಿಲ್ಲದವರ ತನ್ನವರೆಂದರೆ ತನ್ನ ಸದಾಚಾರಕ್ಕೆ ದ್ರೋಹ ಬಹುದು. ಸಮಯಾಚಾರಕ್ಕೆ ಸಲ್ಲದು. ಇದು ಕಾರಣ ಲಿಂಗಸ್ವಾಯತವಾಗಿಪ್ಪುದೇ ಪಥವಯ್ಯ ನಾಗಪ್ರಿಯಚನ್ನರಾಮೇಶ್ವರಾ.

(೫) ಅಂಗದ ಮೇಲೆ ಲಿಂಗವಿದ್ದಬಳಿಕ, ಲಿಂಗಹೀನರ ಬೆರಸಲಾಗದು. ಅಂಗದ ಮೇಲೆ ಲಿಂಗವಿದ್ದಬಳಿಕ ಲಿಂಗ ಮುಂತಾಗಿ ಎಲ್ಲ ಕ್ರಿಯೆಗಳನು ಗಮಿಸಬೇಕಲ್ಲದೆ, ಅಂಗ ಮುಂತಾಗಿ ಗಮಿಸಲಾಗದು ಲಿಂಗಸಂಬಂಧಿಯಾದವನಾಗಿ ಅಂಗ ಮುಂತಾಗಿಪ್ಪವರು ಲಿಂಗಕ್ಕೆ ದೂರವಯ್ಯ ನಾಗಪ್ರಿಯ ಚನ್ನರಾಮೇಶ್ವರಾ.

ಇಂತಪ್ಪ ಶ್ರೀ ಲಿಂಗಧಾರಣದಿಂ ಸದಾಚಾರ ಸತ್ ಕ್ರಿಯೆ ಸಮ್ಯಜ್ಞಾನ, ಸದ್ಭಾವ ಸಂಪನ್ನನಾದ ಮಹಿಮಂಗೆ ಶ್ರೀ ಶಿವನ ಮಹದೈಶ್ವರ್ಯ ಸ್ವರೂಪವಪ್ಪ ಶ್ರೀ ವಿಭೂತಿಯ ಧರಿಸಬೇಕಾದ ಕಾರಣ ಮುಂದೆ ವಿಭೂತಿಸ್ಥಲವಾದುದು.

## ೬ ವಿಭೂತಿಯಸ್ಥಲ.

(೧) ಅನಾದಿ ಪರಶಿವನಲ್ಲಿ ಅಂತರ್ಗತವಾಗಿರ್ದ ಮಹಾಪ್ರಕಾಶ[illegible] ಚಿತ್ ಎನಿಸಿತ್ತು. ಆ ಚಿತ್ತೇ ಚಿಪಂಗ, ಆ ಚಿಪಂಗದಲ್ಲಿ ತೋರಿದ ವಿ[illegible] ಭೂತಿಯನೊಲಿದು ಧರಿಸಿದ ಶರಣ ಜ್ಯೋತಿರ್ಲಿಂಗವಹುದು ತಪ್ಪ[illegible] ಕಾಣಾ ಉರಿಲಿಂಗ ಪೆದ್ದಿ ಪ್ರಿಯ ಗುರು ವಿಶ್ವೇಶ್ವರಾ.

(೨) ಹಿತವಿದೆ ಸಕಲ ಲೋಕದ ಜನಕ್ಕೆ. ಮತಿಯಿಂದೆ ಶ್ರುತಿ ತ[illegible] ಪುರಾಣಾಗಮದ. ಗತಿಯಿಂದೆ ಶ್ರೀಭಕ್ತತತಿಯ. ಶ್ರೀ ಶರಣನ ಜೀವನ ಉನ್ನತಿ ಇದೆ. ಇಂತಪ್ಪ ಶ್ರೀ ವಿಭೂತಿಯ ಧರಿಸಿ ಭವಮಾಲೆಯನು ಪರಿಹರಿಸುವುದು. ದುರಿತ ಸಂಕುಲವನು ಒರಿಸುವುದು. ಹರನ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದಂಗಳಲ್ಲಿರಿಸುವುದು. ನಿರುತದಿಂ ನಂಬು ಮನುಜಾ ಶ್ರೀ ವಿಭೂತಿಯನೆಲ್ಲಾಗಳು. ಜನನ ಮರಣಂಗಳ ಭಯದಿಂದ ಅಗಸ್ತ್ಯ ಕಶ್ಯಪ ಜಮದಗ್ನಿ ಮುಂತಾದ ಸಕಲ ಮುನಿ ಜನಂಗಳು ಧರಿಸಿದರು ನೋಡಾ ಶ್ರೀ ಶ್ರೈಲಮಲ್ಲಿಕಾರ್ಜುನ ಲಿಂಗನ ನೊಲಿಸುವ ಶ್ರೀವಿಭೂತಿಯನು.

ಇಂತು ಮಹಾಜ್ಞಾನ ಭಸ್ಮವಂ ಸತ್ಕ್ರಿಯಾ ಮುಖದಿಂದ ಧರಿಸಿದ ಲಿಂಗ ಕ್ರಿಯಾ ಸಂಪನ್ನಂಗೆ ಶಿವಜ್ಞಾನ ಚಕ್ಷುವೆಂದೆನಿಸಿದ ರುದ್ರಾಕ್ಷಿಯಂ ಧರಿಸಬೇಕಾದ ಕಾರಣ ಮುಂದೆ ರುದ್ರಾಕ್ಷಿಯ ಸ್ಥಲವಾದುದು.

---

## ೭ ರುದ್ರಾಕ್ಷಿಯಸ್ಥಲ.

ಅಯ್ಯ ಎನಗೆ ರುದ್ರಾಕ್ಷಿಯೇ ಸರ್ವಪಾವನವಯ್ಯ. ಎನಗೆ ರುದ್ರಾಕ್ಷಿಯೇ ಸರ್ವಸಿದ್ಧಿ. ಅಯ್ಯ ನಿಮ್ಮ ವಕ್ತ್ರಂಗಳೇ ಪಂಚ ಮುಖ ರುದ್ರಾಕ್ಷಿಗಳಾದವಾಗಿ, ಅಯ್ಯ ಕೂಡಲಸಂಗಮದೇವಾ, ಎನ್ನ ಮುಕ್ತಿ ಪಥಕ್ಕೆ ಶ್ರೀ ರುದ್ರಾಕ್ಷಿಯೇ ಸಾಧನವಯ್ಯ.

ಇಂತು ಅಂಗದ ಮೇಲೆ ಲಿಂಗ ಸಂಬಂಧವಾಗಿ ವಿಭೂತಿ ರುದ್ರಾಕ್ಷಿಯಂ ಧರಿಸಿ ನಿತ್ಯ ಲಿಂಗಾರ್ಚನೆಯ ಮಾಡುವ ಲಿಂಗ ಕ್ರಿಯಾ ಸಂಪನ್ನಂಗೆ ಪ್ರಣವ ಮೂಲವಾದ ಪಂಚಾಕ್ಷರಿಯ ಜಪಿಸಬೇಕಾದ ಕಾರಣ ಮುಂದೆ ಪಂಚಾಕ್ಷರಿಯ ಸ್ಥಲವಾದುದು.

## ೮ ಪಂಚಾಕ್ಷರಿಯಸ್ಥಲ.

(೧) ಅಂತ್ಯಜನಾಗಲಿ ಅಗ್ರಜನಾಗಲಿ ಮೂರ್ಖನಾಗಲಿ ಪಂಡಿತನಾಗಲಿ, ಜಪಿಸುವದು ಪಂಚಾಕ್ಷರಿಯ ಜಪದಿಂದ ರುದ್ರನಪ್ಪುದು ಗ್ರಂಥ। ಅಂತ್ಯಜೋ ಅಗ್ರಜೋವಾಪಿ। ಮೂರ್ಖೋವಾ ಪಂಡಿತೋಪಿ ವಾ । ಜಪೇತ್ ಪಂಚಾಕ್ಷರೀಂ ನಿತ್ಯಂ । ರುದ್ರೋ ನಾತ್ರ ಸಂಶಯಃ ॥ ಇದಕೆ ಶಪಥವ ಮಾಡಿದೆನು ಉರಿಲಿಂಗಪೆದ್ದಿಪ್ರಿಯಗುರುವಿಶ್ವೇಶ್ವರಾ.

(೨) ನಿಷ್ಕಲವೇದ ವೇದಾಂತಸಾರ, ಸಕಲ ಲೋಕದ ಜನ ಹಿತಾಧಾರ, ಸಪ್ತಕೋಟಿ ಮಹಾಮಂತ್ರಂಗಳ ತವರುಮನೆ, ಸದ್ಭಕ್ತ ಜನ ಜೀವಾನಂದ, ಅಘರೋಗಮದ ಸಂತಾನದ ಹರಣ, ಮುಕ್ತಿ ಮೇಲುಪ್ಪರಿಗೆಯ ಸೋಪಾನ, ಪ್ರಣವಾಂಕುರ ಪಲ್ಲವ ಫಲರೂಪ, ತ್ರಿಣಯನನೊಲಿಸುವ ಕರ್ಣಾಭರಣ, ಶ್ರೀಹರ ನಾಮದ ಸಾಕಾರ ನಿಲವು, ಶ್ರೀಮತ್ಪರಮ ಪಂಚ ಬ್ರಹ್ಮಾನಂದ, ಶ್ರೀಮತ್ಪರತತ್ವದ ನಿತ್ಯ ನೆಲೆಯು ಶ್ರೀ ಹಂಪೆಯ ವಿರುಪನ ತೋರುವ ಶ್ರೀಗುರು ಪಂಚಾಕ್ಷರಿ.

(೩) ಭಕ್ತಿ ನಂದನ ವನದಲ್ಲಿ ಓಂಕಾರವನೆ ಬೆಳೆದು ಆನಂದವೆಂಬ ಜಲವನೀಂಟೆ, ಸಮತೆಯೆಂಬ ನೇಕಲಲ್ಲಿಪ್ಪುದನೆ ನೆನೆಯಾ ಮನವೇ. ಮಹಾಮಂತ್ರವನೆ ಶಿವಧ್ಯಾನದಲ್ಲಿ ಸವಿಯಾ ಮನವೇ ಮೇಲ ಕೊತ್ತು ತ್ತಿಪ್ಪುದು. ಧರ್ಮ, ಅರ್ಥ ಕಾಮ, ಮೋಕ್ಷವೆಂಬ ತೊರೆಯಲು, ಹಂಪೆಯ ವಿರುಪನ ಕರದ ಕಾಮಧೇನು ಪಂಚಾಕ್ಷರಿ ಎಂಬುದು.

ಇಂತು ಶ್ರೀ ವಿಭೂತಿ ರುದ್ರಾಕ್ಷಿಯಂ ಧರಿಸಿ, ಶ್ರೀ ಪಂಚಾಕ್ಷರಿಯಂ ಜಪಿಸಿ ನಿತ್ಯ ಲಿಂಗಾರ್ಚನೆಯಂಗೈವ ಸತ್ ಕ್ರಿಯಾ ಸಂಪನ್ನನ ಸಾಂಗ ಕ್ರಿಯಾ ವರ್ತನೆ ಎಂತಿರ್ಪುದೆಂದೊಡೆ ಮುಂದೆ ಭಕ್ತಿ ಸ್ಥಲವಾದುದು.

## ೯ ಭಕ್ತಿಸ್ಥಲ.

(೧) ಅಂದಂದಿಂಗೆ ನೂರು ತುಂಬಿತೆಂಬ ದಿಟವಿರಬೇಕು. ಸಂ
ಪುರಾತನರ ನೆನೆಯುತ್ತಿರಬೇಕು. ಜಂಗಮ ಮನೆಗೆ ಬಂದರೆ ವಂಚ
ಇಲ್ಲದೆ ಮಾಡಬೇಕು. ಎನಗಿದೇ ವರವ ನೀವುದು ಕಂಡಯ್ಯಾ ಚನ್ನ
ಪ್ರಿಯ ಕೂಡಲಚನ್ನಸಂಗಮದೇವಾ.

(೨) ಮಾಘ ಮಾಸದ ನವಿಲಿಯಂತೆ ಆದೆ ನೋಡವ್ವಾ! ಇರು
ತೊಳಲುವ ಚಕ್ರವಕ್ಕಿಯಂತೆ ಹಲಬುತಿದೇ ನೋಡವ್ವಾ! ಮಾಗಿ
ಕೋಗಿಲೆಯಂತೆ ಮೂಗಿಯಾಗಿದೇ ನೋಡವ್ವಾ! ಮಹಾಲಿಂಗ ಗಜೇ
ಶ್ವರನ ಅನುಭಾವ ಸಂಬಂಧಿಗಳ ಬರವು ಎನ್ನ ಪ್ರಾಣದ ಬರ
ನೋಡವ್ವಾ!

(೩) ಅಡಿಗಡಿಗೆ ನಿಮ್ಮ ಶರಣರಡಿಗೆರಗಿ ಶರಣೆಂಬೆ. ಅವ
ನುಡಿಯ ಬೋಧೆಯನು ಕೇಳಿ ಆನ್ನ ನುಡಿ ಸಮನಿಸದು. ಒಡೆಯ
ರ ಬಗಿದು, ಮಡುಗಟ್ಟಿ ಕಂಬನಿಯ ಕಡಲೊಳಗೆ ಕೆಡೆಯುತ್ತೆಂದಿಪ್ಪೆನೋ
ಮ್ಮದ ಶರಣು ಶರಣೆಂಬ ಶಬ್ದ ಒಡಲುಗೊಂಡು ಶಂಭುಜಕ್ಕೇಶ್ವ
ದೇವಂಗೆ ಶರಣೆನುತ ಪ್ರೇಮರಿಪೆಂದಿಪ್ಪೆನೋ!

ಇಂತು ಸದ್ಭಕ್ತಿ ಸ್ಥಲದಲ್ಲಿ ನಿಂದ ಸದ್ಭಕ್ತನ ದೇಹ ಪ್ರಾಣ ಸ್ವರೂ
ಮತ್ತು ಕರ್ತೃ ಭೃತ್ಯ ಸಂಬಂಧ ಸಂತಿರ್ಪದೆಂದೊಡೆ ಮುಂದೆ ಉಭಯ
ಸ್ಥಲವಾದುದು.

---

## ೧೦ ಉಭಯಸ್ಥಲ.

(೧) ಗತಿಪಥ ಮುಕ್ತಿ ಸೂತಕ ವಿರಹಿತ ಭಕ್ತ. ಹಮ್ಮು ಬಿಮ್ಮ
ಗಮನಸನಾಸ್ತಿಯಾದಾತನೇ ಜಂಗಮ. ಪ್ರಾಣವಿಲ್ಲದಾತ ಭಕ್ತ. ರೂಪಿ
ಲ್ಲದಾತ ಜಂಗಮ. ಈ ಉಭಯ ಕುಳಸ್ಥಳದ ಸಂಬಂಧೊಂದಾಗಿ ನಿಂದ ನಿಲ
ಕೂಡಲಚನ್ನಸಂಗಮದೇವರಲ್ಲಿ ಭಕ್ತಜಂಗಮನೆಂಬೆ.

(೨) ಉನ್ಮಿಸಿಯ ಲೌಕಿಕದನುಸಂಧಾನದ ತನುವಿನ ಕೊರತೆಯು ಕಳೆಯಲ್ಕೆ ಸ್ಥಾವರವಾಯಿತ್ತು. ಮನದ ಕೊರತೆಯು ಕಳೆಯಲ್ಕೆ ಜಂಗಮವಾಯಿತ್ತು. ಸ್ಥಾವರಂ ಜಂಗಮಕ್ಕ್ರಿಯ ದ್ವಿವಿಧಂ ಲಿಂಗಮುಕ್ತಿ, ಇಂತೆಂಬ ವಚನವ ಕೂಡಲಚೆನ್ನಸಂಗಯ್ಯನಲ್ಲಿ ಸಮಯಾಚಾರಿಗಳಿಗಲ್ಲದೆ ಎಲ್ಲರಿಗೆಲ್ಲಿಯದೋ?

(೩) ಶರಣ ಲಿಂಗದಲ್ಲಿ ಉದಯ, ಜಂಗಮದಲನುಭಾವ. ಭಕ್ತಿಯಿಂದ ಮುಕ್ತಿಯಿಂದನರಿಯನಯ್ಯ. ಶರಣನು ಕೂಡಲಚೆನ್ನಸಂಗಯ್ಯನಲ್ಲಿ ದ್ವಿವಿಧ ಸಂಪನ್ನನಾಗಿ.

(೪) ಆಚಾರವಿಡಿದು ಲಿಂಗ. ಅನುಭಾವವಿಡಿದು ಜಂಗಮ. ತನುವಿನ ಪ್ರಾಣ ಆಚಾರ. ಮನದ ಪ್ರಾಣ ಅನುಭಾವ. ಇದು ಕಾರಣ ಕೂಡಲಚೆನ್ನಸಂಗಮದೇವ ಲಿಂಗವನು ಜಂಗಮವನು ಬೇರಿರಿಸಲಿಲ್ಲ.

(೫) ಅಕಾಯಂ ಭಕ್ತಕಾಯೋ। ಮಮ ಕಾಯಸ್ತು ಭಕ್ತಕಾಯೋ। ಇಂತು ಭಕ್ತನ ನೋಡುವದು. ಮಹಾಂತೋ ಲಿಂಗ ರೂಪೇಣ ಮಹಾಂತೋ ಜಂಗಮಸ್ತಥಾ ಇಂತು ಜಂಗಮವ ನೋಡುವದು. ಇಂತೀ ಎರಡೊಂದಾದ ಕಾರಣ ತೆರಹಿಲ್ಲ ಕೂಡಲಚೆನ್ನಸಂಗಯ್ಯ ನಿಮ್ಮಲ್ಲಿ.

(೬) ಭವವಿಲ್ಲದ ಭಕ್ತನ ಪರಿಯ ನೋಡಾ! ಮನ ಪ್ರಾಣ ಭಾವವಿರಹಿತ ಒಡಲಿಲ್ಲದ ಜಂಗಮದ ಪರಿಯ ನೋಡಾ! ಸಿಡಿಲು ಮಿಂಚಿನ ಬೆಳಗನೊಂದೆಡೆಯಲ್ಲಿ ಹಿಡಿಯಲುಂಟೇ? ಈ ಉಭಯವು ಒಂದಾದವರ ಕಂಡರೆ ನೀನೆಂಬೆ ಕೂಡಲಚೆನ್ನಸಂಗಯ್ಯ.

ಇಂತು ಉಭಯಸ್ಥಲದಲ್ಲಿ ಶ್ರೀಲಿಂಗಜಂಗಮವೆರಡರ ಸಂಬಂಧವಾದ ಸದ್ಭಕ್ತನ ತನುವಿನಲ್ಲಿ ಗುರು ಸಂಬಂಧ ಮನದಲ್ಲಿ ಲಿಂಗ ಸಂಬಂಧ ಅರಿವಿನಲ್ಲಿ ಜಂಗಮ ಸಂಬಂಧವಾದ ಭೇದವೆಂತಿರ್ಪುದೆಂದಡೆ ಮುಂದೆ ತ್ರಿವಿಧ ಸಂಪತ್ತಿನ ಸ್ಥಲವಾದುದು.

---

# ೧೧ ತ್ರಿವಿಧ ಸಂಪತ್ತುಸ್ಥಲ.

(೧) ಒಂದಾಗಿ ತೋರಿದಡೆ ಮೂರಾಗಿ ವಿವರಿಸುವೆ. ಗುರುವೆಂ ಲಿಂಗವೆಂಬೆ, ಜಂಗಮವೆಂಬೆ. ಎನ್ನ ಮನೊ ಮೂರ್ತಿಯಾಗಿ ತೋ ಕೂಡಲ ಚನ್ನಸಂಗಯ್ಯಾ.

(೨) ಆಚಾರಲಿಂಗ ಸಂಬಂಧವಾದಲ್ಲಿ ಶ್ರೀಗುರು ಸನ್ನಿಹಿತ. ಅ ಮನ ಸಂಬಂಧವಾದಲ್ಲಿ ಶಿವಲಿಂಗ ಸನ್ನಿಹಿತ. ಉಭಯ ಲಾಂಛನ ಸಂಬಂಧವಾದಲ್ಲಿ ಜಂಗಮಲಿಂಗಸನ್ನಿಹಿತ. ಇದು ಕಾರಣ ಕೂಡ ಚನ್ನ ಸಂಗಯ್ಯಾ ತ್ರಿವಿಧಲಿಂಗ ಸಂಪನ್ನನಾದ ಶರಣ.

(೩) ಗುರುವೆನ್ನ ತನುವ ಬೆರಿಸಿದ ಕಾರಣ, ಗುರುಶುದ್ಧನಾ ನಯ್ಯಾ. ಲಿಂಗವೆನ್ನ ಮನವ ಬೆರಿಸಿದ ಕಾರಣ, ಲಿಂಗದ ಮನವ ನಾ ಬೆರಿಸಿದ ಕಾರಣ, ಲಿಂಗ ಶುದ್ಧನಾದನಯ್ಯಾ. ಜಂಗಮವೆನ್ನ ಜಿಹ್ವೆಯ ಬೆರಿಸಿದ ಕಾರಣ, ಜಂಗಮದ ಜಿಹ್ವೆಯ ನಾ ಬೆರಿಸಿದ ಕಾರಣ ಜಂಗಮ ಶುದ್ಧನಾದನಯ್ಯಾ ಈ ಮೂವರು ತಮ್ಮಿಂದ ತಾವು ಶುದ್ಧರಾಗ ಯದೆ, ಎನ್ನ ಮುಟ್ಟಿ ಶುದ್ಧರಾದರು ಕಾಣಾ ಕೂಡಲ ಚನ್ನಸಂಗ ದೇವಾ.

(೪) ಗುರುಸ್ವರೂಪನಾಗಿ ಮಹಾಸ್ಥಾನದಲ್ಲಿರುತಿರ್ದೆ. ಲಿಂ ಸ್ವರೂಪನಾಗಿ ಭ್ರೂ ಮಧ್ಯದಲ್ಲಿರುತಿರ್ದೆ. ಜಂಗಮ ಸ್ವರೂಪನಾ ಹೃದಯ ಕಮಲ ಮಧ್ಯದಲ್ಲಿರುತ್ತಿರ್ದೆ. ಈ ಪರಿಯಂತರಂಗಭರಿತನಾ ರುತಿರ್ದೆನಯ್ಯಾ. ಬಹಿರಂಗದಲ್ಲಿ ಶ್ರೀಗುರುಲಿಂಗವಾಗಿ ದೀಕ್ಷಿಸಿ ರಕ್ಷಿಸಿ ಶಿವಲಿಂಗವಾಗಿ ಕರಸ್ಥಲದಲ್ಲಿ ಪೂಜೆಗೊಂಡು ರಕ್ಷಿಸಿದೆ. ಜಂಗಮಲಿಂ ವಾಗಿ ಅವಗುಣಂಗಳೆಲ್ಲವನು ಕಳೆದು ಶಿಕ್ಷಿಸಿ ರಕ್ಷಿಸಿದೆ. ಇಂತೀ ತ್ರಿವಿಧವ ಒಂದೇ ರೂಪಾಗಿ, ಅಂತರಂಗ ಬಹಿರಂಗ ಭರಿತನಾಗಿ, ಪ್ರಸಾದವ ಕರುಣಿಸಿ ಮುಕ್ತನ ಮಾಡಿದೆಯಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಇಂತು ತ್ರಿವಿಧ ಸಂಪನ್ನನಾದ ಭಕ್ತನ ಅಂಗದಲ್ಲಿ ಗುರುಭಕ್ತಿ ಮನದಲ್ಲಿ ಲಿಂಗಭಕ್ತಿ ಅರಿವಿನಲ್ಲಿ ಜಂಗಮಭಕ್ತಿ ಪರಿಣಾಮದಲ್ಲಿ ಪ್ರಸಾದ ಭಕ್ತಿ ಸನ್ನಿಹಿತವಾದ ಭೇದವು ಎಂತಿರ್ದುದೆಂದೊಡೆ ಮುಂದೆ ಚತುರ್ವಿಧ ಸಾರಾಯ ಸ್ಥಲವಾದುದು.

---

## ೧೨ ಚತುರ್ವಿಧಸಾರಾಯಸ್ಥಲ.

(೧) ದಾಸೋಹಂ ಎಂಬ ಸಂಜ್ಞೆಗೊಂಡು ಹೋಗಿ ಗುರುವ ಕಂಡೆ, ಲಿಂಗವ ಕಂಡೆ, ಜಂಗಮವ ಕಂಡೆ, ಪ್ರಸಾದವ ಕಂಡೆ. ಇಂತೀ ಚತುರ್ವಿಧ ಸಾರಾಯದಲ್ಲಿ ಸಂಪನ್ನನಾದೆನು ಕಾಣಾ ಕೂಡಲಸಂಗಮದೇವಾ.

(೨) ಗುರು ಮುಟ್ಟಿ ಗುರುವಾಯಿತ್ತು. ಲಿಂಗಮುಟ್ಟಿ ಲಿಂಗವಾಯಿತ್ತು. ಜಂಗಮಮುಟ್ಟಿ ಜಂಗಮವಾಯಿತ್ತು. ಪ್ರಸಾದವ ಮುಟ್ಟಿ ಪ್ರಸಾದವಾಯಿತ್ತು. ಪ್ರಸಾದ ಪರವಸ್ತು ಪರದಲ್ಲಿಪ್ಪುದಾಗಿ ಕೂಡಲಚನ್ನಸಂಗಮದೇವಾ.

ಟೀಕು:— ಗುರುಲಿಂಗ ಜಂಗಮ ಪ್ರಸಾದವೆಂಬ ಚತುರ್ವಿಧವು ಪರವಸ್ತು ಸ್ವರೂಪವು. ಅಂತಹ ಪರವಸ್ತು ಸ್ವರೂಪವುಳ್ಳ ಗುರುಲಿಂಗ ಜಂಗಮದ ಪ್ರಸಾದವ ಸೋಂಕಿದ ಭಕ್ತನು ಆ ಗುರುಲಿಂಗ ಜಂಗಮದ ಪ್ರಸಾದ ಸ್ವರೂಪವುಳ್ಳ ಪರವಸ್ತುವೇಯಾಗಿಪ್ಪನು. ಅಂತಪ್ಪ ಗುರುಲಿಂಗ ಜಂಗಮದ ಪ್ರಸಾದವ ಸೋಂಕಿ ಪರವಸ್ತು ತಾನಾದೆನೆಂಬ ವಿಶ್ವಾಸವಿಲ್ಲದೆ ಬೇರೆ ಪರವಸ್ತುವ ಭಾವಿಸಿ ಕೂಡಿಹೆನೆಂಬ ಅಜ್ಞಾನಿಯ ಮುಖವ ನೋಡಲಾಗದೆಂಬುದೀ ವಚನದ ತಾತ್ಪರ್ಯಾರ್ಥ.

(೩) ಪರತನ್ನ ರೂಪ ತೋರಬೇಕೆಂದು, ಗುರು ರೂಪಾಗಿ ಬಂದು ಮನಸ್ಥಲಕ್ಕೆ ಮಂತ್ರವಾದ, ತನುಸ್ಥಲಕ್ಕೆ ಪ್ರಸಾದವಾದ, ಕರಸ್ಥಲಕ್ಕೆ ಲಿಂಗವಾದ, ಪ್ರಾಣಸ್ಥಲಕ್ಕೆ ಜಂಗಮವಾದ. ಇಂತು ಚತುರ್ವಿಧ ಕೂಡಲ ಚನ್ನಸಂಗಯ್ಯ ಬಸವಣ್ಣನೊಬ್ಬನೆ.

(೪) ಗುರುವಿನಲ್ಲಿ ಗುಣಸಂಪಾದನೆಯ ಮಾಡುವಲ್ಲಿ ಗುರು ಸಂಬಂಧಿಯಲ್ಲ. ಲಿಂಗದಲ್ಲಿ ಸ್ಥಲ ಸಂಪಾದನೆಯ ಮಾಡುವನ್ನಕ್ಕ, ಲಿಂಗ ಸಂಬಂಧಿಯಲ್ಲ. ಜಂಗಮದಲ್ಲಿ ಜಾತಿ ಸಂಪಾದನೆಯ ಮಾಡುವನ್ನಕ್ಕ ಜಂಗಮ ಸಂಬಂಧಿಯಲ್ಲ. ಪ್ರಸಾದದಲ್ಲಿ ರುಚಿಯ ಸಂಪಾದನೆಯ ಮಾಡುವನ್ನಕ್ಕ, ಪ್ರಸಾದ ಸಂಬಂಧಿಯಲ್ಲ. ಇದು ಕಾರಣ ಕೂಡಲ ಚನ್ನಸಂಗಯ್ಯ ಮಜ್ಜನಕ್ಕೆರೆವ ಭವಿಗಳನೇನೆಂಬೆ?

(೫) ತನು ಶುದ್ಧವಾಯಿತ್ತು ಗುರುವಿನಿಂದೆ. ಮನ ಶುದ್ಧವಾಯಿತ್ತು ಲಿಂಗದಿಂದೆ. ಧನ ಶುದ್ಧವಾಯಿತ್ತು ಜಂಗಮದಿಂದೆ. ಪ್ರಾಣ

ಶುದ್ಧವಾಯಿತ್ತು ಪ್ರಸಾದದಿಂದೆ. ಇಂತೀ ಚತುರ್ವಿಧದಿಂದೆನ್ನ ಸರ್ವಾಂಗ ಶುದ್ಧವಾಯಿತ್ತು ಕೂಡಲಚೆನ್ನಸಂಗಮದೇವಾ.

(೬) ಗುರುವಿನಲ್ಲಿ ಸ್ವಾಯತ, ಲಿಂಗದಲ್ಲಿ ಸನ್ನಿಹಿತ, ಜಂಗಮದಲ್ಲಿ ಆಯತ, ಪ್ರಸಾದದಲ್ಲಿ ಪರಿಣಾಮಿ, ಇಂತೀ ಚತುರ್ವಿಧದಲ್ಲಿ ಸನ್ಮತನು ಕೂಡಲ ಚೆನ್ನಸಂಗಯ್ಯನಲ್ಲಿ ಚೆನ್ನಬಸವಣ್ಣ.

(೭) ಇದು ಗುರು, ಇದು ಲಿಂಗ, ಇದು ಜಂಗಮ, ಇದು ಪ್ರಸಾದ, ಇಂತೀ ಚತುರ್ವಿಧ ಸ್ಥಲವನೊಂದು ಮಾಡಿ, ಮೂರಿದ ಜಂಗಮದ ನಿರಾಕಾರ ಲಿಂಗವೆಂದು ತೋರಿ, ಆ ಜಂಗಮದ ಪ್ರಸಾದವ ತೋರಿದನು. ನಿರವಯದ ಹಾದಿಯ ಬಸವಣ್ಣನಿಂದ ಕಂಡೆ ಕಾಣಾ ಕಲಿದೇವಯ್ಯಾ.

(೮) ಗುರುವಿಂಗೆ ಗುರುವಾಗಿ ಗುರು ಪ್ರಸಾದವ ಕೊಂಬುದು. ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದವ ಕೊಂಬುದು, ಜಂಗಮಕ್ಕೆ ಜಂಗಮವಾಗಿ ಜಂಗಮ ಪ್ರಸಾದವ ಕೊಂಬುದು. ಪ್ರಸಾದಕ್ಕೆ ಪ್ರಸಾದವಾಗಿ ಪ್ರಸಾದವ ಕೊಂಬುದು. ಇಂತೀ ಚತುರ್ವಿಧ ಸ್ಥಲಕ್ಕೆ ಚತುರ್ವಿಧವಾಗ ಬಲ್ಲಡೆ ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನು.

(೯) ಗುರು ಒಂದೇ ಬಸಿರು, ಲಿಂಗ ಒಂದೇ ಬಸಿರು, ಜಂಗಮ ಒಂದೇ ಬಸಿರು, ಪ್ರಸಾದ ಒಂದೇ ಬಸಿರು. ಇದನಾರಯ್ಯಾ ಅಮುಖ್ಯವಮಾಡಿ ಬೇರೆ ತೋರಿದವರು? ಇದನಾರಯ್ಯಾ ಪ್ರಜ್ವಲಿತವ ಮಾಡಿ ಬೇರೆ ತೋರಿದವರು ? ಸ್ವಾಮಿಚಾರಿ ಭಕ್ತಿ ಭಂಡಾರಿ ಸಂಗನ ಬಸವಣ್ಣ ಎನಗೆ ನೀನು ಗುಹೇಶ್ವರ ಲಿಂಗವ ತೋರಿದೆಯಾಗಿ ಲೋಕಾದಿ ಲೋಕವೆನಗೆ ಕಿಂಚಿತ್.

ಇಂತು ಚತುರ್ವಿಧ ಸಾರಾಯದಲ್ಲಿ ಸಂಪನ್ನನಾದ ಶ್ರೀಮದಂತನು ಸಕಲ ಹಿತೋಪದೇಶ ಕಾರಣಾರ್ಥವಾಗಿ ಮಾಟ ಕೂಟದ ಪ್ರಾರಂಭವಂ ನಿರೂಪಿಸುತ್ತಿರಲು ಮುಂದೆ ಉಪಾಧಿ ಮಾಟಸ್ಥಲವಾದುದು.

---

## ೧೩ ಉಪಾಧಿಮಾಟಸ್ಥಲ.

(೧) ದೇಹಾರವ ಮಾಡುವಣ್ಣಗಳಿರಾ, ಒಂದು ತುತ್ತು ಆಹಾರವ ನಿಕ್ಕಿದರೆ ದೇಹಾರಕ್ಕೆ ಆಹಾರವೇ ನಿಚ್ಚಣಿಕೆ. ದೇಹಾರವ ಮಾಡುತ್ತ ಆಹಾರವನಿಕ್ಕದಿರ್ದಡೆ. ಆಹಾರವಿಕ್ಕೆಂದನಂಬಿಗಚೌಡಯ್ಯ.

(೨) ಮಾಡುವ ಭಕ್ತಂಗೆಯೂ ಕೊಡುವ ದೇವಂಗೆಯೂ, ಎಂದೆಂದಿಗೂ ಕೇಡಿಲ್ಲ. ಮಾಡಿ ಭೋ, ಮಾಡಿ ಭೋ. ಎನಗೆ ಲೇಸಾಯಿತ್ತು. ಹೋಯಿತ್ತೆಂಬ ಚಿಂತೆ, ಇದ್ದಿತ್ತೆಂಬ ಸಂತೋಷ ಬೇಡಾ! ಸಕಳೇಶ್ವರ ದೇವ ಅವರನರಿದು ಸಲಹು ಭೋ.

(೩) ಹರಗಣಂಗಳ ನೆರಹಿ ಮಾಡುವ ಮಾಟ ಉರಿಯ ನಾಲಿಗೆಯು ಕೊರಳನಪ್ಪಿದಂತಾಯಿತಯ್ಯಾ! ಒಡೆದ ಮಡಕೆಯಲಮೃತವ ತುಂಬಿ ಮುರಿಯ ಕುಟ್ಟಿ ಅಟ್ಟೆಂಬ ತೆರನಂತಾಯಿತ್ತಯ್ಯ. ಭಕ್ತ ದೇಹಿಕ ದೇವ ಮನೆಗೆ ಬಂದಡೆ ಮತ್ತೆ ಮಾಡಿಹೆನೆಂಬುದಿಲ್ಲ. ಮೂಗಿಲ್ಲದ ಮುಖಕ್ಕೆ ಶೃಂಗಾರವ ಮಾಡಿದಂತಯ್ಯ! ಶರಣ ಸನ್ನಿಹಿತ ಸಕಳೇಶ್ವರ ದೇವರ ನರಿತು ಅರಿಯದಂತಿರ್ದಡೆ ಮುಳಲ ಗೌರಿಯ ನೋಂತು ನದಿಯಲ್ಲಿ ಅದ್ದಿದಂತಯ್ಯ.

(೪) ಗಾಳಿ ಬೀಸಿದಲ್ಲಿ ತೂರಿಕೊಳ್ಳಿರಯ್ಯಾ. ಗಾಳಿ ನಿನ್ನಾಧೀನವಲ್ಲ ಕಂಡಯ್ಯಾ. ನಾಳೆ ತೂರಿಹೆನೆಂದರೆ ಇಲ್ಲ ಕಂಡಯ್ಯಾ. ಶಿವಶರಣೆಂಬುದೊಂದು ಗಾಳಿ ಹೊಡೆದಲ್ಲಿ ಬೇಗ ತೂರೆಂದ ನಮ್ಮ ಅಂಬಿಗರ ಚೌಡಯ್ಯ.

ಟೀಕು:— ಗಾಳಿ ಬಂದಾಗಲೇ ಎತ್ತರ ಹೊಟ್ಟು ತೂರಿ ಪುಷ್ಟಿಯ ನುಳುಹಿಕೊಂಬಂತೆ, ಹಲವು ದೇಹಂಗಳೊಳಗೆ ಅಪೂರ್ವವಾದ ಮನುಜ ದೇಹವ ಪಡೆದಲ್ಲಿ ಶಿವನಿಗೆ ಶರಣುಹೊಕ್ಕು ಶಿವಭಕ್ತಿಯ ಮಾಡಿ, ಶಿವ ಕರ್ಮವ ಹುಟ್ಟು ಕಳೆದು ಪುಷ್ಟಿ ಎಂಬ ಮುಕ್ತಿಯ ಪಡೆ ಎಂಬುದೀಗ ಈ ವಚನದ ತಾತ್ಪರ್ಯಾರ್ಥ.

ಇಂತು ಭಕ್ತ ಜನಂಗಳಿಗೆ ಭಕ್ತಿ ಪ್ರಾರಂಭಮುದ್ಯೋಗಮಂ ಉಪದೇಶಾರ್ಥವಾಗಿ ನಿರೂಪಿಸಿದ ಮಹಾತ್ಮನು ತಾನು ಉಪಾಧಿಯ ಹೊದ್ದದೆ ನಿರುಪಾಧಿಕನಾಗಿ ದಾಸೋಹವಂ ಮಾಡುವ ಪರಿ ಎಂತೆಂದೊಡೆ ಮುಂದೆ ನಿರುಪಾಧಿ ಮಾಟಸ್ಥಲವಾದುದು.

---

## ೧೪ ನಿರುಪಾಧಿಮಾಟಸ್ಥಲ.

(೧) ಮಾಟ ಕೂಟ ಫಲಪ್ರಾಪ್ತಿ ಎಂಬ ಮಾತನು ಕೇಳಲಾಗದು. ಶಿವಶಿವಾ ನಿಮ್ಮ ಭಕ್ತರಿಗೆ ಮಾಡಿಹೆನೆನ್ನದಿರು ಎಂದು ಶ್ರೀಗುರು ಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡಿ ಮಾಡಿಸಿಕೊಂಬಾತ ನೀನೆ ಕೂಡಲಸಂಗಮದೇವಾ.

ಟೀಕು:—ಪರಶಿವನು ತನ್ನ ಸ್ವಲೀಲೆಯಿಂದ ಲಿಂಗಾಂಗವೆಂಬೆರಡಾಗಿ ಭಕ್ತದೇವನೆಂದೆನಿಸಿ, ಮಾಡುವ ಮಾಡಿಸಿಕೊಳ್ಳುತ್ತಿಹವ ಶಿವನೊಬ್ಬನೇ ಎಂದು ಗುರುಕರುಣದಿಂದರಿದು ಭಿನ್ನ ಭಾವವಳಿದ ಸದ್ಭಕ್ತರೇ ಮುಕ್ತರು. ಅಂತಲ್ಲದೆ ಅಜ್ಞಾನದಿಂದ ತನುಮನಧನಂಗಳು ತನ್ನವೆಂದು ತಾನು ಗುರುಲಿಂಗಜಂಗಮಕ್ಕೆ ಕೊಟ್ಟು ಫಲಪದವ ಪಡೆವೆನೆಂಬವರೆಲ್ಲರೂ ಪುನರ್ಭವಕ್ಕೆ ಬರುತ್ತಿಹರೆಂಬುದೀ ವಚನದ ತಾತ್ಪರ್ಯಾರ್ಥ.

(೨) ದಾಸ ವಸ್ತ್ರವನಿತ್ತ ತಾವು ಲೇಸಾಯಿತ್ತು. ತನ್ನನಿಧಿಯ. ಪಡೆದ ತಾವು ಹೊಲ್ಲಹವಾಯಿತ್ತು. ಸಿರಿಯಾಳ ಮಗನನಿತ್ತ ತಾವು ಲೇಸಾಯಿತ್ತು. ಮರಳಿ ಬೇಡಿದ ತಾವು ಹೊಲ್ಲಹವಾಯಿತ್ತು. ಬಲ್ಲಾಳ ವಧುವನಿತ್ತ ತಾವು ಲೇಸಾಯಿತ್ತು. ಸ್ವಯಲಿಂಗವಾದ ತಾವು ಹೊಲ್ಲಹವಾಯಿತ್ತು. ಇವರೆಲ್ಲರೂ ಸಕಳೇಶ್ವರ ದೇವರಲ್ಲಿ ಅಪೇಕ್ಷಿತರಲ್ಲದೆ ನಿರಪೇಕ್ಷಿತರಾರೂ ಇಲ್ಲ.

(೩) ಹೊನ್ನು, ಹೆಣ್ಣು, ಮಣ್ಣು, ಅನ್ನ, ಉದಕ, ವಸ್ತ್ರಂಗಳನು ಧರ್ಮದಾಸೆ ಕಾರಣ ಅರ್ಥದಾಸೆ ಕಾರಣ, ಕಾಮದಾಸೆ ಕಾರಣ, ಮೋಕ್ಷದಾಸೆ ಕಾರಣ, ಸಾಲೋಕ್ಯ ಸಾಮೀಪ್ಯ ಸಾರೂಪ್ಯ, ಸಾಯುಜ್ಯದಾಸೆ

ಕಾರಣ, ಪಂಚ ಮಹಾ ಪಾತಕಂಗಳ ಮಾಡಿದ ದೋಷಂಗಳ ಕಾರಣ, ಋದ್ಧಿ ಕಾರಣ, ವ್ಯಾಧಿಕಾರಣ, ಕೀರ್ತಿ ಕಾರಣ, ವಾರ್ತೆ ಕಾರಣ, ಸರ್ವಸನು ನಿರಂತರ ಕೊಡುವರು. ನಿಃಷ್ಕಾರಣವಾಗಿ, ನಿರುಪಾಧಿಕರಾಗಿ, ನಿರಾಶ್ರಿತರಾಗಿ, ಶ್ರೀಗುರು ಕಾರಣವಾಗಿ, ಲಿಂಗಕಾರಣವಾಗಿ, ಜಂಗಮಕಾರಣವಾಗಿ, ಪ್ರಸಾದ ಕಾರಣವಾಗಿ ಈ ನಾಲ್ಕನೂ ಒಂದು ಮಾಡಿ ಸದ್ಭಕ್ತಿಯಿಂದ ದ್ವಿವಿಧವು ಪರಿಣಾಮಿಸುವಂತೆ ಕ್ಷಣಮಾತ್ರದಲ್ಲಿ ಅಣುಮಾತ್ರ ದ್ರವ್ಯವ ಕೊಡುವವರನಾರನೂ ಕಾಣೆ ನಿರ್ವಂಚಕರಾಗಿ. ಆನು ವಂಚಕನು ಎನಗೆ ಭಕ್ತಿ ಇಲ್ಲವೆ. ಶಿವಶಿವಾ, ಸಂಗನಬಸವಣ್ಣನು ನಿರ್ವಂಚಕನು ನಿರಾಶಾಭರಿತನು ಸುಚರಿತ್ರನು ಸದ್ಭಕ್ತ ಪುರುಷನು ಮಹಾ ಪುರುಷನು. ಎನಗೆಯೂ ಮಹಾ ಶ್ರೀಗುರುಲಿಂಗ ಜಂಗಮ ಪ್ರಸಾದ. ಈ ಚತುರ್ವಿಧವು ಬಸವಣ್ಣನು. ಈ ಬಸವಣ್ಣನ ಭೃತ್ಯರ ತದ್ಭೃತ್ಯನಾಗಿ ಎನ್ನನಿರಿಸಯ್ಯ ಊರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

ಇಂತು ಲಿಂಗ ಜಂಗಮದಲ್ಲಿ ನಿರುಪಾಧಿಕನಾಗಿ ಕರ್ತೃ ಭೃತ್ಯ ಭಾವದಿಂದ ದಾಸೋಹವ ಮಾಡಿದ ಮಹಾತ್ಮನು ತಾ ಮಾಡುವ ಮಾಟವೊಳಗೆ ಮಾಡಿಸಿಕೊಂಬ ವಸ್ತುವಿನೊಳಗೆ ಅವಿನಾಭಾವವೆಂಬ ಕೃತನಿಷ್ಠೆಯುವಳವಡಲು ಮುಂದೆ ಸಹಜ ಮಾಟ ಸ್ಥಲವಾದುದು.

---

## ೧೫ ಸಹಜಮಾಟಸ್ಥಲ.

(೧) ಮಾಡುವಂತಿರಬೇಕು. ಮಾಡದಂತಿರಬೇಕು. ಮಾಡುವ ಕೂಟವೊಳಗೆ ತಾನಿಲ್ಲದಿರಬೇಕು. ನಮ್ಮ ಕೂಡಲಸಂಗಮದೇವನೊಳಗಿಂತೀ ತೆರನಾಗಿರಬೇಕು.

ಟೀಕು:— ಗುರುವಿಂಗೆ ಜಂಗಮಕ್ಕೆ ತ್ರಿವಿಧ ಪದಾರ್ಥಂಗಳ ಕ್ರಿಯಿಂದ ಸಮರ್ಪಿಸುವಲ್ಲಿ ಕರ್ತೃಭೃತ್ಯನಾಗಿ ಮಾಡುತ್ತಿರಬೇಕು ಭಕ್ತ. ಅಂತು ಮಾಡುವ ಭಕ್ತನು ತಾನೆಂಬ ಭಾವವಿಲ್ಲದೆ ಮಾಡುವ

ಮಾಡಿಸಿಕೊಂಬವೆರಡು ಒಂದೇ ಲಿಂಗವೆಂದು ಕಾಣುತ್ತಿಪ್ಪ ಜ್ಞಾನಸ್ವ ಙ್ಞಾತ ಭಕ್ತನೆಂಬುದೀ ವಚನದ ತಾತ್ಪರ್ಯಾರ್ಥ.

(೨) ಮಾಟವಿಲ್ಲದ ಕೂಟವದೇಕೋ? ಮಾಟಕೂಟವೆಂಬೆರಡ ಅನುವನರಿಯಲೇಬೇಕು. ಮಾಟಕೂಟವೆಂಬೆರಡರ ಅನುಮಾಟದಿಂದಲ್ಲೇ ಭಕ್ತಿ, ಇದೇ ಕೂಟವು ಕೂಡಲಚನ್ನಸಂಗಾ ನಿಮ್ಮಲ್ಲಿ.

ಇಂತು ಪಿಂಡಾದಿ ಸಹಜ ಮಾಟಾಂತ್ಯದ ಭಕ್ತಸ್ಥಲದಲ್ಲಿ ಆಚಾ ಸುತ್ತ, ಮಾಡಿ ಮಾಟವ ಮರೆದು, ಕೂಡಿ ಕೂಟವ ಮರೆದು, ಸಹಜ ದಲ್ಲೈಕ್ಯವಾದ ಮಹಂತನು ಮುಂದೆ ನೈಷ್ಠಿಕಾ ಮುಖದಿಂದಲಾಚರ ಚರಿಸುವ ಭೇದವೆಂತಿರ್ದುದೆಂದೊಡೆ ಮುಂದೆ ಮಹೇಶ್ವರಸ್ಥಲವಾದುದು.



# ಮಹೇಶ್ವರಸ್ಥಲ.

ವಿವರಣೆ:— ಭಕ್ತಸ್ಥಲದಲ್ಲಿಯ ಕ್ರಿಯೆಗಳನ್ನು ದೃಢಪಡಿಸುವದೇ ಮಹೇಶ್ವರಸ್ಥಲದ ಉದ್ದೇಶವು. ನಿಷ್ಠೆಯು ಈ ಸ್ಥಲದ ಮುಖ್ಯ ಲಕ್ಷಣವಾಗಿದೆ. ದೃಢನಿಶ್ಚಯದಿಂದ ಕಾರ್ಯಗಳನ್ನು ಮಹೇಶ್ವರನು ಮುಂದುವರಿಸತಕ್ಕದ್ದು.

ಆದ್ದರಿಂದ ಮಹೇಶ್ವರನ ಸ್ಥಲದಲ್ಲಿ ಸಾಹಸ, ಧೈರ್ಯ, ನಿಶ್ಚಯ, ಈ ಬಗೆಯ ಗುಣಗಳು ಅಳವಡಬೇಕು. ಈ ಸ್ಥಲದಲ್ಲಿರುವವನು ಗಂಡಾಂತರಗಳಿಗೆ ಹೆದರುವದಿಲ್ಲ. ಎಂಥ ಕಷ್ಟಗಳು ಬಂದರೂ ಆವನು ಅವುಗಳನ್ನು ಎದುರಿಸುವನು. ಎಡೆಬಿಡದೆ ಪ್ರಯತ್ನಿಸುತ್ತ ಕೈಕೊಂಡ ಕಾರ್ಯಗಳನ್ನು ಜರಗಿಸುವನು. ಬಹು ಸಾಹಸಿಯಾಗಿರುವನು. ಜೀವದ ಮೇಲೆ ಬಂದರೂ ಧೈರ್ಯಗೆಡನು. ಅತ್ಯಂತ ಸ್ವಾಭಿಮಾನಿಯು. ಈ ಬಗೆಯ ವೃತ್ತಿಯುಳ್ಳವನಾಗಿ ಮಹೇಶ್ವರನು ಜಗತ್ತಿನಲ್ಲಿ ಆಚರಿಸತಕ್ಕದ್ದು.

ಈ ಸ್ಥಲದಲ್ಲಿ ೯ ಸ್ಥಲಗಳಿವೆ. ಅವುಗಳಲ್ಲಿ ಮಹೇಶ್ವರನ ಕ್ರಿಯೆಗಳು ಹೇಗಿರಬೇಕೆಂಬುದು ಹೇಳಲ್ಪಟ್ಟಿದೆ.

**ಮಹೇಶ್ವರಸ್ಥಲ:**— ಇವುಗಳಲ್ಲಿ ಮೊದಲನೆಯದಾದ ಮಹೇಶ್ವರಸ್ಥಲದಲ್ಲಿ ನಾವು ಮೇಲೆ ಹೇಳಿದಂತೆ ಧೈರ್ಯ, ನಿಶ್ಚಯ, ಸಾಹಸಗಳಿರಬೇಕೆಂದು ವಚನಕಾರರು ಹೇಳುತ್ತಾರೆ.

**ಲಿಂಗನಿಷ್ಠಾಸ್ಥಲ:**— ಎರಡನೆಯದಾದ ಈ ಸ್ಥಲದಲ್ಲಿ ಮಹೇಶ್ವರನು ದೃಢಭಕ್ತಿಯುಳ್ಳವನಾಗಿ, ಲಿಂಗಧ್ಯಾನದಲ್ಲಿಯೇ ಮಗ್ನನಾಗಿರಬೇಕು. ಪರಮಾತ್ಮನಲ್ಲಿಯ ಅವನ ಶ್ರದ್ಧೆಯು ಎಂದೂ ಮಸುಳಿಸಕೂಡದು.

**ಪೂರ್ವಾಶ್ರಯ ನಿರಸನಸ್ಥಲ:**— ಮಹೇಶ್ವರನು ಸದಾಚಾರಕ್ಕೆ ಮಾತ್ರ ಮಹತ್ವ ಕೊಡುವವನಾದ್ದರಿಂದ ಸದಾಚಾರವುಳ್ಳವರಲ್ಲಿ ಯಾವ ಬಗೆಯ ಭೇದಭಾವವನ್ನು ಮಾಡಕೂಡದು. ಆದ್ದರಿಂದ ಅವನಲ್ಲಿ ಜಾತಿಭೇದವಿಲ್ಲ. ಇದನ್ನು ಎಣಿಸಿದ್ದಾದರೆ ಭಕ್ತನಲ್ಲಿಯ ಲಿಂಗದ ಅವಹೇಳನವನ್ನು ಮಾಡಿದಂತೆಯೇ ಸರಿ.

**ವಾಗದ್ವೈತ ನಿರಸನಸ್ಥಲಃ**— ಕೆಲವರು ವ್ಯವಹಾರದಲ್ಲಿ ಕೂಡ ಅದ್ವೈತಾಚರಣೆಯನ್ನು ಆಚರಿಸುವದುಂಟು. ಇದು ಅನಾಚಾರವು, ಕೇವಲ ಜ್ಞಾನಮಾರ್ಗಿಗಳಲ್ಲಿ ಕೇವಲಾದ್ವೈತಿಗಳಲ್ಲಿ ಈ ಬಗೆಯಾಗಿ ತಪ್ಪಿ ಆಚರಿಸುವವರು ದೊರೆಯುವದುಂಟು. ಇದು ಸರಿಯಾದ ಮಾರ್ಗವ ಲ್ಲವೆಂದು ವಚನಕಾರರು ಇವರನ್ನು ಹಳಿದಿದ್ದಾರೆ.

**ಆಹ್ವಾನನಿರಸನಸ್ಥಲಃ**— ಶೈವ ಮಾರ್ಗಿಗಳೂ ಕೇವಲ ಮೂರ್ತಿ ಪೂಜಕರೂ ಆಹ್ವಾನ ವಿಸರ್ಜನೆಗೂಡಿ ತಮ್ಮ ಪೂಜಾದಿ ಕಾರ್ಯಗಳನ್ನು ನಿರ್ವಹಿಸುವದುಂಟು. ಇದು ಲಿಂಗಾಂಗಿಗಳಿಗೆ ಸಲ್ಲದು. ಲಿಂಗಸಹಿತವಾಗಿ ಅವರು ಯಾವಾಗಲೂ ಆಚರಿಸುವವರಾದ್ದರಿಂದ ಅವರಿಗೆ ಆಹ್ವಾನವೂ ಇಲ್ಲ, ವಿಸರ್ಜನೆಯೂ ಇಲ್ಲ.

**ಅಷ್ಟತನುಮೂರ್ತಿ ನಿರಸನಸ್ಥಲಃ**— ಮಹೇಶ್ವರನು ಪರಮಾತ್ಮನನ್ನು ಬಿಟ್ಟು ಇತರ ದೇವತೆಗಳನ್ನು ನಂಬಕೂಡದು. ಅವನು ಅನೇಕ ತರದ ಮೂರ್ತಿಗಳನ್ನೂ ಕಿರುಕುಳ ದೈವಗಳನ್ನೂ ಪೂಜಿಸಬಾರದು. ಪರಮಾತ್ಮನೊಬ್ಬನೇ ಇದ್ದಾನೆಂದು ಭಾವಿಸಿ ಅವನಲ್ಲಿ ದೃಢವಿಶ್ವಾಸವನ್ನಿಟ್ಟು ವರ್ತಿಸಬೇಕೆಂದು ಈ ಸ್ಥಲದಲ್ಲಿ ಹೇಳಲ್ಪಟ್ಟಿರುತ್ತದೆ.

ಮುಂದಿನ ಮೂರು ಸ್ಥಲಗಳಲ್ಲಿ ವಚನಕಾರರು ಪರಮಾತ್ಮನು ಎಂಥವನಿರುವನೆಂಬದನ್ನು ಹೇಳಿ ಪರಮಾತ್ಮನು ತನ್ನ ದೇಹದಲ್ಲಿಯೇ ಹೇಗೆ ವಾಸಿಸುವನೆಂಬದನ್ನು ಕಡೆಯ ಸ್ಥಲದಲ್ಲಿ ಹೇಳಿದ್ದಾರೆ.

**ಸರ್ವಗತ ನಿರಸನಸ್ಥಲಃ**— ಜಗತ್ತೇ ಶಿವನೆಂದು ಭಾವಿಸಿ ಸತ್ಕ್ರಿಯೆಗಳನ್ನು ಅನೇಕರು ಮಾಡುವದುಂಟು. ಇದು ನೀತಿಗೆ ಬಾಹಿರವಾದದ್ದು. ಇದು ತಪ್ಪು ಮಾರ್ಗವು. ಹೀಗಾದಲ್ಲಿ ಸದಾಚಾರ ಸತ್ಕ್ರಿಯೆಗಳು ಉಳಿಯಲಾರವೆಂದು ವಚನಕಾರರು ಇಲ್ಲಿ ಹೇಳುತ್ತಾರೆ.

**ಶಿವಜಗನ್ಮಯಸ್ಥಲಃ**— ಜಗತ್ತು ಶಿವನಲ್ಲಿದ್ದರೂ ಅವನು ಎಲ್ಲೆಲ್ಲಿಯೂ ಇರುತ್ತಾನೆಂದು ನಂಬಬೇಕು. ಅವನ ಮೂಲಕವಾಗಿಯೇ ಜಗತ್ತಿನ ಕಾರ್ಯಗಳು ನಡೆದಿರುತ್ತವೆ. ಇಂಥ ಪರಮಾತ್ಮನೊಡನೆ ಬೆರೆಯುವದೇ ಮನುಷ್ಯನ ಅಂತಿಮಧ್ಯೇಯವೆಂದು ಈ ಸ್ಥಲದಲ್ಲಿ ಹೇಳಲ್ಪಟ್ಟಿರುತ್ತದೆ.

**ಭಕ್ತದೇಹಿಕಲಿಂಗಸ್ಥಲ:**— ಪರಮಾತ್ಮನು ಹೀಗೆ ಜಗನ್ಮಯು ನಾದರೂ ಅವನು ಪಾಪಯುಕರಾದವರಲ್ಲಿ, ಸದ್ಭಕ್ತಿ ಸದ್ವರ್ತನೆ ಇಲ್ಲ ದವರಲ್ಲಿ ಇರಲಾರನು. ಅವನು ಭಕ್ತರಲ್ಲಿಯೇ ಇರುತ್ತಾನೆ. ಭಕ್ತ ನಯುವೇ ಅವನ ಕಾಯವು. ಭಕ್ತನಲ್ಲಿ ಸದ್ಗುಣಗಳು ಹೆಚ್ಚಿದ ಹಾಗೆ ಪರಮಾತ್ಮನು ಅವನಲ್ಲಿಯೇ ಪ್ರಕಟವಾಗುತ್ತ ಹೋಗುವನೆಂದು ಈ ಸ್ಥಲ ದಲ್ಲಿ ವಚನಕಾರರು ಹೇಳುತ್ತಾರೆ.

ಹೀಗೆ ಮಹೇಶ್ವರಸ್ಥಲದಲ್ಲಿ ೯ ಸ್ಥಲಗಳಿವೆ. ಅವುಗಳಲ್ಲಿ ಹೇಳಿದಂತೆ ವರ್ತಿಸಿ ಪರಮಾತ್ಮನಲ್ಲಿ ದೃಢವಿಶ್ವಾಸವನ್ನು ಇಟ್ಟು ಪರಮಾತ್ಮನ ಸ್ವರೂಪು ನವುದಿರುತ್ತದೆಂಬದನ್ನು ಚನ್ನಾಗಿ ಅರಿತುಕೊಂಡು ಸದಾಚಾರ ಸದ್ವ ರ್ತನೆಯಿಂದ ಕೂಡಿಕೊಂಡು ತನ್ನ ಕ್ರಿಯೆಗಳನ್ನು ದೃಢಪಡಿಸುತ್ತ ಹೋಗಬೇಕು. ಇಂಥವನಲ್ಲಿ ಪರಮಾತ್ಮನು ಮನೆಮಾಡಿಕೊಳ್ಳುವನು. ಅವನ ದೇಹವೇ ಪರಮಾತ್ಮನ ದೇಹವಾಗುವದು. ಹೀಗೆ ವಚನಕಾರರು ಮಹೇಶ್ವರನಾರೆಂಬುದನ್ನು ಕುರಿತು ವಿವೇಚಿಸಿರುವರು.

---

## ೧ ಮಹೇಶ್ವರಸ್ಥಲ.

(೧) ಸಜ್ಜನ ಸದ್ಭಾವಿ ಅನ್ಯರಲ್ಲಿ ಕಯ್ಯಾಂತು ಬೇಡ. ಲಿಂಗವ ಮುಟ್ಟಿದ ಕೈ ಸವಿ ಕಂಗಳಲ್ಲಿ ಒಸೆದು ನೋಡ ಪರವಧುವ. ಮನದಲ್ಲಿ ಅನ್ಯವ ನೆನೆಯ. ಮಾನವರ ಸೇವೆಯ ಮಾಡ. ಲಿಂಗವ ಪೂಜಿಸಿ ಲಿಂಗ ದಹಂಗನೊಲ್ಲ. ಧನವಲ್ಲಿ ವಂಚನೆ ಇಲ್ಲ ಕೂಡಲ ಚನ್ನಸಂಗ ನಿಮ್ಮ ಶರಣ.

(೨) ನಾಳೆ ಬಾಹುದು ನಮಗಿಂದೇ ಬರಲಿ. ಇಂದು ಬಾಹುದು ನಮಗೀಗಲೇ ಬರಲಿ. ಇದಕಾರಂಜುವರು? ಇದಕಾರಳುಕುವರು? ಜಾತಸ್ಯ ಮರಣಂ ಧ್ರುವಂ ಎಂದುದಾಗಿ ನಮ್ಮ ಕೂಡಲ ಸಂಗಮದೇ ವರು ಬರೆದ ಬರಹ ತಪ್ಪದು. ಹರಿಹರ ಬ್ರಹ್ಮಾದಿಗಳಿಗೆ ತಪ್ಪಿಸಲು ವಶವಲ್ಲ.

(೩) ಆದಂತೆ ಆಗಲಿ, ಮಾದಂತೆ ಮಾಣಲಿ, ಎನಲಾಗದು
ನೇಮದಾತಂಗೆ ಛಲ ಬೇಕು, ಛಲಬೇಕಯ್ಯ. ಹಿಡಿದುದ ಬಿಡಲಾ
ಗದು. ಹುಲಿಗೆರೆಯ ವರದ ಸೋಮನಾಥನ ಮನಮುಟ್ಟಿದಧಿಕಂಗಲ್ಲ
ಸೋಲುವವನಲ್ಲ.

(೪) ಲಂಚವಂಚನೆಗೆ ಕೆಯ್ಯಾನದ ಭಾಷೆ. ಬಟ್ಟೆಯಲ್ಲಿ ಹೊನ್ನು
ವಸ್ತ್ರ ಬಿದ್ದಿದ್ದರೆ ಕೈಮುಟ್ಟಿ ಎತ್ತಿದೆನಾದಡೆ ಅಯ್ಯಾ, ನಿಮ್ಮಾಣೆ, ನಿಮ್ಮ
ಪ್ರಮಥರಾಣೆ. ನೀನಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯ ಶಂಭುಜಕ್ಕೇಶ್ವರ
ದೇವಯ್ಯ ನಿಮ್ಮಾಣೆ.

(೫) ಅಡಿಗಡಿಗೆ ಬಂದಡರುತಿಪ್ಪ ಕಡು ಛಲ ನಿನಗೆ ಬೇಕು
ಕಂಡಾ! ಮೃಡನೇ ಎನ್ನೊಡನೆ ನೀ ತೊಡರಿ ಸಸಿನೆ ಹೋಗಲೀಯ
ಎಂತೆಂದಡೆಯೂ ನಾನಂಜುವವನಲ್ಲ. ಸಂತತ ಗಾಸಿ ಮಾಡಿದಡೆಯೂ
ಕಂತುಹರ ಅಭಯಕರನು ಎನ್ನ ನೇಮಕ್ಕೆ ಅಡ್ಡ ಬಂದಡೆಯೂ ಬಿಡ
ದೆಯ ಸನೆದು ಒಡಲನೊಡ್ಡುವೆ. ಕಡಗುವಡೊಮ್ಮೆ ಹಳಚಿ ನೋಡು
ಬಡವನ ಕೈ ಕಡುಹ ನೋಡು ನೋಡಯ್ಯ ಸಂಗಪ್ರಿಯ ಚನ್ನಬಂಕೇಶ್ವರ

ಇಂತು ಮಹೇಶ್ವರಸ್ಥಲದಲ್ಲಿ ಛಲ, ನಿಯಮ, ವ್ರತದಿಂದ ಸ್ಥಿತ
ನಿಷ್ಠೆಯನಾದ ವೀರ ಮಾಹೇಶ್ವರನು ತನ್ನಂಗದ ಮೇಲಣ ಲಿಂಗದ
ನೈಷ್ಠೆ ಎಂತಿರ್ದಪೆಂದಡೆ ಮುಂದೆ ಲಿಂಗನಿಷ್ಠಾಸ್ಥಲವಾದುದು.

---

## ೨. ಲಿಂಗನಿಷ್ಠಾ ಸ್ಥಲ.

(೧) ಅಮೃತ ಸಾಗರದೊಳಗಿರ್ದು ಆಕಳ ಚಿಂತೆ ಏಕೆ? ಮೇರು
ಮಂದಿರದೊಳಗಿರ್ದು ಜಲಗಾರದ ಚಿಂತೆ ಏಕೆ? ಶ್ರೀಮತ್ಸ್ವಾಮಿಯೊಳ
ಗಿರ್ದು ಮುಕ್ತಿಯ ಚಿಂತೆ ಏಕೆ? ಕರಸ್ಥಲದೊಳಗೆ ಲಿಂಗವಿದ್ದ ಬಳಿಕ
ಮತ್ತಾವ ಚಿಂತೆ ಏಕೆ ಗುಹೇಶ್ವರಾ?

(೨) ನೆನಹಿನ ನಲ್ಲನು ಮನೆಗೆ ಬಂದಡೆ ನೆನವುದಿನ್ನಾರನು
ಹೇಳವ್ವಾ? ನೆರೆವ ಕ್ರಿಯಲ್ಲಿ ನೆರೆದು ಸುಖಿಯಹುದಲ್ಲದೆ ನೆನವುದಿನ್ನು

ಏನು ಹೇಳವ್ವಾ? ನೆನಹಿನ ನಲ್ಲ ಉರಿಲಿಂಗದೇವನ ಕಂಡ ಬಳಿಕ ನೆನವುದಿನ್ನಾರನು ಹೇಳವ್ವಾ?

(೩) ದೆಸೆದೆಸೆಯಲ್ಲಿ ನಿಮ್ಮನೇ ಕಾಂಬೆ. ಎದ್ದು ನೋಡಿ ನಿಮ್ಮನೇ ಕಾಂಬೆ. ನಿದ್ರೆಗೆಯ್ದು ನಿಮ್ಮನೇ ಕಾಂಬೆ. ಅಹೋರಾತ್ರಿ ನಿಮ್ಮ ಧ್ಯಾನ ದಲ್ಲಿರಿಸು ಮಹಾಲಿಂಗ ಕಲ್ಲೇಶ್ವರಾ.

(೪) ಮಚ್ಚು ಅಚ್ಚುಗವಾಗಿ ಒಪ್ಪಿದ ಪರಿಯ ನೋಡಾ! ಎಚ್ಚರಿ ಗಂಡೋರಬೆ ನೆಡಬೇಕು. ಅಪ್ಪಿದಡೆ ಅಸ್ಥಿಗಳು ನುಗ್ಗು ನುಸಿಯಾಗಿರ ಬೇಕು. ಬೆಚ್ಚರೆ ಬೆಸುಗೆಯರಿಯದಂತಿರಬೇಕು. ಮಚ್ಚು ಒಪ್ಪಿತ್ತು ಚನ್ನ ಮಲ್ಲಿಕಾರ್ಜುನನ ಸ್ನೇಹ.

(೫) ಎಲು ಒಡೆದು ತನು ಕರಗಿ, ಮನವು ಜರ್ಝರಂಬೋಗಿ ಲಿಂಗದಲ್ಲಿ ನೀರು ನೀರಾಗಿ ಬೆರಸಬೇಕು. ಜಂಗಮದಲ್ಲಿ ವಾರಿ ಕಲ್ಲಾಗಿ ಕರಗಬೇಕು. ಸರ್ವಾಂಗ ಪುಳಕಂಗಳೊಡೆದು ಕಡಲುಗಳಾಗಿ ನಿರ್ವಾಣ ನಿಜವೆಂದಪ್ಪುದೋ ಉಳಿಯುಮೇಶ್ವರಾ?

ಇಂತು ಲಿಂಗದಲ್ಲಿ ಸ್ನೇಹಕ ಕರಿಗೊಂಡು ನಿಷ್ಠೆರಗಾದ ಶ್ರೀವೀರ ಮಾಹೇಶ್ವರನು ಆ ಲಿಂಗದಲ್ಲಿ ಲೋಲುಪ್ತನಾಗಿ ತನ್ನ ಪೂರ್ವಜಾತ ಜೀವ ಭಾವ ಲೌಕಿಕವೆಂಬ ನಾನಾ ಪ್ರಪಂಚಿನ ಪೂರ್ವಾಶ್ರಯವಂ ಮಿಥ್ಯೆ ಎಂದರಿದು ನಿರಸನವಂ ಮಾಡುತ್ತಿರಲು ಮುಂದೆ ಪೂರ್ವಾ ಶ್ರಯ ನಿರಸನ ಸ್ಥಲವಾದುದು.

---

## ೩. ಪೂರ್ವಾಶ್ರಯ ನಿರಸನಸ್ಥಲ.

(೧) ಶ್ರೀಗುರು ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೇ? ಲಿಂಗದೇವನ ಪೂಜಿಸಿ ಕುಲವನರಸುವರೇ, ಕೂಡಲ ಸಂಗಮದೇವ ಭಕ್ತ ಕಾಯ ಮಮಕಾಯನಾಗಿ?

(೨) ಶ್ರೀಗುರುವು ಪೂರ್ವಾಶ್ರಯವ ಕಳೆದು, ಪುನರ್ಜಾತನ ಮಾಡಿದ ಬಳಿಕ ಪಂಚಭೂತ ಕಾಯವ ಕಳೆದು, ಪ್ರಸಾದ ಕಾಯವ

ಮಾಡಿದ ಬಳಿಕ, ವಾಯು ಪ್ರಾಣಿಯು ಕಳೆದು, ಲಿಂಗ ಪ್ರಾಣಿಯ
ಮಾಡಿದ ಬಳಿಕ, ಎಲ್ಲಿಯು ಕುಲ ಸೂತಕ, ಎಲ್ಲಿಯು ಛಲ ಸೂತಕ,
ಎಲ್ಲಿಯು ತನು ಸೂತಕ, ಎಲ್ಲಿಯು ಮನ ಸೂತಕ, ಎಲ್ಲಿಯು ನೆನಹು
ಸೂತಕ, ಎಲ್ಲಿಯು ಭಾವ ಸೂತಕ? ಇವನೆಂದೂ ಹಿಡಿಯಲಾಗದು.
ಕುಲ ಸೂತಕವುಳ್ಳನ್ನಕ್ಕ ಭಕ್ತನಲ್ಲ. ಛಲ ಸೂತಕವುಳ್ಳನ್ನಕ್ಕ ಮಹೇಶ್ವರ
ನಲ್ಲ. ತನು ಸೂತಕವುಳ್ಳನ್ನಕ್ಕ ಪ್ರಸಾದಿಯಲ್ಲ. ಮನ ಸೂತಕವುಳ್ಳನ್ನಕ್ಕ
ಪ್ರಾಣಲಿಂಗಿಯಲ್ಲ. ನೆನಹು ಸೂತಕವುಳ್ಳನ್ನಕ್ಕ ಶರಣನಲ್ಲ. ಭಾವ
ಸೂತಕವುಳ್ಳನ್ನಕ್ಕ ಲಿಂಗೈಕ್ಯನಲ್ಲ. ಇಂತೀ ಸೂತಕವು ಮುಂದು ಗೋತ್ರ
ಪ್ಪವರ ಮುಖವ ನೋಡಲಾಗದು ಗುಹೇಶ್ವರಾ.

(೩) ಪೂರ್ವಾಶ್ರಯವ ಕಳೆದೆವೆಂಬಿರಿ. ಪೂರ್ವವಾವುದು ಆಶ್ರ
ಯುವಾವುದು ಬಲ್ಲರೆ, ನೀವು ಹೇಳಿರೇ. ಪೂರ್ವವೆಂಬುದೇ ಬಂದ ಬಟ್ಟೆ,
ಆಶ್ರಯುವೆಂಬುದೇ ಕರಣಾದಿ ಗುಣಂಗಳು. ಈ ಉಭಯುವಳಿದು ಕೂಡಲ
ಚನ್ನಸಂಗಯ್ಯನಲ್ಲಿಪ್ಪ ಶರಣಂಗೆ ನಾನು ಶರಣೆಂಬೆನು.

ಇಂತು ಪೂರ್ವಾಶ್ರಯುವ ನಿವೃತ್ತಿಯು ಮಾಡಿದ ವೀರಮಾಹೇ
ಶ್ವರನು ಲಿಂಗವನರಿದು ಅರಿತಿಹೆನೆಂಬ ಸುಖವನಿದಿರಿಟ್ಟು ನುಡಿದು ತೋರಿ
ದೊಡೆ ಭಿನ್ನವಾದುದೆಂದು ವಾಗ್ ವೃತ್ತಿಯು ನಿರಸನಮಂ ಮಾಡುತ್ತಿ
ರಲು ಮುಂದೆ ವಾಗದ್ವೈತ ನಿರಸನಸ್ಥಲವಾದುದು.

---

## ೪. ವಾಗದ್ವೈತ ನಿರಸನಸ್ಥಲ.

(೧) ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ,
ರಾಗ, ದ್ವೇಷವೆನಿಸುವ ಒಡಲಿದೆ. ರಾಗ ದ್ವೇಷ ಗಮನಾಗಮನಂಗಳ
ರುತ್ತಿದೆ. ಬ್ರಹ್ಮವಾನೆಂಬ ಬರಿಯ ವಾಗದ್ವೈತದಲ್ಲಿ ಫಲವಿಲ್ಲ. ನಂಬು
ಸುಖಸಾಗರವನರಿ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

(೨) ಶೂನ್ಯವ ನುಡಿದು ದುರ್ಗತಿಗಿಳಿವರ, ಅದ್ವೈತವ ನುಡಿದು
ಅಹಂಕಾರಿಗಳಾದವರ, ಬ್ರಹ್ಮವ ನುಡಿದು ಭ್ರಮಿತರಾದವರ, ತ್ರಿಕಾಲ

ಲಿಂಗ ಪೂಜೆಯ ಮಾಡುವವರ ದುರಾಚಾರಿಗಳ ಮೆಚ್ಚ ಕೂಡಲ ಚೆನ್ನ ಸಂಗ ನಿಮ್ಮ ಶರಣ.

(೩) ಹೊನ್ನ ತೂಗಿದ ತ್ರಾಸು ಕಟ್ಟಳೆ ಹೊನ್ನಿಂಗೆ ಸರಿಯಪ್ಪುದೆ? ಸನ್ನಿಹಿತರಾದೆವೆಂಬ ನುಡಿಗೆ ನಾಚರು ನೋಡಾ! ಅರಸನಲ್ಲಿ ಸವೆದ ಕಬ್ಬುನದಂತೆ ಮುನ್ನ ಹೋದ ಹಿರಿಯರು ಲಿಂಗದ ಸುದ್ದಿಯ ನರಿಯರು. ಇನ್ನಾರು ಬಲ್ಲರು ಹೇಳಾ ಗುಹೇಶ್ವರಾ?

(೪) ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯದ ನುಡಿವುದೇನು? ಆದಿಯ ಅನಾದಿಯ ಸುದ್ದಿಯ ಕೇಳಿದ ಡೇನು, ಹೇಳಿದಡೇನು, ತನ್ನಲ್ಲಿ ಮರ್ಮದ ತಾನರಿಯದನ್ನಕ್ಕ ಉನ್ಮನಿಯ ರಹಸದ ಮನ ಪವನದ ಮೇಳ ಚನ್ನಮಲ್ಲಿಕಾರ್ಜುನಯ್ಯನ ಭೇದಿಸ ಲರಿಯದವರು?

(೫) ಗತಿ ಮತಿ ಶಬ್ದ ಚೈತನ್ಯವುಳ್ಳನ್ನಕ್ಕ ಕ್ರಿಯಂತೆ ನಡೆವುದು. ಉರವಣೆ ಬೇಡ ಕಂಡಾ ಎಲೆ ಮನವೇ. ಕ್ರಿಯಂತೆ ನುಡಿವುದು. ಹೂಮಿಡಿಯ ಹರಿವಡೆ, ಹಣ್ಣಾಗಬಲ್ಲುದೇ? ಲಿಂಗದಲ್ಲಿ ಮನ ಲೀಯವಾಗದನ್ನಕ್ಕ ದೇವ ಸಕಳೇಶ್ವರ ನೋಲಿಸಲು ಬೇಕಯ್ಯ.

(೬) ಕೆರೆಯಲುಂಡು, ತೊರೆಯ ಪೊಗಳುವರು, ಅತಿ ಉತ್ಕಟದ ಪರಬ್ರಹ್ಮದ ನುಡಿವವರು. ಸಹಜ ಪಿನಾಕಿಯ ಬಲೆಯಲ್ಲಿ ಸಿಲುಕಿ, ಭವದ ಹರಿಯಲರಿಯರು. ವಿಷಯವಳಿಯದೆ ಇಲ್ಲವೆಯ ನುಡಿವ ಹಿರಿಯರಿಗೆ ಲಿಂಗದ ಮಾತೇಕೆ ಗುಹೇಶ್ವರಾ?

(೭) ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಕುದುರೆಯ ಬಯಸುವರು ವೀರರೂ ಅಲ್ಲ, ಧೀರರೂ ಅಲ್ಲ ಇದು ಕಾರಣ ನೆರೆ ಮೂರು ಲೋಕವೆಲ್ಲ ಹಲ್ಲಣವ ಹೊತ್ತುಕೊಂಡು ತೊಳಲುತ್ತೈದಾರೆ. ಗುಹೇಶ್ವರ ಲಿಂಗವನವರೆತ್ತ ಬಲ್ಲರೋ?

(೮) ಹವಣಿಲ್ಲದ ಶಾಖೆಯ ಕಪಿ ಹಿಡಿಯಲೊಲ್ಲದು. ಗಮನವಿರದೆ ಪಿಕ ಶಿಶು ನುಡಿಯದು. ಪ್ರಭಾತವಲ್ಲದೆ ಉಲಿಯದು ಕುಕ್ಕುಟ.

ಇಂತೀ ತ್ರಿವಿಧದ ಭೇದವ ನೋಡದೇ ಭಕ್ತರಪ್ಪಡೆ? ಹೂಮಿಡಿಯ
ಹರಿದಡೆ ಹಣ್ಣಪ್ಪುದೇ? ಹಸಿವು ತೃಷೆ ವಿಷಯವುಳ್ಳನ್ನಕ್ಕ ಅಪ್ಯೃತ
ಉಂಟೇ? ಜಗದೊಳಗೆ ತನ್ನ ಮರೆದು ಲಿಂಗವ ಮರೆವುದು, ತನ್ನ
ಮರೆಯದೆ ಲಿಂಗವ ಮರೆವಯೋಗವದೆಂತಾದುದೋ? ಸುಡು ಸುಡು
ಅವಂದಿರು ಗುರುದ್ರೋಹಿಗಳು, ಆಚಾರ ಭ್ರಷ್ಟರು. ಈ ಉಭಯ ತನು
ಗುಣ ನಾಸ್ತಿಯಾಗದನ್ನಕ್ಕ ಸತ್ಕ್ರಿಯಿಂದ ಮಾಡುವುದು ಲಿಂಗ ದಾಸೋ
ಹವನು. ಭಯಭಕ್ತಿಯಿಂದ ಮಾಡುವದು ಜಂಗಮ ದಾಸೋಹವ. ತನು
ಕರಗಿ ಮನ ಬೆರಸಿ, ನಿಮಗೆ ಮಾಡದ ವ್ರತಗೇಡಿಗಳ ಎನಗೊಮ್ಮೆ
ತೋರದಿರಾ ಗುಹೇಶ್ವರಾ.

(೯) ವಿಷಯ ದಶ ಪವನವ ತನ್ನ ವಶಕ್ಕೆ ತಂದು ನಿಲಿಸಿ,
ಸುಷುಮ್ನ ಸುಸರದ ಊರ್ಧ್ವ ಪದವನರಿದೆನೆಂದು ನಾಲಿಗೆಯ ನಳಿ
ಕೊನೆಯ ಲಂಬಿಕಾ ಸ್ಥಾನವಾಗಿ ಸಸಿಯಮೃತದ ದಣಿಯುಂಡು ಸುಖಿ
ಯಾದೆನೆಂಬುದು ಇವರೆಲ್ಲರೂ ಉಪಾಧಿಯಾದಿಯನರಿಯದೆ ಹೋದರು
ಸಿಮ್ಮಲಿಗೆಯ ಚಿನ್ನಾದವೆಂಬ ಲಿಂಗದಲ್ಲಿ ಬಯಲಮೃತದ ನುಡಿದ
ನುಡಿವರು.

(೧೦) ಗುರುಸಾಧಕರ ಕಾಣೆನಯ್ಯಾ! ಬಲ್ಲೆನೆಂಬವರು ಹೊಲಬು
ಗೆಟ್ಟರು. ಲಿಂಗ ಸಾಧಕರ ನಾರನೂ ಕಾಣೆನಯ್ಯಾ! ಬಲ್ಲೆನೆಂಬವರು
ಹೊಲಬುಗೆಟ್ಟರು. ಪಾದೋದಕ ಪ್ರಸಾದ ಸೇವಕರ ನಾರನೂ ಕಾಣೆ
ನಯ್ಯಾ. ಬಲ್ಲೆನೆಂಬವರು ಹೊಲಬುಗೆಟ್ಟರು. ಇದು ಕಾರಣ ಕೂಡಲ
ಚನ್ನಸಂಗಯ್ಯ ವಚನಸಾಧಕರ ಕಂಡು ಮನ ನಾಚಿತ್ತು.

(೧೧) ಜಗವಂದ್ಯರೆಂದು ನುಡಿದು ನಡೆವರು ನೋಡಾ! ಭವ
ಬಂಧನದ ಕುಣಿಕೆಯ ಕಳೆಯಲರಿಯರು ನೋಡಾ! ಭವವು ತಮ್ಮ
ತುಳಿತುಳಿದು ಕೊಂದಿತ್ತು ನೋಡಾ! ಶಬ್ದವೇದಿಗಳೆಂದು ನುಡಿದು
ನಡೆವರು ನೋಡಾ! ನಿಃಶಬ್ದ ವೇಧಿಸದಿರ್ದಡೆ ಗುಹೇಶ್ವರ ನೋಡಿ
ನಗುತಿರ್ದ ನೋಡಿರೇ.

(೧೨) ಪಂಚಭೂತ ಸೂತಕದ ಬಳಿವಿಡಿದು, ಪ್ರಜ್ವಲಿಸುವ ಆತ್ಮ
ಜ್ಯೋತಿ ಎಂಬುದು ಮಾತಿನೊಳಗಲ್ಲ. ನಾದಬಿಂದು ಕಳಾತೀತನೆಂದು

ನುಡಿವರು. ಹೆಸರಿಲ್ಲದ ಬಯಲ ತಮ್ಮ ತಮ್ಮ ಮುಖಕ್ಕೆ ಹೆಸರಿಟ್ಟು ತಮ್ಮ ತಮಗೆ ಕರತಳಾಮಳಕವೆಂಬರು. ಅದರ ಆದಿ ಅಂತ್ಯವನರಿಯರು. ಎಂತು ಬಲ್ಲರು ನಿಮ್ಮಲಿಗೆಯ ಚನ್ನರಾಮನನು ಶಬ್ದದ ಉದ್ದೇಶಿಗಳು?

ಇಂತು ವಾಗದ್ವೈತವ ನಿವೃತ್ತಿಯಂ ಮಾಡಿ ಮನದ ಸಂಚಲವ ನೀದು ಸರ್ವಾಂಗದಲ್ಲಿ ಲಿಂಗವು ಭರಿತವೆಂಬುದನರಿದ ವೀರಮಾಹೇಶ್ವರನು ಒಮ್ಮೆ ಆಹ್ವಾನಿಸಿ ಹಿಡಿದು ಒಮ್ಮೆ ವಿಸರ್ಜಿಸಿ ಬಿಡುವುದಕ್ಕೆ ತೆರಹು ಕಾಣದೆ ಆಹ್ವಾನ ವಿಸರ್ಜನವೆಂಬೆರಡನು ನಿರಸನವಂ ಮಾಡುತ್ತಿರಲು ಮುಂದೆ ಆಹ್ವಾನ ನಿರಸನಸ್ಥಲವಾದುದು.

---

## ೫. ಆಹ್ವಾನ ನಿರಸನಸ್ಥಲ.

(೧) ಆಹ್ವಾನಿಸಿ ಕರೆವಲ್ಲಿ ಎಲ್ಲಿರ್ದನೋ ಈರೇಳು ಲೋಕ ಹದಿನಾಲ್ಕು ಭುವನಂಗಳನೊಳಕೊಂಡಿಪ್ಪ ದಿವ್ಯ ವಸ್ತು? ಮತ್ತೆ ವಿಸರ್ಜಿಸಿ ಬಿಡುವಾಗ ಎಲ್ಲಿ ಅಡಗಿರ್ದನೋ? ಮುಳ್ಳೂರ ತೆರಹಿಲ್ಲದಿಪ್ಪ ಅಖಂಡ ವಸ್ತು ಬರಿಯ ಮಾತಿನ ಬಳಕೆಯ ತೂತ ಜ್ಞಾನವ ಬಿಟ್ಟು, ನೆಟ್ಟನೆ ತನ್ನ ಕರಸ್ಥಲದೊಳಗೆ ಇರುತಿಪ್ಪ ಇಷ್ಟಲಿಂಗವ ದಿಟ್ಟಿಸಿ ನೋಡಲು, ಅಲ್ಲಿ ತನ್ನ ಮನಕ್ಕೆ ಮನ ಸಂಧಾನವಾದ ದಿವ್ಯ ನಿಶ್ಚಯ ಒದಗಿ ಆ ದಿವ್ಯ ನಿಶ್ಚಯದಿಂದ ಕುಳವಡಗಿ ಅದ್ವೈತವಪ್ಪುದು. ಇದು ಕಾರಣ, ನಮ್ಮ ಕೂಡಲ ಸಂಗನ ಶರಣರು ಆಹ್ವಾನ ವಿಸರ್ಜನವೆಂಬುಭಯ ಜಡತೆಯ ಬಿಟ್ಟು ತಮ್ಮ ತಮ್ಮ ಕರಸ್ಥಲದಲ್ಲಿ ನಿಶ್ಚಯಿಸಿದರಿಗೆ ಸ್ವಯ ಲಿಂಗವಾದ ಕಾಣಿರೋ.

(೨) ಆಹ್ವಾನವಿಲ್ಲ ಪ್ರಾಣಲಿಂಗವಾಗಿ. ವಿಸರ್ಜನವಿಲ್ಲ ಆ ಲಿಂಗ ನೆಲೆಗೊಂಡಿಪ್ಪುದಾಗಿ. ಇದು ಕಾರಣ ಆಹ್ವಾನ ವಿಸರ್ಜನವಿಲ್ಲದ ಪರಿ ಜೇರೆ. ಅಂಗ ಸಂಗವೇ ಲಿಂಗ, ಲಿಂಗ ಸಂಗವೇ ಮನ. ಕೂಡಲ ಚನ್ನಸಂಗನ ಶರಣ ಸುಯಿಧಾನಿ.

(೩) ನಿತ್ಯ ಪರಿಪೂರ್ಣನೆಂದು, ಪ್ರತ್ಯಕ್ಷ ಶೃತಿ ಸಾರುತ್ತಿರಲು, ಮತ್ತೆ ಪರಿಭಾವಿಸಲೇನುಂಟು ಹೇಳಾ? ಕರೆವರೆ ಬಂದಿತ್ತು, ಕಳೆವಡೆ

ಹೋಯಿತ್ತು, ಎಂಬ ಕರ್ಮ ಕೌಟಿಲ್ಯದಲ್ಲಿ ಬಂದವನಲ್ಲ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಜಡರುಗಳಿಗೆಲ್ಲಿಯದೊ?

(೪) ಆಹ್ವಾನವಿಲ್ಲದ ಪ್ರಾಣ ಲಿಂಗವಾಗಿ, ವಿಸರ್ಜನವಿಲ್ಲದ ಲಿಂಗ ನೆಲೆಗೊಂಡಿಪ್ಪುದಾಗಿ, ಇದು ಕಾರಣ ಆಹ್ವಾನ ವಿಸರ್ಜನವಿಲ್ಲದ ಶರಣನ ಪರಿ ಬೇರೆ. ಅಂಗ ಸಂಗವೇ ಲಿಂಗ, ಲಿಂಗ ಸಂಗವೇ ಮನ. ಕೂಡಲ ಚನ್ನಸಂಗನ ಶರಣ ಸುಯಿಧಾನಿ.

(೫) ಆಹ್ವಾನಿಸುವಲ್ಲಿ ಪ್ರಾಣ ಲಿಂಗವಿಲ್ಲ. ವಿಸರ್ಜಿಸುವಲ್ಲಿ ಲಿಂಗ ವಂತನೆಂತೆಂಬೆ? ಆಹ್ವಾನ ವಿಸರ್ಜನವಿಲ್ಲದ ಪರಿ ಬೇರೆ. ಲಿಂಗಭೋ ಗೋಪ ಭೋಗವಲ್ಲದೆ, ಅನರ್ಪಿತವ ಭೋಗಿಸುವನಲ್ಲ. ಅವಾಗಳೂ ಪ್ರಾಣಲಿಂಗದ ಸಂಗದಲಿಪ್ಪನು. ಇದು ಕಾರಣ ಕೂಡಲ ಚನ್ನಸಂಗ ಯ್ಯನಲ್ಲಿ ನಮ್ಮ ಶರಣಂಗೆ ನಮೋನಮೋ ಎಂಬೆನು.

(೬) ಜ್ಞಾನವೇ ಪ್ರಸಾದಕಾಯ, ಜ್ಞೇಯವೆ ಚಿನ್ಮಯಲಿಂಗ, ಜ್ಞಾನ ಜ್ಞೇಯ ಸಂಪುಟದಿಂದ ಶರಣನೆನಿಸಿಕೊಂಡು ಆ ಜಂಗಮದ ಅಂತ ರಂಗದಲ್ಲಿ ನೀನೇ, ಬಹಿರಂಗದಲ್ಲಿ ನೀನೇ ಎಂದು ನೋಡುವರೆ ಶರ ಣನ ಕಣ್ಣ ಮೊದಲಲ್ಲಿ ನೀನೇ. ಶಿವಜ್ಞಾನ ಸಂಪನ್ನನಾದ ಶರಣಂಗೆ ಆಹ್ವಾನ ವಿಸರ್ಜನವೆಲ್ಲಿಯದೋ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ?

ಇಂತು ಆಹ್ವಾನ ವಿಸರ್ಜನವೆಂಬುಭಯ ಕುಳವನು ನಿವೃತ್ತಿಯಂ ಮಾಡಿದ ವೀರಮಾಹೇಶ್ವರನು ಅಷ್ಟ ತನುವಿನಿಂದಾದ ಸಕಲ ಪ್ರಪಂಚ ಮಿಥ್ಯೆ ಎಂದರಿದು ಅಷ್ಟತನುಗಳ ಮೂರ್ತಿಯ ನಿರಸನವಂ ಮಾಡುತ್ತಿರಲು ಮುಂದೆ ಅಷ್ಟ ತನುಮೂರ್ತಿ ನಿರಸನಸ್ಥಲವಾದುದು.

---

## ೬. ಅಷ್ಟತನುಮೂರ್ತಿ ನಿರಸನಸ್ಥಲ.

(೧) ಅಷ್ಟತನುಮೂರ್ತಿ ಲಿಂಗವೆಂದು ಎಂಬರು ಕೇಳಿರಯ್ಯ, ಅನಾದಿಯ ಮಗನು ಆದಿ, ಆದಿಯ ಮಗನತೀತ, ಅತೀತನ ಮಗನು

ಆಕಾಶನು, ಆಕಾಶನ ಮಗನು ವಾಯು, ವಾಯುವಿನ ಮಗನು ಅಗ್ನಿ, ಅಗ್ನಿಯ ಮಗನು ಅಪ್ಪು, ಅಪ್ಪುವಿನ ಮಗನು ಪೃಥ್ವಿ, ಪೃಥ್ವಿಯಿಂದ ಸಕಲ ಜೀವರೆಲ್ಲರು ಉದ್ಭವಿಸಿದರು ಗುಹೇಶ್ವರಾ.

ಟೀಕು:— ಸುಜ್ಞಾನಿತಸ್ಯ ಲಿಂಗವೆಂಬುದೀಗ ಅನಾದಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನಿತಸ್ಯ ಲಿಂಗದ ಚಿತ್ಪ್ರಭಾ ಬೆಳಗೇ ಮೂರ್ತಿಯಾಯಿತ್ತೆಂಬುದೀಗ ಅನಾದಿಯ ಮಗ ಆದಿ ಎಂಬ ಶಬ್ದಕ್ಕರ್ಥ. ಅಂತು ಚಿತ್‌ಪ್ರಭಾಂಗ ಸ್ವರೂಪವಾದ ಲಿಂಗವು ಪಂಚಸಾದಾಖ್ಯ ಮುಖವಸ್ಯದಿ ಪಂಚಕಲಾಂಶ ಶಕ್ತಿಯುತವಾಗಿ ಅತಿ ಘನತರವನುಳ್ಳ ಸದಾಶಿವನಾದನೆಂಬುದೀಗ ಆದಿಯ ಮಗನತೀತನೆಂಬ ಶಬ್ದಕ್ಕರ್ಥ. ಅಂತಪ್ಪ ಸದಾಶಿವನ ಪಂಚಮುಖಂಗಳಿಂದ ಪಂಚತತ್ವಂಗಳಾದವು. ಆ ಪಂಚತತ್ವಂಗಳಿಂದ ಇಪ್ಪತ್ತೈದು ತತ್ವಂಗಳಾದವು. ಆ ಇಪ್ಪತ್ತೈದನೆಯದು ಜೀವನಾದ ಕಾರಣ ಪಂಚತತ್ವಂಗಳಾದ ಸಕಲ ಜೀವಂಗಳು ಹುಟ್ಟಿದವೆಂಬುದು ಏಕಾರ್ಥ. ಅಂತಾದ ಶಿವಕಲಾಂಶಕವಾದ ಪಂಚಬ್ರಹ್ಮವು ಯವೀ ಜಗತ್ತೆಂಬುದೀಗ ವಚನದ ತಾತ್ಪರ್ಯಾರ್ಥ.

(೨) ಅಷ್ಟತನುಮೂರ್ತಿ ಲಿಂಗವೆಂಬ ಕಷ್ಟದ ಮಾತ ಕೇಳಲಾಗದು. ಪೃಥ್ವಿಯಂತೆ ಕಠಿಣವುಳ್ಳಾತನೇ? ಅಪ್ಪುವಿನಂತೆ ಭರಿತವುಳ್ಳಾತನೆ? ತೇಜದಂತೆ ತೃಣಕಾಷ್ಟವಿಲ್ಲದಿರ್ದಡೆ ನಂದುವಾತನೇ? ವಾಯುವಿನಂತೆ ಚಲನೆಯುಳ್ಳಾತನೇ? ಆಕಾಶದಂತೆ ಬಚ್ಚಬರಿಯ ಬಯಲಾದಾತನೇ? ಸೋಮಸೂರ್ಯರಂತೆ ದಿವಾರಾತ್ರೆಯ ನಡಸುವಾತನೇ? ಆತ್ಮನಂತೆ ಜನನ ಮರಣವುಳ್ಳಾತನೇ? ಇದುಕಾರಣ ಕೂಡಲ ಚನ್ನಸಂಗ ನೀನು ನಿನ್ನಂತೆ, ಇವರೆಲ್ಲರೂ ನೀನಿರಿಸಿದಂತೆ.

(೩) ಪೃಥ್ವಿ ಲಿಂಗವೆಂದು ಗತವಾದರು ಹಲಬರು. ಅಪ್ಪುಲಿಂಗವೆಂದು ತಪ್ಪಿದರು ಶಿವಪಥಕ್ಕೆ ಹಲಬರು. ತೇಜ ಲಿಂಗವೆಂದು ವಾದಿಗಳಾದರು ಹಲಬರು. ವಾಯು ಲಿಂಗವೆಂದು ಪೂಜಿಸಿ ವಾಯುವಾದರು ಹಲಬರು. ಆಕಾಶ ಲಿಂಗವೆಂದು ಶೂನ್ಯವಾದಿಗಳಾದರು ಹಲಬರು. ಇಂತೀ ಹುಸಿ ಶಬ್ದವನೆ ತೊಡೆದು ನಿಜಜಂಗಮ ನಿಜಲಿಂಗ ನಿತ್ಯ ಪ್ರಸಾದದ ನಿಜವ ತೋರಿದಾತ ಬಸವಣ್ಣ ಕಾಣಾ ಕಲಿದೇವಯ್ಯಾ.

(೪) ಪಂಚಾಶತ್ ಕೋಟಿ ವಿಸ್ತೀರ್ಣ ಭೂಮಂಡಲ ದಶದಿಕ್ಕುಗಳೆಂಬವರೊಳಗಿಲ್ಲ. ಗಗನಮಂಡಲದೊಳಗೆ ಬೆಳಗುವ ರವಿಶಶಿಗಳುದಯದ ಬಳಿವಿಡಿದು ಸುಳಿವವರೊಳಗಿಲ್ಲ. ಅಂತಿಂತಾಗದ ಮುನ್ನ ನಿನ್ನ ಇಲ್ಲ. ಬೆಸಗೊಂಬಡೆ ಹೇಳಿಹೆ. ನಿನ್ನ ವಶಕ್ಕೆ ಬಾರದು ಕೇಳಾ ನಿಮ್ಮ ಲಿಗೆಯ ಚನ್ನರಾಮನೆಂಬ ಲಿಂಗವಿಲ್ಲ. ಬರಿಯ ಮಾತೇನು?

(೫) ಅಷ್ಟತನುಮೂರ್ತಿ ಶಿವನೆಂಬ ಕಷ್ಟಜೀವಿಗಳನೇನೆಂಬೆನಯ್ಯ! ಯುಗಜುಗಂಗಳು ಪ್ರಳಯವಹಲ್ಲಿ ಧರೆ ಜಲದಲ್ಲಿ ಅಡಗಿತ್ತು. ಜಲ ಅಗ್ನಿಯಲ್ಲಿ ಅಡಗಿತ್ತು. ಅಗ್ನಿ ವಾಯುವಿನಲ್ಲಿ ಅಡಗಿತ್ತು. ವಾಯು ಆಕಾಶದಲ್ಲಿ ಅಡಗಿತ್ತು. ಆಕಾಶ ಅತೀತನಲ್ಲಿ ಅಡಗಿತ್ತು. ಅತೀತ ಆದಿಯೊಳಗಡಗಿತ್ತು. ಆದಿ ಅನಾದಿಯೊಳಗಡಗಿತ್ತು. ಅನಾದಿ ನಿಜದೊಳಗಡಗಿತ್ತು. ಇಂತೀ ಅಷ್ಟ ತನು ಒಂದರೊಳಗೊಂದೊಂದು ಹುಟ್ಟುವಲ್ಲಿ ಎಂದಳಿದನೆಂದು ಹುಟ್ಟಿದನೆಂದು ಬಲ್ಲವರುಂಟೇ? ಹುಟ್ಟಿದನಳಿದನೆಂಬ ಶಬ್ದವ ನುಡಿಯಲಾಗದು. ಇದು ಕಾರಣ ನಮ್ಮ ಮಹಾಘನ ಸೋಮೇಶ್ವರನು ಮಾಡಿದಡಾದವು, ಬೇಡೆಂದಡೆ ಮಾದವು.

(೬) ಹೊರಗೆಂಟು ತನು, ಒಳಗೆ ನಿರಂಜನಜ್ಯೋತಿ. ತಿಳಿಯಲ್ಲದಿಪ್ಪುದನೆಲ್ಲರೂ ಬಲ್ಲವರಿಲ್ಲ ಕೇಳಿರೋ. ಶಿವನಲ್ಲದೆ ಬೇರೆ ದೈವವಿಲ್ಲ. ಹುಲಿಗೆರೆಯ ವರದ ಸೋಮನಾಥನು ಏಕೋ ರುದ್ರನೆಂಬುದು ಶ್ರುತಿ.

ಇಂತು ಅಷ್ಟತನು ಮೂರ್ತಿಗಳ ನಿರಸನವಂ ಮಾಡಿದ ವೀರ ಮಾಹೇಶ್ವರನು ಶರಣ ಭರಿತ ಶಿವನೆಂದರಿದು ಪ್ರತಿಷ್ಠಿಸಿ ಜಗಭರಿತ ಶಿವನೆಂಬ ಸರ್ವಗತ ಶಬ್ದ ನಿರಸನವಂ ಮಾಡುತ್ತಿರಲು ಮುಂದೆ ಸರ್ವಗತ ನಿರಸನಸ್ಥಲವಾದುದು.

---

## ೭. ಸರ್ವಗತ ನಿರಸನಸ್ಥಲ.

(೧) ಸರ್ವವೂ ಶಿವನಿಂದ ಉದ್ಭವಿಸಿದವೆಂದಡೆ, ಆ ಉದ್ಭವಿಸಿದವೆಲ್ಲ **ಶಿವನೇ**? ಸಕಲ ಬೀಜವನೊಕ್ಕಲಿಗ ಬಿತ್ತಿದನೆಂದಡೆ, ಆ ಬಿತ್ತ ತಾನೊಕ್ಕಲಿಗನೇ? ಮಡಕೆಯ ಕುಂಬರ ಮಾಡಿದನೆಂದಡೆ ಆ ಮಡಕೆ

ತಾ ಕುಂಬರನೇ? ಕಬ್ಬುನವ ಕಮ್ಮಾರ ಮಾಡಿದನೆಂದಡೆ ಆ ಕಬ್ಬುನ ತಾ ಕಮ್ಮಾರನೇ? ಈ ಪರಿಯಲ್ಲಿ ಸಮಸ್ತ ಜಗತ್ತು ಸಕಲ ಸಚರಾಚರವನು ಶಿವನು ಮಾಡಿದನೆಂದಡೆ ಆ ಸಚರಾಚರವೆಲ್ಲವು ಶಿವನೇ? ಹಾಗಾದಡೆ ಅಷ್ಟಾದಶ ವರ್ಣಂಗಳೇಕಾದವು? ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳೇಕಾದವು? ಸುಖದುಃಖ ಸ್ವರ್ಗ ನರಕಂಗಳೇಕಾದವು? ಆಚಾರ ಅನಾಚಾರಂಗಳೇಕಾದವು? ಪುಣ್ಯ ಪಾಪ ಭವಿ ಭಕ್ತರೆಂದೇಕಾದವು? ಇದುಕಾರಣ ಸದ್ಭಕ್ತಿ ಸದಾಚಾರದಲ್ಲಿಪ್ಪನು. ಅಂತಲ್ಲದೆ ಸರ್ವವೂ ಶಿವನೆಂದಡೆ ಅಘೋರ ನಾಯಕ ನರಕ ಕೂಡಲ ಚನ್ನಸಂಗಯ್ಯ.

(೨) ಸರ್ವಗತ ಶಿವನೆಂಬುದೀ ಲೋಕವೆಲ್ಲ. ಶಿವ ಶಿವಾ! ನಿರ್ಬುದ್ಧಿ ಜನಂಗಳೆಲ್ಲರನೇನೆಂಬೆ? ಸರ್ವವೂ ಶಿವನಾದಡೆ, ಹಿಂದಣ ಯುಗಪ್ರಳಯಂಗಳೇಕಾದವು? ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳೇಕಾದವು? ಸೂತ್ರಧಾರಿ ಸರದೊಳಗಾಗಿ ಯಂತ್ರವನಾಡಿಸುವಲ್ಲಿ ಹೊರಗಿದ್ದಾಡಿಸುವನಲ್ಲದೆ ತಾನೊಳಗಿದ್ದಾಡಿಸುವನೇ? ಹಾಗೆ ಶಿವನು ತನ್ನಾಧೀನವಾಗಿಪ್ಪ ತ್ರಿಜಗದ ಸಚರಾಚರಂಗಳೆಂಬ ಯಂತ್ರವನು ಯಂತ್ರವಾಹಕನಾಗಿ, ಆಡಿಸುವನಲ್ಲದೆ ತಾನಾಡುವನೇ? ಸರ್ವ ಯಂತ್ರವೂ ತಾನಾದಡೆ ಸಕಲ ತೀರ್ಥ ಕ್ಷೇತ್ರಯಾತ್ರೆಗೆ ಹೋಗಲೇಕೆ? ಇದು ಕಾರಣ ಸರ್ವವೂ ಶಿವನೆನಲಾಗದು. ಮತ್ತೆಲ್ಲಿಹನೆಂದಡೆ, ಸದಾಚಾರ ಸದ್ಭಕ್ತಿ ಸನ್ನಿಹಿತ ಲಿಂಗಜಂಗಮದೊಳಗಿಪ್ಪನು. ಮತ್ತೆಲ್ಲಿಯೂ ಇಲ್ಲ ಕೂಡಲ ಚನ್ನಸಂಗಯ್ಯ.

(೩) ಯತ್ರ ಜಗಸ್ತತ್ರ ಶಿವನೆಂಬ ಬಾಲಭಾಷೆಯ ಕೇಳಲಾಗದು. ಶಿವ ಶಿವಾ ಯತ್ರ ಜೀವಸ್ತತ್ರ ಶಿವನಾದಡೆ, ಜೀವಂಗೆ ಜನನ ಮರಣ, ರುಜೆ, ಸಂಸಾರ, ಬಂಧನವೇಕೋ? ಯತ್ರ ಜೀವಸ್ತತ್ರ ಶಿವನಾದಡೆ, ಪುಣ್ಯ, ಪಾಪ, ಪ್ರಳಯ, ಕಾಲ, ಕಲ್ಪಿತನೇ ಶಿವನು? ಇದು ಕಾರಣ ಯತ್ರ ಜೀವಸ್ತತ್ರ ಶಿವನಲ್ಲ. ಉತ್ಪತ್ತಿ ಸ್ಥಿತಿ ಲಯ ಪ್ರಳಯ ರಹಿತನು, ಸದ್ಭಕ್ತರಲ್ಲಿಪ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ ಕೂಡಲ ಚನ್ನಸಂಗಯ್ಯ.

(೪) ಪರುಷದ ಪುತ್ತಳಿಗೆ ಕಬ್ಬುನದ ಆಭರಣಂಗಳುಂಟೇ? ಲೋಕದೊಳಗೆ ಲಿಂಗ, ಲಿಂಗದೊಳಗೆ ಲೋಕಗಳಾದೊಡೆ, ಹಿಂದಣ ಪ್ರಳಯಂಗಳೇಕಾದವು? ಇನ್ನು ಮುಂದಣ ಪ್ರಳಯಂಗಳಿಗಿನ್ನೆಂತೋ?

ಲೋಕವು ಲೋಕದಂತೆ, ಲಿಂಗವು ಲಿಂಗದಂತೆ. ಈ ಉಭಯದ ಭೇದವ ಗುಹೇಶ್ವರ ನಿಮ್ಮ ಶರಣನೇ ಬಲ್ಲ.

(೫) ಮಾಂಸಪಿಂಡವೆನಲೊಲ್ಲದೆ ಮಂತ್ರಪಿಂಡವೆಂದನು ಬಸವಣ್ಣನು. ಪಂಚಭೂತ ಕಾಯವೆನಲೊಲ್ಲದೆ, ಪ್ರಸಾದ ಕಾಯವೆಂದನು ಬಸವಣ್ಣನು. ವಾಯು ಪ್ರಾಣಿ ಎನಲೊಲ್ಲದೆ ಲಿಂಗಪ್ರಾಣಿ ಎಂದನು ಬಸವಣ್ಣನು. ಜಗಭರಿತ ಶಿವನೆಂಬೆನಲೊಲ್ಲದೆ ಶರಣಭರಿತ ಶಿವನೆಂದ ಕೂಡಲ ಚನ್ನಸಂಗಯ್ಯ.

ಇಂತು ಸರ್ವಗತ ನಿರಸನವಂ ಮಾಡಿದ ವೀರ ಮಾಹೇಶ್ವರನು ಸರ್ವ ಜಗದಲ್ಲಿ ಶಿವನಿಲ್ಲವೆಂಬೊಡೆ ಆ ಜಗವು ಶಿವನಿಂದ ಬೇರೆ ತೋರಲರಿಯವೆಂದರಿದು ಆ ಜಗದಲ್ಲಿ ಶಿವನು ಹೊದ್ದಿಯೂ ಹೊದ್ದದೆ ಬೆರಸಿ ಬೆರಸದೆ ಇಹನೆಂಬ ಕೃತ ನಿಶ್ಚಯವನುಂಟು ಮಾಡಿತೋರಲು ಮುಂದೆ ಶಿವ ಜಗನ್ಮಯ ಸ್ಥಲವಾದುದು.

---

## ೮. ಶಿವಜಗನ್ಮಯಸ್ಥಲ.

(೧) ಶಿವ ಜಗವಾಗಬಲ್ಲ. ಶಿವ ಜಗವಾಗದಿರಲೂ ಬಲ್ಲ. ಶಿವ ರೂಪಾಗಬಲ್ಲ. ಶಿವರೂಪಾಗದಿರಲೂ ಬಲ್ಲ. ಶಿವನಜಾಂಡ ಕೋಟಿಗಳ ಮಾಡಬಲ್ಲ. ಮಾಡದಿರಲೂ ಬಲ್ಲ. ಶಿವ ಕೆಡಿಸಬಲ್ಲ. ಕೆಡಿಸದಿರಲೂ ಬಲ್ಲ. ಶಿವ ಜಂಗಮವಾಗಿ ಪೂಜಿಸ ಬಲ್ಲ. ಶಿವ ಲಿಂಗವಾಗಿ ತಾನೇ ಪೂಜಿಸಿ ಕೊಳಲೂ ಬಲ್ಲ. ಶಿವ ಹೊರಗಾಗಿ ಅನ್ಯವು ಉಂಟೇ? ಇಲ್ಲ. ಉರಿಲಿಂಗಪೆದ್ದಿಪ್ರಿಯ ಗುರು ವಿಶ್ವೇಶ್ವರನು ವಿಶ್ವಕ್ಕೆಲ್ಲ ಮಾತಾಪಿತನು.

(೨) ಶಿವ ತನ್ನ ವಿನೋದಕ್ಕೆ ರಚಿಸಿದನನಂತ ವಿಶ್ವವನು. ರಚಿಸಿ ಏನು ವಿಶ್ವಕ್ಕೆ ಹೊರಗಾಗಿದ್ದನೇ? ಇಲ್ಲ. ವಿಶ್ವಮಯ ತಾನಾಗಿದ್ದನು. ವಿಶ್ವವೆಲ್ಲವೂ ತಾನಾದನೆಂದಡೆ, ವಿಶ್ವದ ಉತ್ಪತ್ತಿ ಸ್ಥಿತಿಲಯಕ್ಕೊಳಗಾದನೇ? ಇಲ್ಲ. ಅದೇನು ಕಾರಣವೆಂದಡೆ, ಅಜಾತನಾಗಿ ಉತ್ಪತ್ತಿ

ಇಲ್ಲ. ಸ್ಥಿತಿ ಕರ್ಮರಹಿತನಾಗಿ ಸ್ಥಿತಿಗೆ ಒಳಗಲ್ಲ. ಮರಣ ರಹಿತನಾಗಿ ಲಯಕೊಳಗಲ್ಲ. ಇಂತೀ ಗುಣತ್ರಯಂಗಳ ಹೊದ್ದಲರಿಯ. ತಾನಿಲ್ಲದೆ ವಿಶ್ವಕಾಧಾರವಿಲ್ಲಾಗಿ ದೂರಸ್ಥನಲ್ಲ. ತನ್ನಲ್ಲಿ ತಾನಲ್ಲದೆ ಅನ್ಯವೂ ತೋರಲರಿಯದಾಗಿ, ಇದಿರಿಲ್ಲ. ಇದಿರಿಲ್ಲಾಗಿ ವಿಶ್ವಮಯ ತಾನಾದುದೇ ಸತ್ಯ. ಅರಸು ಕಾಲಾಳಾಗಬಲ್ಲ ತನ್ನ ವಿನೋದಕ್ಕೆ. ಮರಳಿ ಅರಸಾಗಬಲ್ಲ. ನಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ.

(೩) ಘನಗಂಭೀರ ಮಹಾವಾರುಧಿಯಲ್ಲಿ ಫೇನತರಂಗ ಬುದ್ಬುದ ಶೀಕರಂಗಳಾದವಲ್ಲದೆ, ಬೇರಾಗಬಲ್ಲವೇ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳಾದವಲ್ಲದೆ, ಬೇರಾಗಬಲ್ಲವೆ? ಇದು ಬೇರೆಂಬ ಅರಿಮರುಳಗಳನೇನೆಂಬೆ? ವಿಶ್ವವನರಿದು ನೋಡಲು ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು ಬೇರಿಲ್ಲ.

(೪) ಜಲದೊಳಗಣ ಸೂರ್ಯನಂತೆ ಇಪ್ಪನಯ್ಯ ಶಿವನು. ಲೋಕಾದಿ ಲೋಕಂಗಳೊಳಗಿರ್ದಡೇನು? ಜಗದ ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷಕೊಳಗಾದಾತನೇ? ಅಲ್ಲ. ಅದೆಂತೆಂದೊಡೆ ಜಲದೊಳಗಣ ಪ್ರಕೃತಿಗಳು ಜಲಕ್ಕಲ್ಲದೆ ಸೂರ್ಯಂಗಿಲ್ಲವಾಗಿ, ಲೋಕದ ಸ್ಥಿತಿಗತಿ ಲೋಕಕ್ಕಲ್ಲದೆ ಶಿವಂಗಿಲ್ಲವಾಗಿ. ಅನಂತ ಕೋಟಿ ಬ್ರಹ್ಮಾಂಡಂಗಳು ತನ್ನ ಒಡಲೊಳಗೆ ಅಡಗಿದವೆಂದಡೆ, ತಾ ಹೊರಗಾಗಿ ಅಡಗದೆ ಮನುಂಟು? ಇದು ಕಾರಣ ನಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ವಿಶ್ವದೊಳಗೆ ಹೊದ್ದಿಯೂ ಹೊದ್ದದಿರಬಲ್ಲ, ವಿಶ್ವಾಧಿಪತಿಯಾಗಲೂ ಬಲ್ಲ.

ಇಂತು ಶಿವನು ಜಗವಾಗಬಲ್ಲ, ಜಗವಾಗದಿರಬಲ್ಲನೆಂದರಿತು, ಆ ಶಿವನ ತನ್ನೊಳಗಾಲಿಂಗಿಸಿ ಧರಿಸಿಕೊಂಡಿಪ್ಪ ವೀರ ಮಾಹೇಶ್ವರನಲ್ಲಿ ಆ ಶಿವನು ಭಕ್ತದೇಹಿಕ ದೇವನಾಗಿರ್ದ ಭೇದವೆಂತೆಂದಡೆ ಮುಂದೆ ಭಕ್ತದೇಹಿಕ ಲಿಂಗಸ್ಥಲವಾದುದು.

---

# ೯ ಭಕ್ತದೇಹಿಕ ಲಿಂಗಸ್ಥಲ

(೧) ಪ್ರಸಾದ ಕಾಯವಾದ ಬಳಿಕ, ಸರ್ವಾಂಗ ಉತ್ತಮಾಂಗ ಪ್ರಾಣಲಿಂಗವಾದ ಬಳಿಕ ಸದಾ ಸನ್ನಿಹಿತ ಲಿಂಗ ಶರಣನಲ್ಲಿ ಭಾವ ಭೇದವಿಲ್ಲ. ನಿರಂತರ ಲಿಂಗಸಂಗಿ ಅಕಾಯ ಭಕ್ತಕಾಯವೆಂದುದು ಕೂಡಲ ಚನ್ನಸಂಗಯ್ಯನ ವಚನ.

(೨) ಲಿಂಗವೇ ಪ್ರಾಣವಾಯಿತ್ತಾಗಿ ಆಚಾರ ವಿಚಾರವಿಲ್ಲವಯ್ಯಾ. ಪ್ರಸಾದ ಕಾಯವಾಯಿತ್ತಾಗಿ ಸತ್ವ ರಜ ತಮ ಕ್ರೋಧವಿಲ್ಲವಯ್ಯಾ. ಜಂಗಮಮುಖ ಲಿಂಗವಾದ ಕಾರಣ ಲಿಂಗದಲ್ಲಿ ಅನುಭವಿಸಿ ನೋಡು ತ್ತಿರ್ದೆನಯ್ಯಾ. ಭಕ್ತ ಕಾಯ ಮಮಕಾಯವಾಗಿ ಕೂಡಲ ಚನ್ನ ಸಂಗನಬಸವನಲ್ಲಿ ಸುಖಿಯಾಗಿರ್ದೆನಯ್ಯಾ.

(೩) ಅಣುರೇಣು ಮಹಾತ್ಮನೆಂಬರು. ಅಣು ರೇಣು ತೃಣ ಕಾಷ್ಠದೊಳಗೆ ಇಪ್ಪನೆಂಬರು ಅಪ್ಪನಯ್ಯ. ನಾನೆಲ್ಲಿಪ್ಪೆನಯ್ಯ! ಶರಣ ಸನ್ನಿಹಿತನು, ಭಕ್ತಕಾಯ ಮಮಕಾಯನು, ದಾಸೋಹ ಪರಿ ಪೂರ್ಣನು, ಸದಾ ಹೃದಯದಲ್ಲಿ ಸಿಂಹಾಸನವಾಗಿ ಅಗಲದಿಪ್ಪನು ಕಲಿ ದೇವಯ್ಯನು.

(೪) ವೇದದಲುಳ್ಳೊಡೆ, ಪ್ರಾಣವಧೆಯುಪ್ಪುದೇ? ಶಾಸ್ತ್ರದಲು ಳ್ಳೊಡೆ, ಸಮವಾಗದಿಪ್ಪನೇ? ಪರ್ವತದೊಳುಳ್ಳೊಡೆ, ಹೋದವರು ಮರಳಿ ಬಪ್ಪರೇ? ಸಿದ್ಧಿರ್ಬುದ್ಧಿ ಮಾನವರನೇನೆಂಬೆ? ಮನ ವಚನ ಕಾಯ ಶುದ್ಧವಾಗಿಪ್ಪಾತನ ಹೃದಯದಲ್ಲಿ ನಿಮ್ಮ ಕಂಡೆನೆಂದಾತ ಅಂಬಿಗ ಚೌಡಯ್ಯನು.

(೫) ಹುತ್ತ ಹೋರಿನೊಳಗೆ ಕಯ್ಯ ನಿಕ್ಕಿ ಪ್ಪವನೆನ್ನ ತಿಸುವೆಂದು ಹೆತ್ತ ತಾಯ ಮಗನ ಜೆಂಬತ್ತಿ ಬಪ್ಪಂತೆ ಬಪ್ಪೆ. ಅಯ್ಯ ಎಂದಡೆ 'ಓ' ಎಂಬೆ. ಅನ್ಯ ವಿಷಯಕ್ಕೆನ್ನ ಹತ್ತಲೀಯದೆ ಎತ್ತಿತ್ತ ನೋಡಿದಡ ತತ್ತ ಸೊಡ್ಡಳಾ.

(೬) ಪರುಷದ ಪರ್ವತದೊಳಗೆ ಕಬ್ಬಿನಂಗಳುಂಟೇ ಅಯ್ಯ? ಅಷ್ಟವಿಧಾರ್ಚನೆ ಷೋಡಶೋಪಚಾರ ಸನ್ನಿಹಿತಂಗೆ ಅವಗುಣಂಗಳುಂಟೇ ಅಯ್ಯ? ಭಕ್ತಕಾಯ ಮಮಕಾಯ ಕೂಡಲ ಚನ್ನಸಂಗ ನಿಮ್ಮ ಶರಣ.

(೭) ನೆಲನನೊಳಕೊಂಡ ಸಲಿಲ, ಸಲಿಲವನೊಳಕೊಂಡ ಅನಲ, ಅನಲವನೊಳಕೊಂಡ ಅನಿಲ, ಅನಿಲವನೊಳಕೊಂಡ ಆಕಾಶ, ಆಕಾಶವನೊಳಕೊಂಡ ಮನ, ಮನವನೊಳಕೊಂಡ ಬುದ್ಧಿ, ಬುದ್ಧಿಯನೊಳಕೊಂಡ ಪ್ರಕೃತಿ, ಪ್ರಕೃತಿಯನೊಳಕೊಂಡ ಪುರುಷ, ಪ್ರಕೃತಿಪುರುಷ ರೂಪು ಜಗವೆಲ್ಲ, ಇವೆಲ್ಲವನೊಳಕೊಂಡ ಜ್ಞಾನ, ಆ ಜ್ಞಾನಕಾಯವೇ ಶಿವಭಕ್ತ, ಆ ಭಕ್ತದೇಹಿಕದೇವ ನಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ.

(೮) ಭಾವ ಮೂರ್ತಿಯಾಗಬೇಕು ಆ ಲಿಂಗಕ್ಕೆ. ಅರಿವು ಮೂರ್ತಿಯಾಗಬೇಕು ದಾಸೋಹಕ್ಕೆ ಸತ್ಕ್ರಿಯೆ ಮೂರ್ತಿಯಾಗಬೇಕು. ಜಂಗಮಲಿಂಗಕ್ಕೆ. ಭಕ್ತಿ ಮೂರ್ತಿಯಾಗಬೇಕು ಪ್ರಸಾದಕ್ಕೆ. ನಿರ್ಭಾವ ಮೂರ್ತಿಯಾಗಬೇಕು ಅನುಭಾವಕ್ಕೆ. ಜ್ಞಾನ ಮೂರ್ತಿಯಾಗಬೇಕು ಸ್ವಾನುಭವಕ್ಕೆ. ಇಂತೀ ಪ್ರಜ್ವಲಿತವಾದ ತನುವಿನ ಸಂಗದಲ್ಲಿಪ್ಪನು ಕಲಿದೇವನು.

ಇಂತು ಮಹೇಶಾದಿ ಭಕ್ತದೇಹಿಕ ಲಿಂಗಾಂತ್ಯವಾದ ವೀರಮಾಹೇಶ್ವರಸ್ಥಲದಲ್ಲಿ ಆಚರಿಸಿ ಭಕ್ತಕಾಯವೇ ಲಿಂಗಕಾಯವಾಗಿ, ಲಿಂಗಕಾಯವೇ ಭಕ್ತಕಾಯವಾಗಿ ವಿರಳವಿಲ್ಲದೆ ಚರಿಸಿ ಮಹಂತನು ಮುಂದೆ ಸಾವಧಾನ ಮುಖದಿಂದಲಾಚರಿಸಿ ಚರಿಸುವ ಭೇದವೆಂತೆಂದೊಡೆ ಮುಂದೆ ಪ್ರಸಾದಿಸ್ಥಲವಾದುದು.

# ಪ್ರಸಾದಿಸ್ಥಲ.

**ವಿವರಣೆ:**— ಪ್ರಸಾದವು ಪರಮಾತ್ಮನ ಸಮೀಪಕ್ಕೆ ಒಯ್ಯುವದು. ತನ್ನದೆಂಬುದನ್ನೆಲ್ಲ ಪರಮಾತ್ಮನಿಗೆ ಅರ್ಪಿಸಬೇಕು. ಇದರಿಂದ ಪರಮಾತ್ಮನ ಸಾನ್ನಿಧ್ಯವು ದೊರಕುವದು. ಪ್ರಸಾದಿಯು ಸ್ವಾರ್ಥವನ್ನು ಪೂರ್ಣನಾಗಿ ತ್ಯಜಿಸಬೇಕು. ಹೀಗೆ ಆಚರಿಸುವವನಿಗೆ ಪ್ರಸಾದವು ದೊರೆಯುವದು. ಇಂಥವನ ಉಪಭೋಗವೆಲ್ಲವು ಪ್ರಸಾದ ರೂಪಾಗಿರುವದು. ಅವನು ಸುಖ ಪಡುವದೆಲ್ಲ ಪರಮಾತ್ಮನ ಕೃಪೆ ಎಂದು ತಿಳಿಯಬೇಕು. ಇವನಿಗೆ ದುಃಖವಿಲ್ಲ. ಅವನು ಯಾವಾಗಲೂ ಸುಖಿಯು. ಎಲ್ಲ ಪ್ರಾಣಿಗಳ ದಯಾಂತಃಕರಣವುಳ್ಳವನಾಗಿರುವನು. ತನ್ನದೆಂಬುದನ್ನು ಮರೆತಿರುವನು. ಅವನು ಲಿಂಗಭೋಗೋಪಭೋಗಿಯು. ಹೀಗೆ ನಡೆಯುವದೇ ಪ್ರಸಾದಿಸ್ಥಲವು.

ಪ್ರಸಾದಿಯು ಆಚರಣೆಯು ಹೇಗಿರಬೇಕೆಂಬುದು ಇಲ್ಲಿ ಹೇಳಲ್ಪಟ್ಟಿದೆ. ಇದರಲ್ಲಿ ಆರು ಸ್ಥಲಗಳಿವೆ. ಅವುಗಳಲ್ಲಿ ಪುನಃ ಎರಡು ವಿಭಾಗಗಳನ್ನು ನಾವು ಮಾಡಬಹುದು. ೧ನೆಯ ವಿಭಾಗದಲ್ಲಿ ಗುರುಮಹಾತ್ಮ್ಯ, ಲಿಂಗ ಮಹಾತ್ಮ್ಯ, ಜಂಗಮ ಮಹಾತ್ಮ್ಯ ಇವು ಬರುತ್ತವೆ. ೨ನೆಯ ವಿಭಾಗದಲ್ಲಿ ಭಕ್ತಮಹಾತ್ಮ್ಯ, ಶರಣ ಮಹಾತ್ಮ್ಯ ಮತ್ತು ಪ್ರಸಾದ ಮಹಾತ್ಮ್ಯ ಇವುಗಳು ಬರುತ್ತವೆ.

**೧ ನೆಯ ವಿಭಾಗ:**— ಇದರಲ್ಲಿ ಉಲ್ಲೇಖಿಸಿದ ಗುರುಲಿಂಗ ಜಂಗಮದ ವಿಚಾರಗಳು ತಾತ್ವಿಕಾರ್ಥವುಳ್ಳವುಗಳಾಗಿವೆ. ಹೀಗೆ ಅರ್ಥವಿರುವದು ಪ್ರತಿಯೊಂದು ಸ್ಥಲದ ಅಂತ್ಯದಲ್ಲಿರುವ ಸೂಚನಾತ್ಮಕ ಉಕ್ತಿಗಳಿಂದ ಕಂಡು ಬರುತ್ತದೆ.

**ಗುರು ಮಹಾತ್ಮ್ಯೆಯ ಸ್ಥಲ:**— ಗುರುವು ಅಂಗವನ್ನೊಳಕೊಂಡಿರುತ್ತಾನೆ. ಸತ್ ಕೃತ್ಯಗಳನ್ನು ಮಾಡುತ್ತ ಸದಾಚಾರಿಯಾಗಿರುವುದೇ ಗುರುವನ್ನೊಳಕೊಳ್ಳುವದಾಗಿದೆ. ಕ್ರಿಯೆಗಳನ್ನು ಶುದ್ಧಗೊಳಿಸುವ ಶಕ್ತಿಯು ಈ ಗುರುತತ್ವದಲ್ಲಿದೆ. ಹೀಗೆ ಗುರುವಿಗರ್ಪಿಸಿ ಆಚರಿಸಿದಲ್ಲಿ

ಗುರು ಪ್ರಸಾದವು ಉಂಟಾಗುವದು. ಕ್ರಿಯೆಗಳ ಉತ್ಕೃಷ್ಟತೆಯೇ ಗುರು ತತ್ವವನ್ನು ಒಳಕೊಳ್ಳುವದಾಗಿರುತ್ತದೆ.

**ಲಿಂಗ ಮಹಾತ್ಮೆಯಸ್ಥಲ:**— ಕ್ರಿಯೆಗಳ ಉತ್ಕೃಷ್ಟತೆಯಿಂದ ಲಿಂಗದ ಉತ್ಕೃಷ್ಟತೆಯುಂಟಾಗುತ್ತದೆ. ಕ್ರಿಯೆಗಳ ಶುದ್ಧತೆಯಿಂದ ಮನಸ್ಸಿನ ಶುದ್ಧತೆಯುಂಟಾಗುತ್ತದೆ. ಈ ಶುದ್ಧತೆಯೇ ಅವನಲ್ಲಿ ಲಿಂಗವು ಜಾಗ್ರತೆಯನ್ನು ಹೊಂದಿದ್ದರ ಕುರುಹು. ಆಗ ಶರೀರದ ಇಂದ್ರಿಯಗಳೆಲ್ಲ ಲಿಂಗೇಂದ್ರಿಯಗಳಾಗುವವು. ಈ ಲಿಂಗೇಂದ್ರಿಯಗಳ ಮೂಲಕ ಪ್ರಸಾದಿಯು ತನ್ನ ಭೋಗಾದಿಗಳನ್ನು ಲಿಂಗಕ್ಕೆ ಅರ್ಪಿಸಿ ಲಿಂಗ ಪ್ರಸಾದವನ್ನು ಸ್ವೀಕರಿಸುವನು. ಲಿಂಗ ಮಹಾತ್ಮೆಯ ಸ್ಥಲವು ಇದಾಗಿರುತ್ತದೆ.

**ಜಂಗಮ ಮಹಾತ್ಮೆಯಸ್ಥಲ:**— ಗುರುವಿನಿಂದ ಲಿಂಗ, ಲಿಂಗದಿಂದ ಜಂಗಮವು ಪ್ರಾಪ್ತವಾಗುವದು. ಜಂಗಮವು ಅರಿವು ರೂಪವಾಗಿರುತ್ತದೆ. ಸತ್‌ಕ್ರಿಯೆಗಳು ಮತ್ತು ಶುದ್ಧ ಮನಸ್ಸು ಅರಿವಿಗೆ ಕಾರಣವಾಗಿವೆ. ಜಂಗಮವು ಜ್ಞಾನಾತ್ಮಕವು. ಅದರ ಶುದ್ಧತೆಯಿಂದಲೇ ಪ್ರಸಾದವು ಮನುಷ್ಯನಲ್ಲಿ ಸ್ಥಿರಪಡುವದು.

**೨ನೆಯ ವಿಭಾಗ:**— ಈ ವಿಭಾಗದಲ್ಲಿ ಗುರುಲಿಂಗ ಜಂಗಮ ಪ್ರಸಾದಗಳ ಮೂಲಕ ಪ್ರಸಾದಿಯಲ್ಲಿ ಉಂಟಾಗುವ ಪರಿಣಾಮಗಳು ಹೇಳಲ್ಪಡುತ್ತವೆ.

**ಭಕ್ತಮಹಾತ್ಮೆಯಸ್ಥಲ:**— ಹಿಂದೆ ಹೇಳಿದಂತೆ ಗುರುಲಿಂಗ ಜಂಗಮದ ಪ್ರಸಾದವನ್ನು ಸ್ವೀಕರಿಸಿ ಸುಖಿಯಾಗಿ ಸದ್ವರ್ತನೆಯಲ್ಲಿರುವದೇ ಭಕ್ತ ಮಹಾತ್ಮೆಯ ಸ್ಥಲವಾಗಿದೆ.

**ಶರಣ ಮಹಾತ್ಮೆಯಸ್ಥಲ:**— ಬಾಹ್ಯಾಭ್ಯಂತರದಲ್ಲಿ ಪರಿಣಾಮವು ಪ್ರವೇಶಗೊಂಡು ಪರಮಾನಂದದಲ್ಲಿರುವದೇ ಶರಣ ಮಹಾತ್ಮೆಯ ಸ್ಥಲವು.

**ಪ್ರಸಾದ ಮಹಾತ್ಮೆಯಸ್ಥಲ:**— ಹಿಂದೆ ಹೇಳಿದಂತೆ ಪರಮಾನಂದದಲ್ಲಿದ್ದುಕೊಂಡು ಯಾವಾಗಲೂ ಪರಿಣಾಮ ಪ್ರಸಾದವನ್ನು ಸ್ವೀಕರಿಸುತ್ತಿರುವದೇ ಪ್ರಸಾದ ಮಹಾತ್ಮೆಯ ಸ್ಥಲವು.

ಈ ಪ್ರಕಾರ ಭಕ್ತನು ಗುರುಲಿಂಗಜಂಗಮವನ್ನರಿತುಕೊಂಡು ಗುರು ಪ್ರಸಾದ, ಲಿಂಗ ಪ್ರಸಾದ, ಜಂಗಮ ಪ್ರಸಾದಗಳನ್ನು ಅನುಭವಿಸುತ್ತ ಬಾಹ್ಯದಲ್ಲಿ ಭಕ್ತನಾಗಿ ಬಾಹ್ಯಾಭ್ಯಂತರದಲ್ಲಿ ಶರಣನಾಗಿ ಪ್ರಸಾದದಲ್ಲಿ ಪರಿಣಾಮಿಯಾಗಿರುವದೇ ಪ್ರಸಾದಿಸ್ಥಲವೆಂದು ಈ ಆರು ಸ್ಥಲಗಳ ಮುಖ್ಯ ಭಾವವಿದೆ.

---

## ೧ ಪ್ರಸಾದಿಸ್ಥಲ.

(೧) ಕರ್ಣದ ಸೂತಕ ಹೋಯಿತ್ತು ಸದ್ಗುರುವಿನ ವಚನದಿಂದ. ಕಂಗಳ ಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ. ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ. ನಾನಾ ಸೂತಕ ಹೋಯಿತ್ತು ನಿಮ್ಮ ಶರಣರ ಅನುಭಾವವ ಕೇಳಿದೆನಾಗಿ. ಕೂಡಲ ಸಂಗಮದೇವಯ್ಯ ಎನ್ನ ನಾನಾ ಸೂತಕ ಹೋಯಿತ್ತು ನೀವಲ್ಲದನ್ಯವಿಲ್ಲೆಂದರಿದೆನಾಗಿ.

(೨) ಗುರು ಪ್ರಸಾದವ ಕೊಂಬರೆ ನಾಚುವುದು ಮನ. ಲಿಂಗ ಪ್ರಸಾದವ ಕೊಂಬರೆ ನಾಚುವುದು ಮನ. ಜಂಗಮ ಪ್ರಸಾದವ ಕೊಂಬರೆ ನಾಚುವುದು ಮನ. ಸಮಯ ಪ್ರಸಾದವ ಕೊಂಬರೆ ನಾಚುವುದು ಮನ. ಸೂಳೆಯ ಭೋಜನ ಎಂಜಲ ತಿಂದರೆ ನಾಚದು ಮನ. ಮಹಂತ ಸಕಳೇಶ್ವರಯ್ಯ ಮೂಗ ಕೊಯ್ಯದೆ ಮಾಣನು.

(೩) ಹಸಿಯ ಬಿಸಿಲನೆ ಕೊಯ್ದು ಪದಾರ್ಥವನೆ ಮಾಡಿ ಬಿಸಿಲ ಎಸರಲ್ಲಿ ಬಾಗುತ್ತಿಪ್ಪರಯ್ಯ! ಇಕ್ಕಲಿಲ್ಲಾರಿಗೆಯೂ, ಎರೆಯಲಿಲ್ಲಾರಿಗೆಯೂ. ಭಿಕ್ಷಾಪ್ರತಿಗಳು ಬಂದು ಬೇಡುತ್ತಿಪ್ಪರಯ್ಯ. ನಿಮ್ಮ ಒಕ್ಕುದ ಮಿಕ್ಕುದ ಉಡಿಯಲ್ಲಿ ಕಟ್ಟಿಕೊಂಡಿಪ್ಪರಯ್ಯ ಗುಹೇಶ್ವರ ನಿಮ್ಮ ಶರಣರು.

ಇಂತು ಗುರುಲಿಂಗ ಜಂಗಮದ ಪ್ರಸನ್ನ ಪ್ರಸಾದವ ಸ್ವೀಕರಿಸಿದ ನಿಯತ ಪ್ರಸಾದಿಯು ಅಂಗವನಾಲಿಂಗಿಸಿದ ಗುರುಮಹಾತ್ಮ್ಯೆ ಎಂತಿರ್ಪುದೆಂದಡೆ ಮುಂದೆ ಗುರು ಮಹಾತ್ಮ್ಯೆ ಸ್ಥಲವಾದುದು.

---

# ೨ ಗುರುಮಹಾತ್ಮ್ಯಸ್ಥಲ.

(೧) ಕಣ್ಣೆ ಸತ್ವ ರಜತಮವೆಂಬ ತಿಮಿರ ಕವಿದವರು ಗುರುವನೇ ಉಪಥಾವಿಸಿ ಕಣ್ಣೆ ಔಷಧಿಯ ಬೇಡುವರಯ್ಯಾ. ನೀನು ಶಿವಜ್ಞಾನವೆಂಬ ಅಂಜನವ ನೆಚ್ಚಿ ತೋರುವೆ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ.

(೨) ಸಾಕಾರವಿಡಿದು ಗುರುಲಿಂಗವಾದ. ನಿರಾಕಾರವಿಡಿದು ಪ್ರಾಣಲಿಂಗವಾದ. ಉಭಯಸ್ಥಲ ಏಕವಾದಲ್ಲಿ ಭವ ವಿರಹಿತ ಭಕ್ತ ಜೀವನ್ಮುಕ್ತನಾದ. ಗುರುವಿನಿಂದ ಅತಿಶಯ ಘನವೇನೂ ಇಲ್ಲ. ಕೂಡಲಚನ್ನಸಂಗಯ್ಯಾ ಎನ್ನ ಪರಮ ಗುರು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

(೩) ಗುರು ತನ್ನ ವಿನೋದಕ್ಕೆ ಸ್ಥಾವರವಾದ. ಗುರು ತನ್ನ ವಿನೋದಕ್ಕೆ ಜಂಗಮವಾದ. ಗುರು ತನ್ನ ವಿನೋದಕ್ಕೆ ಪ್ರಸಾದವಾದ. ಗುರು ತನ್ನ ವಿನೋದಕ್ಕೆ ಗುರುವಾದ. ಕೂಡಲಚನ್ನಸಂಗಯ್ಯನಲ್ಲಿ ಏಕಾರ್ಥವಾದ.

(೪) ಸದ್ಗುರುವಿನಿಂದವೆ ಮಹತ್ತಪ್ಪ ಲಿಂಗೋತ್ಪತ್ತಿ. ಲಿಂಗದಿಂದವೆ ಮಹತ್ತಪ್ಪ ಜಂಗಮೋತ್ಪತ್ತಿ. ಜಂಗಮದಿಂದವೇ ಮಹತ್ತಪ್ಪ ಪ್ರಸಾದೋತ್ಪತ್ತಿ. ಪ್ರಸಾದದಿಂದವೇ ಮಹತ್ತಪ್ಪ ಭಕ್ತಿಯುತ್ಪತ್ತಿ. ಭಕ್ತಿ ಪ್ರಸಾದದಿಂದವೇ ಸಕಲೋತ್ಪತ್ತಿ. ಇದು ಕಾರಣ ಭಕ್ತಿಯುಳ್ಳವಂಗೆ ಪ್ರಸಾದವುಂಟು. ಪ್ರಸಾದವುಳ್ಳವಂಗೆ ಜಂಗಮವುಂಟು. ಜಂಗಮವುಳ್ಳವಂಗೆ ಲಿಂಗ ಉಂಟು. ಲಿಂಗವುಳ್ಳವಂಗೆ ಗುರು ಉಂಟು. ಇದು ಕಾರಣ ಸದ್ಗುರುವೇ ಕಾರಣವಯ್ಯಾ.

ಇಂತು ಗುರುಮಹಾತ್ಮ್ಯಯುಂ ಸರ್ವಾಂಗದಲ್ಲಿಡೆಗೊಂಡ ಪ್ರಸಾದಿಯು ಮನದೊಳಗೆಡೆಗೊಂಡಿಪ್ಪ ಲಿಂಗ ಮಹಾತ್ಮ್ಯವೆಂತಿರ್ಪುದೆಂದೊಡೆ ಮುಂದೆ ಲಿಂಗ ಮಹಾತ್ಮ್ಯ ಸ್ಥಲವಾದುದು,

---

# ೩ ಲಿಂಗಮಹಾತ್ಮ್ಯಸ್ಥಲ.

(೧) ಶ್ರುತಿ ತತಿಯು ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯಾ? ಘನಕ್ಕೆ ಘನ, ಮನಕ್ಕಗೋಚರ, ಅಣೋರಣೀಯಾನ್ ಮಹತೋ ಮಹೀಯಾನ್ ಮಹಾದಾನಿ ಕೂಡಲಸಂಗಮದೇವಾ.

(೨) ವಿಭೂತಿ ಆವ ಭೂಷಣದೊಳಗು? ಪುಲಿಚರ್ಮ ಆವ ವಸ್ತ್ರದೊಳಗು? ಖಟ್ವಾಂಗ ಆವ ಆಯುಧದೊಳಗು? ನೀನಿಹುವುದಿಂತುಟು, ನೀಹೊದೆವುದಿಂತುಟು, ನೀಹಿಡಿವುದಿಂತುಟು, ನೀ ಕೊಡುವುದಿಂಪ್ರಪಂಚ ಗುಹೇಶ್ವರ.

(೩) ಮರದೊಳಗಣ ಪತ್ರ ಫಲಂಗಳು ಮರಕಾಲ ವಶದಲ್ಲಿ ತೋರುವಂತೆ, ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರಭಾವದಿಚ್ಛೆಗೆ ತೋರುವಂತೆ, ಲೀಲೆಯಾದಡೆ ಉಮಾಪತಿ, ಲೀಲೆ ತಪ್ಪಿದಡೆ ಸ್ವಯಂಭು ಗುಹೇಶ್ವರ.

(೪) ಅಜ ಹರಿ ಸುರರೆಲ್ಲರು ಅಳಿಯದೆ ಉಳಿವರಿಲ್ಲ. ಶಿವನೇ ನಿತ್ಯನೆಂದು ಹೊಡೆವಡುತ್ತಿದೆ ವೇದಶ್ರುತಿ. ಬಸವ ಪ್ರಿಯ ಕೂಡಲಚನ್ನಸಂಗಯ್ಯನೊಬ್ಬನೇ ನಿತ್ಯನೆಂದು ಹೊಗಳುತ್ತಿದೆ ವೇದ.

(೫) ವಟವೃಕ್ಷ ವಟಫಲ ಕೋಟಿಯ ನುಂಗಿಪ್ಪಂತೆ, ಸಟೆಯಿಂದಾದ ಅಜಾಂಡ ಕೋಟಿಯ ನುಂಗಿಪ್ಪ ದೇವಾ, ದಿಟಪುಟ ಎನ್ನ ಕರ ಕರಸ್ಥಲಕ್ಕೆ ಬಂದು, ಪ್ರಕಟವಾದೆ. ಮಹಾಭಾಷ್ಯ, ಮಹಾಭಾಷ್ಯ ಲಿಂಗವೇ, ನ ಚ ರೇಣು ನ ಚ ಚಕ್ಷುವೆನಿಸಿದ ಲಿಂಗವೇ, ನಿಮ್ಮ ಮುಟ್ಟಿ ಸೃಷ್ಟಿ, ಸ್ಥಿತಿ, ಪ್ರಳಯಕ್ಕೆ ಹೊರಗಾದೆನಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

(೬) ಧರೆಯಾಕಾಶವಿಲ್ಲದಂದು, ತ್ರಿಮಂಡಲ ನೆಲೆಗೊಳ್ಳದಂದು ಹೋಮ ನೇಮ ಜಪ ತಪವಿಲ್ಲದಂದು ನಿಮ್ಮನಾರು ಬಲ್ಲರು? ಹರಿ ಬ್ರಹ್ಮರಿಗೆ ಅಗೋಚರ, ನಿರ್ಲೇಪ ನಿರಂಜನನಾಗಿ ವೇದಂಗಳರಿಯವು, ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನರಿಯವು. ಗಗನ ಕಮಳ ಕುಸುಮ ಪರಿಮಳದಿಂದತ್ತತ್ತ ಗುಹೇಶ್ವರಾ ನಿಮ್ಮ ನಿಲವನಾರು ಬಲ್ಲರು?

(೭) ಬ್ರಹ್ಮ ಬ್ರಹ್ಮರಿಲ್ಲದಂದು, ಸೃಷ್ಟಿಯು ಸೃಷ್ಟಿ ಇಲ್ಲದಂದು ಕಾಳಿಂಗ ಕಳಕಂಠರಿಲ್ಲದಂದು, ಉಮೆಯು ಕಲ್ಯಾಣವಿಲ್ಲದಂದು, ದ್ವಾದಶಾದಿತ್ಯರಿಲ್ಲದಂದು, ನಂದಿಕೇಶ್ವರ ದಂಡನಾಥ ವಿಷವನವ್ರತವ ಮಾಡದಂದು, ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲ ವಿಲ್ಲದಂದು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ .ನಿಮ್ಮ ನಿಲವ ನಾರುಬಲ್ಲರು ?

ಇಂತು ಲಿಂಗಮಹಾತ್ಮೆಯುಂ ತನ್ನ ಮನದಲ್ಲಿ ಕಂಡ ಪ್ರಸಾದಿಯು ತನ್ನ ಅರಿವಿನಲ್ಲಿಡಿಗೊಂಡ ಜಂಗಮ ಮಹಾತ್ಮೆ ಎಂತಿರ್ದುದೆಂದೊಡೆ ಮುಂದೆ ಜಂಗಮ ಮಹಾತ್ಮೆಯ ಸ್ಥಲವಾದುದು.

---

## ೪ ಜಂಗಮಮಹಾತ್ಮೆಯಸ್ಥಲ.

(೧) ಅಯ್ಯಾ ನಿಮ್ಮ ದೇವರೆಂದು ಪೂಜಿಸಲಾಗದಯ್ಯಾ ನವ ಕೋಟಿ ಬ್ರಹ್ಮರಿಗೆ ಪ್ರಳಯವ ಮಾಡಿದುದ ನಾ ಬಲ್ಲೆನಾಗಿ. ಅಯ್ಯಾ ನಿಮ್ಮ ದೇವರೆಂದು ಪೂಜಿಸಲಾಗದಯ್ಯಾ ದಶಕೋಟಿ ನಾರಾಯಣರಿಗೆ ಮರಣವ ಮಾಡಿದುದ ನಾ ಬಲ್ಲೆನಾಗಿ. ಅಯ್ಯಾ ನಿಮ್ಮ ದೇವರೆಂದು ಪೂಜಿಸಲಾಗದಯ್ಯಾ ಅನಂತಕೋಟಿ ರುದ್ರರಿಗೆ ಲಯವ ಮಾಡಿದುದ ನಾ ಬಲ್ಲೆನಾಗಿ. ಅಯ್ಯಾ ನಿಮ್ಮ ದೇವರೆಂದು ಪೂಜಿಸಲಾಗದಯ್ಯಾ, ಪಾನಜ ರೋಮಜ ಮಹಾ ಮುನಿಗಳ ಸಂಹಾರ ಮಾಡಿದುದ ನಾ ಬಲ್ಲೆನಾಗಿ. ಅಯ್ಯಾ ನಿಮ್ಮ ದೇವರೆಂದು ಪೂಜಿಸಲಾಗದಯ್ಯಾ, ಎನ್ನನು ಏಳೇಳು ಜನ್ಮದಲಿ ತಂದಲ್ಲಿ ನಾನು ಉಭಯಲಿಂಗ ಜಂಗಮದ ಮನೆ ಹೊಕ್ಕು ಭವಂ ನಾಸ್ತಿಯಾಗಿ ಬದುಕಿದೆನು ಕಾಣಾ ಕೂಡಲಸಂಗಮ ದೇವಾ.

(೨) ಕವಿತ್ವ ಸಾಧಕರೆಲ್ಲರೂ ಕಳವಳ ಹೋದರು. ವಿದ್ಯಾಸಾಧಕರೆಲ್ಲರೂ ಬುದ್ಧಿಗೆಟ್ಟರು. ತತ್ವಸಾಧಕರೆಲ್ಲರೂ ಭಕ್ತಿಹೀನರಾದರು. ಲಿಂಗ ಸಾಧಕರೆಲ್ಲರೂ ಭೂಭಾರಕರಾದರು. ಕೂಡಲಚನ್ನಸಂಗಮದೇವಯ್ಯ ನಿಮ್ಮ ಬಸವಣ್ಣ ಜಂಗಮಸಾಧಕನಾಗಿ ಸ್ವಯಲಿಂಗವಾದನು.

(೩) ಆದಿಯಲ್ಲಿ ನಿಮ್ಮ ಜಂಗಮವೇ ಲಿಂಗವೆಂಬುದನಾರು ಬಲ್ಲರಯ್ಯಾ ಬಸವಣ್ಣನಲ್ಲದೆ? ಎಲ್ಲಿ ಸ್ಥಾವರವಿಪ್ಪಲ್ಲಿ ನೋಡಲಾಗದು, ಮನದಲ್ಲಿ ನೆನೆಯಲಾಗದು. ಲಿಂಗಕ್ಕಾವಡೆಯೂ ಜಂಗಮವೇ ಬೇಕು. ಜಂಗಮವಿಲ್ಲದೆ ಗುರು ಉಂಟೇ? ಎಲ್ಲಿ ಜಂಗಮವಿಪ್ಪಲ್ಲಿ ಗುರುಲಿಂಗ ಜಂಗಮ ಪಾದೋದಕ ಪ್ರಸಾದಕ ಅನುಭಾವ ಸನ್ನಿಹಿತವಾಗಿಹುದು. ಇಂತೀ ಜಂಗಮವೆಂಬುದ ಬಸವಣ್ಣ ಬಲ್ಲ. ಆ ಬಸವಣ್ಣನ ಶ್ರೀಪಾದಕ್ಕೆ ಅಹೋರಾತ್ರಿ ಶರಣೆಂದು ಶುದ್ಧನಾದೆನು ಕಾಣಾ ಕಲಿದೇವಯ್ಯ.

(೪) ನಿರಾಕಾರ ನಿರ್ಜನಿತ ನಿರ್ಲೇಪ ನಿಃಕಪಟಿ ನಿರ್ವಂಚನನುಪಮಿಸಲಿಲ್ಲ, ನಿಲ್ಲೋ. ನಿರಾಳ ನಿರ್ಮಾಯ, ನಿಸ್ಸೀಮ, ನಿಸ್ಸಂಗಿ, ನಿರವಯನ ಅವಯವಕ್ಕೆ ತರಲಿಲ್ಲ ನಿಲ್ಲೋ. ನಿಮ್ಮಲಿಗೆಯ ಚನ್ನರಾಮನೆಂಬ ಜಂಗಮಲಿಂಗವನುಪಮಿಸಲಿಲ್ಲ ನಿಲ್ಲೋ.

ಇಂತು ಜಂಗಮ ಮಹಾತ್ಮ್ಯೆಯನರಿದು ಆ ಜಂಗಮ ಪ್ರಸಾದವ ಸ್ವೀಕರಿಸಿ ಸುಖಿಯಾಗಿಪ್ಪ ಪ್ರಸಾದಿಯ ಸದಾಚಾರ ಸದ್ವರ್ತನೆಯುಳ್ಳದ ತೋರುತ್ತಿರ್ಪ ಸಾವಧಾನ ಸನ್ನಿಹಿತ ಭಕ್ತ ಮಹಾತ್ಮೆ ಎಂತಿರ್ಪದೆಂದೊಡೆ ಮುಂದೆ ಭಕ್ತ ಮಹಾತ್ಮ್ಯ ಸ್ಥಲವಾದುದು.

---

## ೫ ಭಕ್ತಮಹಾತ್ಮ್ಯಸ್ಥಲ.

(೧) ಭಕ್ತನಲ್ಲದವರನಾಸೆಗೈವರೆ ಕಲ್ಪಿತಯುಳ್ಳವ ಕಾಯರನ್ನು. ಆಸೆಗೈವರೆ ಭಕ್ತರನು ಆಸೆಗೈವುದು. ಬಂದ ಶಿವಂಗೆ ತನುವ ಕೊಟ್ಟರು, ಧನವ ಕೊಟ್ಟರು, ಮನವ ಕೊಟ್ಟರು, ಅಸುವ ಕೊಟ್ಟರು. ಶರಣರ ಸರಿ ಆವ ಲೋಕದೊಳಗೂ ಇಲ್ಲ. ಶರಣ ಭರಿತ ಲಿಂಗವಾಗಿ ಬೇಡಿದುದ ಕೊಡುವರಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

(೨) ತನುವಿಲ್ಲದ ಭಕ್ತ, ಮನವಿಲ್ಲದ ಭಕ್ತ, ಧನವಿಲ್ಲದ ಭಕ್ತ, ಪಂಚೇಂದ್ರಿಯ ಸುಖವಿಲ್ಲದ ಭಕ್ತ, ಕಾಯವಿಲ್ಲದ ಭಕ್ತ, ಕರ್ಮವಿಲ್ಲದ ಭಕ್ತ, ಕಲ್ಪಿತವಿಲ್ಲದ ಭಕ್ತ. ಅರ್ಚನವನರಿಯನು ಭಕ್ತ. ವ್ಯಸನಕ್ಕೆಳಸನು ಭಕ್ತ

ಹುಸಿಯ ನುಡಿಯನು ಭಕ್ತ. ಅಹಂಕಾರ ರಹಿತನು ಭಕ್ತ. ಕೂಡಲಚೆನ್ನ ಸಂಗಯ್ಯನಲ್ಲಿ ಎನ್ನ ಮಾತಾಪಿತನು ಸದ್ಭಕ್ತನು.

(೨) ಭಕ್ತರ ಮನೆಯ ಅಂಗಣ ವಾರಣಾಸಿಯೆಂಬುದು ಹುಸಿಯೇ? ಭಕ್ತರ ಮನೆಯ ಅಂಗಣದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಸಿಪ್ಪವಾಗಿ? ಮುತ್ತಿದರೆ ಶ್ರೀಶೈಲ, ಕೆಲಬಲದಲ್ಲಿ ಕೇದಾರ. ಅಲ್ಲಿಂದ ಹೊರಗೆ ಶ್ರೀವಾರಣಾಸಿ. ವಿರಕ್ತಿ ಬೇಡಾಗಿ, ಭಕ್ತಿ ಮೊಳೆಯಾಗಿ, ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಭಕ್ತರ ಮನೆಯ ಅಂಗಣ ವಾರಣಾಸಿಗಿಂದಲಧಿಕ.

(೪) ಹುಸಿಯ ನುಡಿಯನು ಭಕ್ತ. ವ್ಯಸನಕ್ಕೆಳಸನು ಭಕ್ತ. ವಿಷಯಂಗಳಾತಂಗೆ ತೃಣವು ನೋಡಾ. ಬಯಸುವನಲ್ಲ ಭಕ್ತ. ದಯವೆಂಬುದು ತನ್ನ ಕೈಯಲ್ಲಿ. ಸ್ಮರಣೆಯೆಂಬುದು ತನಗೆ ತೊತ್ತಾಗಿಪ್ಪುದು. ಕೋಪವೆಂತಹುದೆಂದರಿಯ. ತಾಪತ್ರಯಂಗಳು ಮುಟ್ಟಲಮ್ಮವು. ವ್ಯಾಪ್ತಿಗಡಗಿದವು. ಲಿಂಗವನೊಳಕೊಂಡ ಪರಿಣಾಮಿ. ಆತನ ಪಥ ಲೋಕಕ್ಕೆ ಹೊಸತು. ಲೋಕದ ಪಥವಾತಂಗೆ ಹೊಸತು. ತನಗೊಮ್ಮೆಯೂ ಲಿಂಗಧ್ಯಾನ. ಲಿಂಗಕ್ಕೊಮ್ಮೆಯೂ ತನ್ನ ಧ್ಯಾನ. ಘನ ಮಹಿಮೆಯ ಹೊಗಳಲಿನ್ನಳವೆ ? ಪನ್ನಗಧರ ಕೇಳಯ್ಯ ಚೆನ್ನ ಹಂಪೆಯ ವಿರುಪಯ್ಯ ನಿಮ್ಮ ನಂಬಿದ ಸತ್ಯ ಶರಣ ಪರಿಣಾಮಿ.

(೫) ಭಕ್ತರಿಗೆ ಹೋಗಿ ಸಮಯೋಚಿತವ ಮಾಡುವನ, ಸದ್ಭಕ್ತರಿಗೆ ಉಣಲಿಕ್ಕಿ ತನ್ನ ಹಸಿವ ಮರೆದಿಪ್ಪನ, ಸದ್ಭಕ್ತರಿಗೆ ಉಳ್ಳುದೆಲ್ಲವ ಕೊಟ್ಟು ಎಯ್ದರೆಂದು ಮನದಲ್ಲಿ ಮರುಗುವ ಏಕೋಗ್ರಾಹಿ ನಿಷ್ಠನೆ ಶರಣ. ಮೂರು ತೆರದ ಮುಕ್ತಿಯ ಹಾದಿಯ ಆರು ತೆರದ ಭಕ್ತಿಯ ಭೇದವ ಇಂತಪ್ಪ ವರವ ಕೊಟ್ಟಡೆಯೂ ಒಲ್ಲೆನು. ಸಕಳೇಶ್ವರ ದೇವ ನಿಮ್ಮ ಶರಣರ ತೋರಾ ಎನಗೆ.

ಇಂತು ಭಕ್ತಮಹಾತ್ಮೆಯಸಂಗದಲ್ಲಿ ತದ್ಗತವಾಗಿ ಮಾಡಿಕೊಂಡು ಭಿನ್ನ ಭಾವವ ತೋರದ ಪ್ರಸಾದಿಯ ಬಾಹ್ಯಾಭ್ಯಂತರದಲ್ಲಿ ಪರಿಣಾಮ ಪ್ರವೇಶವಾದ ಪರಮಾನಂದದೊಳಪ್ಪ ಶರಣ ಮಹಾತ್ಮೆ ಸ್ಥಲವಾದುದು

---

## ೬ ಶರಣಮಹಾತ್ಮ್ಯಸಲ.

(೧) ಪರುಷಕ್ಕೆ ಬೆಲೆ ಇಲ್ಲ. ಪ್ರಾಣಕ್ಕೆ ನಿವಾಳಿಯಿಲ್ಲ, ರುಚಿಗೆ ಎಂಜಲಿಲ್ಲ. ಸುಖಕ್ಕೆ ಅರೋಚಕವಿಲ್ಲ. ಗುಹೇಶ್ವರಾ ಶರಣಂಗೆ ಭವ ವಿಲ್ಲ, ಬಂಧನವಿಲ್ಲ.

ಟೀಕು:— ತನ್ನ ಪಾವನ ಮಾಡಿದ ಗುರು ಉಪದೇಶವೆಂಬ ಪರು ಷಕ್ಕೆ ತಾನೊಂದ ಕೊಟ್ಟು ತೃಪ್ತಿಯ ಪಡಿಸಿಹೆನೆಂಬುದು ಇಲ್ಲವೆಂಬು ದೀಗ ಪರುಷಕ್ಕೆ ಬೆಲೆ ಇಲ್ಲ ಎಂಬ ಶಬ್ದಕ್ಕರ್ಥ. ಪ್ರಾಣವೇ ಲಿಂಗಕ್ಕೆ ಅರ್ಪಿತವಾದ ಬಳಿಕ ಆ ಪ್ರಾಣವೇ ಲಿಂಗ ಲಿಂಗವೇ ಪ್ರಾಣವಾದ ಕಾರಣ ಆ ಪ್ರಾಣಲಿಂಗಕ್ಕೆ ಪೂಜಿಸುವೆನೆನಲಿಲ್ಲ. ನಿವಾಳಿಸಿ ಕಳೆದಿಹೆನೆಂಬರೆ ತೆರಹಿಲ್ಲವೆಂಬುದೀಗ ಪ್ರಾಣಕ್ಕೆ ನಿವಾಳಿಯಿಲ್ಲವೆಂಬ ಶಬ್ದಕ್ಕರ್ಥ. ಶಿವಸುಖಪ್ರಸನ್ನತೆ ಎಡೆಗೊಂಡು ಪರಿಣಾಮವೇ ತಾನಾ ಗಿರ್ದ ಬಳಿಕ ಅಲ್ಲಿ ಉಚ್ಛಿಷ್ಟವೆಂಬ ಭಾವಸೂತಕವಿಲ್ಲವೆಂಬುದೀಗ ರುಚಿಗೆ ಎಂಜಲಿಲ್ಲವೆಂಬ ಶಬ್ದಕ್ಕರ್ಥ. ಪರಮಾನಂದವಡೆಗೊಂಡು ತಾನು ತಾನಾದ ಬಳಿಕ ಸಂಸಾರವನರಿಸಿಹೆನೆಂಬ ಭಿನ್ನ ಬುದ್ಧಿ ಯಿಲ್ಲವೆಂಬುದೀಗ ಸುಖಕ್ಕೆ ಅರೋಚಕವಿಲ್ಲವೆಂಬ ಶಬ್ದಕ್ಕರ್ಥ. ಇಂತಪ್ಪ ನಿರ್ಣಯವನರಿದ ನಿಜ ಶರಣಂಗೆ ಭವಬಂಧನವಿಲ್ಲವೆಂಬುದೀಗ ಗುಹೇ ಶ್ವರಾ ನಿಮ್ಮ ಶರಣಂಗೆ ಭವವಿಲ್ಲ ಎಂಬ ಶಬ್ದಕ್ಕರ್ಥ.

(೨) ಶರಣ ಜಪಪರನಲ್ಲ, ಪರಾಪರನಲ್ಲ, ಕಾಮಿಸಿ ಕಾಮಿಯಲ್ಲ, ಧ್ಯಾನಿಸಿ ಧ್ಯಾನಿಯಲ್ಲ. ಅನಾಯತ ನಿರಂಜನನು ಸಿದ್ಧಸೋಮನಾಥಲಿಂಗ ನಿಮ್ಮ ಶರಣ ಬಳಸಿಯೂ ಬಳಸುವವನಲ್ಲ.

(೩) ಒಡಲಾಸೆಗೊಂಡು ಕಾಯದ ಬಳಿವಿಡಿದು ಸಂಸಾರದ ಕುರುಹಿನ ಹೆಸರಿನಲ್ಲಿ ಕರೆವಡೆ 'ಓ' ಎನುತಿಪ್ಪವರು ನರರೇ? ಬರಿದೆ ಸಂಸಾ ರವ ಬಳಸುತ್ತಿಪ್ಪರು, ಸಕಳೇಶ್ವರ ದೇವಾ ನಿಮ್ಮ ಶರಣರು.

(೪) ಅರಿವ ಬೈಚಿಟ್ಟುಕೊಂಡು, ಮರೆದು ಮಾನವನಾಗಿ ಕುರು ಹಿನ ಹೆಸರಲ್ಲಿ ಕರೆವಡೆ 'ಓ' ಎನುತಿಪ್ಪವರು ನರರೇ? ನಿಮ್ಮ ಅರುಹಿನ ಅರಿತವರು ನರರೇ ಅಯ್ಯ? ನಿಮ್ಮಲ್ಲಿ ತರಹಿಲ್ಲದ ಶರಣಂಗೆ ಕುರುಹಿಲ್ಲ

ವಾಗಿ ಬರಿಯ ಸಂಸಾರವ ಬಳಸಿಯೂ ಬಳಸದಂತಿಪ್ಪರು. ಮಹಾಲಿಂಗ ಕಲ್ಲೇಶ್ವರ ನಿಮ್ಮ ಶರಣರ ನಿಲವಿನ ಪರಿ ಇಂತುಟು.

(೫) ಮನ ವಚನ ಕಾಯದಲ್ಲಿ ಆಸೆಯಿಲ್ಲದ ಶರಣನು, ಅಘ್ರಾಣಾಘ್ರಾಣದಲ್ಲಿ ಲೋಭವಿಲ್ಲದ ಶರಣನು, ವಾಕ್ಪಾಣಿ ಪಾದ ಪಾಯು ಗುಹ್ಯವೆಂಬ ಕರ್ಮೇಂದ್ರಿಯಂಗಳ ಹೊದ್ದಲೀಯದ ಶರಣನು, ಲಿಂಗಜಂಗಮ ಪ್ರಸಾದ ಸಾರಾಯ ಶರಣನು ಕೂಡಲಚನ್ನಸಂಗಾನುಭಾವ ಸಾರಾಯ ಶರಣ.

(೬) ಭವಕ್ಕೆ ಹುಟ್ಟುವನಲ್ಲ. ಸಂದೇಹ ಸೂತಕಿಯಲ್ಲ. ಆಕಾರ ನಿರಾಕಾರ ನೋಡಯ್ಯ. ಕಾಯ ವಂಚಕನಲ್ಲ. ಜೀವ ವಂಚಕನಲ್ಲ. ಶಂಕೆ ಇಲ್ಲದ ಮಹಾಮಹಿಮ ನೋಡಯ್ಯ. ಕೂಡಲಚನ್ನಸಂಗನ ಶರಣನು ಭವಾತೀತ ನೋಡಯ್ಯ.

ಇಂತು ಶರಣಮಹಾತ್ಮ್ಯದಲ್ಲಿ ಸರ್ವಾಂಗವು ಪರಮಾನಂದವನೈದಿದ ಪ್ರಸಾದಿ ಸ್ವೀಕರಿಸುವ ಪರಿಣಾಮ ಪ್ರಸಾದ ಮಹಾತ್ಮ್ಯವೆಂತೆಂದೊಡೆ ಮುಂದೆ ಪ್ರಸಾದ ಮಹಾತ್ಮ್ಯಸ್ಥಲವಾದುದು.

---

## ೭ ಪ್ರಸಾದ ಮಹಾತ್ಮ್ಯಸ್ಥಲ.

(೧) ಅಗ್ನಿಮುಟ್ಟಲು ತೃಣವಗ್ನಿಯಪ್ಪುದು ತಪ್ಪದಯ್ಯ. ಗುರುಪ್ರಸಾದ ಅಂಗಕ್ಕೆ ಸೋಂಕಿದಲ್ಲಿ ಸರ್ವಾಂಗವು ಗುರುವಪ್ಪುದು ತಪ್ಪದಯ್ಯ. ಲಿಂಗಪ್ರಸಾದ ಮನಕ್ಕೆ ಸೋಂಕಿದಲ್ಲಿ ಮನವೆಲ್ಲ ಲಿಂಗವಪ್ಪುದು ತಪ್ಪದಯ್ಯ. ಜಂಗಮ ಪ್ರಸಾದ ಅರಿವಿಂಗೆ ಸೋಂಕಿದಲ್ಲಿ ಅರಿವೆಲ್ಲ ಅಖಂಡ ಪ್ರಸನ್ನ ಪ್ರಸಾದರೂಪ ಜಂಗಮವಪ್ಪುದು ತಪ್ಪದಯ್ಯ. ಶ್ರೀಶಿವಶಿವಾ, ಶ್ರೀಮತ್ಪ್ರಸಾದದ ಮಹಿಮೆಯನೇನೆಂದುಪಮಿಸುವೆನಯ್ಯಾ? ಪ್ರಸಾದವೇ ಗುರು, ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ, ಪ್ರಸಾದವೇ ಪರಾತ್ಪರ. ಇಂತಪ್ಪ ಮಹಾಪರಿಣಾಮ ಪ್ರಸನ್ನ ಪ್ರಸಾದವ ಕೊಂಡು ನಾನು ಬದುಕಿದೆನಯ್ಯ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

(೨) ಲಿಂಗಪ್ರಸಾದ ಸೋಂಕಿನಿಂದ ಬಿಜ್ಜಿ ಚಾಚಯ್ಯ ಸ್ವಯ ಲಿಂಗವಾದ. ಲಿಂಗಪ್ರಸಾದ ಸೋಂಕಿನಿಂದ ವಿಷವನಮೃತವ ಮಾಡಿ ಮೆರೆದ ಬಸವಣ್ಣ. ಇದು ಕಾರಣ ಕೂಡಲ ಚನ್ನಸಂಗಯ್ಯ ನಿಮ್ಮ ಪ್ರಸಾದದ ಮಹಿಮೆ ದೇವಕ್ರಿಯೆಯ ಮೀರಿದುದ ನಾನೇನೆಂಬೆ?

(೩) ಲಿಂಗದಲ್ಲಿ ಕೊಡಲುಂಟು, ಕೊಳಲುಂಟು. ಆರ್ಪಿತ ಜಂಗ ಮದಲ್ಲಿ ಕೊಟ್ಟು ಕೊಳಲಿಲ್ಲವಾಗಿ ಅನರ್ಪಿತ. ಪ್ರಸಾದದಲ್ಲಿ ಕೊಡಲು ಕೊಳಲು ಇಲ್ಲವಾಗಿ ಉಭಯನಾಸ್ತಿ. ಇಂತೀ ತ್ರಿವಿಧ ಸಂಚಿತ ಸನ್ನಿ ತವ ಕೂಡಲ ಕೂಡಲಚನ್ನಸಂಗ ನಿಮ್ಮ ಶರಣನೇಬಲ್ಲ.

ಇಂತು ಪ್ರಸಾದಿಯ ಸ್ಥಲದಲ್ಲಿ ಆಚರಿಸಿ ಮಹಾಪ್ರಸನ್ನ ಪ್ರಸಾದ ದೊಳು ಸಮರಸವಾಗಿ ಬೆರಸಿದ ಮಹಂತನು ಮುಂದೆ ಅನುಭಾವ ಮುಖದಿಂದ ಆಚರಿಸಿ ಬೆರಸುವ ಭೇದವೆಂತೆಂದಡೆ ಮುಂದೆ ಪ್ರಾಣಲಿಂಗಿಸ್ಥಲವಾದುದು.



# ಪ್ರಾಣಲಿಂಗಿಸ್ಥಲ.

ವಿವರಣೆ:— ಪ್ರಾಣಲಿಂಗಿಸ್ಥಲದಲ್ಲಿ ಪ್ರಾಣವು ಲಿಂಗವನ್ನೊಳಕೊಳ್ಳುವದು. ಈ ಉಭಯವೂ ಸಾಮರಸ್ಯವನ್ನು ಹೊಂದಬೇಕು. ಆಗ ಮನುಷ್ಯನ ಕರಣಗಳಲ್ಲೆಲ್ಲ ಲಿಂಗ ಚೈತನ್ಯವು ಪಸರಿಸುವದು. ಲಿಂಗವು ಕೇವಲ ಪೂಜೆಗೆ ಪಾತ್ರವಾದ ಸ್ಥೂಲ ವಸ್ತುವಲ್ಲ. ಅದು ಅಂತರಂಗ ಬಹಿರಂಗವನ್ನೆಲ್ಲ ವ್ಯಾಪಿಸಿದ ವಸ್ತುವಾಗಿದೆ. ಹೀಗೆ ಅದು ವ್ಯಾಪಿಸಿದಲ್ಲಿ ಮನುಷ್ಯನ ದುರ್ವ್ಯಾಪಾರಗಳು ಅಡಗುವವು. ಅವನ ಒಲವುಗಳೆಲ್ಲ ಪರಿಶುದ್ಧವಾಗುವವು. ಅವನ ಮನಸ್ಸು ಚಂಚಲವಾಗುವದಿಲ್ಲ. ಲಿಂಗದಲ್ಲಿ ಸ್ಥಿರಪಡುವದು. ಆಗ ಯಾವದು ಯೋಗ್ಯವೋ ಅತ್ತಕಡೆಗೆ ಅದು ಹೊರಳುವದು. ಈ ಸ್ಥಿತಿಯಲ್ಲಿ ಪ್ರಾಣಲಿಂಗಿಯಲ್ಲಿ ಒಂದು ಅಲೌಕಿಕ ಶಕ್ತಿಯು ಉದ್ಭವಿಸುತ್ತದೆ. ಆಗ ಅವನ ಅಂತಃ ಶಕ್ತಿಗಳು ವಿಕಾಸ ಹೊಂದುತ್ತವೆ. ಇವೆಲ್ಲ ಪ್ರಾಣಲಿಂಗಿಯ ಲಕ್ಷಣಗಳಾಗಿವೆ.

ಇದರಲ್ಲಿ ವಚನಕಾರರು ೪ ಸ್ಥಲಗಳನ್ನು ಕಲ್ಪಿಸಿರುವರು. ಅವುಗಳಲ್ಲಿ ನಾವು ಪುನಃ ಎರಡು ವಿಭಾಗಗಳನ್ನು ಮಾಡಬಹುದು. ೧ನೆಯ ವಿಭಾಗದಲ್ಲಿ ಪ್ರಾಣಲಿಂಗಿಸ್ಥಲ, ಪ್ರಾಣಲಿಂಗಾರ್ಚನೆಯ ಸ್ಥಲ ಮತ್ತು ಶಿವಯೋಗ ಸಮಾಧಿಸ್ಥಲ ಇವುಗಳು ಬರುತ್ತವೆ. ೨ನೆಯ ವಿಭಾಗದಲ್ಲಿ ಲಿಂಗ ನಿಜಸ್ಥಲ ಮತ್ತು ಅಂಗಲಿಂಗ ಸ್ಥಲಗಳು ಬರುತ್ತವೆ.

೧ನೆಯ ವಿಭಾಗದಲ್ಲಿಯ ಪ್ರಾಣಲಿಂಗಿಸ್ಥಲದಲ್ಲಿ ಪ್ರಾಣಲಿಂಗಿಯು ಮಾಡತಕ್ಕ ಕಾರ್ಯಗಳು ಸಾಮಾನ್ಯವಾಗಿ ಹೇಳಲ್ಪಡುತ್ತವೆ. ಆಮೇಲೆ ಪ್ರಾಣಲಿಂಗಾರ್ಚನೆಯು ಹೇಳಲ್ಪಡುತ್ತದೆ. ಈ ಅರ್ಚನೆಯಲ್ಲಿ ನೈತಿಕಾಚರಣೆಗಳು ಮುಖ್ಯವಾಗಿ ಹೇಳಲ್ಪಡುತ್ತವೆ. ಈ ಮೇರೆಗೆ ಆಚರಣೆಯನ್ನು ಅನುಸರಿಸುತ್ತ ಹೋದಲ್ಲಿ ಶಿವಯೋಗವು ಘಟಿಸುವದು. ಇದಕ್ಕೆ ಹಠಯೋಗಿಯ ಕಷ್ಟ ಕರ್ಮಗಳು ಬೇಡ.

ಆದರೆ ಈ ಶಿವಯೋಗವು ಮನುಷ್ಯನ ಅಂತಿಮಸಾಧನೆಯಲ್ಲ. ಮನಸ್ಸಿನಲ್ಲಿ ಲಿಂಗವು ದೃಢಪಡಲು ಅದೊಂದು ಸಾಧನವಾಗಿದೆ. ಅದು ಘಟಿಸಿದ ಬಳಿಕ ಲಿಂಗವು ಮನೋಮೂರ್ತಿಯಾಗಿ ನಿಲ್ಲುವದು. ಇದು ಎರಡನೆಯ ವಿಭಾಗದಲ್ಲಿಯ ಲಿಂಗನಿಜಸ್ಥಲವು. ಹೀಗೆ ಅದು ಮನ

ಸ್ಸಿನಲ್ಲಿ ದೃಢಪಟ್ಟು ಕೂಡಲೆ ಅವನ ಸರ್ವಾಂಗವೆಲ್ಲ ಲಿಂಗಮಯವಾಗುವದು. ಅವನ ಕರಣಗಳೆಲ್ಲವೂ ಲಿಂಗಕರಣಗಳಾಗುವವು ಇದು ಅಂಗಲಿಂಗಸ್ಥಲವು. ಹೀಗೆ ಪ್ರಾಣಲಿಂಗಿಸ್ಥಲದ ವಿವರಣೆ ಇದೆ.

**ಪ್ರಾಣಲಿಂಗಿಸ್ಥಲ:**— ಇದರಲ್ಲಿ ಪ್ರಾಣಲಿಂಗಿಯ ಆಚರಣೆಗಳು ಸಾಮಾನ್ಯರೀತಿಯಿಂದ ಹೇಳಲ್ಪಡುತ್ತವೆ.

**ಪ್ರಾಣಲಿಂಗಾರ್ಚನೆಯಸ್ಥಲ:**— ಇದು ಅಂತರಂಗಿಕ ಲಿಂಗಾರ್ಚನೆಯಾಗಿದೆ. ಆಗ ದೇಹದ ಕರಣಗಳು ಲಿಂಗದಲ್ಲಿ ಲಯಹೊಂದುವವು. ನೈತಿಕಾಚಾರಗಳೆಲ್ಲವು ಲಿಂಗಪೂಜೆಯ ಸಾಮಗ್ರಿಗಳಾಗಿ ಇಲ್ಲಿ ಅಳವಡುವವು. ಆಗ ಲಿಂಗದ ಪ್ರಕಾಶವು ಹೊರಬೀಳಹತ್ತುವದು. ಇದು ಪ್ರಾಣಲಿಂಗಾರ್ಚನೆಯಸ್ಥಲ.

**ಶಿವಯೋಗಸಮಾಧಿಸ್ಥಲ:**— ಈ ಬಗೆಯ ಪ್ರಾಣಲಿಂಗಾರ್ಚನೆಯಿಂದ ಅವನಲ್ಲಿ ಶಿವಯೋಗ ಸಮಾಧಿಯು ಉಂಟಾಗುವದು. ಭಕ್ತ, ಮಹೇಶ, ಪ್ರಸಾದಿ ಸ್ಥಲಗಳಲ್ಲಿ ದೃಢಹೊಂದಿದ ಆಚರಣೆಗಳ ಪರಿಣಾಮವೇ ಇದಾಗಿದೆ. ಅವನ ಅಂತರಂಗದ ಚಕ್ರಗಳಲ್ಲಿ ಲಿಂಗದ ಕಳೆಯು ವ್ಯಾಪಿಸಹತ್ತುವದು. ಇದು ಶಿವಯೋಗ ಸಮಾಧಿಸ್ಥಲವು.

**ಲಿಂಗನಿಜಸ್ಥಲ:**— ಹೀಗೆ ಶಿವಯೋಗ ಸಮಾಧಿಯನ್ನು ಹೊಂದಿದ ಬಳಿಕ ಲಿಂಗವು ಮನೋಮೂರ್ತಿಯಾಗಿ ದೃಢವಾಗಿ ನಿಲ್ಲುವದು. ಇದು ಲಿಂಗದ ನಿಜದ ನಿಲುವು ಎಂದೆನಿಸಿಕೊಳ್ಳುತ್ತದೆ.

**ಅಂಗಲಿಂಗಸ್ಥಲ:**— ಲಿಂಗವು ಹೀಗೆ ಮನೋಮೂರ್ತಿಯಾಗಿ ದೃಢವಾಗಿ ನಿಲ್ಲಲು ಶಿವಯೋಗಿಯ ಸರ್ವಾಂಗವು ಲಿಂಗಮಯವಾಗುತ್ತದೆ. ಅವನ ಕರಣಗಳೆಲ್ಲವು ಲಿಂಗಕರಣಗಳಾಗುವವು. ಇಲ್ಲಿ ಅತ್ಯಂತವಾದ ಸುಖವು ಒದಗುತ್ತದೆ. ಈ ಸುಖವನ್ನು ಪ್ರಾಣಲಿಂಗಿಯು ಅನುಭವಿಸುವನು.

---

## ೧. ಪ್ರಾಣಲಿಂಗಿಸ್ಥಲ.

(೧) ಅರ್ಕನ ಅಪ್ಪುತದಲ್ಲಿ ಕೆಟ್ಟರು ಹಲಬರು. ತಪ್ಪುಕರಾದರು ಹಲಬರು. ಬಿಂದು ಬಿಂದುವನೆ ಕೂಡಿ ಲಿಂಗಲೀಯವಾಯಿತ್ತು. ಸಿಂದನು ಗುಹೇಶ್ವರನೆನ್ನೊಳಗೆ ಭರಿತನಾಗಿ.

ಟೀಕು:— ಅಖಂಡ ಚಿತ್ಪ್ರಕಾಶವನುಳ್ಳ ಚಿಲ್ಲಿಂಗವೀಗ ಚಿದಾದಿತ್ಯನಾದ ಕಾರಣ ಅರ್ಕನೆಂಬ ಶಬ್ದಕ್ಕರ್ಥ. ಅಂತಪ್ಪ ಚಿಲ್ಲಿಂಗವು ತನ್ನ ಸ್ವಲೀಲೆಯಿಂದ ಸಾಕಾರವನ್ನು ನೆನಹುಮಾತ್ರದೆ ಅಪ್ಪುರಿಸಿ ನೆಗಳ್ದು ಅಪ್ಪುತವಾದ ಚಿತ್ಪ್ರಭಾ ಲಿಂಗಮೂರ್ತಿಯಾಯಿತ್ತು. ಅಂತು ಚಿಲ್ಲಿಂಗವು ಅಪ್ಪುರಿಸಿ ಎದ್ದಲ್ಲಿ ಆ ಚಿಲ್ಲಿಂಗದ ಪ್ರಭೆಯು ಉತ್ಕೃಷ್ಟವಾಗಲು, ಆ ಉತ್ಕೃಷ್ಟವಾದ ಚಿತ್ಪ್ರಭೆಯು ಚಿತ್ಪ್ರಭಾಣು ಕೋಟಿಗಳಾಗಿ ಒಗೆದು ತೋರುತ್ತಿರಲು, ಅಂತು ತೋರಿದ ಚಿತ್ಪ್ರಭಾಣುಗಳಿಗೆ ದೇಹಕರಣಂಗಳ ಭುವನಂಗಳ ಕಲ್ಪಿಸಿದನಾಕ್ಷಣವೇ ಅದು ಲಿಂಗಮೂರ್ತಿ. ಅದು ಕಾರಣ ಅರ್ಕನ ಅಪ್ಪುತದಲ್ಲಿ ಕೆಟ್ಟರು ಹಲಬರು ಎಂಬ ಶಬ್ದಕ್ಕರ್ಥ. ಅಂತು ಚಿದಾತ್ಮಾಣುಗಳು ದೇಹ, ಕರಣ, ಭುವನಭೋಗಂಗಳಾಗಿ ತಮ್ಮ ನಿಜವನ್ನು ಶಿವತತ್ವಕ್ಕೆ ದೂರವಾಗಿ ತಪ್ಪಿದರೆಂಬುದೀಗ ತಪ್ಪುಕರಾದರು ಹಲಬರು ಎಂಬ ಶಬ್ದಕ್ಕರ್ಥ. ಅನಂತ ದೇಹಿಗಳಾಗಿರ್ದಲ್ಲಿ ಶಿವಕೃಪೆಯಾಗಲು ಶರಣನ ದೇಹದಲ್ಲಿ ಮರೆಸಿರ್ದ ಆತ್ಮನ ಸ್ವಯಂಪ್ರಕಾಶವನ್ನು ಚಿದ್ಬಿಂದು ಪ್ರಕಾಶಿಸಿ ಆ ದೇಹವೆಂಬ ಬಿಂದುವ ಕೂಡಿ. ಕಾಯ ಜ್ಞಾನಕಾಯವಾಯಿತ್ತೆಂಬುದೀಗ ಬಿಂದು ಬಿಂದುವನೆ ಕೂಡಿತ್ತೆಂಬ ಶಬ್ದಕ್ಕರ್ಥ. ಅಂತಾದ ಚಿದಂಗದಲ್ಲಿ ಚಿತ್ಕಳಾಲಿಂಗವು ಸಂಬಂಧವಾಗಿ ದೇಹಭಾವ ಹರಿದು ಲಿಂಗವಾದ ಶರಣನೆಂಬುದೀಗ ಲಿಂಗಲೀಯವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಶರಣನಲ್ಲಿ ಲಿಂಗವೆಯಾದಲ್ಲಿ ಲಿಂಗವು ಶರಣನಲ್ಲಿ ಭೇದವಿಲ್ಲದೆ ಪರಿಪೂರ್ಣವಾಗಿರ್ದಿತ್ತೆಂಬುದೀಗ ಸಿಂದನು ಗುಹೇಶ್ವರನೆನ್ನೊಳಗೆ ಭರಿತನಾಗಿ ಎಂಬ ಶಬ್ದಕ್ಕರ್ಥ.

(೨) ಲಿಂಗಮಧ್ಯದಲ್ಲಿ ಜಗವಿದ್ದುದೇನೋ? ಜಗದ ಹೊರಗಿತ್ತು ಲಿಂಗವನೊಳಗಿಟ್ಟುಕೊಂಡ. ಆ ಘನಕ್ಕೆ ಶರಣೆಂಬೆ. ಆ ಮಹಾ ಘನವು ಆಯತಕ್ಕೊಳಗು, ಪ್ರಳಯಕ್ಕೆ ಹೊರಗು ನೋಡಾ ಕೂಡಲ ಚನ್ನಸಂಗಯ್ಯ.

(೩) ಹೊರಗಿಹನೆಂದು ನಾನು ಮರೆದು ಮಾತನಾಡಿದಡೆ ಶ್ರು
ಮುಟ್ಟೀಯದೆ ಬಂದೆನ್ನ ಅಂತರಂಗದೊಳಗಿಪ್ಪ ತೆರಹಿಲ್ಲದಘವನು ನ್ನ
ಗೆಡೆಗುಡನು. ಆತನ ಬಯಲಿಂಗೆ ಬೇಟಗೊಂಡೆನೆಲಗವ್ವಾ. ನಾನೆ
ಮಾಡುವೆನೆಲೆ ತಾಯೇ? ಮರೆದಡೆಚ್ಚರಿಸುವ ಕುರುಹಿಲ್ಲದಘವನು ತನ್ನ
ಂದಡೊಳ್ಗೆದನವ್ವಾ ನಮ್ಮ ಶಂಭುಜಕ್ಕೇಶ್ವರ.

(೪) ಪ್ರಾಣಲಿಂಗಸಂಬಂಧಿಯಾದ ಬಳಿಕ ತನುವಿನ ಗುಣ
ಲಾಗದಯ್ಯಾ. ಕಾಯ ಸಿಂಹಾಸನವಾದ ಬಳಿಕ ಸಂದಾಗಿರಲಾಗದಯ್ಯ
ಕೂಡಲ ಚೆನ್ನಸಂಗಯ್ಯನಲ್ಲಿ ಈ ಮನದ ಅಲ್ಲಯ್ಯ ಬಲ್ಲ.

(೫) ಕಾಲೇ ಕಂಭಗಳಿನ್ನ ದೇಹವೇ ದೇಗುಲವಾಯಿತ್ತಯ್ಯಾ,
ನಾಲಿಗೆ ಗಂಟೆ, ಸಿರವೇ ಸುವರ್ಣದ ಕಳಸವಯ್ಯ. ಸ್ವರವೇ ಲಿಂಗ
ಸಿಂಹಾಸನವಾಗಿದ್ದಿತಯ್ಯ. ಗುಹೇಶ್ವರ ನಿಮ್ಮ ಪ್ರಾಣಲಿಂಗ ಪ್ರತಿಷ್ಠೆ
ಪಲ್ಲಟವಾಗದಂತಿರ್ದೆನಯ್ಯ.

(೬) ಕಕ್ಷೆ, ಕರಸ್ಥಲ, ಕಂಠ, ಉತ್ತಮಾಂಗ, ಮುಖ, ಸಜ್ಜೆ,
ಅಂಗಸೋಂಕೆಂಬಿವು ಬಹಿರಂಗದ ಶೃಂಗಾರ. ಬ್ರಹ್ಮರಂಧ್ರ, ಭ್ರೂಮಧ್ಯ
ನಾಸಿಕಾಗ್ರ ಚೌಕಮಧ್ಯವೆಂಬಿವು. ನಾಲ್ಕುಸ್ಥಲವನರಿವ ಬ್ರಹ್ಮರಂಧ್ರದಲ್ಲಿ
ಲಿಂಗಸ್ವಾಯತ, ಭ್ರೂಮಧ್ಯದಲ್ಲಿ ಜಂಗಮಸ್ವಾಯತ, ನಾಸಿಕಾಗ್ರದಲ್ಲಿ
ಪ್ರಸಾದ ಸ್ವಾಯತ, ಚೌಕಮಧ್ಯದಲ್ಲಿ ಭಾವಸ್ವಾಯತ. ಇಂತೀ ಚತು
ರ್ವಿಧಸ್ಥಲವನರಿತುದಾಗಿ ನೋಡಿತ್ತೇ ಪಾವನ, ಮುಟ್ಟಿತ್ತೇ ಪವಿತ್ರ
ಕೂಡಲ ಚೆನ್ನ ಸಂಗಮದೇವಾ.

(೭) ತೆರೆಯ ಮರೆಯ ಕುರುಹೆಂಬುದೇನೊ? ಬಗೆ ಲಿಂಗವ
ನುಡಿದ ಬಳಿಕ ಪೂಜೆಗೊಂಬ ದೇವನಾರು, ಪೂಜಿಸುವ ಭಕ್ತನಾರು?
ಒಂದು ಮುಂದು, ಮುಂದು ಒಂದಾಯಿತ್ತು, ಗುಹೇಶ್ವರಾ ನಾನು
ನೀನು, ನೀನು ನಾನಾದಡೆ.

(೮) ತುಂಬಿ ಪರಿಮಳದ ನುಂಗಿತ್ತೋ, ಪರಿಮಳ ತುಂಬಿಯನು
ಂಡಿತ್ತೋ? ಲಿಂಗ ಪ್ರಾಣವಾಯಿತ್ತೋ, ಪ್ರಾಣ ಲಿಂಗವಾಯಿತ್ತೋ
ಗುಹೇಶ್ವರಾ ಈ ಉಭಯದ ಭೇದವ ನೀನೇ ಬಲ್ಲೆ.

(೯) ಅಂತರಂಗದಲ್ಲಿ ಆವರಿಸಿ, ಬಹಿರಂಗದಲ್ಲಿ ತೋರಿದೆ. ಕಂಗಳ ಕೊನೆಯಲ್ಲಿ ಮೂರುತಿಯಾಗಿ, ಮನದ ಕೊನೆಯಲ್ಲಿ ತೊಳಲುವೆ. ಎನ್ನ ಬ್ರಹ್ಮರಂಧ್ರದಲ್ಲಿ ತೋರುವ ಜ್ಯೋತಿ ನೀನೇ ಉರಿಲಿಂಗ ದೇವನಪ್ಪಾ.

(೧೦) ಪ್ರಾಣ ಲಿಂಗವೆಂದರಿದ ಬಳಿಕ ಪ್ರಾಣ ಪ್ರಸಾದವಾಯಿತ್ತು. ಲಿಂಗ ಪ್ರಾಣವೆಂದರಿದ ಬಳಿಕ ಅಂಗದಾಸೆ ಹಿಂಗಿತ್ತು. ಲಿಂಗ ಸೋಂಕು ಸಂಗಿಗೆ ಕಂಗಳೇ ಕರುವಾಗಿರ್ದೆನಯ್ಯಾ ಚೆನ್ನಮಲ್ಲಿಕಾರ್ಜುನಯ್ಯ ಲಿಂಗವೆ ಅನಿಮಿಷನಾದ ಶರಣಂಗೆ.

ಇಂತು ಪ್ರಾಣಲಿಂಗ ಸಂಬಂಧ ಅವಿರಳವಾದ ಲಿಂಗಪ್ರಾಣಿಯು ಲಿಂಗಾರ್ಚನೆಯು ಎಂತಿರ್ಪುದೆಂಬುದೆ ಮುಂದೆ ಪ್ರಾಣಲಿಂಗಾರ್ಚನೆಯ ಸ್ಥಲವಾದುದು.

---

## ೩. ಪ್ರಾಣಲಿಂಗಾರ್ಚನೆಯ ಸ್ಥಲ.

(೧) ಆಯುತವಾಯಿತ್ತು ಅನುಭಾವ, ಸ್ವಾಯುತವಾಯಿತ್ತು ಶಿವಜ್ಞಾನ, ಸಮಾಧಾನವಾಯಿತ್ತು ಸದಾಚಾರ. ಇಂತೀ ತ್ರಿವಿಧವು ಏಕಾರ್ಥವಾಗಿ ಅರಿವಿನ ರೂಪಾಯ ಕಣ್ದೆರೆದು ಅನಂತ ಲೋಕಾಲೋಕದ ಅಸಂಖ್ಯಾತ ಮಹಾಗಣಂಗಳೆಲ್ಲರು ಲಿಂಗ ಭಾವದಲ್ಲಿ ಭರಿತರಾಗಿ ಗಗನ ನಿವಾಂತದಿಂದ ಉಪದೇಶಕ್ಕೆ ಬಂದು ಭಕ್ತಿರಾಜ್ಯವನೆ ಹೊಕ್ಕು ನಿಜ ಲಿಂಗ ಸುಕ್ಷೇತ್ರವನೆ ಕಂಡು, ಅಮೃತ ಸರೋವರದೊಳಗಣ ವಿವೇಕ ವೃಕ್ಷ ಪಲ್ಲವಿಸಲು, ವಿರಕ್ತಿ ಎಂಬ ಪುಷ್ಪ ವಿಕಸಿತವಾಗಲು, ಪರಮಾನಂದದ ಮಠದೊಳಗೆ ಪರಿಣಾಮ ಪತ್ತಿಯ ಜ್ಯೋತಿಯ ಬೆಳಗಿನಲ್ಲಿ ಪರುಷದ ಸಿಂಹಾಸನವನಿಕ್ಕಿ, ಪ್ರಾಣಲಿಂಗ ಮೂರ್ತಿಗೊಂಡಿರಲು, ದಕ್ಷಿಣಾಬ್ಧಿಯ ದಾಂಟಿ, ಉತ್ತರಾಬ್ಧಿಯಲ್ಲಿ ನಿಂದು, ಶ್ರೀಮುಖಮಂಟಪ ಪರಿಪೂರ್ಣ ಪೂಜೆಯ ಮಾಡುವವರಿಗೆ ನಮೋ ನಮೋ ಎಂಬೆ ಗುಹೇಶ್ವರಾ.

ಟೀಕು:— ಅಂತರಂಗದಲ್ಲಿ ಅನುಭಾವ ಆಯುತವಾಗಿ ಅಳವಡಲು ಅದೀಗ ಆಯುತವಾಯಿತ್ತು ಅನುಭಾವವೆಂಬ ಶಬ್ದಕ್ಕರ್ಥ. ಅಂತು ಅನುಭಾವವಳವಡಲು ಸುಜ್ಞಾನ ಸನ್ನಿಹಿತವಾಯಿತ್ತೆಂಬುದೀಗ ಸ್ವಾಯು

ತವಾಯಿತ್ತು ಸುಜ್ಞಾನವೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನ ಸನ್ನಿ
ಹಿತ ಸದಾಚಾರ ಕ್ರಿಯೆಗಳೆಲ್ಲವೂ ನಿಷ್ಪತ್ತಿಯನೈದಿದವೆಂಬುದೀಗ ಸದಾ
ಧಾನವಾಯಿತ್ತು ಸದಾಚಾರವೆಂಬ ಶಬ್ದಕ್ಕರ್ಥ. ಇಂತು ಆಯತ
ಸ್ವಾಯತ ಸನ್ನಿಹಿತ ಸದಾಚಾರ ತ್ರಿವಿಧವು ಏಕರಸವಾಗಿ ಆ ಸುಜ್ಞಾ
ನವೇ ಮಹಾ ಪ್ರಕಾಶವನೆಯ್ದುತ್ತಿರ್ದೆಂಬುದೀಗ, ತ್ರಿವಿಧವು ಏಕಾರ್ಥವಾ
ಅರುಹಿನ ಹೃದಯ ಕಣ್ದೆರೆದಿತ್ತೆಂಬ ಶಬ್ದಕ್ಕರ್ಥ. ಇಂತು ಸುಜ್ಞಾನ
ಪ್ರಕಾಶವಾದ ಶಿವಜ್ಞಾನಿಯು ಸಕಲ ಕರಣಂಗಳೆಲ್ಲವು ಅನಂತ ಲೋಕಾ
ಲೋಕಂಗಳನು ಅವಲೋಕನವ ಮಾಡಿ ಸಂಖ್ಯೆ ಇಲ್ಲದ ಶಿವಗಣತ್ವವನು
ಧರಿಸಿ ಲಿಂಗಭಾಜನದಲ್ಲಿ ಪರಿಪೂರ್ಣ ಕರಣಂಗಳಾದವೆಂಬುದೀಗ ಅನಂತ
ಲೋಕಾಲೋಕದ ಅಸಂಖ್ಯಾತ ಮಹಾ ಗಣಂಗಳೆಲ್ಲರೂ ಲಿಂಗಭಾಜನ
ದಲ್ಲಿ ಭರಿತರಾಗಿ ಎಂಬ ಶಬ್ದಕ್ಕರ್ಥ. ಗಗನವೆಂದರೆ ಆತ್ಮತತ್ವ. ಆತ್ಮ
ತತ್ವವಿದ್ದಲ್ಲಿ ಸನ್ನದ್ಧವಾಗಿ ಭಕ್ತಿ ಸಾಮ್ರಾಜ್ಯ ಸಂಪತ್ತನು ಪಡೆದು ಆ
ಸದ್ಭಕ್ತಿ ಜ್ಞಾನದಿಂದ ಲಿಂಗ ಕ್ಷೇತ್ರವೆಂಬ ಪ್ರಾಣಲಿಂಗಿ ಸ್ಥಲವ ಕಂಡು
ಲಿಂಗ ಸುಖಿಯಾದನೆಂಬುದೀಗ ಭಕ್ತಿ ರಾಜ್ಯವ ಹೊಕ್ಕು ನಿಜ ಲಿಂಗ
ಸುಕ್ಷೇತ್ರವನೆ ಕಂಡು ಎಂಬ ಶಬ್ದಕ್ಕರ್ಥ. ಆ ಸುಖಮಯವೆಂಬ ಅಮೃತ
ಸರೋವರದೊಳಗೆ ಇಷ್ಟ ಸದು ಹೃದಯ ಕಮಲ ವಿಕಸಿತವಾಗಿ ಮಹಾ
ಚಾರವೆಂಬ ವಿವೇಕವೃಕ್ಷ ಪಲ್ಲವಿಸಿ ವಿರಕ್ತಿವಾಸನೆ ಸಂಪೂರ್ಣವಾ
ಗಿದ್ದಿತ್ತೆಂಬುದೀಗ ಅಮೃತ ಸರೋವರದೊಳಗಣ ವಿವೇಕವೃಕ್ಷ ಪಲ್ಲವಿ
ಸಲು ವಿರಕ್ತಿ ಎಂಬ ಪುಷ್ಪ ವಿಕಸಿತವಾಗಲು ಎಂಬ ಶಬ್ದಕ್ಕರ್ಥ.
ಇಂತು ವಿರಕ್ತಿವಾಸನೆ ಸಂಪೂರ್ಣ ಭಾವವನೆಯ್ದು ಪರಮಾನಂದ ಪಿಂಡ
ದೊಳಗೆ ಸುಷುಮ್ನ ನಾಳದೊಳಗೆ ಪರಮ ರಾಜಯೋಗದಲ್ಲಿ ಸಂಯೋ
ಗಿಯಾಗಿ ಆ ಸುಖ ಪ್ರಕಾಶದೊಳು ಬ್ರಹ್ಮರಂಧ್ರವೆಂಬ ಮರುಹದ
ಪೀಠದ ಮೇಲೆ ಸ್ವಯಂಜ್ಯೋತಿಲಿಂಗವನು ಮೂರ್ತಿಗೊಳಿಸುತ್ತಿರಲು
ಆವೀಗ ಪರಮಾನಂದದ ಮಠದೊಳಗೆ ಪರಿಣಾಮ ಪತ್ತಿಸು ಜ್ಯೋತಿಯ
ಬೆಳಗಿನಲ್ಲಿ ಮರುಹದ ಸಿಂಹಾಸನದ ಮೇಲೆ ಪ್ರಾಣಲಿಂಗ ಮೂರ್ತಿಗೊಂ
ಡಿರಲು ಎಂಬ ಶಬ್ದಕ್ಕರ್ಥ. ಪೂರ್ವಪಕ್ಷಯೋಗವಳಿದು ಉತ್ತರ ಪಕ್ಷ
ದಲ್ಲಿ ನಿಜವನೈದಿ ಅಖಂಡ ಪರಿಪೂರ್ಣ ಪೂಜೆಯ ಮಾಡುತ್ತಿಪ್ಪಾತನೇ
ದಿವ್ಯ ಶಿವಯೋಗಿ ಎಂಬುದೀಗ ದಕ್ಷಿಣದ ದಾಂಟಿ ಉತ್ತರಾಬ್ಧಿಯಲಿ
ನಿಂದು ಅಖಂಡ ಪರಿಪೂರ್ಣ ಪೂಜೆಯ ಮಾಡುವವರಿಗೆ ನಮೋ ನಮೋ
ಎಂಬೆನು ಎಂಬ ಶಬ್ದಕ್ಕರ್ಥ.

(೨) ಶರಣ ಲಿಂಗಾರ್ಚನೆಯ ಮಾಡಲೆಂದು ಪುಷ್ಪಕ್ಕೆ ಕರವ ನೀಡಿದಡೆ ಆ ಪುಷ್ಪ ನೋಡ ನೋಡ ಕರದೊಳಗಡಗಿತ್ತಲ್ಲಾ! ಅದು ನಗರದ ಗೊಬ್ಬರವನುಣ್ಣದು. ಅದು ಅರುಣ ಚಂದ್ರನ ತೆರೆಯಲ್ಲಿ ಬೆಳೆಯದು. ಲಿಂಗವೇದಿಯಾಗಿ ಬೆಳೆದ ಪುಷ್ಪವ ಗುಹೇಶ್ವರ ನಿಮ್ಮ ಶರಣ ಪ್ರಾಣಲಿಂಗಕ್ಕೆ ಪ್ರಾಣ ಪೂಜೆಯ ಮಾಡಿದನು.

(೩) ಲಿಂಗವೇ ಪ್ರಾಣ ಪ್ರಾಣವೇ ಲಿಂಗ. ಪಂಚಾಕ್ಷರಂಗಳೆಂಬ ಪಂಚಾಮೃತದಿಂ ಮಜ್ಜನಕ್ಕೆರೆದು ಆ ಲಿಂಗಕ್ಕೆ ಮನವೇ ಪುಷ್ಪ, ಬುದ್ಧಿಯೇ ಗಂಧ, ಚಿತ್ತವೇ ನೈವೇದ್ಯ, ಅಹಂಕಾರದಿಂದಾರೋಗಣೆಯ ಮಾಡಿಸಿ, ಪರಿಣಾಮದ ವೀಳೆಯವನಿತ್ತು, ಸ್ನೇಹದಿಂದ ವಂದನೆಯ ಮಾಡಿ ಪ್ರಾಣಲಿಂಗಕ್ಕೆ ಬಹಿರಂಗದ ಪೂಜೆಯಲ್ಲಿ ಅಂತರಂಗದ ಪೂಜೆಯ ಮಾಡಿ ಅಂತರಂಗದ ವಸ್ತುವನೆಲ್ಲವ ಬಹಿರಂಗದ ವಸ್ತುವಿನಲ್ಲಿ ಕೂಡಿ ಲಿಂಗಾರ್ಚನೆಯ ಮಾಡಲು ಅಂತರಂಗ ಬಹಿರಂಗ ಭರಿತನಾಗಿಪ್ಪನು ಚರಲಿಂಗಪ್ರಿಯಮಹೇಶ್ವರನು.

(೪) ಸಜ್ಜನವೇ ಮಜ್ಜನ, ಸದಾಚಾರವೇ ಧೂಪಾರತಿ, ಅಗಮ್ಯವೇ ಪೂಜೆಯಾಗಿ, ಅಂಗವಿರಹಿತನಾದಲ್ಲಿ ಉದಯಾಸ್ತಮಾನವೇ ಲಿಂಗಾರ್ಚನೆ ಮಹಾಘನ ಸೋಮೇಶ್ವರಾ ನಿಮ್ಮ ಶರಣಂಗೆ.

(೫) ಎನ್ನ ಕಾಯವೇ ಅಗ್ಗವಣಿಯ ಬಂದುಗೆ, ಮನವೇ ಸಿಂಹಾಸನ, ಹೃದಯವೇ ಕಮಲ ಪುಷ್ಪ, ನೆನೆವ ನಾಲಿಗೆಯೇ ಗಂಟೆ, ಶಿರವೇ ಸುವರ್ಣದ ಕಳಸ, ಎನ್ನ ನಯನವೇ ಸ್ವಯಂ ಜ್ಯೋತಿ, ಹೀಗೆನ್ನ ಚಂದ್ರಶೇಖರ ಲಿಂಗಕ್ಕೆ ಮಾಡಿದೆನೆನ್ನ ಪ್ರಾಣ ಪೂಜೆಯ. ಕೂಡಲ ಚನ್ನಸಂಗನ ಪೂಜಿಸಿದಲ್ಲದೆ ನಿಲ್ಲಲಾರೆ.

(೬) ಪ್ರಾಣಲಿಂಗಕ್ಕೆ ಕಾಯವೇ ಸಜ್ಜೆ, ಆಕಾಶ ಗಂಗೆಯಲ್ಲಿ ಮಜ್ಜನಕ್ಕೆರೆದು, ಹುವ್ವಿಲ್ಲದ ಪರಿಮಳದಲ್ಲಿ ಪೂಜೆಯ ಮಾಡಿ, ಹೃದಯದಲ್ಲಿ ಶಿವಶಿವಾ ಎಂಬ ಶಬ್ದ ಮುಗ್ಧವಾದ ಕಾರಣ, ಇದು ಅದ್ವೈತ ಕಾಣಾ ಗುಹೇಶ್ವರ.

(೭) ಗಗನವೇ ಗುಂಡಿಗೆ, ಆಕಾಶವೇ ಅಗ್ಘವಣಿ, ಚಂದ್ರಸೂರ್ಯರಿಬ್ಬರು ಪುಷ್ಪ ನೋಡಾ! ಬ್ರಹ್ಮ ರೂಪ ವಿಷ್ಣು ದೀಪ. ರುದ್ರನೋಗರ ಸುಯಿಧಾನ ನೋಡಾ! ಗುಹೇಶ್ವರ ಲಿಂಗಕ್ಕೆ ಪೂಜೆಯು ನೋಡಾ.

(೮) ಭುವರ್ಲೋಕದ ಸ್ಥಾವರಕ್ಕೆ ಸತ್ಯಲೋಕದ ಅಗ್ಘವಣಿಯಲ್ಲಿ ಮಜ್ಜನಕ್ಕೆರೆದು, ದೇವಲೋಕದ ಪುಷ್ಪದಲ್ಲಿ ಪೂಜೆಯ ಮಾಡಿದಡೆ ಮರ್ತ್ಯಲೋಕದಾಚಾರ ಕೆಟ್ಟಿತ್ತು. ಮೂರು ಲೋಕದರಸುಗಳು ಮುಗ್ಧರಾದರು. ಗುಹೇಶ್ವರಲಿಂಗವು ಸ್ಥಾವರಕ್ಕೆ ಸ್ಥಾವರವಾದನು.

(೯) ಆಸೆಯಾಮಿಷ ತಾಮಸ, ಹುಸಿ, ವಿಷಯವನೆಲ್ಲವ ಸಟೆ ಮಾಡಿ, ಕುಟಿಲ, ಕುಹಕ, ಕ್ರೋಧ, ಕ್ಷುದ್ರ. ಮಿಥ್ಯವೆಲ್ಲವನು ಹುಡಿಗಟ್ಟಿ ರಂಗವೋಲಿಯನಿಕ್ಕಿ ಸಮತೆ ಎಂಬ ಹತ್ತಿಯ ಕೊಂಡು, ಪುಣ್ಯಪಾಪವೆಂಬ ಕಸಗೊಟ್ಟಿಯಂ ಕಳೆದು, ಹೃದಯವೆಂಬ ಬತ್ತಿಯಂ ತೀಡಿ, ತನುವೆಂಬ ಪ್ರಣತೆಯಲ್ಲಿ ಕಿಂಕಲವೆಂಬ ತೈಲವನೆರೆದು, ಜ್ಞಾನವೆಂಬ ಜ್ಯೋತಿಯಂ ಹೊತ್ತಿಸಿ, ಸಮತೆ ಸೈರಣೆ ಎಂಬ ಅಗ್ಘವಣಿಯಲ್ಲಿ ಮಜ್ಜನಕ್ಕೆರೆದು, ನಿಃಶ್ಚಯ ನಿಃಕಾಮ್ಯವೆಂಬ ಗಂಧಾಕ್ಷತೆಯಂ ಕೊಟ್ಟು ಅಷ್ಟದಳ ಕಮಲದಲ್ಲಿ ಪೂಜೆಯಂ ಮಾಡಿ, ಪಂಚೇಂದ್ರಿಯ ವಿಕಾರವೆಂಬ ಪಂಚಾರತಿಯನಿಟ್ಟು ನಿರಂತರ ಸಾವಧಾನವೇ ನಿರಂಜನ ತನುಮುಖಾದಿಗಳನೇಕಾರ್ಥವ ಮಾಡಿ, ಓಡಿಸ್ವರವೇ ಏಕಾರತಿ, ಸರ್ವಜೀವದಯಾಪರವೆಂಬ ಧೂಪವ ಬೀಸಿ ನಿರ್ಧಾರವೆಂಬ ನಿತ್ಯನೇಮವ ನಿಲಿಸಿ, ಪರಮಾರ್ಥವೆಂಬ ನೈವೇದ್ಯವನಿಟ್ಟು, ಶಿವಸುಖ ಸಂತಸದಿಂದರ್ಪಿತವ ಮಾಡಿ, ಪರಿಣಾಮವೆಂಬ ಪ್ರಸಾದವ ಸ್ವೀಕರಿಸಿ, ಸುಜ್ಞಾನಭರಿತನಾಗಿ. ಇಂತಪ್ಪ ಶಿವಲಿಂಗಾರ್ಚಕರ ತೋರಿ ಬದುಕಿಸಯ್ಯಾ ಕೂಡಲಚನ್ನಸಂಗಮದೇವಾ.

ಇಂತು ಪ್ರಾಣಲಿಂಗಕ್ಕೆ ಪ್ರಾಣ ಪೂಜೆಯಂ ಮಾಡಿ ಸಕಲ ಕರಣಂಗಳನು ಲಿಂಗದಲ್ಲಿ ಲೀಯವ ಮಾಡಿದ ಪ್ರಾಣಲಿಂಗಿಯು ಲಿಂಗಸಂಯೋಗ ಸಮಾಧಿಯ ಭೇದವೆಂತಿರ್ದುದೆಂದಡೆ ಮುಂದೆ ಶಿವಯೋಗ ಸಮಾಧಿಸ್ಥಲವಾದುದು.

---

## ೩. ಶಿವಯೋಗಸಮಾಧಿಯುಸ್ಥಲ.

(೧) ಹರಿಯ ಬಾಯ ಹಾಲು, ಉರಿಯ ಕೆಯ್ಯ ಬೆಣ್ಣೆ, ಗಿರಿಯ ಮೇಲಣ ಶಿಸುವು ಹರಿದಾಡುತ್ತಿದೆ. ಕರೆಯ ಘೋ. ಸುರಪತಿಯ ಗಜವ ನೆರೆ ಮರಳಿ ಹೋಹನ ಕಂಡು ಕರೆಯ ಘೋ. ಹರನ ಮಂಘಣೆಯ ಕೂಲಿವಲ್ಲಿ ಶಿರದ ಲಿಂಗುಷ್ಠವು ಉರಿ ನೆರೆವುತ್ತಿಪ್ಪುದ ನಾನೇನೆಂಬೆ ಗುಹೇಶ್ವರಾ?

ಟೀಕು:— ಹರಿ ಎಂದಡೆ ವಾಯು. ಅಂತಪ್ಪ ಪ್ರಾಣವಾಯು ಶಿವಯೋಗ ಸಾಧನದಿಂದ ಸುಷುಮ್ನಾನಾಳದಲ್ಲಿ ಬ್ರಹ್ಮರಂಧ್ರವನೆಯ್ದಿ ಅಲ್ಲಿಪ್ಪ ಅಮೃತವನು ಸುವಿವೇಕವೆಂಬ ಮುಖದ್ವಾರದೊಳು ತುಂಬಿಕೊಂಡು ಇರುತ್ತಿರಲು ಹರಿಯ ಬಾಯ ಹಾಲೆಂಬ ಶಬ್ದಕ್ಕರ್ಥ. ಆ ಲಿಂಗಸಂಬಂಧ ಪ್ರಾಣ ನಿಲಿಸಿದ ಮುಖದ್ವಾರದೊಳಿಪ್ಪ ಶಿವಯೋಗಾಮೃತವನು ಉರಿ ಎಂದಡೆ ಶಿವಜ್ಞಾನ ಸ್ವರೂಪಮಪ್ಪ ಕುಂಡಲಾಗ್ನಿಪ್ರಭೆ, ಆ ಶಿವಜ್ಞಾನಾಗ್ನಿಪ್ರಭೆಯೊಳಗಿಪ್ಪ ಪರಿಪೂರ್ಣ ಶಿವತತ್ವವು ಸಕಲಕ್ರಿಯಾ ಸಾಧನಂಗಳಳಿದುಳಿದ ಘೃತವಂತೆ ಸಕಲ ಕ್ರಿಯೆಗಳೆಲ್ಲವು ಅಳಿದುಳಿದ ಘೃತ ಕಾಠಿಣ್ಯಮಸೂತ್ರಿತ ಸಚ್ಚಿದಾನಂದ ಲಕ್ಷಣಂ ಎಂಬ ಶ್ರುತಿ ಪ್ರಮಾಣದಿಂದ ಲಕ್ಷಿತವಾಗಿರಲು ಅದೀಗ ಉರಿಯ ಕೈಯ್ಯ ಬೆಣ್ಣೆ ಎಂಬ ಶಬ್ದಕ್ಕರ್ಥ. ಇಂತಪ್ಪ ಶಿವಯೋಗ ಸಾಧನಾಮೃತವನು ತತ್ವವೆಂಬ ಘೃತವ ಹಸ್ತದೊಳು ಹಿಡಿದು ಗಿರಿ ಎಂದಡೆ ನಾಸಿಕಾಗ್ರವೆಂಬ ಶಿಖರಿಯ ಮೇಲಿ ಸೋಹಂವೆಂಬ ಮದಗಜವನೇರಿ ಇಡಾಪಿಂಗಳವೆಂಬ ದ್ವಾರದೊಳು ಹೋಗುತ್ತ ಬರುತ್ತಿಪ್ಪ ಜೀವವೆಂಬ ಶಿಸುವಿಗೆ ಸದ್ಬೋಧೆಯಿಂದುಣಿಸಲು ಎಂಬುದೀಗ ಗಿರಿಯ ಮೇಲಣ ಶಿಸುವು ಹರಿದಾಡುತ್ತಿದೆ ಕರೆಯ ಘೋ ಸುರಪತಿಯ ಗಜವೇರಿ ಮರಳಿ ಹೋಹನ ಕಂಡು ಕರೆಯ ಘೋ ಎಂಬ ಶಬ್ದಕ್ಕರ್ಥ. ಇಂತು ಆ ಜೀವಂಗೆ ಸದ್ಬೋಧೆಯಿಂದ ಹಾಲು ತುಪ್ಪ ನುಣಿಸ ಕಲಿಸಲು ಜೀವಧರ್ಮವಳಿದು ಶಿವತತ್ವ ವಿವೇಕಿಯಾಗಿ ಹರನ ಮಂಘಣೆಯ ಕೂಲಿವೆಂಬ ತಲೆಗುಣದ ಮಸ್ತಕದ ಮೆಟ್ಟಿ ಆ ಪರಶಿವತತ್ವದಲ್ಲಿ ಅವಿರಳ ಸಂಬಂಧಯೋಗದನ್ವಿಯುತ್ತಿದ್ದಿತ್ತೆಂಬುದೀಗ ಹರನ ಮಂಘಣೆಯ ಕೂಲದ ಶಿರದಲಿಂಗುಷ್ಠವನುರಿ ನೆರೆವುತ್ತಿಪ್ಪುದನೇನೆಂಬೆನು ಎಂಬ ಶಬ್ದಕ್ಕರ್ಥ.

(೨) ಶಿವಯೋಗವಾದಲ್ಲಿ ಸಂಸಾರಯೋಗವಹುದಯ್ಯಾ. ಸಂಸಾರಯೋಗವಾದಲ್ಲಿ ಭಕ್ತಿಯನುಗ್ರಹಯೋಗವಯ್ಯಾ. ಭಕ್ತಿಯನುಗ್ರಹಯೋಗವಾದಲ್ಲಿ ಲಿಂಗಾನುಗ್ರಹಯೋಗವಯ್ಯಾ. ಲಿಂಗಾನುಗ್ರಹಯೋಗವಾದಲ್ಲಿ ಜಂಗಮಾನುಗ್ರಹಯೋಗವಯ್ಯಾ. ಜಂಗಮಾನುಗ್ರಹಯೋಗವಾದಲ್ಲಿ ಪ್ರಸಾದಾನುಗ್ರಹಯೋಗವಯ್ಯಾ. ಪ್ರಸಾದಾನುಗ್ರಹಯೋಗವಾದಲ್ಲಿ ತ್ರಿವಿಧ ಸನ್ಮತಯೋಗವಯ್ಯಾ. ತ್ರಿವಿಧ ಸನ್ಮತಯೋಗವಾದಲ್ಲಿ ಮನ ಮಗ್ನಯೋಗವಯ್ಯಾ. ಮನ ಮಗ್ನಯೋಗವಾದಲ್ಲಿ ಕೂಡಲಚನ್ನಸಂಗ ನಿಮ್ಮ ಸಂಯೋಗವಯ್ಯಾ.

(೩) ಜಂಗಮದಗಲದ ಮಂಟಪಕ್ಕೆ ಮುಗಿಲಗಲದ ಮೇಲು ಕಟ್ಟಿನಲ್ಲಿ ಚಿತ್ರವಿಚಿತ್ರವ ನೋಡುತ್ತ ನೋಡುತ್ತ ನೋಡುತ್ತ ಧ್ಯಾನ ವಿಶ್ರಾಮದಲ್ಲಿ ಮಿಟಮಿಟನೆಂಬುದೊಂದು ದರುಶನವ ನೋಡುತ್ತ ನೋಡುತ್ತ ನೋಡುತ್ತ ಗಗನ ಗಂಭೀರದಲ್ಲಿ ಉದಯವಾಯಿತ್ತ ಕಂಡೆ ಗುಹೇಶ್ವರನೆಂಬ ಲಿಂಗವು ತಾನೆಯಾಗಿ.

(೪) ಸ್ವಸ್ಥಾನ ಸ್ವಸ್ತಿಕ ಸುಮನ ಮಂಟಪದೊಳಗೆ ನಿತ್ಯ ನಿರಂಜನದ ಪ್ರಭೆಯ ಬೆಳಗು ಶಿವಯೋಗದನುಭಾವವೇಕಾಕಾರವಾಗಿ ಗುಹೇಶ್ವರಾ ನಿಮ್ಮ ಶರಣನನುಪಮ ಸುಖಿಯಾಗಿಹ.

(೫) ಪಂಚಬ್ರಹ್ಮದ ಮೇಲೆ ಪ್ರಣವಮಂತ್ರವಪ್ಪ ಪಂಚಮುಖ ದಶಭುಜದ ಫಣಿಯ ಮಣಿಯ ಮೇಲೆ ನೋಡುತ್ತ ಇದ್ದಾನೆ. ಈರೇಳು ಲೋಕದ ಸಮತೆ ಸಮಾಧಿ ಎಂಬ ಸಮರಸ ಸಾರಾಯದೊಳಗೆ ಚಂದ್ರಕಾಂತದ ಕೊಡದಲ್ಲಿ ಬಿಂದುವಿನಮೃತವ ತುಂಬಿಕೊಂಡು ನೋಡಿಯದೇ ಬೆಳಗುತ್ತಿದೆ ಗುಹೇಶ್ವರಾ.

(೬) ಷಟ್‌ಚಕ್ರವಳಯದೊಳಗೆ ನಾನಾಡುವೆ ಬಹುರೂಪ. ಕುಂಡಲಿಯ ಭ್ರೂಮಧ್ಯದಲ್ಲಿ ನಾನಾಡುವೆ ಬಹು ರೂಪ. ಭ್ರೂಮಧ್ಯಮಂಡಲ ಹೃದಯ ಕಮಲಮಧ್ಯದ ಅಜ್ಞಸ್ವರದ ಮಣಿಪೂರಕದ ಮೇಲೆ ನಾನಾಡುವೆ ಬಹುರೂಪ. ಬಯಲ ಬೆರಸಿದ ಮರೀಚಿಯಂತೆ ನಾನಾಡುವೆ ಬಹುರೂಪ. ಉರಿಯುಂಡ ಕರ್ಪುರದಂತೆ ನಾನಾಡುವೆ ಬಹುರೂಪ. ರೇಕಣ್ಣಪ್ರಿಯ ನಾಗಿನಾಥ ಬಸವಣ್ಣನಿಂದ ಬದುಕಿತ್ತು ಲೋಕವೆಲ್ಲ.

(೭) ಬಂದೂ ಬಾರದು. ಹೊಂದಿಯೂ ಹೊಂದದು. ನಿಂದೂ ನಿಲ್ಲದ ಪರಿಯ ನೋಡಾ! ಅಚುಂಬಿತ ಚರಿತ್ರವನೇನೆಂದುಪಮಿಸುವೆ? ನವಖಂಡ ಪೃಥ್ವಿಯನೊಳಕೊಂಡ ಬಯಲು ಅಗಮ್ಯ ಸಮಾಧಿ ಶಿವಯೋಗದಲ್ಲಿ ಗುಹೇಶ್ವರ ಲಿಂಗನೈದಾನೆ. ಏನೆಂದುಪಮಿಸುವೆ ?

(೮) ಗುರುಲಿಂಗ ನಾಭಿಮಂಡಲದಿಂ ಮೇಲೆ ಷಡಂಗುಲವನೆತ್ತಿ, ಅಧೋಮುಖ ಕಮಲವನೂರ್ಧ್ವಮುಖಕ್ಕೆ ತಂದು, ಅಂತರಿಕ್ಷದೊಳಗಿಪ್ಪ ಚಿದಾತ್ಮನಹಂತಹ ಆದಿತ್ಯನ ಕಿರಣಂಗಳು ಹೋಗಿ ತಾಗಲ್ಕೆ ಆ ಪದ್ಮ ವಿಕಸಿತವಾಗಿ ಅನೇಕ ರತ್ನ ಸಂಕೀರ್ಣವಹಂತಹ ಹೃದಯದೀಪ್ತಿಯ ಪ್ರಕಾಶವಂ ಕಂಡು ಶಿವಜ್ಞಾನವೊಪ್ಪಿಡಿದು ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿ ಎಂಬ ಅಷ್ಟಾಂಗಯೋಗವೊಪ್ಪಿಡಿದು ನಿಟಿಲತಟ ಭ್ರೂಮಧ್ಯದ ಮೇಲಣ ಉಭಯದಳ ಕಮಲದ ಮೇಲೆ ಇಷ್ಟ ಜೀವ ಪರಮನ ಭೇದವೆಂತಿರ್ದುದೆಂದೊಡೆ ಜೀವ ಪರಮರಿಬ್ಬರನೇಕಾರ್ಥವ ಮಾಡಲ್ಕೆ ಬ್ರಹ್ಮನಾಳದ ಮೇಲೆ ಪ್ರಯೋಗಿಸಿ ಕವಾಟದ್ವಾರವಂ ತೆಗೆದು, ತೆರಹಿಲ್ಲದ ಬಯಲು ಕೂಡಲ ಚನ್ನಸಂಗಾ ನಿಮ್ಮ ಶರಣ.

ಇಂತು ಶಿವಯೋಗದಲ್ಲಿ ಸಮಾಧಿಯನೆಯ್ದುವ ಪ್ರಾಣಲಿಂಗಿಯ ಮನ ಸ್ಥಲದಲ್ಲಿ ಮನೋಮೂರ್ತಿಯಾಗಿ ನಿಂದ ಲಿಂಗದ ಸಹಜ ನಿಲವು ಎಂತಿರ್ದುದೆಂದೊಡೆ ಮುಂದೆ ಲಿಂಗ ನಿಜ ಸ್ಥಲವಾದುದು.

---

## ೪ ಲಿಂಗ ನಿಜಸ್ಥಲ.

(೧) ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ. ಲಿಂಗವೆಂಬುದು ಪರಶಿವನ ಘನತೇಜ. ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖವು. ಲಿಂಗವೆಂಬುದು ಪರಶಿವನ ಪರಮಜ್ಞಾನ. ಲಿಂಗವೆಂಬುದು ಷಡಧ್ವಮಯ ಜಗಜ್ಜನ್ಮ ಭೂಮಿ. ಲಿಂಗವೆಂಬುದು ಅಖಂಡಿತ ಅಭೇದ್ಯ ಪಂಚ ಸಂಜ್ಞೆ. ಲಿಂಗವೆಂಬುದು ಹರಿಬ್ರಹ್ಮರ ನಡುವೆ ನೆಗ

ಜ್ಯೋತಿರ್ಲಿಂಗವು. ಇಂತಿದು ಲಿಂಗದ ವರ್ಮವು. ಉರಿಲಿಂಗಪೆದ್ದಿಪ್ರಿಯ ಗುರುವಿಶ್ವೇಶ್ವರ ಲಿಂಗದೊಳಗಿಂತು ತಿಳಿಯಬಲ್ಲಾತನೇ ಬಲ್ಲವನು.

ಟೀಕು:— ನಿಷ್ಕಲ ಪರಶಿವ ಲಿಂಗವು ತನ್ನ ಸ್ವಲೀಲೆಯಿಂದ ತನ್ನ ನಿಜಾಂಗವನು ತನ್ನ ಮಹಾಪ್ರಕಾಶವನು ತನ್ನ ಮಹಾಜ್ಞಾನವ ತನ್ನ ಸ್ವಯಾನಂದ ಸುಖ ಮೊದಲಾದ ತನ್ನ ಸ್ವಧರ್ಮವೆಲ್ಲ ಸಹವಾಗಿ ಅಖಂಡ ತೇಜೋ ಮೂರ್ತಿಯಾದ ಮಹಾಲಿಂಗಾಕಾರವಾಯಿತ್ತು. ಅಂತಾದ ಮಹಾಲಿಂಗವು ಪಂಚಮುಖವನ್ನೈದಿಸಿ ಪಂಚಕಲಾ ಶಕ್ತಿ ಯುಕ್ತವಾದ ಪಂಚ ಸಾದಾಖ್ಯ ಲಿಂಗಮೂರ್ತಿಯಾಯಿತ್ತು. ಅಂತಾದ ಮಹಾಲಿಂಗವೇ ಹರಿಬ್ರಹ್ಮರ ನಡುವೆ ನೆಗಳ್ದ ತೇಜೋಮೂರ್ತಿಯಾದ ಲಿಂಗವಾದುದು. ತಾನೇ ಅಂತು ಅಖಂಡಿತವಾಗಿದ್ದ ಸರ್ವತೋ ಮುಖವಾಗಿ ಸಕಲ ನಿಷ್ಕಲವಾಗಿ ಪಂಚ ಸಂಜ್ಞೆಯುಳ್ಳುದಾಗಿ ತನ್ನ ಸ್ವಲೀಲಾ ಸ್ವತಂತ್ರತೆಯಿಂದಿದ್ದ ಆ ಮಹಾಲಿಂಗವೇ ಭುವನಾಧ್ವ, ತತ್ವಾಧ್ವ, ವರ್ಣಾಧ್ವ, ಮಂತ್ರಾಧ್ವ, ಪದಾಧ್ವ, ಕಲಾಧ್ವ ಮೊದಲಾದ ಚರಾಚರ ತ್ರಯಗಳಿಗೆ ತಾನೇ ಜನ್ಮಸ್ಥಾನವಾದನಾಗಿ ಅಂತು ಸರ್ವ ತತ್ವಂಗಳು ಲಿಂಗ ಮಧ್ಯದಲ್ಲಿ ಹುಟ್ಟಿ ಅಡಗುತ್ತಿಹವೆಂದು ಅರಿದು ಲಿಂಗವಾಗಿದ್ದ ಶರಣನೇ ಬಲ್ಲಾತ ಎಂಬಲ್ಲಿ ಶರಣನಿಂದ ಆ ಮಹಾ ಘನಲಿಂಗದ ಘನವು ಕಾಣಲಾಯಿತ್ತು ಎಂಬುದೇ ವಚನದ ತಾತ್ಪರ್ಯಾರ್ಥ.

(೨) ಮೂರರಲ್ಲಿ ಹುಟ್ಟಲಿಲ್ಲ. ಆರರಲ್ಲಿ ತೋರಲಿಲ್ಲ. ಎಂಟರಲ್ಲಿ ಕಂಡುದಿಲ್ಲ. ಒಂದರಲ್ಲಿ ನಿಂದುದಿಲ್ಲ. ಇದನೇನೆಂದೆನೆಂತೆಂಬೆ? ಕಾಯದಲ್ಲಿ ಅಳಿದುದಿಲ್ಲ. ಜೀವದಲ್ಲಿ ಉಳಿದುದಿಲ್ಲ. ಗುಹೇಶ್ವರನೆಂಬ ಲಿಂಗವು ಶಬ್ದಕ್ಕೆ ಬಂದುದಿಲ್ಲ.

(೩) ಅಂಡಜ ಒಡೆಯದುದರಿಂದ ಮುನ್ನ, ಪ್ರೇಮಾಪ್ರೇಮವಿಲ್ಲದುದರಿಂದ ಮುನ್ನ, ಅನಿಲ ಪವನವಿಲ್ಲದುದರಿಂದ ಮುನ್ನ, ರವಿ ಶಶಿಗಳಿಲ್ಲದುದರಿಂದ ಮುನ್ನ, ಇಂತೀ ಚತುರ್ವಿಧ ಬಂದಾಗದ ಮುನ್ನ, ಗುಹೇಶ್ವರ ಲಿಂಗ ಎಲ್ಲದರಿಂದ ಮುನ್ನ.

(೪) ಪ್ರೇಮಾಪ್ರೇಮವಿಲ್ಲದರಿಂದತ್ತತ್ತ, ಕಾಲಕರ್ಮವಿಲ್ಲದರಿಂದತ್ತತ್ತ, ಮಾಯಾ ಮೋಹವಿಲ್ಲದರಿಂದತ್ತತ್ತ, ಏನೂ ಏನೂ ಇಲ್ಲದರಿಂದ

ತ್ತತ್ತ, ಆದಿ ಮೂವರಿಲ್ಲದರಿಂದತ್ತತ್ತ, ಶಿಷ್ಯಲಿಗೆಯು ಚೆನ್ನರಾಮನೆಂಬ ಲಿಂಗವಿಲ್ಲದರಿಂದತ್ತತ್ತ.

(೫) ಮಹಾಘನದ ಲೀಲೆಯಲ್ಲಿ ಹುಟ್ಟುವುದೇ ಬ್ರಹ್ಮವು? ಶ್ರುತಿ ಸ್ಮೃತಿಗಳಿಗೆ ಅಳವಡದು ನೋಡಾ! ಪೃಥ್ವಿಯೊಳಗಿಲ್ಲದ ಅಚಲವುಪ್ಪ ಮಹಾಘನವನು ಚರಾಚರದಲ್ಲಿ ಭರಿತನೆಂತೆಂಬೆ? ಇಲ್ಲದ ಲಿಂಗವ ನಲ್ಲಿಕ್ಕಿಗೆ ಉಂಟು ಮಾಡುವ ವಾರ್ತೆ ಎಲ್ಲಿಯದೋ ಗುಹೇಶ್ವರಾ?

(೬) ರೂಪು ಹೃದಯ ನಿರ್ಮಾಲ್ಯವಿಲ್ಲದಂದು, ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು, ಹದಿನಾಲ್ಕು ಭುವನವಿಲ್ಲದಂದು ಕೂಡಲಚೆನ್ನ ಸಂಗನೆಂಬ ಹೆಸರು ಮುನ್ನಿಲ್ಲದಂದು.

(೭) ಅಕ್ಷರದಲಭ್ಯಾಸದ ಮಾತು, ಬರಹದ ತೊಡೆದ ಪರಿ ಎಂತೆಲೋ? ಸ್ವರೂಪೆಂಬುದಾವುದು, ನಿರೂಪೆಂಬುದಾವುದೆಂದರಿಯರಾಗಿ, ಆದಿ ನಿರಾಳ, ಮಧ್ಯ ನಿರಾಳ, ಊರ್ಧ್ವ ನಿರಾಳ ಗುಹೇಶ್ವರಾ.

(೮) ತೋರಬಾರದ ಘನವ ಹೇಳಲೆಂದೇನೋ? ಹೇಳಬಾರದ ಘನವ ತೋರಲೆಂದೇನೋ? ಈ ಸಂಧಾನದ ಪರಿಯ ಬಲ್ಲರೆ ಹೇಳಿರೇ. ಗುಹೇಶ್ವರನೆಂಬುದು ಅಕಲ್ಪಿತ ನೋಡಾ.

(೯) ಅಳಿಯ, ಬೆಳೆಯ, ಸುಳಿವನಲ್ಲ ಕ್ರಿಯೆಯವಿಲ್ಲದ ವಿಜಯನು. ಕರಾಕುಳದ ಆತ್ಮನು ಅಂಗಸಂಗಿಯಲ್ಲ. ಸುಳುಹಿನೊಳಗಣ ಸೂಕ್ಷ್ಮನ ತೀರದು ನೋಡಿರೇ. ಅಣುಮಾದಿ ಗುಣರಹಿತನ ಅಕಲ್ಪಿತನನೇನೆಂಬೆ? ನೆಲ ಕಳವಳದ ಬಳಿಯ ಭಾವರೂಪನಲ್ಲ. ಬೆಳಗಿನೊಳಗಣ ಬೆಳಗು ಮಹೇಶ್ವರಲಿಂಗವು.

ಇಂತು ಮನೋಮೂರ್ತಿಯಾದ ಪ್ರಾಣಲಿಂಗಿಯ ಸರ್ವಾಂಗವು ಲಿಂಗವಾದ ಭೇದವೆಂತೆಂದಡೆ ಮುಂದೆ ಅಂಗಲಿಂಗಸ್ಥಲವಾದುದು.

---

## ೫ ಅಂಗಲಿಂಗಸ್ಥಲ.

(೧) ಅಂಗದ ಕಳೆಯಲ್ಲಿ ಒಂದು ಲಿಂಗವ ಕಂಡೆ. ಲಿಂಗದ ಕಳೆಯಲ್ಲಿ ಒಂದು ಅಂಗವ ಕಂಡೆ. ಅಂಗಲಿಂಗವೆಂಬ ಸಂದೇಹವ ಅರಸಿ ಕಾಣದೆ ನೋಡಿರೇ. ಇಲ್ಲಿ ಐದಾನೆ ನೋಡಿರೇ ಶಿವದೇವನು, ಇಲ್ಲಿ ಐದಾನೆ ನೋಡಿರೇ ಮಹಾದೇವನು. ಬಲ್ಲರೆ ಇರಿಸಿಕೊಳ್ಳಿ. ಕಾಯವಳಿಯದ ಮುನ್ನ ನೋಡಬಲ್ಲರೆ ಗುಹೇಶ್ವರನೆಂಬ ಲಿಂಗಕ್ಕೆ ಬೇರೊಂದೆಡೆಯುಂಟೇ ಹೇಳಿರೇ?

(೨) ಅಂಗದ ಮೇಲೆ ಲಿಂಗ ಸನ್ನಿಹಿತವಾದ ಬಳಿಕ ಶ್ರೋತ್ರದಲ್ಲಿ ಅನ್ಯ ಶಬ್ದವ ಕೇಳನಾ ಶರಣನು. ಅಂಗದ ಮೇಲೆ ಲಿಂಗ ಸನ್ನಿಹಿತವಾದ ಬಳಿಕ ಅನ್ಯವ ಮುಟ್ಟನಾ ಶರಣನು. ಅಂಗದ ಮೇಲೆ ಲಿಂಗ ಸನ್ನಿಹಿತವಾದ ಬಳಿಕ ಅನ್ಯವ ನೋಡನಾ ಶರಣನು. ಅಂಗದ ಮೇಲೆ ಲಿಂಗ ಸನ್ನಿಹಿತವಾದ ಬಳಿಕ ಅನ್ಯವ ನುಡಿಯನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ, ಆಹಾರ ವ್ಯವಹಾರವನರಿಯನಾ ಶರಣನು. ಅಂಗದ ಮೇಲೆ ಲಿಂಗಸನ್ನಿಹಿತವಾದ ಬಳಿಕ ಬರು ನುಡಿಯ ನುಡಿಯನಾ ಶರಣನು. ಅಂಗದ ಮೇಲೆ ಲಿಂಗ ಸನ್ನಿಹಿತವಾದ ಬಳಿಕ ಕೂಡಲ ಚನ್ನಸಂಗಯ್ಯ ನಿನ್ನಲ್ಲದೆ ಅನ್ಯವನರಿಯನಾ ಶರಣನು.

(೩) ಅಂಗದಿಂದ ಲಿಂಗ ಸುಖ, ಲಿಂಗದಿಂದ ಅಂಗಸುಖ. ಅಂಗ ಲಿಂಗಸಂಗದಿಂದ ಪರಮಸುಖ, ನೋಡಯ್ಯ! ಅಂಗಲಿಂಗ ಸಂಗಸುಖವನು ಕೂಡಲ ಚನ್ನಸಂಗಯ್ಯನಲ್ಲಿ ಲಿಂಗೈಕ್ಯನೇ ಬಲ್ಲ.

(೪) ಅಂಗದಾದಿಯ ಲಿಂಗಸುಖವು, ಲಿಂಗದಾದಿಯ ಅಂಗ ಸುಖವು. ಅಂಗಲಿಂಗಸಂಗಸುಖದಿಂದ ಮಿಕ್ಕುಮೀರಿ ನಿಂದ ಪರಮ ಸುಖವನೇನೆಂಬೆನಯ್ಯ? ಕೂಡಲಚನ್ನಸಂಗನ ಶರಣನನೇನೆಂಬೆನಯ್ಯ?

(೫) ಅಂಗಲಿಂಗಸಂಬಂಧವಾದವರ ಲಿಂಗವೆಂದೇ ಕಾಂಬುದು. ಕೀಟೋಪಿ ಭ್ರಮರಾಯತೆ ಎಂಬ ನ್ಯಾಯದಂತೆ, ಅಂಗಲಿಂಗ ಸೋಂಕೆ ಲಿಂಗವಾಯಿತ್ತಾಗಿ, ಲಿಂಗವೆಂದೇ ಕಾಂಬುದು. ವರ್ಣ ವಷ್ಟುಸ್ಯ ಯಷ್ಟೇವಂ

ಪ್ರೀತೇ ವಿಷಯೇಷು ನಾ । ಲಿಂಗವಸ್ಥಸ್ಯ ಯಸ್ಯೇಹಂ । ತಸ್ಯೇಹಂ ಲಿಂಗದೇಹವತ್ ಎಂಬುದಾಗಿ ಸರ್ವಾಂಗ ಲಿಂಗಕೂಡಲ ಚನ್ನಸಂಗನ ಶರಣನು.

ಇಂತು ಪ್ರಾಣಲಿಂಗಿ ಸ್ಥಲಾದಿಯಾಗಿ ಅಂಗಲಿಂಗ ಸ್ಥಲಾಂತ್ಯವಾದೈದು ಸ್ಥಲಂಗಳಿಂ ಕೂಡಿದ ಪ್ರಾಣಲಿಂಗಸ್ಥಲದಲ್ಲಿ ಆಚರಿಸಿ ಸರ್ವಾಂಗವು ಅಂಗಲೀಯವಾಗಿ ಬೆರಸಿದ ಮಹಂತನು ಮಹಾಜ್ಞಾನ ಮುಖದಿಂದಲರಿದಾಚರಿಸಿ ಬೆರಸುವ ಭೇದವೆಂತಿರ್ಪುದೆಂದೊಡೆ ಮುಂದೆ ಶರಣಸ್ಥಲವಾದುದು.

---

# ಶರಣಸ್ಥಲ.

ವಿವರಣೆ:— ಶರಣನು ಜ್ಞಾನಿಯು. ಅವನು ಜ್ಞಾನಮುಖದಿಂದ ಆಚರಿಸುವವನು. ಜಗತ್ತಿನ ಪ್ರೇರಣೆಗೆ ಒಳಗಾಗಿ ಆಚರಿಸುವದಿಲ್ಲ. ಸ್ವತಂತ್ರ ಬುದ್ಧಿಯುಳ್ಳವನಿರುತ್ತಾನೆ. ಅವನು ಅನುಭವವುಳ್ಳವನು. ಆದ್ದರಿಂದ ತನ್ನ ಕ್ರಿಯೆಗಳನ್ನು ಮಾಡುವಲ್ಲಿ ಸಂಶಯ ರಹಿತನು. ಅವನಲ್ಲಿ ಭೀತಿ ಎಂಬುದಿಲ್ಲ. ಪೂರ್ಣ ಆತ್ಮವಿಶ್ವಾಸಿಯು. ಅವನ ಕ್ರಿಯೆಗಳು ಲಿಂಗಕ್ರಿಯೆಗಳು, ಲಿಂಗದಿಂದ ಬಂದವು. ಆದ್ದರಿಂದ ಅವನಿಗೆ ಕರ್ಮವಿಲ್ಲ. ಅವನು ಪ್ರಪಂಚವನ್ನು ಹೊದ್ದಿಯೂ ಹೊದ್ದನು. ಇವೆಲ್ಲವು ಶರಣನ ಲಕ್ಷಣಗಳು. ಶರಣನಿಗೆ ಜಂಗಮನೆಂತಲೂ ಬೇರೊಂದು ಹೆಸರಿದೆ.

ವಚನಕಾರರು ಈ ಸ್ಥಲದಲ್ಲಿ ಕೇವಲ ವೇಷಧಾರಿ ಜಂಗಮರು ಮಾಡುತ್ತಿರುವ ಹೊಲ್ಲದ ಆಚರಣೆಗಳನ್ನು ಬಹು ಕಠೋರವಾಗಿ ಟೀಕಿಸುವದುಂಟು. ಹೀಗೆ ಟೀಕಿಸಿ ಅವರು ಮಾಡಬೇಕಾದ ಆಚರಣೆಗಳನ್ನು ಇಲ್ಲಿ ಬೋಧಿಸುವದು ಅವರ ಪದ್ಧತಿಯಾಗಿದೆ.

**ಶರಣಸ್ಥಲ:**— ಇದರಲ್ಲಿ ಶರಣನು ಆಚರಿಸತಕ್ಕ ನಡೆಗಳನ್ನು ಸಾಮಾನ್ಯವಾಗಿ ವಿವರಿಸುವದುಂಟು.

**ತಾಮಸನಿರಸನಸ್ಥಲ:**— "ತನ್ನ ತಾನರಿದೆನೆಂಬ ಅರಿವಿನ ಮುಂದೆ ಇದಿರಿಟ್ಟು ತೋರುವದೇ ತಾಮಸ" ಎಂದು ತಾಮಸದ ವ್ಯಾಪ್ತಿ ಇದೆ. ಆದ್ದರಿಂದ ಶರಣನು ಅಹಂಭಾವರಹಿತನಾಗಿ ಏತರಲ್ಲಿಯೂ ಭಿನ್ನಭಾವವನ್ನು ಎಣಿಸದೆ ವರ್ತಿಸಬೇಕು. ಅವನು ಎಲ್ಲರಲ್ಲಿಯೂ ಸಮಭಾವವನ್ನು ಹೊಂದಿರಬೇಕು. ಅವನಲ್ಲಿ ಸಮರಸಾಚರಣೆಯು ಎಡೆಗೊಂಡಿರಬೇಕು. ಈ ರೀತಿಯಾಗಿ ನಿಷ್ಕಾಮ್ಯಸತ್ಕೃತ್ತಿಯುಳ್ಳವನಾಗಿ ಶರಣನು ಆಚರಿಸುತ್ತಾನೆ.

**ನಿರ್ದೇಶಸ್ಥಲ:**— ಈ ಸ್ಥಲದಲ್ಲಿ ಶರಣನು ನಿಜವನರಿದು ಸಂಶಯರಹಿತನಾಗಿ ವರ್ತಿಸುತ್ತಾನೆ. ಸುಜ್ಞಾನವಾವುದೆಂಬದನ್ನು ಅವನು ತಿಳಿಯುತ್ತಾನೆ. ಆದರೆ ವೇಷಧಾರಿ ಜಂಗಮರು ಇದನ್ನು ತಿಳಿಯಲಾರರು. ಅವರು ಜ್ಞಾನಹೀನರಾಗಿ ಜನರನ್ನು ನಾನಾ ರೀತಿಯಿಂದ ವಂಚಿ

ಸುತ್ತಾರೆ. ಇವರ ಈ ವೃತ್ತಿಯನ್ನು ವಚನಕಾರರು ಬಹುವಾಗಿ ಖಂಡಿಸುತ್ತ ಶರಣರು ಸರ್ವಾಂಗ ಜ್ಞಾನಮೂರ್ತಿಗಳಾಗಿ ಆಚರಿಸಬೇಕೆಂದು ಇಲ್ಲಿ ಹೇಳುತ್ತಾರೆ.

**ಶೀಲಸಂಪಾದನೆ:**— ಶರಣರು ಮಹಾಜ್ಞಾನಿಗಳಾದ್ದರಿಂದ ಅವರು ಲಿಂಗಾಂಗಿಗಳಿಗೆ ಸಂಬಂಧಪಡದ ಶೀಲ ವ್ರತಾಚಾರಗಳನ್ನು ಆಚರಿಸುವದಿಲ್ಲ. ಹಾಗೆಯೇ ಲಿಂಗಾಂಗಿಗಳು ಮಾಡತಕ್ಕ ಆಚಾರಗಳಲ್ಲಿ ಅನೇಕ ಬಗೆಯ ಅತಿರೇಕಗಳಿದ್ದು ಅವುಗಳನ್ನು ಅವರು ಮಾಡುವದಿಲ್ಲ. ಇವುಗಳನ್ನು ವಚನಕಾರರು ತಮ್ಮ ವಚನಗಳಲ್ಲಿ ಬಹು ವಿಸ್ತಾರವಾಗಿ ನಿರೂಪಿಸುವದುಂಟು. ಈ ತರದ ಕಾರ್ಯಗಳನ್ನು ಶರಣನು ಅವಶ್ಯವಾಗಿ ತ್ಯಜಿಸಬೇಕು.

ಹೀಗೆ ಶರಣನು ನಿಜಜ್ಞಾನವನ್ನು ಹೊಂದಿ ಪರಮಾನಂದದೊಳಗೆ ಸುಖಪಡಬೇಕೆಂದು ಈ ಶರಣಸ್ಥಲದ ಸ್ಥಲಗಳಲ್ಲಿ ಹೇಳಿದೆ.

---

## ೧. ಶರಣಸ್ಥಲ.

(೧) ಕಿಚ್ಚಿನೊಳಗೆ ಹುರಿದ ಮಣಿಯಂತಾದೆನಯ್ಯಾ. ಬೆಂದ ನುಲಿಯ ಸಂದಿಕ್ಕಿ ಮುತ್ತಿನಂದ ಮಾಡಬಾರದಯ್ಯಾ. ಗುಹೇಶ್ವರಾ ನಿಮ್ಮ ನಿಲವಿನ ಪರಿ ಇಂತುಟಯ್ಯಾ.

ಟೀಕು:— ಜ್ಞಾನಾಗ್ನಿಯಲ್ಲಿ ಸರ್ವಾಂಗವು ದಗ್ಧವಾದ ಶರಣನು ತನುಗುಣಾದಿಗಳಿಲ್ಲವು ಉರಿದ ದಗ್ಧಪಟನ್ಯಾಯದಂತೆ ಇದ್ದನೆಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ತ್ರಿವಿಧಕ್ಕೆ ರತಿಯಾಗಿ, ತ್ರಿವಿಧದ ಜನಿತವ ಕಳೆದು ತ್ರಿವಿಧಕ್ಕೆ ಕಂಪಿಸದೆ ತ್ರಿವಿಧ ತ್ರಿವಿಧವನನುಗ್ರಹಿಸಿ, ತ್ರಿವಿಧಪದವ ಮೀರಿ, ತ್ರಿವಿಧ ನಿರ್ಣಯದಲ್ಲಿ ತ್ರಿವಿಧ ನಿಷ್ಪತ್ತಿಯಾಗಿಪ್ಪ ಕೂಡಲ ಚನ್ನಸಂಗಾ ನಿಮ್ಮ ಶರಣ.

(೩) ಶರಣ ದೃಷ್ಟಾದೃಷ್ಟವನರಿಯನು. ಸಾವಯವ ನಿರವ
ಯವನೇನೆಂದು ವಿವರಿಸ. ಶರಣನು ಪ್ರಕೃತಿಗುಣವಿಡಿದು ಮೂರ್ತಿಯಾಗಿ
ಉಪಜೀವಿತನಲ್ಲ. ಕೂಡಲ ಚೆನ್ನಸಂಗನ ಶರಣ ಸಾರಾಯ ಸನ್ನುತನು.

(೪) ಶಿವಯೋಗಿ ನಿಭ್ರಾಂತನೆ? ಶರಣ ಕರ್ಮಕಾಯನಲ್ಲ.
ಕಾಲಕಲ್ಪಿತನಲ್ಲ. ಶರಣನು ಸಂಕಲ್ಪ ವಿಕಲ್ಪ ವಿರಹಿತನು. ಅವರನು
ಜರಿಸಿಪ್ಪ. ತನ್ನ ಪರಿ ಬೇರೆ. ಶರಣನು ನಿರಂತರ ಪರಮಸುಖಿ. ಕೂಡಲ
ಚೆನ್ನಸಂಗನ ಶರಣ ಪ್ರಪಂಚಿನೊಳಗಿಪ್ಪ ತನ್ನ ಪರಿ ಬೇರೆ.

(೫) ಇಷ್ಟಲಿಂಗಕ್ಕೆ ಮಜ್ಜನ, ಪ್ರಾಣಲಿಂಗಕ್ಕೆ ಭೋಜನ, ತೃಪ್ತಿ
ಲಿಂಗಮುಖದಲ್ಲಿ ಪರಿಣಾಮಿಯಾಯಿತ್ತು. ಕಾಮಿತ ಕಲ್ಪಿತ ಅರ್ಪಿತ ಭಾವ
ದಲ್ಲಿ. ಅಲ್ಲಲ್ಲಿಗೆ ಅವಧಾನದ ಆಯತ ನೋಡಯ್ಯ. ಅವಧಾನದ ಮನದ
ಕೊನೆಯ ಮೊನೆಯ ಮೇಲಿಪ್ಪ ಸುಯಿಧಾನಿ. ಲಿಂಗವನು ನಿಮ್ಮ ಶರ
ಣನ ಸರ್ವಾಂಗದಲಿ ಕಾಣಬಹುದು ಕೂಡಲ ಚೆನ್ನಸಂಗಯ್ಯ.

(೬) ತನುವೇ ನಾಗವತ್ತಿಗೆಯಾದಡೆ ಅರ್ಪಿತದ ಮಾತೇಕೆ.
ತನು ನಿಶ್ಚಿಯಾದಡೆ, ಅರ್ಪಿತವಿಲ್ಲ ಕಂಡಯ್ಯ. ತನು ನಿಂದಾಸನದಾ
ದಡೆ ಸುಳಿವುದೇ ಭಂಗ. ಪ್ರಾಣಲಿಂಗ ಸಂಬಂಧಿಯಾದಡೆ ಅವನು ಎರಡು
ಮಾಡಿಕೊಂಡು ಧ್ಯಾತ್ರಾಚಾರದಲ್ಲಿ ಒಂದೇ ಎಂದು ನುಡಿವ ನೋಡುವ
ವನಲ್ಲ. ಬಾಹ್ಯ ಪದಾರ್ಥದ ಲಾಭದವನಲ್ಲ. ಹೋದ ಪದಾರ್ಥದ ಚಿಂ
ತೆಯವನಲ್ಲ. ಪ್ರಪಂಚಿನ ಹೊತ್ತುಕೊಂಡು ಬಾರದವನಲ್ಲ. ಕೂಡಲ ಚೆನ್ನ
ಸಂಗನ ಶರಣನು ಪದಾತೀತ ನೋಡಯ್ಯ.

(೭) ಹರಿವ ನದಿಗೆ ಮೈಯೆಲ್ಲಾ ಕಾಲು, ಉರಿವ ಅಗ್ನಿಗೆ
ಮೈಯೆಲ್ಲಾ ನಾಲಿಗೆ. ಬೀಸುವ ಗಾಳಿಗೆ ಮೈಯೆಲ್ಲಾ ಮುಖ. ಗುಹೇ
ಶ್ವರಾ ನಿಮ್ಮ ಶರಣಂಗೆ ಸರ್ವಾಂಗ ಲಿಂಗ.

(೮) ಶಬ್ದವು ಅಶಬ್ದವೂ ಶಬ್ದದಲ್ಲಿಯೇ ಕಾಣಬಹುದು ಕಾಣಿರೋ
ಇಷ್ಟವರಿಷ್ಟ ಸ್ಥಲವನೇ ನುಡಿವರು. ಅದಕದು ಸಹಜ. ಲಿಂಗದ ನಡೆ
ಲಿಂಗದ ನುಡಿ ಲಿಂಗದ ನೋಟ ಕೂಡಲ ಚೆನ್ನಸಂಗ ನಿಮ್ಮ ಶರಣಂಗೆ.

(೯) ಕರ್ತೃಕತ್ವವಿಲ್ಲಾಗಿ ಕರ್ತೃಕವಿಲ್ಲ. ಕರ್ತೃಕವಿಲ್ಲಾಗಿ ಜನನವಿಲ್ಲ. ಜನನವಿಲ್ಲಾಗಿ ಮರಣವಿಲ್ಲ. ಮರಣವಿಲ್ಲಾಗಿ ಭೂತಾತ್ಮನ ಚರಿತ್ರದ ಕರಣಾದಿ ಗುಣಂಗಳು ಮುನ್ನವೇ ಇಲ್ಲ. ಹಿಂದಣ ಸ್ಥಿತಿಇಲ್ಲ, ಮುಂದಣ ಲಯವಿಲ್ಲ. ಆದಿಮಧ್ಯಾವಸಾನವಿಲ್ಲ, ಬಿಟ್ಟು ಬೇರಿಲ್ಲ, ಬೆರಸಿ ಒಂದಿಲ್ಲ. ಭವಪಾಶಾತೀತ ಕೂಡಲ ಚನ್ನಸಂಗ ನಿಮ್ಮ ಶರಣನು.

ಇಂತು ಶರಣಸ್ಥಲದಲ್ಲಿ ಮಹಾಜ್ಞಾನ ವಿವೇಕದಿಂ ತನ್ನ ತಾನ ಅರಿದ ಶರಣನು ತನ್ನ ತಾನರಿದೆನೆಂಬ ಅರಿವಿನ ಮುಂದೆ ಇದಿರಿಟ್ಟು ತೋರುವ ತಾಮಸಮಂ ನಿರಸನವಂ ಮಾಡಿ ನಿರೂಪಿಸುತ್ತಿರಲು ಮುಂದೆ ತಾಮಸ ನಿರಸನಸ್ಥಲವಾದುದು.

---

## ೨. ತಾಮಸನಿರಸನಸ್ಥಲ.

(೧) ಗುರುಶಿಷ್ಯ ಸಂಬಂಧಕ್ಕೆ ಲಿಂಗವ ಧರಿಸುವರಯ್ಯ. ನಿಮ್ಮ ಬಂಧನಕ್ಕಿಕ್ಕಿ ಆಳುವರಯ್ಯ. ಆನು ಕಂಡು ಮರುಗಿ, ಅಕಟಕಟಾ, ಎಂದೆನಲ್ಲಾ. ಕೂಗಿಲ್ಲ. ಬೊಬ್ಬೆ ಇಲ್ಲ. ಹೋದ ಹೊಲಬನರಿಯರು ದೇವಾ ಗುಹೇಶ್ವರಾ ಬಾಳುವಳೆಯ ಹಿಡಿದೆನು.

ಟೀಕು:— ಗುರುಶಿಷ್ಯ ಸಂಬಂಧಕ್ಕೆ ಅವುದು ಕುರುಹು? ಶಿಷ್ಯನಲ್ಲಿ ಸುಜ್ಞಾನೋದಯವಾಗಿ ಕೋಹಂ ಭಾವವಿಲ್ಲದೆ ಗುರುವಿನಲ್ಲಿ ಪರಿಪೂರ್ಣ ಜ್ಞಾನವಡೆಗೊಂಡು ಶಿಷ್ಯೋಹಂಭಾವವಿಲ್ಲದೆ ಅಜ್ಞಾನದಿಂದ ಲಿಂಗಸ್ವಾಯತ ಸಂಬಂಧವ ಮಾಡಿಸಿಕೊಂಡಿರಲು ಅದು ಲಿಂಗಬಂಧನಕ್ಕಿಕ್ಕಿದಂತೆ ಎಂಬುದೀಗ ಗುರುಶಿಷ್ಯ ಸಂಬಂಧಕ್ಕೆ ಲಿಂಗವ ಧರಿಸುವರಯ್ಯ. ನಿಮ್ಮ ಬಂಧನಕ್ಕಿಕ್ಕಿ ಆಳುವರಯ್ಯ ಎಂಬ ಶಬ್ದಕ್ಕರ್ಥ. ಈ ನಿರ್ಣಯವ ನಿಜ ಶರಣನರಿದು ನಿವೃತ್ತಿಯ ಮಾಡಿ ಶಬ್ದಜಾಲಂಗಳ ಕಡಿಸಿ ನಿಶ್ಶಬ್ದವೇದಿಯಾಗಿ ಸುಜ್ಞಾನಲಿಂಗವನು ಸದ್ಭಾವ ಹಸ್ತದಲ್ಲಿ ಧರಿಸಿದನೆಂಬುದೀಗ ನಾನು ಕಂಡು ಮರುಗಿ ಅಕಟಕಟಾ ಎಂದೆನಲ್ಲಾ. ಕೂಗಿಲ್ಲ ಬೊಬ್ಬೆ ಇಲ್ಲ ಹೋದ ಹೊಲಬನರಿಯರು ದೇವಾ ಗುಹೇಶ್ವರಾ ಬಾಳುವಳೆಯ ಹಿಡಿದೆನು ಎಂಬ ಶಬ್ದಕ್ಕರ್ಥ.

(೨) ಒಡನೆ ಹುಟ್ಟಿದುದಲ್ಲ. ಒಡನೆ ಬೆಳೆದುದಲ್ಲ. ಎಡೆಯಲ್ಲಾ ದೊಂದುಡಿಗೆಯನುಟ್ಟು ಸಡಲಿದರೆ ಲಜ್ಜೆ ನಾಚಿಕೆಯಾಯಿತ್ತೆಂಬ ನುಡಿ ವಿಟವಾಯಿತ್ತು. ಲೌಕಿಕದಲ್ಲಿ ಹಡೆದ ಗುರು ಕರುಣದೊಡನೆ ಹುಟ್ಟಿ ನೇಮ ಬಿಡದಿರಲಿಲ್ಲವೋ. ಬಿಟ್ಟರೆ ಕರಕಷ್ಟ. ಕೂಡಲ ಸಂಗಮದೇವ ನಡಸಿ ಕೆಡಹುವ ನಾಯಕನರಕದಲ್ಲಿ.

(೩) ಅರಿಯದ ಗುರು ಅರಿಯದ ಶಿಷ್ಯಂಗೆ ಅನುಗ್ರಹವ ಮಾಡ ಲದೇನಪ್ಪುದೆಲವೋ. ಅಂಧಕನ ಕಯ್ಯ ಅಂಧಕ ಹಿಡಿದಂತೆ ಮುಂದ ನಪ್ಪುದು ಹೇಳಲೋ ಮರುಳೇ. ಬಹು ಮಾತಿನ ರಂಜನೆಯನಾಡದಿರು. ನಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಹುಸಿಯ ಹಸರವನಲ್ಲ.

(೪) ತನ್ನ ಮನೆಯ ಹೊಗದ ಗುರುವನರಸುವಾತನು ಶಿಷ್ಯ ನಲ್ಲ. ತಾ ಹೋಗದ ಮನೆಯಲುಪದೇಶವ ಮಾಡುವಾತ ಗುರುವಲ್ಲ. ಲಿಂಗವ ಮಾರಿಕೊಂಡುಂಬ ಗುರು ಶಿವದ್ರೋಹಿ. ಅಂಗವ ಮಾರಿ ಕೊಂಡುಂಬ ಶಿಷ್ಯ ಗುರುದ್ರೋಹಿ. ಇವರಿಬ್ಬರನು ಭಕ್ತರೆಂಬುವ ಕೂಡಲ ಚನ್ನಸಂಗಯ್ಯ ನಾಯಕನರಕದಲ್ಲಿಕ್ಕುವ.

(೫) ತನ್ನ ಶಿಷ್ಯ ತನ್ನ ಮಗನೆಂಬುದು ತಪ್ಪದಲಾ. ಏಕೆ? ಆತನ ಧನಕ್ಕೆ ತಂದೆಯಾದನಲ್ಲದೆ ಆತನ ಮನಕ್ಕೆ ತಂದೆಯಾದನೆ? ಏಕೆ? ಆತನ ಮನವನರಿಯನಾಗಿ ಆತನ ಧನಕ್ಕೆ ತಂದೆಯಾದನು. ತನ್ನಲ್ಲಿದ್ದ ಭಕ್ತಿಯ ಮಾರಿಕೊಂಡುಂಬವರು ನಿಮ್ಮ ನಿಜಭಕ್ತರಲ್ಲಯ್ಯ ಚನ್ನಮಲ್ಲಿಕಾರ್ಜುನಾ.

(೬) ಶಿಶಿಯನೇಕಟ್ಟಿ ಮಾಹೇಶ್ವರಿಕೆಯನೆ ಕೊಡುವರೆ? ಆತನ ವೃತ್ತಿಗಳ ತಿಳಿಯಬೇಕಯ್ಯ. ಜಾತಿಸೂತಕವನತಿಗಳೆದಾತಂಗೆ ದೀಕ್ಷೆಯ ಕೊಟ್ಟಡೆ ಸುಸರ ನೋಡಾ. ಈ ಸುವನತಿಗಳೆಯದೆ ಉಪದೇಶವ ಮಾಡಿದ ಆಚಾರ್ಯಂಗೆ ಮಾರಿ ಎಂದಾತನಂಬಿಗಚೌಡಯ್ಯ.

(೭) ಹಲವು ಕಾಲ ಹಂಸೆಯ ಸಂಗದಲ್ಲಿರ್ದಡೇನು? ಬಕನು ರುಚಿಯಾಗಬಲ್ಲುದೆ? ಗಂಗಾನದಿಯೊಳಗಿರ್ದಡೇನು? ಪಾಷಾಣ ಮೃದು ವಾಗಬಲ್ಲದೆ? ಕಲ್ಪತರುವಿನ ಸನ್ನಿಧಿಯಲ್ಲಿರ್ದಡೇನು? ಒಣ ಕೊರಡು

ನರಿ ಫಲವಾಗಬಲ್ಲುದೆ? ಕಾಶೀಕ್ಷೇತ್ರದಲ್ಲಿ ಒಂದು ಶುನಕನಿರ್ದಡೇನು? ಪಂಚಾಮೃತಕೆ ಸಲುವುದೇ ಅದರ ಹಾಲು? ತೀರ್ಥದೊಳಗೊಂದು ಗಾರ್ದಭನಿರ್ದಡೇನು? ಅದು ಕಾರಣಿಕನಾಗ ಬಲ್ಲುದೆ? ತುಂಬುಗ ಹಾಲಿನೊಳಗೊಂದು ಇದ್ದಲಿ ಇರ್ದಡೇನು? ಬಿಳಿತಾಗ ಬಲ್ಲುದೆ? ಇದು ಕಾರಣ ನಮ್ಮ ಕೂಡಲ ಚನ್ನಸಂಗನ ಶರಣರ ಸನ್ನಿಧಿಯಲ್ಲಿರ್ದಡೇನು? ಅಸಜ್ಜನನು ಸದ್ಭಕ್ತನಾಗಬಲ್ಲನೆ?

ಇಂತು ಶರಣನು ತನಗಿದಿರಿಟ್ಟು ತೋರುವ ತಾಮಸ ನಿರಸನವಂ ಮಾಡಿ ಸುಜ್ಞಾನ ಭೇದವಂ ನಿರ್ದೇಶಿಸಿ ನೆಲೆಗೊಳಿಸಿ ನಿರೂಪಿಸುತ್ತಿರಲು ಮುಂದೆ ನಿರ್ದೇಶಸ್ಥಲವಾದುದು.

---

## ೩. ನಿರ್ದೇಶಸ್ಥಲ

(೧) ತನುಬತ್ತಲೆ ಇದ್ದರೇನು, ಮನ ಶುಚಿಯಾಗದನ್ನಕ್ಕರ? ಮಂಡೆ ಬೋಳಾದಡೇನು ಭಾವ ಬಯಲಾಗದನ್ನಕ್ಕರ? ಭಸ್ಮವ ಹೂಸಿದಡೇನು, ಕರಣಾದಿಗುಣಂಗಳನೊತ್ತಿ ಸುಡದನ್ನಕ್ಕರ? ಇಂತೀ ಆಶೆಯ ವೇಷದ ಭಾಷೆಗೆ ಗುಹೇಶ್ವರಾ ನೀ ಸಾಕ್ಷಿಯಾಗಿ ಛೀ ಎಂದು ಕಳೆವೆನು.

ಟೀಕು:— ಅಂಗವಿಕಾರ ಮನವಿಕಾರ ಕರಣವಿಕಾರಂಗಳೆಲ್ಲವ ಹಿಂಗಿಸಿ ಅಂಗದಲ್ಲಿ ಅವಿರಳ ಜ್ಞಾನಿಯಾಗಿ ಇದ್ದಾತನೇ ಅಚ್ಚ ಶರಣ. ಇದನರಿಯದೆ ಆವ ವೇಷಲಾಂಛನವ ಧರಿಸಿದಡೆಯೂ ಆತ ಅಜ್ಞಾನಿ ಎಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ತಪವೆಂಬುದು ಬಂಧನ, ನೇಮವೆಂಬುದು ತಗಹು, ಶೀಲವೆಂಬುದು ಸೂತಕ. ಭಾಷೆ ಎಂಬುದು ಪ್ರಾಣಘಾತಕ. ಇಂತೀ ಚತುರ್ವಿಧವೊಳಗಿಲ್ಲ ಕೂಡಲ ಚನ್ನಸಂಗಯ್ಯನ ಲಿಂಗೈಕ್ಯವು.

(೩) ಕಾಯಕಕಾರದೆ ಮೈಸೊಂಬತನದಿಂದ ಬೇರೆ ಕೂಳ ಗಳಿಸಲಾರದೆ ಹಸಿದಿಪ್ಪರಯ್ಯಾ. ಉಡಲು ಸೀರೆಯ ಗಳಿಸಲಾರದೆ ಕಚ್ಚುಟವ

ಕಟ್ಟಿಕೊಂಡಿಪ್ಪರಯ್ಯಾ. ಮಿಂಡಿಯಲೆಣ್ಣೆಯು ಗೆಲಿಸಲಾರದೆ ಮಂಡೆ ಬೋಳಾ ಗಿಪ್ಪರಯ್ಯಾ! ದಿಟದಿಂದ ಬಿಡಿಸಲರಿಯದೆ ನಿಸ್ಸಂಸಾರದ ಶಠೆಯನವಧರಿ ಕೊಂಡಿಪ್ಪವರಿಗೆ ನಾನಂಜುವೆನಯ್ಯಾ ಸಕಳೇಶ್ವರಾ.

(೪) ಸಚರಾಚರ ಚತುರ್ವರ್ಣಿಯದೊಳಗೆ ತಿರುಗುವ ವೇಷಧಾ ರಿಯನೆನಗೆ ತೋರದಿರಯ್ಯಾ. ಆಸೆಯ ಧಿಕ್ಕರಿಸಿ ನಿರಾಸೆಯ ಪತಿಕ ಸಿದ ವೇಷವ ಕಂಡಡೆ ನೀ ಸರಿ ಎಂಬೆ ಕೂಡಲ ಚನ್ನಸಂಗಯ್ಯಾ.

(೫) ಘಟ ಸಂಸ್ಕಾರದಲ್ಲಿ ಪಟಲ ಹರಿವುದೆ, ಜೀವ ಸಂಸ್ಕಾ ರವಿಲ್ಲದನ್ನಕ್ಕ? ವೇಷಧಾರಿ, ತನ್ನಲ್ಲಿ ಗ್ರಾಸವಹುದಲ್ಲದೆ, ಜ್ಞಾನ ಸಂಸ್ಕಾ ರವಿಲ್ಲದನ್ನಕ್ಕ ಭವವೆಂತು ಹರಿವುದು? ಅಂಗಭವಿಯ ಲಿಂಗಭವಿಯ ಕ ಮಳಿದಲ್ಲದೆ ಕೂಡಲ ಚನ್ನಸಂಗಯ್ಯನ ಹೊದ್ದಬಾರದು.

(೬) ಧಾತುಗೆಟ್ಟು ಬೋಳಾದಡೇನು, ನಿಜವನ್ನೈದಬಲ್ಲುದೆ ಅಯ್ಯಾ? ವಿಕೃತ ವೇಷವ ತೋರಿ ಉದರವ ಹೊರೆವ ವೇಷಕ್ಕೆಂತಯ್ಯಾ ಉಪಾಧಿವಿಡಿದು ಮಾಡುವ ಷೋಡಶ ಕ್ರಿ ಸಕಳೇಶ್ವರಂಗೆ ದೂರವಯ್ಯಾ

(೭) ಅರ್ಥಸನ್ಯಾಸಿಯಾದಡೇನಯ್ಯಾ? ಅವಂಗದಿಂ ಬಂದಡೆಯು ಕೊಳದಿರಬೇಕು. ರುಚಿಸನ್ಯಾಸಿಯಾದಡೇನಯ್ಯಾ? ಜಿಹ್ವೆಯ ಕೊನೆಯ ಮಧುರವನರಿಯದಂತಿರಬೇಕು. ಸ್ತ್ರೀ ಸನ್ಯಾಸಿಯಾದಡೇನಯ್ಯಾ? ಜಾಗ್ರತ ಸ್ವಪ್ನಸುಷುಪ್ತಿಯಲ್ಲಿ ತಟ್ಟಲ್ಲದಿರಬೇಕು. ದಿಗಂಬರಿಯಾದಡೇನಯ್ಯಾ ಮನ ಬತ್ತಲೆ ಇರಬೇಕು. ಇಂತೀ ಚತುರ್ವಿಧದ ಹೊಲಬನರಿಯ ವೃಥಾ ಕೆಟ್ಟರು ಕಾಣಾ ಚನ್ನಮಲ್ಲಿಕಾರ್ಜುನಾ.

(೮) ಅರಿವೇ ಗುರು, ಆಚಾರವೇ ಶಿಷ್ಯ, ಜ್ಞಾನವೇ ಲಿಂ ಪರಿಣಾಮವೇ ತಪ, ಸಮತೆ ಎಂಬುದೇ ಯೋಗದಾಗು ನೋಡಯ ಈಸುವನರಿಯದೆ ಲೋಚು ಬೋಳಾದರೆ ಮಹಾಲಿಂಗ ಕಲ್ಲೇಶ್ವ ದೇವರು ನಗುವರು.

(೯) ಅಕ್ಷರ ಪಂಚಕದ ನಿಕ್ಷೇಪವನರಿವಡೆ ಬೋಳು. ಕುಕ್ಷಿಯೊ ಗ್ಗಿಪತ್ತೆರಡಕ್ಷರದ ಲಕ್ಷಣವನರಿವಡೆ ಬೋಳು. ಅಕ್ಷಯ ನಿಧಿ ಕೂಡ ಚನ್ನಸಂಗಯ್ಯಾ ಭವಕ್ಕೆ ಬಾರದುದೇ ಬೋಳು.

(೧೦) ಆಚಾರ ಖರ್ಪರ ಸೊಮ್ಮು ತೋರಿ ಬೇಡುವುದು ವಿಚಾರ. ಖರ್ಪರ ಲಾಂಛನವ ತೋರಿ ಬೇಡುವುದು ಅವಿಚಾರ. ಖರ್ಪರ ಸೊಮ್ಮು ಸಂಬಂಧ ನೇಮ ಶೀಲವ ನೂರಿ ಬೇಡುವುದಾಗಿ ನಿರುಪಾಧಿಕವಯ್ಯಾ ಕೂಡಲ ಚನ್ನಸಂಗಯ್ಯಾ.

(೧೧) ತಾಳು ಬೋಳು ಕಟ್ಟಿಗೆ ಖರ್ಪರವೆಂದೆಂಬರು. ತಾಳು ಬೋಳು ಕಟ್ಟಿಗೆ ಖರ್ಪರವಾವುದೆಂದರಿಯರು. ತಾಳು, ತನುಗುಣಾದಿಗಳ ಪ್ರಾಣಗುಣಾದಿಗಳ ತಾಳಿಕೊಂಡಿರ ಬಲ್ಲಡೆ ತಾಳು. ಬೋಳು, ಭ್ರಮೆ ಇಲ್ಲದೆ ಬಂಧನವಿಲ್ಲದೆ ಸಂಸಾರ ವಿಷಯಂಗಳ ಬೋಳಿಸಿ, ತನ್ನಿಚ್ಛೆಯಲ್ಲಿ ಇರಿಸಿಕೊಂಡಿರ ಬಲ್ಲಡೆ ಬೋಳು. ಕಟ್ಟಿಗೆ, ಕರಣಾದಿ ಗುಣಂಗಳ ನಿಲಿಸಿಕೊಂಡಿರಬಲ್ಲಡೆ ಕಟ್ಟಿಗೆ. ಖರ್ಪರವನರಿದಿರಬಲ್ಲಡೆ ಖರ್ಪರ. ಇಂತೀ ಚತುರ್ವಿಧವನರಿದವರ ಪರಮಾರಾಧ್ಯರೆಂಬೆ ಕಾಣಾ ಗುಹೇಶ್ವರಾ.

ಇಂತು ಸುಜ್ಞಾನವಂ ನಿರ್ದೇಶ ಮಾಡಿ ನಿಜವನರಿದ ಸರ್ವಾಂಗ ಜ್ಞಾನಮೂರ್ತಿಯಾದ ಶರಣಂಗೆ ಮಹಾಜ್ಞಾನವೇ ತಂತ್ರವಲ್ಲದೆ ಉಳಿದ ಮತ್ತೀಲ ವ್ರತಂಗಳು ಇಲ್ಲವೆಂದು ಪ್ರತಿಷ್ಠಿಸಿ ತೋರುತ್ತಿರಲು ಮುಂದೆ ಶೀಲ ಸಂಪಾದನೆ ಸ್ಥಲವಾದುದು.

---

## ೪. ಶೀಲಸಂಪಾದನೆಯ ಸ್ಥಲ.

(೧) ನದಿಯ ಜಲ ಕೂಪ ಜಲ ತಟಾಕ ಜಲವೆಂದು ನುಡಿವರು. ಹಿರಿದು ಕಿರಿದಾವುದೆಂದು ಅರಿಯರು. ಬೇರೆ ಮತ್ತೊಂದು ಭಾಷೆಯ ವ್ರತ ನೇಮಂಗಳ ಹಿಡಿವ ಶೀಲ ಸಂಬಂಧಿಗಳು ಜಾತ್ಯಂಧಕರು ನಿಮ್ಮನೆತ್ತ ಬಲ್ಲರು ಗುಹೇಶ್ವರಾ?

ಟೀಕು:— ಲಿಂಗಸಂಬಂಧ ಸಶೀಲವನರಿಯ ನಿಜ ತತ್ತ್ವ ವೇದಿಗಳ ಬುದ್ಧಿಯನರಿಯದೆ ಸೂತಕ ಶೀಲವನೆ ಪ್ರಾಣವ ಮಾಡಿಕೊಂಡು ಇಪ್ಪವರೆಲ್ಲರು ಅಜ್ಞಾನಿಗಳೆಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ಆಶೆ ಎಂಬ ಕೂಸನೆತ್ತಿ ರೋಷವೆಂಬ ತಾಯಿ ಬಂದು ಮುಂದೆ ನಿಂದಿಪ್ಪಳು ನೋಡಾ. ಇಂತಿವೆರಡಿಲ್ಲದೆ, ಕೂಸನೆತ್ತಬಲ್ಲಡೆ, ಆವ ಅಚ್ಚ ಶೀಲವಂತನೆಂಬೆ ಕಾಣಾ ಗುಹೇಶ್ವರಾ.

(೩) ಮುಖವನರಿಯದ ಕಾರಣ ಹೆಂಗೂಸು ಸೂಳೆಯಾದಳು. ಲಿಂಗವನರಿಯದ ಕಾರಣ ಭಕ್ತ ಶೀಲವಂತನಾದ. ಈ ಉಭಯ ಕುಳಸ್ಥಲವರಿವು ನಿಷ್ಪತ್ತಿಯಾಗದನ್ನಕ್ಕ ಕೂಡಲ ಚನ್ನಸಂಗಮದೇವನೆಂತೊಲಿವನು ?

(೪) ಲಿಂಗವಂತನ ಲಿಂಗವೆಂಬುದೇ ಶೀಲ. ಲಿಂಗವಂತನ ರಾಣಿವಾಸವ ಲಿಂಗದ ರಾಣಿವಾಸವೆಂಬುದೇ ಶೀಲ. ಲಿಂಗವಂತನ ಅರ್ಥಪ್ರಾಣಕ್ಕೆ ತಪ್ಪದಿಪ್ಪುದೇ ಶೀಲ. ಲಿಂಗವಂತರ ಪಾದೋದಕ ಪ್ರಸಾದ ಸೇವನೆಯ ಮಾಡುವದೇ ಶೀಲ. ಇಂತಪ್ಪ ಸುಶೀಲವೇ ಶೀಲ, ಉಳಿದ ದುಃಶೀಲಕ್ಕೆ ಮೆಚ್ಚುವನೇ ನಮ್ಮ ಕೂಡಲ ಚನ್ನಸಂಗಯ್ಯ ?

(೫) ಅಗ್ಗವಣಿ ಮೀಸಲಾಗಿರಬೇಕೆಂಬುದು ಶೀಲವೆ ? ಪುಷ್ಪ ಮೀಸಲಾಗಿರಬೇಕೆಂಬುದು ಶೀಲವೆ ? ಓಗರ ಮೀಸಲಾಗಿರಬೇಕೆಂಬುದು ಶೀಲವೆ ? ಭವಿಪಾಕವನೊಲ್ಲೆವೆಂದು ಭುಂಜಿಸುವ ಉದರ ಪೋಷಕರೆಲ್ಲ ಶೀಲವಂತರೆ ? ಅವರೆಲ್ಲ, ಸಿಲ್ಲು, ಮಾಣು. ಆರನವರತು, ವ್ಯಸನ ಬಿಂದು, ವ್ಯಾಪ್ತಿಗಳಲ್ಲಿ ತಲ್ಲೀಯವಾಗಿ ಅಷ್ಟು ಇವು ಶೀಲವಲ್ಲ ಕಾಣಿರಯ್ಯಾ. ಪಂಚೇಂದ್ರಿಯ ಅರಿಷಡ್ವರ್ಗ ಸಪ್ತಧಾತು ಅಷ್ಟ ಮದಂಗಳ ತಡೆಯ ಬಲ್ಲಡೆ ಕೂಡಲ ಚನ್ನಸಂಗಯ್ಯನಲ್ಲಿ ಅದೇ ಅಚ್ಚ ಶೀಲ.

(೬) ಜಲಸ್ಥಿತಘಟಕದಲ್ಲಿ ಕನ್ನವನಿಕ್ಕಿ ಉದಕವ ತಂದು ಮಜ್ಜನಕ್ಕೆರೆವರೆಲ್ಲ ಶೀಲವಂತರೆ ? ಭವಿಪಾಕವನೊಲ್ಲೆವೆಂದು ಭುಂಜಿಸುವ ಉದರ ಪೋಷಕರೆಲ್ಲ ಶೀಲವಂತರೆ ? ಅವರೆಲ್ಲ ಸಿಲ್ಲು ಮಾಣು. ಅರನವರತು ವ್ಯಸನ ಬಿಂದು ವ್ಯಾಪ್ತಿಗಳಲ್ಲಿ ತಲ್ಲೀಯವಾಗಿ, ಅಷ್ಟಮದ ಬಿಂದು ನಷ್ಟವಾಗಿ ತನುಗುಣ ಸಮಾಧಾನವಾದಡೆ ಕೂಡಲ ಚನ್ನಸಂಗಯ್ಯನಲ್ಲಿ ಅಚ್ಚ ಶೀಲವಂತರೆಂಬೆ.

(೭) ಎಂಜಲ ಮಾತ ನುಡಿವ ಜಗದ ಜಂಗುಳಿಗಳೆಲ್ಲ ಶೀಲವಂತರೆ ? ಭಿನ್ನರುಚಿಗಳಿಗೆರಗದ ಕಾಮನ ಬೆಂಬಳಿವಿಡಿಯದೆ ಮುಕ

ಶೃಂಗಾರವ ಮಾಡದೆ ಅಂಗನೆಯರ ಸಂಗ ತೊರೆದಡೆ, ಶೀಲವಂತರೆಂಬೆನು. ಲೋಕದ ನಚ್ಚು ಮೆಚ್ಚು ಬಿಟ್ಟು ನಿಶ್ಚಿಂತನಾದರೆ ಮೆಚ್ಚುವನಯ್ಯಾ ನಮ್ಮ ಸಕಳೇಶ್ವರ.

(೮) ಅರ್ಚನೆ ಪೂಜನೆ ನೇಮವಲ್ಲ. ಮಂತ್ರ ತಂತ್ರ ನೇಮವಲ್ಲ. ಧೂಪ ದೀಪಾರತಿ ನೇಮವಲ್ಲ. ಪರಧನ ಪರಸ್ತ್ರೀ ಪರದೈವಂಗಳಿಗೆ ರಗದಿಪ್ಪುದೇನೇಮ. ಶಂಭುಜಕ್ಕೇಶ್ವರ ದೇವರಲ್ಲಿ ಇದು ಕಾರಣ ಇದು ನಿತ್ಯನೇಮ.

(೯) ಶೀಲಶೀಲವೆಂದೇನೊ? ಮಾಡಿದ ಮನೆ ಹೂಡಿದ ಒಲೆ, ಅಟ್ಟುಂಬ ಮಡಕೆ, ಕಟ್ಟಿದ ಕೆರೆ, ಬಿತ್ತಿ ಬೆಳೆದ ಹೊಲಕ್ಕೆ ಶೀಲವಲ್ಲದೆ, ತನ್ನ ಮನಕ್ಕೆ ಶೀಲವಿಲ್ಲ. ಶೀಲವಾವುದೆಂದಡೆ ಲಿಂಗ ಬಂದು ಮನವನಿಂಬುಗೊಂಬುದೇ ಶೀಲ. ಜಂಗಮ ಬಂದು ಧನವನಿಂಬುಗೊಂಬುದೇ ಶೀಲ. ಪ್ರಸಾದ ಬಂದು ತನುವನಿಂಬುಗೊಂಬುದೇ ಶೀಲ. ಇಂತಪ್ಪ ಶೀಲಕ್ಕೆ ನಮೋ ನಮೋ ಎಂಬೆ. ಉಳಿದ ದುಃಶೀಲರಕಂಡರೆ ಮೆಚ್ಚುವನೆನಮ್ಮ ಕೂಡಲ ಚನ್ನಸಂಗಯ್ಯ?

(೧೦) ಶೀಲವಂತನಾದರೆ ತಾ ನವೆದು ಶೀಲವ ಮಾಡಬೇಕಲ್ಲದೆ. ತಾನಿದ್ದೆಡೆಯಲ್ಲಿ ಸುಳಿದು ಮಾಡುವ ಶೀಲ ಕೊಟ್ಟು ಪೂಜಿಸುವಕ್ಕೆ ಕೂಲಿತನವಿಲ್ಲ. ಪೂಜೆಯ ಫಲ ಕೊಡವಾಲ ಕರೆವ ಸುರಭಿಯಂತೆ ಅಟ್ಟಿದರಟ್ಟುವ ಬೇಡಿ ಮರುಗುವ ದಾಸಿಯ ಪಥವಂತೆ ತನ್ನವರ ನಿಮಿತ್ತವಿಡಿದು ಶೀಲಬೇಕೆಂಬ ದುಶ್ಶೀಲರ ಮೆಚ್ಚುವನೇ ಸಕಳೇಶ್ವರನು?

(೧೧) ಶೀಲವಂತರು ಎಂದೆಂಬರು. ನಾವಿದನರಿಯೆವಯ್ಯಾ. ಅಂಗನೆಯರ ಅಧರಪಾನ ತಮ್ಮುದರವ ಹೊಗುವಾಗ ಶೀಲವೆಲ್ಲಿಯದೊ? ಇದು ಬಾಲರಾಳಿಯಲ್ಲದೆ ಈಷಣತ್ರಯವೆಂಬ ಸೊಣಗ ಬೆಂಬತ್ತಿ ಬರುತ್ತಿರಲು ಶೀಲವೆಲ್ಲಿಯದೋ? ಚಿತ್ತದ ಕಳವಳವು ಸಮನಿಸಿ ಮನವು ಮಹದಲ್ಲಿ ನೆಲೆಗೊಂಡಡೆ ಶೀಲ. ಪರಿಣಾಮ ನೆಲೆಗೊಂಡಡೆ ಸೀಮೆ. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಶೀಲವಂತರಪೂರ್ವ.

(೧೨) ಶೀಲ ಶೀಲವೆಂದು ಗರ್ವಿಸಿ ಕೃತಕದಲ್ಲಿ ನುಡಿವ ಉಪ್ಪೇಶಿ ಪ್ರಾಣಿಗಳೆಲ್ಲರು ಅನಂತ ಶೀಲರು ಹೂಬಾವಿ ಮಠಕ್ಕೆ ಸೀಮೆಯ ಮಾಡುವುದು ಶೀಲವಲ್ಲ ತನ್ನ ಮನಕ್ಕೆ ಸೀಮೆಯ ಮಾಡುವುದು ಶೀಲ. ಹುಸಿ ಕಳವು ದುಃಶೀಲವಲ್ಲದೆ ಭಕ್ತರ ಕಳೆವುದು ಶೀಲವೆ? ಲಿಂಗ ಪ್ರಾಣವ ಮಾಡುವುದು ಶೀಲವಲ್ಲದೆ ಪ್ರಾಣಲಿಂಗವ ಮಾಡುವುದು ಶೀಲವೆ? ಇಂತಿವೆಲ್ಲ ಶೀಲರು ದುಃಶೀಲರು. ಸಕಳೇಶ್ವರದೇವ ನಾನೇನೆಂದರಿಯೆ. ನೀನಿರಿಸಿದಂತಿಪ್ಪೆ.

(೧೩) ಹೊನ್ನು ಭಕ್ತನೆಂಬೆನೆ? ಹೊನ್ನಿನೊಳಗಣ ಮುಪ್ರಭವಿ. ಹೆಣ್ಣು ಭಕ್ತನೆಂಬೆನೆ? ಹೆಣ್ಣಿನೊಳಗಣ ವಿರಹವು ಭವಿ. ಮಣ್ಣು ಭಕ್ತನೆಂಬೆನೆ? ಮಣ್ಣಿನೊಳಗಣ ಬೇಸು ತಾ ಭವಿ. ಇಂತೀ ತ್ರಿವಿಧದೊಳಗಣ ಭವಿಯ ಕಳೆದು ಪ್ರಸಾದವ ಮಾಡಿಕೊಂಬಲ್ಲಿಡೆ ಕೂಡಲ ಚನ್ನಸಂಗಯ್ಯನಲ್ಲಿ ಇಂತಹ ಶೀಲವಂತರಪೂರ್ವವೆಂಬೆ.

(೧೪) ಶೀಲವೆಂದೇನೋ ಪ್ರಪಂಚು ನಾಸ್ತಿಯಾಗದನ್ನಕ್ಕ? ಸೀಮೆಯೆಂದೇನೋ ಪಂಚೇಂದ್ರಿಯ ನಿರಹಿತವಾಗದನ್ನಕ್ಕ? ಶೀಲಕ್ಕೆ ಭವಂ ನಾಸ್ತಿ. ಸೀಮೆಗೆ ಭವಂ ನಾಸ್ತಿ. ಇದು ಕಾರಣ ಕೂಡಲ ಚನ್ನಸಂಗಯ್ಯ ನಿಮ್ಮ ಶೀಲವಂತರಪೂರ್ವ.

(೧೫) ಶೀಲವಂತರು ಶೀಲವಂತರೆಂದೆಂಬರು. ಶೀಲದ ಹೊಲಬನರಿಯದ ಭ್ರಮಿತ ಪ್ರಾಣಿಗಳು ನೀವು ಕೇಳಿ ಭೋ. ಕಾಮವೆಂಬುದೊಂದು ಪಾಪಿ. ಮರಹೆಂಬುದೊಂದು ದ್ರೋಹಿ. ಮತ್ಸರವೆಂಬುದೊಂದು ಹೊಲೆಯ. ಕ್ರೋಧವೆಂಬುದೊಂದು ಕೈಸೂನೆಗಾರ. ಇಂತಿವನರಿದು ಮರೆದು ಪರವಸಂಬೋಗಿ ಹೊಯಿ ಹೊಡೆದಂತಿರ್ದಾತ ಕೂಡಲ ಚನ್ನಸಂಗಯ್ಯ ಆವರ ಶೀಲವಂತರೆಂಬೆ.

(೧೬) ಆಸೆ ಎಂಬ ಕೂಸನೆತ್ತಲು ರೋಷವೆಂಬ ತಾಯಿ ಮುಂದೆ ಬಂದಿಪ್ಪಳು ನೋಡಾ! ಇಂತೀ ಎರಡಿಲ್ಲದೆ ಕೂಸನೆತ್ತಬಲ್ಲಡೆ ಆವರ ನಿಚ್ಚ ಶೀಲವಂತರೆಂಬೆ ಕಾಣಾ ಗುಹೇಶ್ವರಾ.

ಇಂತು ಶರಣಾದಿ ಶೀಲಸಂಪಾದನಾಂತ್ಯವಾದ ನಾಲ್ಕು ಸ್ಥಲಂಗಳಲ್ಲಿ ಮಹಾಜ್ಞಾನ ವಿವೇಕದಿಂ ಸರ್ವ ಸಂಶಯ ನಿವೃತ್ತಿಯಂ ಮಾಡಿ ನಿಜವನರಿದು ಪರಮಾನಂದ ಸುಖಿಯಾದ ಮಹಂತನು ಮುಂದೆ ತನ್ನನಿವರತು ಮರಹು ನಷ್ಟವಾಗಿ ಮಹಾಲಿಂಗದಲ್ಲೈಕ್ಯವಾದ ಭೇದವೆಂತಿರ್ಪುದೆಂಬಡೆ ಮುಂದೆ ಐಕ್ಯಸ್ಥಲವಾದುದು.



# ಐಕ್ಯಸ್ಥಲ.

ವಿವರಣೆ:— ಹಿಂದಿನ ಸ್ಥಳಗಳಲ್ಲಿ ಹೇಳಿದ ಕ್ರಿಯೆಗಳ ಪರಿಣಾಮಗಳು ಈ ಸ್ಥಳದಲ್ಲಿ ಪರಸ್ಪರ ಸಾಮರಸ್ಯವನ್ನು ಹೊಂದುವವು. ಆಗ ಅವು ಅವ್ಯಕ್ತ ಸ್ವರೂಪವನ್ನು ಹೊಂದುವವು. ಆದರೂ ಇದು ಶೂನ್ಯ ಸ್ಥಿತಿಯಲ್ಲ. ಅವುಗಳ ಆವಶ್ಯಕತೆಯು ಉಂಟಾದಾಗ್ಗೆ ಅವು ಪ್ರಕಟವಾಗುವವು. ಇದು ಅರಿವು ಅರತಸ್ಥಿತಿಯು ಎಂದು ಹೇಳಲ್ಪಡುತ್ತದೆ. ಹಾಗೆಯೇ ಮರಹು ಎಂಬುದೂ ಇಲ್ಲಿ ನಷ್ಟವಾಗಿರುತ್ತದೆ. ಅದರ ಬದಲು ಪೂರ್ಣಜ್ಞಾನವು ಉಂಟಾಗಿರುತ್ತದೆ. ಈ ಜ್ಞಾನವು ಈ ಸ್ಥಲದಲ್ಲಿ ನೈಮಿತ್ತಿಕ ಸ್ಥಿತಿಯಲ್ಲಿ ರುತ್ತಿದ್ದರೂ ಅದು ಬೇಕಾದಾಗ ಪ್ರಕಟಕ್ಕೆ ಬರಬಹುದಾಗಿದೆ.

**ಐಕ್ಯಸ್ಥಲ:**— ಈ ಸ್ಥಲದಲ್ಲಿ ಐಕ್ಯನಲ್ಲಿರುವ ಗುಣಗಳ ಸಾಮಾನ್ಯ ವರ್ಣನೆ ಇರುತ್ತದೆ.

**ಸರ್ವಾಚಾರ ಸಂಪತ್ತು ಸ್ಥಲ:**— ಷಟ್ ಸ್ಥಲಗಳೆಲ್ಲವೂ ಈ ಸರ್ವಾಚಾರದಲ್ಲಿ ಅಡಕವಾಗಿವೆ. ಈ ಸರ್ವಾಚಾರವು ಐಕ್ಯ ಸ್ಥಿತಿಯಲ್ಲಿರುವವನ ಮುಖ್ಯ ಲಕ್ಷಣವಾಗಿರುತ್ತದೆ. ಈ ಎಲ್ಲ ಸ್ಥಲಗಳಲ್ಲಿ ಪರಸ್ಪರತೆ ಇರಬೇಕು, ಸಹಕಾರವು ಬೇಕು. ಇದು ಸರ್ವಾಚಾರ ಸಂಪತ್ತು ಸ್ಥಲದ ಮೂಲಕವಾಗಿಯೇ ಉಂಟಾಗುತ್ತದೆ.

**ಏಕಭಾಜನ ಸ್ಥಲ:**— ಐಕ್ಯನಿಗೆ ಮಹಾಲಿಂಗವೇ ಆಶ್ರಯವು. ಮಹಾಲಿಂಗಕ್ಕೂ ಐಕ್ಯನೇ ಆಶ್ರಯ. ಹೀಗೆ ಇವುಗಳು ಪರಸ್ಪರ ಕೂಡಿಕೊಂಡಿರುತ್ತವೆ. ಈ ಕೂಡುವಿಕೆಯೇ ಏಕಭಾಜನವೆನಿಸುತ್ತದೆ.

**ಸಹಭೋಜನ:**— ಮಹಾಲಿಂಗದಲ್ಲಿ ಹೀಗೆ ಸಮರಸ ಭಾವವನ್ನು ಉಂಟುಮಾಡಿಕೊಂಡು ಅದರ ಪರಮಾನಂದ ಸುಖದಲ್ಲಿ ಲೋಲುಪನಾಗಿರಬೇಕು. ಇದೇ ಸಹಭೋಜನವು.

ಈ ಪ್ರಕಾರ ಐಕ್ಯ ಸ್ಥಲದಲ್ಲಿ ಹಿಂದಿನ ಸ್ಥಲಗಳ ಪರಿಣಾಮಗಳು ಅಡಗಿ ಸರ್ವಾಚಾರ ಸಂಪತ್ತಿನ ಅನುಭವವನ್ನು ಹೊಂದಿ ಮಹಾಲಿಂಗದೊಡನೆ ಸುಖಿಸಬೇಕು. ಇದು ಅಂಗ ಸ್ಥಲಗಳಲ್ಲಿ ಕಡೆಯದಾದ ಐಕ್ಯ ಸ್ಥಲವು.

---

# ೧. ಐಕ್ಯಸ್ಥಲ.

(೧) ತನ್ನನರಿದಂಗೆ ಇದಿರೆಂಬುದಲ್ಲ. ತನ್ನನರಿಯದವಂಗೆ ಇದಿರೆಂಬುದುಂಟು. ಅರಿವಿನ ಕುರುಹು ಕುರುಹಳಿಯಿತ್ತು. ಬೆರಗು ಬೆಳಗಿನೊಳಗೆ ಕರಿಗೊಂಡಿತ್ತು. ಇದೇನೋ? ಭ್ರಾಂತುಭ್ರಾಂತನೆ ನುಂಗಿ ಗುಹೇಶ್ವರ ಭವಿಯು ಬೆಂಬತ್ತಿ ಭವಿಯಾದ ಕಾರಣ.

(೨) ಮನದ ಕಾಲತ್ತಲು, ತನುವಿನ ಕಾಲಿತ್ತಲು. ಅನುಭಾವದ ಅನುವನು ನೆನೆವುತ್ತ ಗಮನಗೆಟ್ಟುದೋ. ಲಿಂಗ ಮುಖದಲಾದ ಸೂಚನೆಯ ಸುಖವ ಕಂಡು ಗಮನಗೆಟ್ಟುದೋ. ಅನುವಾಯಿತ್ತು, ಅನುವಾಯಿತ್ತು. ಅಲ್ಲಿಯೇ ತಲ್ಲೀಯವಾಯಿತ್ತು ಶ್ರೀಗುಹೇಶ್ವರನೆಂಬ ಮಹಾಲಿಂಗೈಕ್ಯಂಗೆ.

(೩) ಸ್ಥಲವಿಡಿದು ಸರ್ವದಲಾಯತವಾಗಿ ಸಂಬಂಧಮುದಯಿಸಿದೆಂದು, ಸಹಜವಳವಟ್ಟಲ್ಲಿ ಇದು ಅದು ಎಂದೆನಲುಂಟೆ? ಭಾವನಳಿದು ನಿರ್ಭಾವ ಉಳಿದಲ್ಲಿ ಇದು ಅದು ಎಂದೆನಲುಂಟೆ ಕೂಡಲ ಚನ್ನಸಂಗ ಸರ್ವಾಂಗಮಯವಾದಲ್ಲಿ ?

(೪) ತನು ಸೋಂಕಿ ತನು ನಷ್ಟವಾಯಿತ್ತು. ಮನ ಸೋಂಕಿ ಮನ ನಷ್ಟವಾಯಿತ್ತು. ಭಾವ ಸೋಂಕಿ ಭಾವ ನಷ್ಟವಾಯಿತ್ತು. ಇದು ಕಾರಣ ಕೂಡಲ ಚನ್ನಸಂಗಯ್ಯ ಲಿಂಗ ಸೋಂಕಿನ ಶರಣನ ಸಂದು ನಷ್ಟವಾಯಿತ್ತು.

(೫) ತನ್ನನರಿದಂಗೆ ಇದಿರೆಂಬುದುಂಟು. ತನ್ನನರಿಯದವಂಗೆ ಇದಿರೆಂಬುದಿಲ್ಲ. ಅರಿವು ಮರೆದು ಕುರುಹಳಿಯಿತ್ತು. ಬೆರಗಾಯಿತ್ತು. ಬೆರಗು ಬೆರಗಿನೊಳಗೆ ಕರಿಗೊಂಡಿತ್ತಿದೇನೋ? ಭ್ರಾಂತು ಭ್ರಾಂತನೆ ನುಂಗಿತ್ತಿದೇನೋ ಗುಹೇಶ್ವರ?

(೬) ನೆಳಲು ಸತ್ತಿತ್ತು. ಭ್ರಾಂತು ಬೆಂದಿತ್ತು. ಅರಿವು ಮರೆಯಿತ್ತು. ಕುರುಹು ಗೆಟ್ಟಿತ್ತು. ಗತಿಯನರಸುವರೆ, ಅವರಲ್ಲಿ ಮತಿಯನರಸುವರೆ, ಅಂಗವೆಲ್ಲ ನಷ್ಟವಾಗಿ ಲಿಂಗ ಲೀಯವಾದವರಲ್ಲಿ ಕಂಗಳಂಗದ ಕಳೆಯು ಬೆಳಗಿನ ಭಂಗ ಹಿಂಗಿತ್ತು ಗುಹೇಶ್ವರಾ.

(೭) ಮಾಡಿ ಮಾಟವ ಮರೆದು ಕೂಡಿ ಕೂಟವ ಮರೆದು ಬಯಲು ಸಮರಸಕ್ಕೆ ಮರಳಾಯಿತ್ತಲ್ಲಾ! ಜೀವ ಪ್ರಾಣದ ಭೇದವ ತಿಳಿಯದು. ನಿಜವದಕ್ಕಾಯಿತ್ತಲ್ಲಾ! ಅನ್ಯ ಚಿನ್ಹುವಡಗಿ ತನ್ನ ತಾ ಮರೆಯಿತ್ತು ಕೂಡಲ ಚನ್ನಸಂಗ.

(೮) ಉಪಾಧಿಕ ಮನ, ಉಪಾಧಿಕ ರಹಿತ ಮನ, ನಿಂದಲ್ಲಿ ನಿವಾತವಾಯಿತ್ತು. ಲಿಂಗೋದಯ ಪ್ರಜ್ವಲಿಸುತ್ತಿದೆ ಗುಹೇಶ್ವರ ಲಿಂಗವು ತಾನೆಯಾಗಿ.

(೯) ಶಿವಶಿವಾ! ಮೂರ್ತಿಗೆ ಸತ್ಯಶುದ್ಧ ಉಂಟೆಂಬಿರಿ. ಸತ್ಯ ಶುದ್ಧವುಳ್ಳವಂಗೆ ಗುರುವಿಲ್ಲ. ಸತ್ಯಶುದ್ಧವುಳ್ಳವಂಗೆ ಲಿಂಗವಿಲ್ಲ, ಸತ್ಯ ಶುದ್ಧವುಳ್ಳವಂಗೆ ಜಂಗಮವಿಲ್ಲ, ಸತ್ಯಶುದ್ಧವಿಲ್ಲದವಂಗೆ ಪ್ರಸಾದವಿಲ್ಲ, ಸತ್ಯ ಶುದ್ಧವುಳ್ಳವಂಗೆ ಗುಣತ್ವವಿಲ್ಲ, ಕೇಳಿರೇ. ಸತ್ಯಶುದ್ಧಲಿಂಗಕ್ಕೆ ಉಪಚಾರ ಉಂಟು. ಸತ್ಯಶುದ್ಧ ಗುರುವಿಂಗೆ ಧ್ಯಾನ ಮೌನ ಅನುಷ್ಠಾನ ಉಂಟು. ಸತ್ಯಶುದ್ಧ ಉಪದೇಶಕ್ಕೆ ಜಪತಪ ಪೂಜೆ ಸಮಾಧಿ ಹೋಮ ನಿಯಮ ನಿತ್ಯ ಅಷ್ಟ ವಿಧಾರ್ಚನೆ ಷೋಡಶೋಪಚಾರ ಉಂಟು. ಇಂತಪ್ಪ ಸತ್ಯ ಶುದ್ಧವುಳ್ಳ ಗುರುವಿಂಗೆ ಶರಣೆನ್ನೆ. ಇಂತಪ್ಪ ಸತ್ಯ ಶುದ್ಧವುಳ್ಳ ಲಿಂಗಕ್ಕೆ ಶರಣೆನ್ನೆ. ಇಂತಪ್ಪ ಸತ್ಯ ಶುದ್ಧ ಜಂಗಮಕ್ಕೆ ಶರಣೆನ್ನೆ. ಇಂತಪ್ಪ ಸತ್ಯ ಶುದ್ಧ ಪ್ರಸಾದಕ್ಕೆ ಕೈಯ್ಯಾನೆ. ಇವರೆಲ್ಲರು ಬ್ರಹ್ಮನ ಮಕ್ಕಳು. ಎನಗೆ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ. ಆವ ಸಹಜವೂ ಇಲ್ಲದ ಲಿಂಗೈಕ್ಯನು ಕಾಣಾ ಕೂಡಲ ಚನ್ನಸಂಗಮದೇವಾ.

(೧೦) ವಾರಿಕಲ್ಲ ಕಡಿದು ಪುತ್ಥಳಿಯ ಕಂಡಿಸುವಂತೆ ಉಪ್ಪಿನ ಪೊಟ್ಟಣವ ಉದಕದಲ್ಲಿರಿಸಿದಂತೆ ಕರ್ಪುರದ ಪ್ರಣತಿಯಲ್ಲಿ ಜ್ಯೋತಿಯು ಬೆಳಗುವಂತೆ ಸಿದ್ಧ ಸೋಮನಾಥ ಲಿಂಗವವಗ್ರಾಹಕ.

(೧೧) ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರಹು, ನೋಡ ಲಿಲ್ಲದ ನೋಟ, ಬೆರಿಸಲಿಲ್ಲದ ಬೆರಗು ನಿಮ್ಮ ಕೂಡಲ ಚನ್ನಸಂಗಾ ಲಿಂಗೈಕ್ಯಂಗೆ.

ಇಂತು ಮಹಾಲಿಂಗದಲ್ಲಿ ಐಕ್ಯನಾದ ಲಿಂಗೈಕ್ಯನಲ್ಲಿ ಷಟ್‌ಸ್ಥಲ ಸಂಪನ್ನವಾದ ಸರ್ವಾಚಾರವು ಅಡಗಿದ ಭೇದವೆಂತಿರ್ದುದೆಂದಡೆ ಮುಂದೆ ಸರ್ವಾಚಾರ ಸಂಪತ್ತು ಸ್ಥಲವಾದುದು.

---

## ೨ ಸರ್ವಾಚಾರಸಂಪತ್ತುಸ್ಥಲ.

(೧) ಆದಿಯಾಧಾರವಾಗಿಹುದೇ ಘನ. ಆ ಘನವ ವೇಧಿಸಿಹುದೇ ಮನ. ಆ ಮನವು ಮಹವನಿಂಬುಗೊಂಡುದೇ ಭಕ್ತಿ. ಭಿನ್ನ ಭಾವದಿಚ್ಛೆ ದೋರದಿಹುದೇ ಆಚಾರ. ತಟ್ಟು ಮುಟ್ಟು ತಾಗು ನಿರೋಧವಿಲ್ಲದಿಹುದೇ ಶುಚಿ. ಆಶೆ ರೋಷ ಹರುಷವಿಲ್ಲದಿಹುದೇ ಪ್ರಸಾದ. ಕರಣ ಮಥನ ಇಚ್ಛೆದೋರದಿಹುದೇ ಅನುಭಾವ. ಇಂತೀ ಸರ್ವಾಂಗವಲ್ಲಿ ಸರ್ವಾವಧಾನಿಯಾಗಿ ನಿರಂತರ ಸುಖಿ ಕೂಡಲಚನ್ನಸಂಗಾ.

(೨) ಹೊಸ ಮದುವೆಯ ಹಸೆಯುಡುಗದ ಮುನ್ನ, ಹೊಸಿದ ಅರಿಶಿನ ಬಿಸಿಲಿಂಗೆ ಹರಿಯದ ಮುನ್ನ, ತನು ಸಂಚಲವಾಗದೆ ಮನ ಗುರು ಕಾರುಣ್ಯವ ಹಡೆದು ಹುಸಿ ಇಲ್ಲದಿರ್ದಡೆ ಭಕ್ತನೆಂಬೆ. ಹಿಡಿಯ ಲಿಲ್ಲದಿರ್ದಡೆ ಮಹೇಶ್ವರನೆಂಬೆ. ತನುವಿಲ್ಲದಿರ್ದಡೆ ಪ್ರಸಾದಿ ಎಂಬೆ. ಜೀವವಿಲ್ಲದಿರ್ದಡೆ ಪ್ರಾಣಲಿಂಗಿ ಎಂಬೆ. ಆಶೆ ಇಲ್ಲದಿರ್ದಡೆ ಶರಣನೆಂಬೆ ಈ ಐವರ ಸಂಪರ್ಕ ನಿಭೋಗವಾದಡೆ ಐಕ್ಯನೆಂಬೆ. ಆ ಐಕ್ಯನ ಸಂತೋಷ ಹಿಂಗಿದಡೆ ಜ್ಯೋತಿರ್ಮಯನೆಂಬೆ. ಈ ಹಿಂಗಾದಡೆ ದೇಹ ಇರಿದಡರಿಯದು, ತರಿದಡರಿಯದು, ಬೈದಡರಿಯದು, ಹೊಯ್ದಡರಿಯದು, ನಿಂದಿಸಿದಡರಿಯದು, ಸ್ತುತಿಸಿದಡರಿಯದು, ಸುಖವನರಿಯದು, ದುಃಖವನರಿಯದು. ಇಂತಿದರ ತಾಗು ನಿರೋಧವನರಿಯದಿರ್ದಡೆ. ಅಂತಹವರ ಮಹಾಲಿಂಗ ಅಗಜೇಶ್ವರನೆಂಬೆ.

(೩) ಆದಿ ಆಧಾರವಾಗಿಹುದೇ ಘನ. ಆ ಘನವ ವೇಧಿಸಿಹುದೇ ಮನ. ಆ ಮನವು ಮಹವನಿಂಬುಗೊಂಬುದೇ ಭಕ್ತಿ. ಭಿನ್ನ ಭಾವ ತಲೆದೋರದಿಹುದೇ ಆಚಾರ. ತಟ್ಟು ಮುಟ್ಟು ತಾಗುನಿರೋಧವಿಲ್ಲದಿ

ಹುದೇ ಪೂಜೆ. ಆಸೆ ರೋಷ ಹರುಷವಿಲ್ಲದಿಹುದೇ ಪ್ರಸಾದ. ಕರಣ ಮಥನದಿಚ್ಛೆಯೋರದಿಹುದೇ ಅನುಭಾವ. ಇಂತಿವು ಸರ್ವಾಂಗದಲ್ಲಿ ಆಳವಟ್ಟಿದಾಗಿ ನಿರಂತರ ಸುಖಿ ಕೂಡಲಚೆನ್ನಸಂಗಾ ನಿಮ್ಮ ಶರಣನು.

(೪) ಆಚಾರ ಗುರುಸ್ಥಲ, ಅನುಭಾವ ಲಿಂಗಸ್ಥಲ, ಅವಧಾನ ಅರ್ಪಿತಸ್ಥಲ, ಪರಿಣಾಮ ಪ್ರಸಾದಿ ಸ್ಥಲ, ಸಮಾನ ಶರಣಸ್ಥಲ, ಅರಿವು ಐಕ್ಯಸ್ಥಲ, ಇಂತೀ ಷಡ್ವರ್ಗ ಸರ್ವಾಂಗ ನಿರಂತ ಕೂಡಲಚೆನ್ನಸಂಗಾ ನಿಮ್ಮ ಶರಣ.

(೫) ಗುರುಲಿಂಗ ಸಂಯೋಗವಾದಲ್ಲಿ ಶಿವಲಿಂಗದುದಯ, ಶಿವಲಿಂಗ ಸಂಯೋಗವಾದಲ್ಲಿ ಜಂಗಮಲಿಂಗದುದಯ, ಜಂಗಮಲಿಂಗ ಸಂಯೋಗವಾದಲ್ಲಿ ಪ್ರಸಾದದುದಯ, ಪ್ರಸಾದ ಪ್ರಾಣಸಂಯೋಗವಾದಲ್ಲಿ, ಜ್ಞಾನೋದಯ, ಜ್ಞಾನಾನುಭಾವ ಸಂಯೋಗವಾದಲ್ಲಿ, ಸುಜ್ಞಾನೋದಯ, ಇಂತೀ ಗುರುವಿನ ಘನವ, ಲಿಂಗದ ನಿಜವ, ಜಂಗಮದ ಮಹಿಮೆಯ, ಪ್ರಸಾದದ ರುಚಿಯ, ಪ್ರಾಣನ ನೆಲೆಯ, ಸುಜ್ಞಾನದ ನಿಲವ, ಆ ಮಹಾನುಭಾವದ ಸುಖವನರಿದು ಮರೆದಲ್ಲಿ ಮಹಾಘನ ಸದ್ಗುರುಸಿದ್ಧಸೋಮನಾಥನೆಂಬ ಲಿಂಗದಲ್ಲಿ ಭರಿತವಾದುದು ಸುಜ್ಞಾನ.

(೬) ಆಯತದಲ್ಲಿ ಆಗಾಗಿ ಭಕ್ತನೆನಿಸುವುದಯ್ಯಾ. ಸ್ವಾಯತದಲ್ಲಿ ಆಗಾಗಿ ಯುಕ್ತನೆನಿಸುವುದಯ್ಯಾ. ಸಂಯೋಗದಲ್ಲಿ ಆಗಾಗಿ ಶರಣನೆನಿಸುವುದಯ್ಯಾ. ಪ್ರಸಾದಕ್ಕೆ ಪ್ರಾಣವಾಗಿ ಉಭಯಪ್ರಾಣವೆನಿಸುವುದಯ್ಯಾ. ಘನಕ್ಕೆ ಘನ ಮನವಾದಲ್ಲಿ ಮನವೇದ್ಯವೆನಿಸುವುದಯ್ಯಾ. ಕೂಡಲಚೆನ್ನಸಂಗಾ ಲಿಂಗ ಸರ್ವಾಂಗವಾದಲ್ಲಿ ಅನುಭಾವವಧಿಕವೆಂದೆನಿಸುವುದಯ್ಯಾ.

(೭) ಕಿಂಕುರ್ವಾಣತೆಯಿಂದ ಬಂದ ಜಂಗಮವೇ ಲಿಂಗವೆಂದು ತನುಗುಳ್ಳುದನರಿದು ಮನ ಸಹಿತ ಮಾಡುವಲ್ಲಿ ಭಕ್ತ. ನಿಷ್ಠೆ ನಿಬ್ಬೆರಿಸಿ ಗಟ್ಟಿಗೊಂಡು ಅಭಿಲಾಷೆ ಸಮನಿಸದೆ ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಹೇಶ್ವರ. ಅನರ್ಪಿತ ಸಮನಿಸದೆ ಬಂದುದ ಕಾಯದ ಕೈಯಲ್ಲಿ ಕೊಟ್ಟು ಲಿಂಗ ಸಹಿತ ಭೋಗಿಸುವಲ್ಲಿ ಪ್ರಸಾದಿ. ಪ್ರಾಣಕ್ಕೆ ಪ್ರಾಣವಾಗಿದ್ದುದನು ಕಾಯುಸ್ಥಿತಿಯನರಿದು ಎಚ್ಚರ ಗುಂದದಿಪ್ಪಲ್ಲಿ ಪ್ರಾಣಲಿಂಗ ಸಂಬಂಧಿ.

ತನಗೆ ಲಿಂಗವಾಗಿ ಲಿಂಗಕ್ಕೆ ತಾನಾಗಿ ಬಿಚ್ಚಿ ಬೇರಿಲ್ಲದಿಹ ಬೆಡಗಿನ ಒಲು
ಮೆಯಲ್ಲಿ ಶರಣ. ಸದಾಚಾರ ಸಂಪತ್ತಿನಲ್ಲಿ ಬಂದನುಭಾವವ ಮೀರಿ
ಹೆಸರಡಗಿದ ಸುಖವದು ಲಿಂಗೈಕ್ಯವು. ಇದು ಕಾರಣ ಕೂಡಲಚೆನ್ನ
ಸಂಗಯ್ಯನಲ್ಲಿ ಬಸವಣ್ಣನಲ್ಲದೆ ಷಟ್ ಸ್ಥಲವಪೂರ್ವ.

(೮) ತನುವಿಡಿದು ನಡೆವ ತ್ರಿವಿಧ ತ್ರಿವಿಧ ಸಂಪತ್ತುಗಳು ಭಕ್ತ
ಮಹೇಶ್ವರ, ಪ್ರಸಾದಿ. ಮನವಿಡಿದು ನಡೆವ ತ್ರಿವಿಧ ತ್ರಿವಿಧ ಸಂಪತ್ತು
ಗಳು ಪ್ರಾಣಲಿಂಗಿ ಶರಣ ಐಕ್ಯ. ಈ ಉಭಯಾನುಭಾವವಿಡಿದು ಸ್ಥಾವರಂ
ಜಂಗಮ ಶ್ಚೈವ। ದ್ವಿವಿಧಂ ಲಿಂಗ ಮುಚ್ಯತೇ ಎಂಬ ಈ ಭೇದವ
ಭೇದಿಸಬಲ್ಲಡೆ, ಹಿಂದಿಲ್ಲ, ಮುಂದಿಲ್ಲ, ಇಹಪರ ಒಂದೇ, ಕರ್ಮನಾಸ್ತಿ
ಭವಂ ನಾಸ್ತಿ, ಕೂಡಲಚೆನ್ನಸಂಗಾ ಸ್ವಾಯತವಾದಂಗದು ಸಹಜ.

(೯) ಕರಸ್ಥಲ, ಕರ್ಣಸ್ಥಲ, ಕಂಠಸ್ಥಲ, ಲಲಾಟಸ್ಥಲ, ಮಧ್ಯ
ಸ್ಥಲ, ಇಂತೀ ಎಲ್ಲ ಸ್ಥಲಂಗಳನು ಮಹಾಸ್ಥಲಕ್ಕೆ ತಂದು ಬಸವಣ್ಣ
ಸಂಪೂರ್ಣನಾದ ಪರಿಯ ನೋಡಾ ಕಲಿದೇವಯ್ಯ.

ಇಂತು ಸರ್ವಾಚಾರ ಸಂಪತ್ತು ಸರ್ವಾಂಗದಲ್ಲಿ ಲೀಯವಾದ
ಲಿಂಗೈಕ್ಯಂಗೆ ಆ ಮಹಾಲಿಂಗವೇ ಭಾಜನವಾಗಿ ಅಂತಪ್ಪ ಮಹಾಲಿಂ
ಗಕ್ಕೆ ಲಿಂಗೈಕ್ಯವೇ ಭಾಜನವಾಗಿ ಉಭಯ ನಾಮವಡಗಿ ಏಕ ಭಾಜ
ನವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಏಕಭಾಜನಸ್ಥಲವಾದುದು.

---

## ೩. ಏಕಭಾಜನಸ್ಥಲ.

(೧) ಉಂಬ ಬಟ್ಟಲು ಬೇರೆ ಕಂಚಲ್ಲ. ನೋಡುವ ದರ್ಪಣ ಬೇರೆ
ಕಂಚಲ್ಲ. ಭಾಂಡ ಒಂದೇ ಭಾಜನ ಒಂದೇ. ಬೆಳಗುಗನ್ನಡಿ ಎನಿಸಿ
ತಯ್ಯಾ. ಅರಿದಡೆ ಶರಣನು, ಮರೆದಡೆ ಮಾನವನು. ಮರೆಯದೆ
ಪೂಜಿಸು ನಮ್ಮ ಕೂಡಲ ಸಂಗಮದೇವನ.

(೨) ಅಂದಂದಿಂಗೆ ಬಂದ ಪದಾರ್ಥವ ಒಂದೆಂದು ತಾನುಂಬಂತೆ
ಯಯ್ಯಾ. ಅಲ್ಲಲ್ಲಿಯೇ ತಾ ಲಿಂಗಕ್ಕೆ ಕೊಡುವರೆಂತೋ? ಲಿಂಗಕ್ಕೆ ಸಲುವ

ದೆಂತೋ? ಮಂಚ ಒಂದೇ, ಕಂಚು ಬೇರೆಂಬ ಪ್ರಪಂಚಿಯನೊಲ್ಲ ಕೂಡಲ ಚನ್ನಸಂಗಮದೇವಾ.

(೩) ಏಕ ಭಾಜನ ಏಕ ಭಾಜನವೆಂದೆಂಬರು. ನಾವಿದನರಿಯೆವಯ್ಯ. ಅಂಗದ ಮೇಲೆ ಪ್ರಾಣಲಿಂಗ ಪ್ರತಿಷ್ಠೆಯಾದ ಬಳಿಕ ಲಿಂಗಕ್ಕೆಯೂ ತನಗೆಯೂ ಏಕ ಭಾಜನವಲ್ಲದೆ ಬೇರೆ ಭಿನ್ನ ಭಾಜನ ಉಂಟೇ? ಲಿಂಗಕ್ಕೆಯೂ ತನಗೆಯೂ ಏಕ ಭಾಜನವಾಗದನ್ನಕ್ಕರ ಅಂಗದ ಕಳೆಯಲ್ಲಿ ಲಿಂಗವ ಧರಿಸಿಕೊಳಬಹುದೆ? ಇದನರಿದು ಏಕ ಭಾಜನವಿಲ್ಲದಿರೆ, ದೋಷ, ಅರಿಯದೆ ಏಕ ಭಾಜನವೆಂತು? ಈ ಕುಳಸ್ಥಳದ ಭೇದವ ಭೇದಿಸಬಲ್ಲ ಕೂಡಲಚನ್ನಸಂಗಾ ನಿಮ್ಮ ಶರಣ.

(೪) ಲಿಂಗಕ್ಕೆಯೂ ತನಗೆಯೂ ಭಿನ್ನಭಾವವಿಲ್ಲವೆಂಬರು. ಲಿಂಗಕ್ಕೆಯೂ ಪ್ರಾಣಕ್ಕೆಯೂ ಭಿನ್ನವಿಲ್ಲವೆಂಬರು. ಲಿಂಗಕ್ಕೆಯೂ ತನಗೆಯೂ ಭಾಜನವೆರಡೆಂಬರು. ಬಂದಿತ್ತು ನೋಡಾ ತೊಡಕು. ಇಂತು ಅಂಗವೆರಡಾದವಂಗೆ ಲಿಂಗವಿಲ್ಲೆಂದೆನಿಸಿತ್ತು. ಲಿಂಗವಿಲ್ಲದವನು ಭವಿ ಎಂದೆನಿಸುವುದು. ಇದು ಕಾರಣ ಲಿಂಗದಲ್ಲಿ ಅವಿರಳವಾಗಿ ಅಂಗಗುಣ ಭಂಗವ ಕಳೆದು ನಿರ್ಭಿನ್ನನಾದವಂಗೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಯ್ಯನಲ್ಲಿ ಏಕ ಭಾಜನ ಸಮನಿಸುದಯ್ಯ.

ಇಂತು ಮಹಾಲಿಂಗದಲ್ಲಿ ಏಕಭಾಜನವಳವಟ್ಟ ಲಿಂಗೈಕ್ಯನು ಆ ಮಹಾ ಲಿಂಗದ ಸಮರಸ ಭಾವದಿಂದ ಪರಮಾನಂದ ಸುಖದಲ್ಲಿ ಸಮಭೋಗಿಯಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಸಹಭೋಜನ ಸ್ಥಲವಾದುದು.

---

## ೪. ಸಹಭೋಜನಸ್ಥಲ.

(೧) ಅರ್ಪಿತ ರೌರವ ನರಕವೆಂದಿತ್ತು ಗುರುವಚನ. ಅನರ್ಪಿತ ರೌರವ ನರಕವೆಂದಿತ್ತು ಶ್ರುತಿ ವಚನ. ಭುಂಜನೆಯ ಮಾಡಿದ ರುಚಿ ಲಿಂಗಕ್ಕೆಂಬ ಕರ್ಮಿಯ ತಾಗಿದ ಸುಖವು ಲಿಂಗಕ್ಕೆಂಬ ಗುರುದ್ರೋಹಿಯ ಲಿಂಗಭಾಜನದಲ್ಲಿ ಶರಣ ಸಹ ಭೋಜನವ ಮಾಡಿದರೆ ಇಹ ಪರವಿಲ್ಲೆಂದ ಕೂಡಲಚನ್ನಸಂಗಮದೇವಾ.

ಟೀಕು:— ಭಿನ್ನಜ್ಞಾನದಿಂದ ಲಿಂಗವ ಭಿನ್ನವಿಟ್ಟು ಪದಾರ್ಥವ ಸಮರ್ಪಿಸಿದರೆ ಫಲಪದಭೋಗ ಉಂಟು. ಆ ಫಲ ಪದಭೋಗವ ನೆರೆವಡೆ ಮರಳಿ ಭವ ಹೇತುವಪ್ಪ ನರಕ ಉಂಟೆಂಬುದು ಗುರುವಚನ ಪ್ರಮಾಣ ವೆಂಬುದೀಗ ಅರ್ಪಿತ ರೌರವ ನರಕವೆಂದಿತ್ತು ಗುರುವಚನವೆಂಬ ಶಬ್ದಕ್ಕರ್ಥ. ಅಂತು ಲಿಂಗಕ್ಕರ್ಪಿಸದೆ ಇಪ್ಪ ಜೀವನು ಎಂದೆಂದು ನರಕಿ ಎಂಬುದು ಗುರು ವಚನ ಪ್ರಮಾಣವೆಂಬುದೀಗ ಅನರ್ಪಿತ ರೌರವ ನರಕ ವೆಂದಿತ್ತು ಗುರುವಚನವೆಂಬ ಶಬ್ದಕ್ಕರ್ಥ. ಅಂತು ಜೀವಭಾವದಿಂ ದೇಹೇಂದ್ರಿಯ ವಿಷಯ ಸುಖಂಗಳನರಿದು ಭುಂಜಿಸಿದ ಬಳಿಕ ಆ ಎಂಜ ಲಾದ ಸುಖವ ಲಿಂಗಕ್ಕರ್ಪಿತವೆಂಬಾತನಿಗೆ ಭವ ದುಷ್ಕರ್ಮ ಬಿಡದು. ಆತ ಗುರು ಮತಕ್ಕೆ ದೂರವೆಂಬುದೀಗ ಭುಂಜನ ಮಾಡಿದ ರುಚಿಯ ಲಿಂಗಕ್ಕೆಂಬ ಕರ್ಮಿ ತಾಗಿದ ಸೋಂಕಿದ ಸುಖವ ಲಿಂಗಕ್ಕೆಂಬ ಗುರು ದ್ರೋಹಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನ ಕ್ರಿಯೆಗಳು ಗುರುಲಿಂ ಗಾಂಗ ಸಂಬಂಧವ ಮಾಡಿದ ಭೇದವನರಿದು ಲಿಂಗದಲ್ಲಿ ಭಿನ್ನವಳಿ ದಿಪ್ಪ ಶರಣನ ಸರ್ವಾಂಗವೆಲ್ಲ ಲಿಂಗಕಾಯವಾಗಿ ಆ ಕಾಯದ ಸುಖ ಭೋಗಂಗಳನೆಲ್ಲ ಲಿಂಗ ಮುಂತಾಗಿ ಭೋಗಿಸುತ್ತಿಪ್ಪನಾಗಿ ಶರಣಲಿಂಗ ಭೋಗೋಪಭೋಗಿ ಎಂಬುದೀಗ ಲಿಂಗಭಾಜನದಲ್ಲಿ ಶರಣ ಸಹ ಭೋಜ ನಮಾಡಿದನೆಂಬ ಶಬ್ದಕ್ಕರ್ಥ. ಅಂತು ಲಿಂಗದಲ್ಲಿ ಭೇದವನಳಿದು ಲಿಂಗ ಭೋಗೋಪಭೋಗಿಯಾಗಿಪ್ಪ ಶರಣಂಗೆ ಇಹ ಬಂಧನವಿಲ್ಲ, ಪರದಲ್ಲಿ ಮೋಕ್ಷವಿಲ್ಲ. ಆ ಶರಣ ಬ್ರಹ್ಮವೆಯುಪ್ಪನೆಂಬುದೀಗ ಸಹ ಭೋಜನವ ಮಾಡಿದರೆ ಇಹ ಪರವಿಲ್ಲೆಂಬ ಶಬ್ದಕ್ಕರ್ಥ.

(೨) ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಅಜ್ಞಾನಿ ಗಳು ತಾವೇ ಲಿಂಗವೆಂದೆಂಬರು. ತಾವೇ ಲಿಂಗವಾದಡೆ ಜನನ ಸ್ಥಿತಿ ಮರಣ ರುಜೆ ಸಂಸಾರ ಬಂಧನವಿಲ್ಲದಿರಬೇಕು. ಮಹಾ ಜ್ಞಾನದ ಬಲ್ಲೆವೆಂದು ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಪಾತಕರ ಎನಗೊಮ್ಮೆ ತೋರದಿರಾ ಕೂಡಲ ಚನ್ನಸಂಗಯ್ಯ.

(೩) ಲಿಂಗಭಾಜನದಲ್ಲಿ ಸಹಭೋಜನವ ಮಾಡುವೆವೆಂಬರು. ಲಿಂಗಭಾಜನದಲ್ಲಿ ಸಹಭೋಜನ ಮಾಡುವವರ ನೋಡಿರೇ! ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಆಸೆಯುಳ್ಳನ್ನಕ್ಕರ ಲಿಂಗ

ಭಾಜನದಲ್ಲಿ ಸಹಭೋಜನ ಮಾಡುವವರ ನೋಡಿರೇ! ಹಸಿವು, ತೃಷೆ, ನಿದ್ರೆ, ಜಡ, ಆಲಸ್ಯವುಳ್ಳನ್ನಕ್ಕರ ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಪರಿ ಎಂತೋ? ಇಂತಿವೆಲ್ಲವ ಜರಿದು ಗುರುಲಿಂಗ ಜಂಗಮವನೇಕವ ಮಾಡಿದಂಗಲ್ಲದೆ ಸಹಭೋಜನವೆಲ್ಲಿಯದೋ ಕೂಡಲ ಚನ್ನಸಂಗಯ್ಯಾ?

(೪) ಗುರು ಶಿಷ್ಯರಿಬ್ಬರು ಸಹಪಂಙ್ಕ್ತಿಯಲ್ಲಿ ಲಿಂಗಾರ್ಚನೆಯ ಮಾಡಿಹೆವೆಂಬರಯ್ಯಾ! ಹೋ, ಹೋ, ಬಾಲ ಭಾಷೆಯ ಕೇಳಲಾಗದು. ಅಲ್ಲಲ್ಲ. ಮಾಡಬಹುದು. ಅದೇನು ಕಾರಣ? ಗುರುವಿನ ಅರಿವಿನ ಅರಿವನರಿಯಬಲ್ಲಡೆ ಮಾಡಬಹುದು, ಮಾಡಬಹುದು. ಶಿಷ್ಯ ಪ್ರಸಾದ ಎಂಬುಭಯ ಸಂದೇಹ ಹಿಂದುಳಿಯಬಲ್ಲಡೆ, ಮಾಡಬಹುದು. ಇದು ಕಾರಣ ಮಹಾಘನ ಸೋಮೇಶ್ವರ ನಿಮ್ಮಲ್ಲಿ ಇವರಿಬ್ಬರ ಗುರುಶಿಷ್ಯರೆಂದೆನಾದಡೆ ಎನ್ನನದ್ದಿ ನೀನೆದ್ದು ಹೋಗಯ್ಯಾ.

ಇಂತು ಅಂಗಸ್ಥಲದಲ್ಲಿ ನಾಲ್ವತ್ತು ನಾಲ್ಕರ ಭೇದವು ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಷಟ್ ಸ್ಥಲದೊಳಗಡಗಿ ಆ ಷಟ್ ಸ್ಥಲವೇ ಅಂಗವಾದ ಶರಣನ ಮನಸ್ಥಲದಲ್ಲಿ ಮನೋಲೀಯವಾದ ಲಿಂಗಸ್ಥಲದ ವಿವರವೆಂತಿರ್ದತ್ತೆಂದೊಡೆ ಮುಂದೆ ದೀಕ್ಷಾಗುರು ಸ್ಥಲವಾದುದು.



# ಲಿಂಗಸ್ಥಲಗಳು.

ಲಿಂಗಸ್ಥಲಗಳು ೩೬ ಇದ್ದು ಇವುಗಳಲ್ಲಿ ಷಡ್ಲಿಂಗಗಳ ಪ್ರಕಾರ ಆರು ವಿಭಾಗಗಳಿವೆ. ಇವುಗಳನ್ನು ವಿವರಿಸತಕ್ಕ ವಚನವಿದ್ದು, ಅದು ಕೆಳಗೆ ಕೊಡಲ್ಪಟ್ಟಿದೆ.

## ಲಿಂಗಸ್ಥಲಗಳಲ್ಲಿಯ ವಿಭೇದಗಳು.

ಗುರುಲಿಂಗ ತ್ರಿವಿಧ, ದೀಕ್ಷಾಗುರು ಶಿಕ್ಷಾಗುರು, ಜ್ಞಾನಗುರು. ಶಿವಲಿಂಗ ತ್ರಿವಿಧ, ಕ್ರಿಯಾಲಿಂಗ ಭಾವಲಿಂಗ ಜ್ಞಾನಲಿಂಗ. ಜಂಗಮ ಲಿಂಗ ತ್ರಿವಿಧ, ಸ್ವಯ, ಚರ, ಪರ. ಇಂತು ಆಚಾರ ಲಿಂಗ ಸ್ಥಲ ೯.

ಆಗಮಲಿಂಗ ತ್ರಿವಿಧ, ಕ್ರಿಯಾಗಮ ಭಾವಾಗಮ, ಜ್ಞಾನಾಗಮ. ಕಾಯಲಿಂಗ ತ್ರಿವಿಧ. ಸಕಾಯ ಅಕಾಯ ಪರಕಾಯ. ಆಚಾರಲಿಂಗ ತ್ರಿವಿಧ, ಧರ್ಮಾಚಾರ, ಭಾವಾಚಾರ. ಜ್ಞಾನಾಚಾರ. ಇಂತು ಗುರು, ಲಿಂಗ ಸ್ಥಲ ಒಂಬತ್ತು. ಅಂತು ಉಭಯಸ್ಥಲ ೧೮.

ಅನುಗ್ರಹಲಿಂಗ ತ್ರಿವಿಧ, ಕಾಯಾನುಗ್ರಹ ಇಂದ್ರಿಯಾನುಗ್ರಹ ಪ್ರಾಣಾನುಗ್ರಹ. ಅರ್ಪಿತಲಿಂಗ ತ್ರಿವಿಧ, ಕಾಯಾರ್ಪಿತ, ಕರಣಾರ್ಪಿತ ಭಾವಾರ್ಪಿತ. ತನುಗುಣಲಿಂಗ ತ್ರಿವಿಧ. ಶಿಷ್ಯ, ಶಿಶ್ರೂಷ, ಸೇವ್ಯ. ಇಂತು ಶಿವಲಿಂಗಸ್ಥಲ ಒಂಬತ್ತು. ಅಂತು ತೃತೀಯ ಸ್ಥಲ ೨೭.

ಜೀವಲಿಂಗ ತ್ರಿವಿಧ, ಜೀವಾತ್ಮ, ಅಂತರಾತ್ಮ, ಪರಮಾತ್ಮ. ನಿರೂಪಲಿಂಗ ತ್ರಿವಿಧ, ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ. ಪ್ರಸಾದಲಿಂಗ ತ್ರಿವಿಧ, ಆದಿ ಪ್ರಸಾದಿ, ಅಂತ್ಯಪ್ರಸಾದಿ, ಸೇವ್ಯಪ್ರಸಾದಿ. ಪಾದೋದಕ ಲಿಂಗ ತ್ರಿವಿಧ, ದೀಕ್ಷಾ ಪಾದೋದಕ, ಶಿಕ್ಷಾ ಪಾದೋದಕ ಜ್ಞಾನಪಾದೋದಕ. ಇಂತು ಜಂಗಮಲಿಂಗಸ್ಥಲ ಹನ್ನೆರಡು. ಅಂತು ಚತುರ್ಥಸ್ಥಲ ೩೬.

ನಿಷ್ಪತ್ತಿಲಿಂಗ ತ್ರಿವಿಧ, ಕ್ರಿಯಾ ನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನನಿಷ್ಪತ್ತಿ. ಆಕಾಶಲಿಂಗ ತ್ರಿವಿಧ, ಪಿಂಡಾಕಾಶ ಬಿಂದ್ವಾಕಾಶ ಮಹದಾಕಾಶ. ಪ್ರಕಾಶಲಿಂಗ ತ್ರಿವಿಧ, ಕ್ರಿಯಾಪ್ರಕಾಶ, ಭಾವಪ್ರಕಾಶ ಜ್ಞಾನಪ್ರಕಾಶ. ಇಂತು ಪ್ರಕಾಶ ಲಿಂಗಸ್ಥಲ ಒಂಬತ್ತು. ಅಂತು ಪಂಚಮ ಸ್ಥಲ ೪೮.

ಆ ಲಿಂಗೈಕ್ಯನು ಕೊಂಡುದು ಪ್ರಸಾದ, ನಿಂದುದೋಗರ, ಚರಾಚರ ನಾಸ್ತಿ ಇಂತೀ ತ್ರಿವಿಧ. ಭಾಂಡ, ಭಾಜನ, ಅಂಗಲೇಪನ ಇಂತೀ ತ್ರಿವಿಧ. ಸ್ವಯ ಪರ ಪರಿಯದ ಸ್ಥಲ, ಭಾವಾ ಭಾವ ನಷ್ಟಸ್ಥಲ, ಜ್ಞಾನ ಶೂನ್ಯಸ್ಥಲ ಇಂತು ಮಹಾಲಿಂಗಸ್ಥಲ ಒಂಬತ್ತು. ಅಂತು ಷಟ್‌ಸ್ಥಲ ೫೭.

ಇಂತಿವೆಲ್ಲ ಸ್ಥಲಂಗಳನೊಳಗೊಂಡ ಮಹಾಮಹಿಮನು ಜ್ಞಾನಿಯಲ್ಲ ಅಜ್ಞಾನಿಯಲ್ಲ ಶೂನ್ಯನಲ್ಲ ನಿಃಶೂನ್ಯನಲ್ಲ. ಉಭಯಾಚಾರ ತಾನೆಂದರಿದ ಪರಮಜ್ಞಾನಿಗೆ ಕೊಳುಕೊಡೆ ಇಲ್ಲ. ಸಾಕಾರ ಸಂಬಂಧ ವನರಿಯ, ನಿತ್ಯ ಮುಕ್ತ, ನಿರವಯ, ಉಭಯಾತ್ಮಕ ತಾನು, ಕೂಡಲ ಚೆನ್ನಸಂಗನೆಂದೂ ಎನ್ನದ ಮಹಾಘನಿ.

# ಆಚಾರಲಿಂಗಸ್ಥಲ.

ವಿವರಣೆ:— ಆಚಾರಲಿಂಗದಲ್ಲಿ ಗುರು, ಲಿಂಗ, ಜಂಗಮ ಎಂಬ ಮೂರು ವಿಭಾಗಗಳಿವೆ.

**ಗುರು:**— ಗುರುವಿನಲ್ಲಿ ಉಪದೇಶ ಕಾರಣವಾದ ದೀಕ್ಷಾ ಗುರುವೂ ಬೋಧಾ ಸ್ವರೂಪವನ್ನೈದಿದ ಶಿಕ್ಷಾ ಗುರುವೂ ಸುಜ್ಞಾನ ಸ್ವರೂಪವನ್ನೈದಿದ ಜ್ಞಾನಗುರುವೂ ಹೀಗೆ ಭೇದಗಳಿವೆ. ಎಂದರೆ ಮನುಷ್ಯನು ತಾನು ಮೊದಲು ದೀಕ್ಷಾ ಮುಖದಿಂದ ಬಲ್ಲವರಿಂದ ತಿಳಿದುಕೊಳ್ಳಬೇಕು. ಆಮೇಲೆ ಹೀಗೆ ಆಚರಿಸಿ ಮನನಮಾಡಿಕೊಳ್ಳಬೇಕು. ಮನನಮಾಡಿಕೊಂಡಲ್ಲಿ ಜ್ಞಾನವು ಅವನಿಗೆ ಆಗುವದು. ಹೀಗೆ ಈ ಕ್ರಿಯೆಗಳಿಗೆ ಅನುಕ್ರಮವಾಗಿ ದೀಕ್ಷೆ, ಶಿಕ್ಷೆ, ಅನುಭಾವ ಎಂಬ ಹೆಸರುಗಳಿರುತ್ತವೆ.

**ಲಿಂಗ:**— ಲಿಂಗದಲ್ಲಿ ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ ಎಂದು ಮೂರು ವಿಭಾಗಗಳಿವೆ. ಬಾಹ್ಯದಲ್ಲಿ ಮಾಡುವ ಸತ್ ಕೃತ್ಯಗಳೇ ಕ್ರಿಯಾಲಿಂಗವೆನಿಸಿಕೊಳ್ಳುತ್ತವೆ. ಅವು ಮುಂದೆ ಸದ್ಭಕ್ತನ ಭಾವದಲ್ಲಿ ಭರಿತವಾಗಲು ಅವು ಭಾವಲಿಂಗವೆನಿಸಿಕೊಳ್ಳುತ್ತವೆ. ಭಾವದಲ್ಲಿ ಭರಿತವಾಗಿ ಮಹಾ ಜ್ಞಾನಸ್ವರೂಪವನ್ನೈದಲು ಜ್ಞಾನಲಿಂಗವು.

**ಜಂಗಮ:**— ಜಂಗಮದಲ್ಲಿ ಸ್ವಯ, ಚರ, ಪರ, ಎಂಬ ಮೂರು ವಿಭೇದಗಳಿವೆ. ಮಾಡುವ ಕ್ರಿಯೆಗಳು ಭಕ್ತನ ಸ್ವಯಂ ಭಾವ ಗುಣದಲ್ಲಿ ನಿಶ್ಚಲವಾಗಿ ಉಳಿದರೆ ಸ್ವಯವೆಂಬ ಹೆಸರು. ಹೀಗೆ ನಿಶ್ಚಲವಾದ ಲಿಂಗವು ಭಕ್ತಿ ಕಾರಣವಾಗಿ ಜಗತ್ತಿನಲ್ಲಿ ವ್ಯವಹರಿಸಿದರೆ, ಅದಕ್ಕೆ ಚರವೆಂಬ ಹೆಸರು. ಅದು ಭಕ್ತನ ಜೀವಾತ್ಮನಲ್ಲಿ ಬೆರೆದದ್ದಾದರೆ ಪರವೆಂಬ ಹೆಸರು. ಇದು ಕಡೆಯದು. ಇದು ಜಂಗಮತ್ವದ ಉತ್ಕೃಷ್ಟ ಸ್ಥಿತಿಯಾಗಿದೆ.

ಹೀಗೆ ಈ ಒಂಬತ್ತು ಸ್ಥಲಗಳನ್ನು ಅಳವಡಿಸಿಕೊಂಡಿದ್ದಾದರೆ ದೀಕ್ಷಾ ಗುರು, ಶಿಕ್ಷಾ ಗುರು, ಜ್ಞಾನ ಗುರು, ಇವುಗಳು ಗುರು ಲಿಂಗದಲ್ಲಿ ಅಡಗುವವು. ಕ್ರಿಯಾಲಿಂಗ ಭಾವಲಿಂಗ ಜ್ಞಾನಲಿಂಗಗಳು ಶಿವಲಿಂಗದಲ್ಲಿ ಅಡಗುವವು. ಸ್ವಯ ಚರ ಪರಗಳು ಜಂಗಮಲಿಂಗದಲ್ಲಿ ಅಡಗು

ವವು. ಹೀಗೆ ಪೂರ್ಣವಾದ ಗುರುಲಿಂಗ, ಶಿವಲಿಂಗ ಜಂಗಮಲಿಂಗಗಳು ಆಚಾರಲಿಂಗದಲ್ಲಿ ಅಡಗುವವು. ಆಗ ಆಚಾರಲಿಂಗದ ಪೂರ್ಣತೆಯು. ಇದು ಪ್ರಥಮಲಿಂಗ ಸ್ಥಲದ ಪ್ರಗತಿಯು ವಿವೇಚನೆಯಾಗಿದೆ.

---

## ೧ ದೀಕ್ಷಾಗುರುಸ್ಥಲ.

(೧) ಹಸ್ತಾಬ್ಜ ಮಥನದಿಂಪೊತ್ತಿ ಭಸ್ಮವ ಮಾಡಿ ಮತ್ತೆ ಪಂಚಾಕ್ಷರಿಯ ಜಪಮಣಿಯು ಚಿತ್ತ ಶ್ರೋತ್ರದೊಳು ಮತ್ತೆ ಧಾರೆಯನೆರೆಯೆ ಸತ್ಯವಿದು ನಿಮ್ಮಂತೆ ರಾಮನಾಥಾ.

ಟೀಕು:— ಶ್ರೀಗುರು ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸಿ ಚಿತ್ಕಲೆಯ ಪ್ರಭಾವಿಸಿ ತೆಗೆದು ಆಕಲೆಯು ಪ್ರಣವ ಮಂತ್ರ ಸ್ವರೂಪವ ಮಾಡಿ ಶ್ರೋತ್ರ ಮುಖದಿಂದ ಆತ್ಮನ ನಿಜಪದದೊಳು ಕೂಡಿಸಲು ಆಕ್ಷಣವೇ ಶಿಷ್ಯ ಲಿಂಗವಾದನು ಸತ್ಯವೆಂಬುದೀಗ ವಚನದ ತಾತ್ಪರ್ಯಾರ್ಥ.

(೨) ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದು, ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣ, ಕಲಶಾಭಿಷೇಕ, ವಿಭೂತಿಯ ಪಟ್ಟ, ಲಿಂಗಾಯತ, ಲಿಂಗಸ್ವಾಯತ ಈ ಏಳನು ಕಾಯಕ್ಕುಪದೇಶವ ಮಾಡುವುದು. ಸಮಯ, ನಿಸ್ಸಂಸಾರ, ನಿರ್ವಾಣ, ತತ್ವದೀಕ್ಷೆ, ಅಧ್ಯಾತ್ಮ, ಅನುಗ್ರಹ, ಸತ್ಯಶುದ್ಧ, ಈ ಏಳನು ಪ್ರಾಣಕ್ಕುಪದೇಶವ ಮಾಡುವುದು. ಏಕಾಗ್ರ ಚಿತ್ತ, ದೃಢ ವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ, ಲಿಂಗನಿಜ, ಮನೋಲಯ, ಸದ್ಯೋನ್ಮುಕ್ತ ಈ ಏಳನು ಮನಕ್ಕುಪದೇಶವ ಮಾಡುವುದು. ಈ ಕ್ರಮವನರಿದು ಮಾಡುವುದು ಕೂಡಲಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆಯಯ್ಯ.

(೩) ಭವಿತನಕ್ಕೆ ಹೇಸಿ ಭಕ್ತನಾದೆನೆಂಬಾತನ ಪೂರ್ವಾಶ್ರಯವಂ ಕಳೆದು ಭಕ್ತನ ಮಾಡುವ ಪರಿ ಎಂತೆಂದೊಡೆ, ಕಾಯ ಶುದ್ಧಿ, ಜೀವಶುದ್ಧಿ, ಭೂತಶುದ್ಧಿ, ಆತ್ಮಶುದ್ಧಿ, ಮಂತ್ರಶುದ್ಧಿ, ಎಂಬ ಪಂಚಶುದ್ಧಿಯಿಂ

ಮಾಡುವುದು. ಅದು ಹೇಗೆಂದಡೆ, ವಾಕ್ಕು ಪಾಣಿ, ಪಾದ, ಪಾಯು, ಗುಹ್ಯವೆಂಬ ಕರ್ಮೇಂದ್ರಿಯಂಗಳ ದುಃಕ್ರಿಗಳಂ ಬಿಡಿಸಿ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ಎಂಬ ಬುದ್ಧೀಂದ್ರಿಯಂಗಳ ಉತ್ಪಾತವಮಂ ಮಾಣಿಸಿ ದಶವಾಯುಗಳ ದುರ್ಗಮಸಂಗಳಂ ನಿಲಿಸಿ, ಮನ, ಬುದ್ಧಿ, ಚಿತ್ತ, ಅಹಂಕಾರಂಗಳ ನಿವೃತ್ತಿಯಂ ಮಾಡಿ, ಕಾಯ ಶುದ್ಧಿಯಂ ಮಾಡುವುದು. ಸುತ್ತಿರ್ದ ಮಾಯಾ ಪ್ರಪಂಚುಮಂ ಬಿಡಿಸಿ ಜೀವನೇ ಶಿವನೆಂಬ ಪರಿಯಾಯಮಂ ಕೆಡಿಸಿ, ಆ ಜೀವಂಗೆ ಶಿವನಿಷ್ಪತ್ತಿ ನೆಲೆಯಂ ತೋರಿಸಿ ಜೀವ ಶುದ್ಧಿಯಂ ಮಾಡುವುದು. ಪಂಚಭೂತಗಳಧಿದೇವತೆಗಳಪ್ಪ ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಎಂಬ ದೇವತೆಗಳನು ಗರ್ಭೀಕರಿಸಿಕೊಂಡಿಪ್ಪುದನು ಮಹಾ ಶ್ರೀಗುರುವು ತೋರಿಸಿ ಪಂಚಭೂತಂಗಳ ಸ್ಥಾನಮಂ ತಿಳುಹಿ ಭೂತಶುದ್ಧಿಯಂ ಮಾಡುವುದು. ಜೀವಾತ್ಮನನು ಪರಮಾತ್ಮನನು ಏಕಾತ್ಮನ ಮಾಡಿ ಆತ್ಮ ಶುದ್ಧಿಯಂ ಮಾಡುವುದು. ಜೀವಾತ್ಮನ ಶರೀರಾರ್ಥ ಪ್ರಾಣಂಗಳನು ಅರ್ಪಿಸಿಕೊಂಡು, ಭವದ ಬೇರನು ಕೊಯ್ದು ಶಿವಗಣ ತಿಂಥಿಣಿಯ ಮುಂದೆ, ಆ ಶಿಷ್ಯನ ಕೈವಿಡಿದು ತಂದು, ಚೌಕ ಮಧ್ಯದಲ್ಲಿ ಕುಳ್ಳಿರಿಸಿ, ಆತನ ಮೇಲಣ ದೋಷ ಹೋಹ ಹಾಗೆ, ಮಂತ್ರದಿಂದ ಅಘೋರ್ಘ್ಯೋದಕಮಂ ತಳಿದು ವಿಭೂತಿಯ ಪಟ್ಟವಂ ಕಟ್ಟಿ, ಮಸ್ತಕ ಕಲಶದ ಮೇಲೆ ಹಸ್ತಮಂ ನಿಲುಹಿ ಶತಪತ್ರ ಕಮಲದೊಳಗಿಪ್ಪ ಮಹಾಲಿಂಗದ ಸತ್ಕಳೆಯಂ ತೆಗೆದು, ಕ್ರಿಯಾ ಲಿಂಗದಲ್ಲಿ ಕುಳ್ಳಿರಿಸಿ ಶಿಷ್ಯನ ಕರಸ್ಥಲದಲ್ಲಿ ಕೊಟ್ಟು ಕರ್ಣದಲ್ಲಿ ಪಂಚಾಕ್ಷರಿಯನುಪದೇಶಿಸಿ ಸರ್ವಭವಿಕುಲಮಂ ತೊಳೆದು, ಮಾಂಸ ಪಿಂಡಮಂ ಕಳೆದು, ಮಂತ್ರ ಪಿಂಡಮಂ ಮಾಡುವುದು ಮಂತ್ರ ಶುದ್ಧಿ. ಇಂತೀ ಪರಿಯಲ್ಲಿ ಕಾಯಶುದ್ಧಿ, ಜೀವಶುದ್ಧಿ, ಭೂತಶುದ್ಧಿ, ಆತ್ಮಶುದ್ಧಿ, ಮಂತ್ರ ಶುದ್ಧಿ, ಎಂಬ ಪಂಚಶುದ್ಧಿಯಂ ಸರ್ವಶುದ್ಧಿಯಿಂ ಮಾಡಿ ಪುನರ್ಜಾತನಂ ಮಾಡುವುದು ಇದು ಸಹಜ ದೀಕ್ಷೆಯಯ್ಯಾ ಕೂಡಲಚನ್ನ ಸಂಗಯ್ಯ.

(೪) ಸದ್ಗುರು ಸ್ವಾಮಿ ಶಿಷ್ಯಂಗೆ ಅನುಗ್ರಹವ ಮಾಡುವಲ್ಲಿ ತತ್‌ಶಿಷ್ಯನ ಮಸ್ತಕದ ಮೇಲೆ ತನ್ನ ಶ್ರೀ ಹಸ್ತವ ನಿರಿಸಿದಡೆ, ಲೋಹದ ಮೇಲೆ ಪರುಷ ಬಿದ್ದಂತಾಯಿತಯ್ಯಾ! ಒಪ್ಪುವ ಶ್ರೀ ವಿಭೂತಿಯ

ನೊಸಲಿಂಗೆ ಪಟ್ಟವ ಕಟ್ಟಿದಡೆ ಮುಕ್ತಿ ಸಾಮ್ರಾಜ್ಯದೊಡೆತನಕ್ಕೆ ಪಟ್ಟವ ಕಟ್ಟಿದಂತಾಯಿತ್ತಯ್ಯ ! ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯವೆಂಬ ಪಂಚಕಲಶದ ಅಭಿಷೇಕವ ಮಾಡಿಸಲು ಶಿವನ ಕಾರುಣ್ಯಾಮೃತದ ಸೊನೆ ಸುರಿದಂತಾಯಿತ್ತಯ್ಯಾ! ನೆರೆದ ಶಿವಗಣಂಗಳ ಮಧ್ಯದಲ್ಲಿ ಮಹಾ ಲಿಂಗವನು ಕರಸ್ಥಲಾಮುಖಕವಾಗಿ ಶಿಷ್ಯನ ಕರಸ್ಥಲಕ್ಕೆ ಇಟ್ಟು ಅಂಗದಲ್ಲಿ ಪ್ರತಿಷ್ಠಿಸಿ ಪ್ರಣವ ಪಂಚಾಕ್ಷರಿಯುಸುಪದೇಶವ ಕರ್ಣದಲ್ಲಿ ಹೇಳಿ, ಕಂಕಣವ ಕಟ್ಟಿದಲ್ಲಿ ಕಾಯವೇ ಕೈಲಾಸವಾಯಿತ್ತು. ಪ್ರಾಣವೇ ಪಂಚ ಬ್ರಹ್ಮಮಯಲಿಂಗವಾಯಿತ್ತು. ಇಂತು ಮುಂದೆ ತೋರಿ ಹಿಂದೆ ಬಿಡಿಸಿದ ಶ್ರೀಗುರುವಿನ ಸಾನ್ನಿಧ್ಯದಿಂದಾನು ಬದುಕಿದೆನಯ್ಯ ಚನ್ನಮಲ್ಲಿಕಾರ್ಜುನಯ್ಯ.

(೫) ಭವ ಬಂಧನದ ಕುಣಿಕೆಯನರಿಯದ ಮಲಿನ ಜೀವಿಗಳ ಮಾಲಿನ್ಯವ ತೊಳೆವ ಶ್ರೀಗುರುವಿನುಪದೇಶದ ಪರಿ ಎಂತೆಂದೊಡೆ, ಸ್ಥೂಲ ಪಂಚಭೂತಕಾಯದ ಪಂಚ ತತ್ವಂಗಳ ವಿವರಿಸಿ, ಬೋಧಿಸಿ, ಕಳೆದು, ಸೂಕ್ಷ್ಮ ಪಂಚಭೂತ ಕಾಯದ ತನುಮಾತ್ರ ಗುಣಂಗಳ ವಿವರದ ಭೇದವ ಭೇದಿಸಿ ತೋರಿ ಕಳೆದು, ಕಾರಣ ಪಂಚಭೂತ ಕಾಯದ ಕರಣ ವೃತ್ತಿಗಳ ಮಹಾ ವಿಚಾರದಿಂ ತಿಳುಪಿ ವಿವರಿಸಿ ಕಳೆದು, ಸ್ಥೂಲ ಪಂಚಭೂತಕಾಯದಲ್ಲಿ ಇಷ್ಟಲಿಂಗವ ಪ್ರತಿಷ್ಠೆಯ ಮಾಡಿ ಸದಾಚಾರ ಕುಳಸ್ಥಳವ ನೆಲೆಗೊಳಿಸಿ, ಸೂಕ್ಷ್ಮ ಪಂಚಭೂತ ಕಾಯದಲ್ಲಿ ಪ್ರಾಣಲಿಂಗ ಪ್ರತಿಷ್ಠೆಯ ಮಾಡಿ ಮಹಾ ವಿಚಾರದನುಭಾವವ ನೆಲೆಗೊಳಿಸಿ, ಕಾರಣ ಪಂಚಭೂತ ಕಾಯದಲ್ಲಿ ತೃಪ್ತಿ ಲಿಂಗವ ಪ್ರತಿಷ್ಠೆಯ ಮಾಡಿ, ಪರಮಾನಂದ ಸುಜ್ಞಾನವನು ನೆಲೆಗೊಳಿಸಿ, ಇಂತೀ ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯಂಗಳ ನೆರೆ ಭವಿಸಿ ತೋರಿ, ಪೂರ್ವಜನ್ಮದ ನಿವೃತ್ತಿಯಂ ಮಾಡಿ ಲಿಂಗಜನ್ಮದ ಪ್ರತಿಷ್ಠೆಯಂ ಮಾಡಿ, ಎನ್ನ ಕೃತಾರ್ಥನ ಮಾಡಿದ ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯ ಕೂಡಲಚನ್ನಸಂಗಯ್ಯ.

(೬) ಬ್ರಹ್ಮ ಸೃಷ್ಟಿಯಿಂದಾದ ಪಂಚಭೂತ ಸಮ್ಮಿಶ್ರದಿಂದಾದ ಕಾಯವು ಭೂತಕಾಯವು, ವಾಯು ಪ್ರಾಣಿ ಉತ್ಪತ್ತಿ ಸ್ಥಿತಿಲಯ ಕಾರಣ ಕಾಯವು. ಈ ಪರಿಯಿಂದ ಇದು ಉತ್ಪತ್ತಿ ದೇವದಾನವ

ಮಾನವರಿಗೆಯೂ ಒಂದೇ ಪರಿ. ಶ್ರೀಗುರು ಸೃಷ್ಟಿಯಿಂದಾದ ಮಹಾ ಪ್ರಸಾದ ಮಹಾಮಂತ್ರ ಸಮ್ಮಿಶ್ರದಿಂದಾದ ಕಾಯವು ಪ್ರಸಾದ ಕಾಯವು, ಮಹಾ ಮಂತ್ರಪಿಂಡವು, ಲಿಂಗಪ್ರಾಣಿ. ಉತ್ಪತ್ತಿ ಸ್ಥಿತಿ ಲಯವಿಲ್ಲ ಸತ್ಯನು ಸದ್ಯೋನ್ಮುಕ್ತನು. ಈ ಪರಿ ಇದು ಉತ್ಪತ್ತಿ. ಶ್ರೀಗುರು ಕಾರುಣ್ಯವ ಹಡೆದ ಮಹಾತ್ಮರಿಗೆಯೂ ಒಂದೇ ಪರಿ, ಶ್ರೀಗುರು ಕಾರುಣ್ಯದ ಪರಿ. ಶಿವ ಭಕ್ತನ ಇರವಿನ ಪರಿ ಇಂತುಟಯ್ಯ. ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರ ನಿಮ್ಮ ಶರಣಂಗೆ ಲೋಕದ ಮಾನವರ ಪರಿ ಎಂದರೆ ನರಕ ತಪ್ಪದು.

ಇಂತು ಉಪದೇಶ ಕಾರಣವಾಗಿ ದೀಕ್ಷಾಗುರು ಸ್ವರೂಪವನ್ನೈದಿದ ಲಿಂಗವು ಭಕ್ತನಂಗದಲ್ಲಿ ಶಿಕ್ಷಾಮುಖದಿಂದ ಬೋಧಾಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಶಿಕ್ಷಾಗುರು ಸ್ಥಲವಾದುದು.

---

## ೨ ಶಿಕ್ಷಾಗುರುಸ್ಥಲ.

(೧) ಅಂತರಂಗ ಬಹಿರಂಗವೆಂದೆಂಬರು. ಆವುದು ಮುಂದು ಆವುದು ಹಿಂದೆಂದರಿಯರು. ಎಳ್ಳೊಳಗಣ ಎಣ್ಣೆ, ಕಲ್ಲೊಳಗಣ ಹೇಮ, ಹಾಲೊಳಗಣ ತುಪ್ಪ, ಕಾಷ್ಠದೊಳಗೆ ಅನಲನಿಪ್ಪಂತೆ ಇಷ್ಟ ಚಿನ್ಮೂರ್ತಿಯನು ಮಸ್ತಕದಲ್ಲಿ ಶ್ರೀಗುರು ತನ್ನ ಹಸ್ತಾಬ್ಜ ಮಥನ ದಿಂದ ಆಕರ್ಷಣೆಯ ಮಾಡಿ ತೆಗೆದು, ಲಿಂಗದ ತನುವಿನೊಳಗಿರಿಸಿ ತಲ್ಲಿಂಗವನಂಗದಲ್ಲಿ ಸ್ಥಾಪ್ಯವ ಮಾಡಿ, ಸುಜ್ಞಾನಕ್ರಿಯುಪದೇಶವ ಮಾಡಿ ರಲು ಸತ್ಕ್ರಿಯಾ ಮಥನದಿಂದ ಜೀವ ಶಿವ ಸಂಗವಹ ಬಟ್ಟೆಯ ನರಿಯದೆ ಹಲವು ಬಟ್ಟೆಯಲ್ಲಿ ಹರಿವುತಿಪ್ಪ ಅವಿದ್ಯಾ ಸಂಬಂಧಿಗಳು ಕರ್ಮನಿರ್ಮಳವಾಗದ ಜಡರುಗಳು, ಗುರುವಚನ ಪರಾಙ್ಮುಖರು, ಲಿಂಗನಿಷ್ಠಾವಿರಹಿತರು ನಿಮ್ಮನೆತ್ತಬಲ್ಲರು ಉರಿಲಿಂಗಪೆದ್ದಿಪ್ರಿಯವಿ. ಶ್ವೇಶ್ವರಾ ?

(೨) ಅಜ್ಞಾನವೆಂಬ ಕಾಳಿಕೆವಿಡಿದು ಮನದ ಮೋಹವ ಪರಿಹರಿ ಸಿದ ಪರಿಯ ನೋಡಿರೇ. ಒಮ್ಮೆ ಕಾಸಿ, ಒಮ್ಮೆ ಕರಗಿಸಿ, ಒಮ್ಮೆ ಬಣ್ಣ

ವಿಟ್ಟು, ಎನ್ನ ಮನದ ಮೋಹವ ಕಳೆದನಯ್ಯಾ. ಕೂಡಲಚನ್ನಸಂಗಯ್ಯಾ ನಿಮ್ಮ ಶರಣಬಸವಣ್ಣನು.

(೩) ಲಿಂಗನಿಷ್ಠೆ ಇಲ್ಲದವರಂಗಣವ ಮೆಟ್ಟಲಾಗದು. ಜಂಗಮ ನಿಷ್ಠೆ ಇಲ್ಲದವರ ಸಂಗವ ಮಾಡಲಾಗದು. ಪ್ರಸಾದ ನಿಷ್ಠೆ ಇಲ್ಲದವರ ಸ್ನೇಹ ಸಂಪತ್ತಿಯುಲುಣಲಾಗದು. ಲಿಂಗಮುಖಕ್ಕೆ ಬಾರದ ರುಚಿ ಕಿಲ್ಬಿಷ ನೋಡಾ. ಮುಟ್ಟಲಾಗದು ಮಹಾ ಲಿಂಗ ಕಲ್ಲೇಶ್ವರನನೊಲಿಸುವ ಶರಣಂಗೆ.

(೪) ಆತ್ಮಶುದ್ಧಿ ಗುರುಹಸ್ತ ಮಸ್ತಕದಲ್ಲಿ ನ್ಯಸ್ತವಾದಂತೆ. ಸ್ಥಾನ ಶುದ್ಧಿ ಶಿವಲಿಂಗವಿದ್ದುದೇ ಅವಿಮುಕ್ತಿ ಕ್ಷೇತ್ರವಾಗಿ. ದ್ರವ್ಯಶುದ್ಧಿ ಶಿವ ಲಿಂಗಸನ್ನಿಧಿಮಾತ್ರ ಪವಿತ್ರೀಕೃತವಾಗಿ. ಮಂತ್ರಶುದ್ಧಿ ಹರಮಂತ್ರ ಮಯ ವಾಗಿ. ಲಿಂಗಶುದ್ಧಿ ಲಿಂಗ ನಿರ್ಮಳ ನಿರುಪಮ ನಿತ್ಯ ಸತ್ಯವಾಗಿ. ಇಂತು ಪಂಚ ಶುದ್ಧಿ ಎಂದರಿದು ಪ್ರಾಣಲಿಂಗಸಂಬಂಧಿಯಾಗಿಪ್ಪುದೇ ಆಗಮ. ಬೇರೆ ಆಗಮವಿಲ್ಲ ಊರಿಲಿಂಗಪೆದ್ದಿಪ್ರಿಯ ಗುರುವಿಶ್ವೇಶ್ವರಾ.

ಟೀಕು:— ಶ್ರೀಗುರು ಹಸ್ತಮಸ್ತಕದಲ್ಲಿ ಇರಿಸಿದಾಗವೇ ಆತ್ಮಶುದ್ಧಿ. ಲಿಂಗವಿಪ್ಪುದೇ ಅವಿ ಮುಕ್ತಿ ಕ್ಷೇತ್ರ ಸ್ಥಾನಶುದ್ಧಿ. ಲಿಂಗ ನಿರೀಕ್ಷಣೆ ಯಿಂದವೇ ದ್ರವ್ಯ ಶುದ್ಧಿ, ಗುರುಪೇಳಿದ ಕರ್ಣಮಂತ್ರದಿಂದವೇ ಮಂತ್ರ ಕಾಯವಾಯಿತ್ತು. ಗುರು ಮುಟ್ಟಿದಾಗವೇ ಶಿಲಾಭಾವವಳಿದು ಶಿವ ಕಳೆಯ ಭಾವಿಸಿ ಕರಸ್ಥಲವಲ್ಲಿ ಕೊಟ್ಟುದು ಪ್ರಾಣಲಿಂಗ. ಇಂತಪ್ಪ ಗುರುಮಂತ್ರ ಕ್ರಿಯಿಂದಾದ ಪ್ರಾಣಲಿಂಗ ಸಂಬಂಧವಪ್ಪ ಪಂಚಶುದ್ಧಿ ಇಲ್ಲವೆ ಬೇರೆ ಬೇರೆ ಆಗಮ ಕೃತಿ ಮತವಿಡಿದು ಬೇರೆ ಪಂಚ ಶುದ್ಧಿಯ ಮಾಡಲಿಲ್ಲ ಎಂದು ಈ ವಚನದ ತಾತ್ಪರ್ಯಾರ್ಥ.

ಇಂತು ಶಿಕ್ಷಾ ಗುರು ಸ್ವರೂಪವನೈದಿದ ಲಿಂಗವ ಸದ್ಭಕ್ತಸಂಗ ದಲ್ಲಿ ಸುಜ್ಞಾನ ಕಟಾಕ್ಷೆಯ ಕಣ್ದೆರವೆಯ ನಿಮಿತ್ಯ ಸುಜ್ಞಾನ ಸ್ವರೂಪವ ನೆಯ್ದುವ ಭೇದವೆಂತಿರ್ಪುದೆಂದೊಡೆ ಮುಂದೆ ಜ್ಞಾನಗುರು ಸ್ಥಲವಾದುದು.

---

# ೩ ಜ್ಞಾನಗುರುಸ್ಥಲ.

(೧) ಎಸವಿನ ಗುರು ಹೋಗಿ ಶಿಸುವಧೆಯ ಮಾಡಿದಡೆ, ಶಿಸು ಹೋಗಿ ಮರಳಿ ಗುರುವ ಕೊಂದಡೆ ಹೆಸರುಗೊಂಬಣ್ಣಗಳು ನೀವು ಕೇಳಿರೇ ಇವರಿಬ್ಬರು ಸತ್ತ ಠಾವ ಒಬ್ಬರು ಅರಿಯರು ನಿರ್ಣಯಲಿಂದಾತ ನಮ್ಮ ಅಂಬಿಗ ಚೌಡಯ್ಯ.

ಟೀಕು:— ದಿಗ್ದೆಸೆಗಳ ನೊಳಕೊಂಡಿಪ್ಪ ಅಖಂಡ ಚಿತ್ ಪ್ರಕಾಶವೇ ಗುರು ಮೂರ್ತಿಯಾಗಿ ಬಂದ ಶಿಷ್ಯ ಕಾರಣವೆಂಬುದೀಗ ಎಸವಿನ ಗುರು ಹೋಗಿ ಎಂಬ ಶಬ್ದಕ್ಕರ್ಥ. ಅಂತು ಗುರು ಕರುಣಿಸಿ ಶಿಷ್ಯನ ಜೀವತ್ವವನಳಿದು ಶಿವತತ್ವವ ಮಾಡಿದನೆಂಬುದೀಗ ಎಸವಿನ ಗುರು ಹೋಗಿ ಶಿಸು ವಧೆಯ ಮಾಡಿದಡೆ ಎಂಬ ಶಬ್ದಕ್ಕರ್ಥ. ಅಂತು ಜೀವನ ಧರ್ಮವಳಿದು ಶಿವ ತಾನೆಂದರಿದು ಶಿಷ್ಯನು ಗುರುವೆಂಬ ಲಕ್ಷ್ಯದ ಭಿನ್ನ ವಳಿದು ಅಭಿನ್ನ ಜ್ಞಾನಿಯಾಗಿರ್ದನೆಂಬುದೀಗ ಶಿಸು ಹೋಗಿ ಮರಳಿ ಗುರುವ ಕೊಂದಡೆ ಎಂಬ ಶಬ್ದಕ್ಕರ್ಥ. ಅಂತಪ್ಪ ಗುರುಶಿಷ್ಯರಿಬ್ಬರು ಸತ್ತುವಪ್ಪ ಪರಬ್ರಹ್ಮನೆಯುಪ್ಪರು, ಇಂತಪ್ಪ ಪರಬ್ರಹ್ಮದ ನಿಲವ ಗುರು ಶಿಷ್ಯರೆಂಬ ನಾಮ ರೂಪವಿಡಿದು ಭಿನ್ನ ಜ್ಞಾನಿಗಳರಿಯರೆಂಬುದೀಗ ಹೆಸರುಗೊಂಬ ಅಣ್ಣಗಳು ನೀವು ಕೇಳಿರೇ, ಇವರಿಬ್ಬರು ಸತ್ತ ಠಾವ ಒಬ್ಬರೂ ಅರಿಯರು ನಿರ್ಣಯಲಿಂದಾತ ನಮ್ಮ ಅಂಬಿಗ ಚೌಡಯ್ಯ ಎಂಬ ಶಬ್ದಕ್ಕರ್ಥ.

(೨) ತಡೆ ನೆಲೆ ಇಲ್ಲದ ಮಹಾ ನದಿಯಲ್ಲಿ ಒಡಲಿಲ್ಲದ ಅಂಬಿಗ ಬಂದಿದ್ದಾನೆ. ಹಿಡಿವ ಬಿಡುವ ಮನವ ಬಿಲಿಗೊಟ್ಟರೆ ಗಡಣವಿಲ್ಲದೆ ಹಾಯಿಸುವೆ ಹೊಳೆಯಾನು. ನುಡಿಯಿಲ್ಲದ ನಿಸ್ಸೀಮಗ್ರಾಮದಲ್ಲಿರಿಸುವೆ ನೆಂದಾತನಂಬಿಗರ ಚೌಡಯ್ಯ.

(೩) ಹಸ್ತ ಮಸ್ತಕ ಸಂಯೋಗವಾಗದ ಮುನ್ನ ಯೌವ್ವನ ಮಘನವಾಯಿತ್ತು. ಆವುದು ಅಂತರಂಗವೆಂಬೆ? ಆವುದು ಬಹಿರಂಗ ವೆಂಬೆ? ಆವುದು ಆತ್ಮಸಂಗವೆಂಬೆ? ಹಸ್ತ ಮಸ್ತಕಸಂಯೋಗವೇ ಬಹಿ ರಂಗ, ಮನ ಸಂಯೋಗವೇ ಅಂತರಂಗ. ಕೂಡಲಚನ್ನಸಂಗಯ್ಯನಲ್ಲಿ ಆತ್ಮಸಂಯೋಗವಾಯಿತ್ತು.

(೪) ಗುರುವನರಿವನ್ನಕ್ಕ ಅಷ್ಟಾದಶ ವಿದ್ಯೆಯ ನರಿಯಲುಂಟು, ಓದಲುಂಟು, ಕೇಳಲುಂಟು, ಹೇಳಲುಂಟು. ಗುರುಕರುಣದಿಂದ ಗುರುವನರಿದ ಬಳಿಕ, ಗುರುವಲ್ಲದೆ ತಾನಿಲ್ಲ, ತಾನಿಲ್ಲವಾಗಿ ಓದಲಿಲ್ಲ, ಓದಲಿಲ್ಲಾಗಿ ಕೇಳಲಿಲ್ಲ, ಕೇಳಲಿಲ್ಲಾಗಿ ಹೇಳಲಿಲ್ಲ, ಹೇಳಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲಾಗಿ ಅರಿವನರಿಯದ ಗುರುವನರಿಯಲುಂಟೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

(೫) ಶಿವಭಕ್ತಿಯಲ್ಲಿ ತೃಪ್ತರಾದವರು ನೀವು ಕೇಳಿರೇ. ನಿಮ್ಮ ಗುರು ಭಕ್ತಿಯ ಮೇಲೆ ಸ್ವಾಯತವ ಮಾಡಿದನು, ಶಿವನ ಮೇಲೆ ಸ್ವಾಯತವ ಮಾಡುವ ಗುರುವಿಲ್ಲ. ಇಲ್ಲೆಲ್ಲ ಶಿವಭಕ್ತಿ ಎಂಬ ಶಬ್ದ ದೊಳಗಳಿಯಿತ್ತಲ್ಲಾ ಲೋಕವೆಲ್ಲಾ! ಆಚಾರ್ಯನು ಕುಟಿಲವ ಕೊಟ್ಟು ಹೋದನಲ್ಲಾ! ಲೋಕದ ಕೈಯಲ್ಲಿ ರೂಪಿಗಳು ಮಾಡಿದ ಶಬ್ದದೊಳಗಳಿಯಿತ್ತಲ್ಲಾ ಲೋಕವೆಲ್ಲಾ! ಪಾಷಾಣ ದಂದುಗದ ಹೇಸಿಕೆಯೊಳಗೆ ಸತ್ತಿತ್ತಲ್ಲಾ ಲೋಕವೆಲ್ಲಾ! ಕೇಳಲಾಗದೀ ಶಬ್ದವ. ಶಿವನ ಕರೆದು ಸ್ವಾಯತವ ಮಾಡಿದೆನು. ಶಕ್ತಿಯ ಕರೆದೆನ್ನ ಮಠಕ್ಕೆ ಕಾಯಕವ ಮಾಡಿಸಿದೆನು ಇವರಿಬ್ಬರ ಕೈಯಲ್ಲಿ. ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲ ಎಂದೆನಿಸಿದೆನು.

(೬) ಭಾವಕ್ಕೆ ಇಂಬಿಲ್ಲ. ಶಬ್ದ ಮೊಸಲು ನೋಡಾ! ನುಡಿಗೆಡೆಯಿಲ್ಲ. ಎಡೆಗೆಡೆಯಿಲ್ಲ ಗುಹೇಶ್ವರನೆಂಬ ಲಿಂಗವೆರಿಸಲೊಡನೆ.

(೭) ಉಣಬೆ ದಣಿವ ಗುರುವಿನ ಹೆಸರುಗೊಳ್ಳದ ಮುನ್ನಾದ ಶಿಷ್ಯನು ಅನ್ಯರಿಗೆ ತೋರದ ಭಕ್ತಿಯದು. ನಿಮ್ಮೊಳಡಗಿದ ಲಿಂಗೈಕ್ಯವ ಪಸಾರಕ್ಕಿಕ್ಕುವ ಅಜ್ಞಾನಿಗಳೆತ್ತ ಬಲ್ಲರಯ್ಯ ಕಲಿದೇವಯ್ಯ?

(೮) ಗುರು ಶಿಷ್ಯ ಸಂಬಂಧವನರಸಲಿಂದು ಹೋದರೆ ತಾನೇ ಗುರುವಾದ. ತಾನೇ ಶಿಷ್ಯವಾದ. ತಾನೇ ಲಿಂಗವಾದ. ಗುಹೇಶ್ವರ ನಿಮ್ಮ ಶರಣ ಕಾಯದ ಕೈಯಲ್ಲಿ ಲಿಂಗವ ಕೊಟ್ಟಡೆ ಭಾವ ಬತ್ತಲೆಯಾಯಿತ್ತು.

ಇಂತು ದೀಕ್ಷಾಗುರು, ಶಿಕ್ಷಾ ಗುರು ಜ್ಞಾನಗುರುವೆಂಬ ತ್ರಿವಿಧ ಸ್ಥಲವೇಕವಾದ ಲಿಂಗವು ಶರಣನ ಅಂಗದ ಮೇಲೆ ಕರತಳಾಮಳಕ ವಾಗಿ ಇಷ್ಟಲಿಂಗದ ಸ್ವರೂಪವನೆಯ್ದಿದ ಭೇದವೆಂತಿರ್ದುದೆಂದಡೆ ಮುಂದೆ ಕ್ರಿಯಾಲಿಂಗ ಸ್ಥಲವಾದುದು.

---

## ೪ ಕ್ರಿಯಾಲಿಂಗಸ್ಥಲ.

(೧) ಕಾಣದುದ ನರಸುವರಲ್ಲದೆ, ಕಂಡುದ ನರಸುವರೇ ಅಯ್ಯ? ಘನಕ್ಕೆ ಘನವಾದ ವಸ್ತು ತಾನೇ ಗುರುವಾದ, ತಾನೇ ಲಿಂಗವಾದ, ತಾನೇ ಜಂಗಮವಾದ, ತಾನೇ ಪ್ರಸಾದವಾದ. ತಾನೇ ಮಂತ್ರವಾದ ತಾನೇ ತಂತ್ರವಾದ, ಸಕಲವಿದ್ಯಾ ಸ್ವರೂಪವಾದ. ಇಂತಿವೆಲ್ಲವನೊಳ ಕೊಂಡು ಎನ್ನ ಕರಸ್ಥಲಕ್ಕೆ ಬಂದು ಇನ್ನು ನಿರ್ವಿಕಾರ ಗುಹೇಶ್ವರಾ.

ಟೀಕು:— ಕಾಣಬಾರದ ಪರಬ್ರಹ್ಮವನರಸಿ ಕಾಣೆನೆಂದು ಬಳಲ ಬೇಡ ಕಾಣಬಂದ ಶ್ರೀಗುರು ಮುಂದೆ ಪ್ರತ್ಯಕ್ಷನಾಗಿರಲು ಅಲ್ಲಿಯೂ ಕಾಣದುದ ಕಂಡು ಕೊಂಬುದು ಎಂಬುದೀಗ ಕಾಣದುದ ನರಸುವರ ಲ್ಲದೆ ಕಂಡುದನರಸುವರೇ ಹೇಳಾ ಎಂಬ ಶಬ್ದಕ್ಕರ್ಥ. ಅದು ಕಾರಣ ಘನಕ್ಕೆ ಘನವಾದ ಮಹಾ ಶ್ರೀಗುರು ಶಿಷ್ಯನ ಮೇಲಣ ಕರುಣದಿಂದ ಗುರುವಾಗಿ ದೀಕ್ಷಾಗುರುವಾಗಿ, ದೀಕ್ಷೆಯ ಕೊಟ್ಟು, ಲಿಂಗವಾಗಿ ಪೂಜೆಗೊಂಡು, ಜಂಗಮವಾಗಿ ಬೋಧಿಸಿ, ಪ್ರಸಾದವಾಗಿ ಬಂದು ಪರಿಣಾಮವ ತೋರಿ, ಮಂತ್ರವಾಗಿ ಷಡಕ್ಷರಿಯ ರೂಪಾಗಿ ಬಂದು ಅಂತರಂಗದಲ್ಲಿ ನೆಲೆಗೊಂಡು ಯಂತ್ರವಾಗಿ ಸಕಲ ಕ್ರಿಗಳನೆ ನಿಲಿಸಿ, ಸಕಲ ವಿದ್ಯಾ ರೂಪಾಗಿ ಬಂದು ಮಹಾನುಭಾವದೊಳಗೆ ನೆಲೆಗೊಂಡು ನಿಂದು ಇಂತು ಸರ್ವಾಂಗದಲ್ಲಿ ಲಿಂಗಸ್ವಾಯತವಾಗಿ ಸರ್ವಾಂಗ ವಿಕಾರ ನಿರ್ವಿಕಾರವಾಯಿತ್ತೆಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ಪ್ರಣವ ಮಂತ್ರವ ಕರ್ಣದಲ್ಲಿ ಹೇಳಿ ಗುರು ಅಂಗದ ಮೇಲೆ ಲಿಂಗವ ಪ್ರತಿಷ್ಠೆಯ ಮಾಡಿದ ಬಳಿಕ ಬಳಗೆ ಲಿಂಗವಿಪ್ಪುದೆಂಬ ಪಂಚ

[illegible] ಪಾತ್ರೆಗಳ ಸುರಿದು [illegible] [illegible]ಪ್ಪನೇ ಲಿಂಗವನು.? ಮಲಮೂತ್ರ ಮಾಂಸದ ದೇಹಿಕೆಯ ಪ್ರಾಣವಿಪ್ಪವಲ್ಲಿ ಲಿಂಗವಿಪ್ಪುದೇ.? ಆ ಪ್ರಾಣನ ತಂದು ತನ್ನ ಇಷ್ಟಲಿಂಗದಲ್ಲಿ ನೆರೆಯ ಬಲ್ಲಾತನೇ ಪ್ರಾಣಲಿಂಗ ಸಂಬಂಧಿ. ತನ್ನ ಇಷ್ಟಲಿಂಗದಲ್ಲಿ ದಾಸೋಹವ ಮಾಡಲರಿಯದೆ ಹಲವು ಬಳಕೆಯ ಬಳಸುವ ಮಟ್ಟಿಯ ಭಂಡರ ನೆನಗೊಮ್ಮೆ ತೋರದಿರಾ ಕೂಡಲಚನ್ನಸಂಗಮದೇವಾ.

(೩) ಸಾಕಾರವಿಡಿದು ಅರ್ಚನೆ ಪೂಜೆಯ ಮಾಡುವುದಲ್ಲದೆ ನಿರಾಕಾರವ ನಂಬಲಾಗದು. ಶ್ರೀಗುರು ಪ್ರಾಣಲಿಂಗವನು ಕರಸ್ಥಲಕ್ಕೆ ಬಿಜಯಂ ಗೈಸಿಕೊಟ್ಟ ಬಳಿಕ ವಜ್ರದಲ್ಲಿ ಬಯಲ ನರಸಲುಂಟೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ ?

(೪) ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ಎಂದೆನಿಸುವ ಲಿಂಗವು, ಶೃತಿ, ಚಕಿತಮಭಿಧತ್ತೆ ಎಂದೆನಿಸುವ ಲಿಂಗವು. ಅಣೋರಣೀಯಾನ್ಮಹತೋ ಮಹೀಯಾನ್ ಎಂದೆನಿಸುವ ಲಿಂಗವು. ಅಯಂ ಮೇ ಹಸ್ತೋಭಗವಾನ್, ಅಯಂ ಮೇಭಗವತ್ತರಂ ಎಂದೆನಿಸುವ ಲಿಂಗವು, ಏಕ ಮೂರ್ತಿ ಸ್ತ್ರಿಧಾಭೇದಂ ಎಂದೆನಿಸುವ ಲಿಂಗವು, ಶ್ರೀಗುರುಲಿಂಗ ಜಂಗಮ ರೂಪಾಗಿ "ಇಷ್ಟ ಪ್ರಾಣ ಸ್ತಥಾ ಭಾವಂ ತ್ರಿವಿಧಾ ವೈಕ್ಯವದಾನನೆ" ಎಂದುದಾಗಿ ತ್ರಿವಿಧವು ಏಕೀಭವಿಸಿ ಲಿಂಗ ರೂಪಾಗಿ, ಎನ್ನ ಕರಸ್ಥಲಕ್ಕೆ ಬಂದು ಕರತಳಾಮಳಕವಾಗಿ ತೋರುತ್ತಿರ್ದನೇ! ಆಹಾ ಎನ್ನ ಪುಣ್ಯವೇ ! ಆಹಾ ಎನ್ನ ಭಾಗ್ಯವೇ ! ಆಹಾ ಎನ್ನ ಸತ್ಯವೇ! ಆಹಾ ಎನ್ನ ನಿತ್ಯವೇ! ಶಿವಶಿವಾ ಮಹಾದೇವ ಮಹಾದೇವ ನೀನೆ ಬಲ್ಲೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

(೫) ನಿತ್ಯ ನಿರಂಜನ ಪರಂಜ್ಯೋತಿ ಲಿಂಗವು ಪ್ರತ್ಯಕ್ಷವಾಗಿ ಕರಸ್ಥಲಕ್ಕೆ ಬಂದಿರಲು ಮತ್ತೆ ನೆನೆನೆನೆದು ಬದುಕಿಹೆನೆಂಬುದು ಅಜ್ಞಾನವಯ್ಯ. ಸತ್ಯವು. ಸರ್ವಾಂಗ ಲಿಂಗವೆಂಬುದನರಿಯದೆ ಮತ್ತೆ ಕಾಯವಿರಿಸಿ ಕೈಲಾಸಕ್ಕೆ ಹೋಗಬೇಕೆಂದು ಬಯಸುವದು ಕ್ರಮವಲ್ಲವಯ್ಯ. ಪಂಚಾಮೃತ ಮುಂದೆ ಬಂದಿರಲು ಹಸಿವೆನೆಂದು ಲೋಗರ ಮನೆಯಲನ್ನವ ಬೇಡುವರೇ? ಕಣ್ಣ ಮುಂದೆ ನಿಧಾನವಿರಲು ಬಳಸಲರಿಯದೆ ಬಡತನ ವಲ್ಲಿಹರೇ ? ಲಿಂಗವಿಲ್ಲದವರು ಮೊದಲಾಗಿ ಲಿಂಗವ ನೆನೆದು ಬದುಕಿಹ

ನಂಬರು. ಇವ ಕಂಡು ನಂಬದಿಹುದುಚಿತವೇ? ಇದು ಗುಣವಲ್ಲ, ಮುಂಗಯ್ಯ ಕಂಕಣಕ್ಕೆ ಕನ್ನಡಿ ಬೇಡ. ಲಿಂಗವಂಗವೊಳಿರ್ದುದಕ್ಕೆ ಲಿಂಗದ ಪರಿ ಎಂತೆಂದು ಅನ್ಯರ ಕೈಯ್ಯಲು ಕೇಳಬೇಡ. ತನ್ನಲ್ಲಿ ತಾನೇ ನೋಡಿಕೊಂಬುವುದು. ಇದನರಿತು ಚಿಂತಿಸಬೇಡ. ಕಾಣೆನೆಂದು ಮನದಲ್ಲಿ ಮರುಗಬೇಡ. ಮುಂದೆ ಜನ್ಮ ಉಂಟೆಂದು ಮನದಲ್ಲಿ ನೋಯಬೇಡ. ಇದು ಕಾರಣ ತನ್ನ ಕರಸ್ಥಲದೊಳಗಿರ್ದ ವಸ್ತುವನು ತಾನರಿದಡೆ, ತಾನೇ ಶಿವನು. ಇದು ಸತ್ಯ ಶಿವನಾಣೆ. ಶಿವಬಲ್ಲ. ಶಿವಶಿವಾ, ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

ಇಂತು ಅಂಗದೊಳಗವಟ್ಟ ಸತ್ಕ್ರಿಯಾಲಿಂಗವು ಸದ್ಭಕ್ತನ ಹೃದಯಾಂಗದಲ್ಲಿ ಭಾವಭರಿತವಾಗಲು ಮುಂದೆ ಭಾವಲಿಂಗ ಸ್ಥಲವಾದುದು.

---

## ೫. ಭಾವಲಿಂಗಸ್ಥಲ.

(೧) ತಮ್ಮ ತಮ್ಮ ಭಾವಕ್ಕೆ ಕೊರಳಲ್ಲಿ ಕಟ್ಟಿಕೊಂಡರು. ತಮ್ಮ ತಮ್ಮ ಭಾವಕ್ಕೆ ಉಡಿಯಲ್ಲಿ ಕಟ್ಟಿಕೊಂಡರು. ನಾನೆನ್ನ ಭಾವಕ್ಕೆ ಪೂಜಿಸ ಹೋದರೆ ಕೈತಪ್ಪಿ ಮನದಲ್ಲಿ ಸಿಲುಕಿತ್ತು. ಎನ್ನ ಲಿಂಗವು ಸಾಧಕನಲ್ಲ, ಭೇದಕನಲ್ಲ. ಗುಹೇಶ್ವರ ಅಲ್ಲಯ್ಯಾ ತಾನೇ ಬಲ್ಲ.

ಟೀಕು:—ಎಲ್ಲರೂ ಲಿಂಗವನು ಧರಿಸಿಕೊಂಡರು. ಲಿಂಗಾರ್ಚನೆಯ ಮಾಡುವ ಪರಿಯಲ್ಲ. ಶಿವಯೋಗಿಯ ಪರಿಯು ಮತ್ತೆಂತೆಂದರೆ, ಮನ ಮುಟ್ಟಿ ಪೂಜಿಸಹೋದರೆ, ಆ ಮನವೇ ಲಿಂಗವೆಂದರಿದು, ಅಸಾಧ್ಯ ಸಾಧಕನಾಗಿಪ್ಪ ಕಾರಣ ನಾನೆನ್ನ ಭಾವಕ್ಕೆ ಪೂಜಿಸಹೋದರೆ ಕೈತಪ್ಪಿ ಮನದಲ್ಲಿ ಸಿಲುಕಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಶಿವಯೋಗಿ ಅಭ್ಯಾಸಿಯಲ್ಲದೆ ಸಿಜವಾದ ಕಾರಣ ಸಾಧಕನಲ್ಲ, ಶೋಧಕನಲ್ಲ ಎಂಬ ಶಬ್ದಕ್ಕರ್ಥ.

(೨) ಅರ್ಚನೆ ಆವರಿಸಿತ್ತಯ್ಯಾ, ಪೂಜೆ ಪೂರಿತವಾಯಿತ್ತಯ್ಯಾ, ಸಮತೆ ಪರಿಣಾಮಿಸಿತ್ತು, ಸಿರ್ಪಿಕಲ್ಲು ಸಂಧಾನವಾಯಿತ್ತು ಮಹಾಲಿಂಗ ಕಲ್ಲೇಶ್ವರನ ನೆನೆವ ಭಾವಕ್ಕೆ.

(೩) ಕರಸ್ಥಲದ ಬೆಳಗಿನೊಳಗೊಂದು ಘನಲಿಂಗದ ಬೆಳಗ ಕಂಡೆ. ಮಹಾ ಮಂಗಳ ನಿಳಯನಾಗಿ ತೋರುತ್ತಿದ್ದಾನೆ. ಮಹಾಮಂಗಳ ನಿಳಯನಾಗಿ ತೋರುತ್ತಿದ್ದಿತ್ತು. ಗುಹೇಶ್ವರ ಲಿಂಗದ ವಾರ್ತೆ ಸಂಗನಬಣ್ಣನಲ್ಲಿ ನಿವಾಳಿಸುತ್ತಿದ್ದಿತ್ತು.

(೪) ಕಾಯವೇ ಕಳೆಯಾಗಿ ಪ್ರಾಣಲಿಂಗವಾಗಿ ಭಾವ ಭಾವಿಸುತ್ತಿದ್ದಿತ್ತು ನೋಡಾ! ಅನುಭಾವ ಕರಸ್ಥಲವಾಗಿ ಭಾವ ಭಾವಿಸುತ್ತಿದ್ದಿತ್ತು ನೋಡಾ! ಸಾಕ್ಷಿ॥ ದೇಹೋ ದೇವಾಲಯಂ ಪ್ರೋಕ್ತಂ। ಜೀವ ದೇವ ಸದಾಶಿವಃ। ತೇಜೋ ತು ಜ್ಞಾನ ನಿರ್ಮಾಲ್ಯಂ ಸೋಹಂ ಭಾವೇನ ಪೂಜಯೇತ್॥ ಎಂದುದಾಗಿ ಇದು ಕಾರಣ ಕೂಡಲಚನ್ನಸಂಗಯ್ಯ ಮಹವ ನುಂಗಿದ ಮಹಂತನ ಬೆರಗು.

(೫) ಎನ್ನ ಮನದ ಕೊನೆಯ ಮೊನೆಯ ಮೇಲೆ ಅಂಗವಿಲ್ಲದ ಲಿಂಗವ ಕಂಡೆ. ಕಂಡು ಕಂಡು ಬೆರಗಾದೆ. ಆತನ ಕಂಡು ಬೆರಗಾದೆ ಅಂತರಂಗ ಶುದ್ಧಾತ್ಮನಲ್ಲಿ ಅನುಮಿಷ ನಿಜೈಕ್ಯ ಗುಹೇಶ್ವರನ.

(೬) ಎನ್ನ ಮನವು ನಿಮ್ಮಲ್ಲಿ ನಟ್ಟು ತೆಗೆಯಬಾರದ ಬೆರಗು ನೋಡಯ್ಯಾ. ಇಹವೆಂಬುದನರಿಯೆ. ಪರವೆಂಬುದನರಿಯೆ. ಪರಮಾನಂದದಲ್ಲಿ ಇರ್ದೆ ನೋಡಯ್ಯ. ಪರಮ, ನಿನ್ನ ನೆನಹೇ ನೆನಹಾಗಿ ಪರಮ ಸುಖದಲ್ಲಿ ಸುಖಿಸುತಿರ್ದೆ ನೋಡಯ್ಯಾ. ಅಪ್ರತಿಮ ಕೂಡಲಚನ್ನಸಂಗಯ್ಯ ಎನ್ನ ಬೆರಗಿನ ಭೇದವ ನೀನೆ ಬಲ್ಲೆಯಯ್ಯಾ.

ಇಂತು ಸದ್ಭಾವದಲ್ಲಿ ಭರಿತನಾಗಿ ಚಿದ್ಭಾವ ಸ್ವರೂಪದ ಸ್ವೈದಿದ ಲಿಂಗವು ಸದ್ಭಕ್ತಸಂಗದಲ್ಲಿ ನಿಂದು ಮಹಾ ಜ್ಞಾನ ಸ್ವರೂಪವಳವಡಲು ಮುಂದೆ ಜ್ಞಾನಲಿಂಗ ಸ್ಥಲವಾದುದು.

## ೬. ಜ್ಞಾನಲಿಂಗಸ್ಥಲ.

(೧) ಭಾವದಲ್ಲಿ ಸಿಲುಕಿದ ಲಿಂಗಕ್ಕೆ ಪ್ರಳಯ. ಪ್ರಳಯವಪ್ಪುತ ಕಾಣಿರೇ. ಅದು ಪ್ರಾಣಲಿಂಗವೆಂತೆಂಬೆ? ಲಿಂಗ ಪ್ರಾಣ ಎಂತೆಂಬೆ? ಗುಹೇಶ್ವರನೆಂಬ ಲಿಂಗವು ನಿಂದಲ್ಲಿಯೇ ನಿಂದಿತ್ತು.

(೨) ಜಾತಿ ಭೇದಂಗಳನರಿವುದಯ್ಯಾ. ಸಾಕ್ಷಾತ್ ಹಿಂದುಮುಂದು ಹರಿಯಿತ್ತಯ್ಯಾ. ಪ್ರೀತಿಯಿಂದ ಬೆಳಗು ಮುತ್ತಪ್ಪುದಯ್ಯಾ. ಆದದಾತ ಗುಹೇಶ್ವರನೆಂದರಿವುದಯ್ಯಾ.

(೩) ಚಿತ್ತದ ಸ್ನೇಹದ ಸಜ್ಜನಕರ್ಷಿತದ ಪೂಜೆ. ನೆಟ್ಟಿರ್ದ ಬೆಟ್ಟಕ್ಕೆ ತಾಗು ತಡೆಯುಂಟೆ ಎಲೆ ಮರುಳೆ? ಆತುರದಲ್ಲಿ ಕಳವಳಿಸಿ ವ್ಯಾಕುಲದಲ್ಲಿ ದಾವರಿಸುತಿಪ್ಪುದೀ ಮನವು. ಆ ಮನವು ಬೆನ್ನದೋರದ ಘನಕ್ಕೆ ಬೆಂಬತ್ತಿ ಬಿಡದಿರಬಲ್ಲಡೆ ತನ್ಮೂರ್ತಿ ತನ್ನಲ್ಲಿ ಗುಹೇಶ್ವರ ಲಿಂಗವು.

(೪) ನೋಡುವುದು. ನೋಡಲರಿಯದೆ ಕೆಟ್ಟಿತೀ ಲೋಕವೆಲ್ಲ. ನೋಡುವುದು. ನೋಡಬಲ್ಲಡೆ ಕೂಡಲಿಲ್ಲ, ಅಗಲಲಿಲ್ಲ. ನೋಟದ ಕೂಟದ ಅಗಲದ ಸುಖವ ಗುಹೇಶ್ವರ ನಿಮ್ಮ ಶರಣ ಬಲ್ಲ.

(೫) ಬಲ್ಲನಿತ ಬಲ್ಲರಲ್ಲದೆ, ಅರಿಯದುದನೆಂತು ಬಲ್ಲರು? ಅರಿವು ಸಾಮಾನ್ಯವೇ? ಅರಿದುದನಾರಿಗೂ ಅರಿಯಬಾರದು. ಗುಹೇಶ್ವರನೆಂಬ ಲಿಂಗವನರಿಯದೊಡೆರಡು, ಅರಿದಡೊಂದೇ.

(೬) ಎನ್ನ ಕಂಗಳೊಳಗಣ ರೂಹಿಂಗೆ ಆನು ಬೇಟವ ಕೊಂಡು ಬಳಲುವಂತೆ, ಹಿಡಿದು ನೆರೆಯಲಿಲ್ಲಯ್ಯಾ. ತುರೀಯದ ತವಕವನೇನೆಂಬೆ? ಸಂಗಸಂಯೋಗವಿಲ್ಲದ ಗತಿ ಸುಖವನರಸಲುಂಟೇ? ಗುಹೇಶ್ವರ ಲಿಂಗದ ಕೃತಕವ ಅಳಿದು. ಏನೆಂಬೆ?

(೭) ತನುವಿಲ್ಲದೆ ಕಂಡು, ಕಂಡು, ನಿಂದು, ಬೆರಗಿಲ್ಲದೆ ಕಂಡು ಬೆರಗಾದೆ ರೂಹಿಲ್ಲದೆ. ಕಂಡರಿತೆ ಗುಹೇಶ್ವರನೆಂಬ ಲಿಂಗವ.

(೮) ಮನಕ್ಕೆ ತೋರದು. ನೆನೆವಡನುವಲ್ಲ. ಘನಕ್ಕೆ ಘನವು. ಅದ ನೇನೆಂದು ಹೇಳುವೆನಯ್ಯಾ? ಅದರಿಂದ ಮೀರಿದುದ, ಬೇರೆ ತೋರಲಿಲ್ಲ

ಪುದ, ದೇವದಾನ ಮಾನವರ ಬಲ್ಲತನದ ಬಗೆಯ ಮೀರಿದುದನೇನ ಹೇಳುವೆನಯ್ಯಾ? ಸಾಕ್ಷಿ, "ಆದಿಮಧ್ಯಾಂತ ಶೂನ್ಯಂ ಚ ವ್ಯೋಮಾತೀತ ನಿರಂಜನ ಧ್ಯಾನ ಜ್ಞಾನ ಮನೋಹೀನಂ । ಶೂನ್ಯಲಿಂಗ ಮನಾಶ್ರಯಂ" ಎಂದುದಾಗಿ ಅರಿಯಬಾರದು, ಕುರುಹುದೋರದು, ತೆರಹಿಲ್ಲದಿಪ್ಪುದು ಮಹಾಲಿಂಗ ಕಲ್ಲೇಶ್ವರ.

ಇಂತು ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗನೆಂಬ ತ್ರಿವಿಧ ಸ್ಥಲವು ಏಕವಾದ ಲಿಂಗವು ಭಕ್ತನ ಸ್ವಯಂ ಭಾವ ಗುಣದಲ್ಲಿ ನಿಶ್ಚಲವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಸ್ವಯ ಸ್ಥಲವಾದುದು.

---

## ೭. ಸ್ವಯಸ್ಥಲ.

(೧) ಲಿಂಗದೊಳಗಣ ಬೀಜ, ಜಂಗಮದಲುತ್ಪತ್ತಿ. ಕಾಯಗುಣವಿಲ್ಲಾಗಿ ಸಂಸಾರ ಭಯವಿಲ್ಲ. ಅಂತರಂಗ ಶುದ್ಧಾತ್ಮ ನಿಸ್ಸಂಗಿ ಜಂಗಮ ಕೂಡಲಚನ್ನಸಂಗಮದೇವಾ.

ಟೀಕು:— ಜ್ಞಾನ ಕಲಾ ಸ್ವರೂಪನಾಗಿಪ್ಪ ಶರಣನೇ ಜಂಗಮ. ಅಂತಪ್ಪ ಜಂಗಮವು ತನ್ನ ಚಿತ್ ಪ್ರಣವ ಚೈತನ್ಯ ಕಲೆಯನು ತನ್ನ ಭಾವದ ಮುಖದಲ್ಲಿ ಉದ್ಭವವ ಮಾಡಿ ಇಷ್ಟಲಿಂಗವಾಗಿ ಪಿಡಿದು ತನ್ನ ನಿಜವನು ನೋಡಿ ಸುಖಿಸುತ್ತಿಪ್ಪ ಕಾರಣ ಲಿಂಗದೊಳಗಣ ಬೀಜ ಜಂಗಮದಲುತ್ಪತ್ತಿ ಎಂಬ ಶಬ್ದಕ್ಕರ್ಥ. ಇಂತು ಅಂತರಂಗ ಬಹಿರಂಗವೆಲ್ಲ ಲಿಂಗವೆಯಾಗಿಪ್ಪ ಕಾರಣ ಜಂಗಮಕ್ಕೆ ದೇಹವಾಸನೆ ಗುಣ ಧರ್ಮ ಕರ್ಮ ಸಂಸಾರ ಭವ ಭಯಂಗಳೇನೂ ಇಲ್ಲದೆ, ದೇಹ ಸಂಸಾರಸಂಗವಿದ್ದು ನಿಸ್ಸಂಗಿಯಾಗಿಪ್ಪನು. ಜಂಗಮವೆಂಬುದೀಗ ಕಾಯ ಗುಣವಿಲ್ಲವಾಗಿ ಸಂಸಾರ ಭಯವಿಲ್ಲ. ಅಂತರಂಗ ಶುದ್ಧಾತ್ಮನಾಗಿ ನಿಸ್ಸಂಗಿ ಜಂಗಮವೆಂಬ ಶಬ್ದಕ್ಕರ್ಥ.

(೨) ಅದು ಬೇಕು, ಇದು ಬೇಕು, ಎಂಬ ಎದೆಗುದಿಹತನ ಬೇಡ. ಸಜೀವನಾಗಿರ್ದಡೆ ಸಾಕು. ಷಡು ಪದಾರ್ಥಂಗಳು ತಾನಿದ್ದೆಡೆಗೆ ಬಾಹ

ದಯ್ಯಾ. ನಿಧಿ ನಿಕ್ಷೇಪಂಗಳು ತಾನಿದ್ದೆಡೆಗೆ ಬಾಹವಯ್ಯಾ. ಸದು ಹೃದಯ ಶುದ್ಧನಾಗಿ ಸಕಳೇಶ್ವರ ದೇವಂಗೆ ಶರಣೆಂದಡೆ ನಿಜ ಪದವನೀವನು.

(೩) ತನುವ ಪಡೆದು ಧನವ ಗಳಿಸಬೇಕೆಂದು ಮನುಜರ ಮನೆಯ ಬಾಗಿಲಿಗೆ ಹೋಗಿ ಮನ ಬಂದ ಪರಿಯಲ್ಲಿ ನುಡಿಸಿಕೊಂಡು ಮನ ನೊಂದು ಬೆಂದು ಮರುಗುತ್ತಿರಲಾರೆನಯ್ಯಾ. ನೀ ಕರುಣಿಸಿ ಇದ್ದ ಠಾವಿನಲ್ಲಿ ಇಹಂತಹ ಪರಮ ಸುಖವು ಎಂದು ದೊರೆಕೊಂಬುದೋ ಎನಗೆ ಸಕಳೇಶ್ವರಾ?

(೪) ಉದಾಸೀನದಿಂದ ಮಾಡಿದಡೆ ಮುಟ್ಟಲಾಗದು. ಅದು ಅನರ್ಪಿತವೆನಿಸುವುದು. ವಿನಯಾರ್ಥ ಮಾಡಿದಡೆ ಮುಟ್ಟಿ ಅರ್ಪಿತವ ಮಾಡುವುದು. ಕೂಡಲಚೆನ್ನಸಂಗಯ್ಯಾ ಇಂತಪ್ಪ ಲಿಂಗಾಭಿಮಾನಿಯ ತೋರಾ ಎನಗೆ.

(೫) ಕರ್ತನಿರ್ದೆಡೆಗೆ ಭೃತ್ಯಾಚಾರವ ಮಾಡಿಸಿಕೊಂಬ ಕರ್ತಂಗೆ ಕರ್ತೃತ್ವವಲ್ಲದೆ, ಭೃತ್ಯ ನಿರ್ದೆಡೆಗೆ ಕರ್ತನೈತಂದು ಭೃತ್ಯಾಚಾರವ ಮಾಡಿಸಿಕೊಂಬ ಕರ್ತಂಗೆ ಕರ್ತೃತ್ವವೆಲ್ಲಿಯದೋ? ಜಗದ ಕರ್ತನ ವೇಷವ ಧರಿಸಿ ಕರ್ತನಾದ ಒಳಿಕ ಭಕ್ತನಿದ್ದೆಡೆಗೆ ಬಂದು ಭಕ್ತಿಯ ಮಾಡೆಂದಡೆ, ಎನ್ನ ಕರ್ತೃತನಕ್ಕೆ ಅದೇ ಹಾನಿ ನೋಡಾ! ಲಿಂಗಾಣತಿಯಿಂದ ಬಂದ ಪದಾರ್ಥವ ಲಿಂಗಾರ್ಪಿತವ ಮಾಡುವುದಲ್ಲದೆ ಅಂಗದಿಚ್ಛೆಗೆ ಅಂಗವಿಸಿ ಬೇಡಿದೆನಾದಡೆ, ಎನ್ನ ಲಿಂಗಾಭಿಮಾನಕ್ಕೆ ಅದೇ ಹಾನಿ ನೋಡಾ! ದೇಹ ಮನ ಪ್ರಾಣಂಗಳು ನಿಮ್ಮದಾಗಿ ನಾ ಹೊರೆಯ ಬೇಕೆಂಬ ಭ್ರಾಂತಿ ಎನಗಿಲ್ಲ. ಒಡಮನವ ಮಾಡಿ ಒಂದಡಿಯ ನಡೆದೆನಾದಡೆ ಮನದೊಡೆಯ ಸಕಳೇಶ್ವರದೇವ ನಿಮ್ಮಾಣೆ.

(೬) ಸಕೃತ್ ಸಂಸಾರದಲ್ಲಿ ಜನಿಸಿ ಪ್ರಕೃತಿ ಗುಣವಳಿಯದೆ ಮನುಜರ ಬೇಡುವ ಯಾಚಕರನೊಲ್ಲೆ. ಅಭವನ ಮುಖದಲ್ಲಿ ಬಂದುದನಲ್ಲದೆ ಕೈಕೊಳ್ಳ, ಕೂರ್ಮನ ಶಿಶುವಿನ ಆಪ್ಯಾಯನದಂತೆ ಆರಾಧ್ಯ ಸಕಳೇಶ್ವರ ದೇವರಲ್ಲಿ ದಯಾಮೃತವನುಂಬ ಶರಣ.

(೭) ದೊರೆಕೊಂಡಂತೆ ಮನ ದಣಿದಿಪ್ಪವರ ದುಃಖಕ್ಕೆ ದೂರಾಗಿಪ್ಪವರ ಒಳಗನರಿದು ಹೊರಗೆ ಮರೆದು ಸದಾನಂದದಲ್ಲಿಪ್ಪವರ ತೋರಾ ಎನಗೆ. ಸಕಳೇಶ್ವರ ದೇವಾ ಎನಗಿದೇ ವರವನೀವುದು ಕಂಡಾ ತಂದೆ.

ಇಂತು ಸ್ವಯಂ ಭಾವ ಗುಣದಲ್ಲಿ ನಿಶ್ಚಲವಾದ ಲಿಂಗವು ಭಕ್ತನಲ್ಲಿ ನಿಂದು ಭಕ್ತಿ ಕಾರಣವಾಗಿ ಚರಿಸುವ ಭೇದವೆಂತಿರ್ದುದೆಂದೊಡೆ ಮುಂದೆ ಚರ ಜಂಗಮ ಸ್ಥಲವಾದುದು.

---

## ೮ ಚರಸ್ಥಲ

(೧) ಕಣ್ಣೇ ಕಟ್ಟಿಗೆಯಾಗಿ, ಕಯ್ಯೇ ಕಪ್ಪರವಾಗಿ, ಕಿವಿಯೇ ಸಕಲ ಪುರಾತನರ ಕಾರುಣ್ಯವೆನುತ ಮನದ ಭಿಕ್ಷವನುಂಡು ತನು ಪರಿಣಾಮವನೈದಿಹ ಘನ ಮಹಿಮರ ತೋರಯ್ಯಾ ಗುಹೇಶ್ವರಾ.

ಟೀಕು:— ಕಂಗಳೊಳಗೆ ಇಷ್ಟ ರೂಪಗ್ರಹಣವೆಂಬ ಹಸ್ತದೊಳಗೆ ಸುಜ್ಞಾನವೆಂಬ ಲಾಕುಳವ ಹಿಡಿದು, ಕರಸ್ಥಲದೊಳಗೆ ಸರ್ವಾಚಾರ ಸಂಪತ್ತಿನ ಪಾತ್ರಸ್ವರೂಪವಪ್ಪ ಲಿಂಗವ ಹಿಡಿದುಕೊಂಡು ಇರುತಿಪ್ಪುದೀಗ ಕಣ್ಣೇ ಕಟ್ಟಿಗೆಯಾಗಿ ಕಯ್ಯೇ ಕಪ್ಪರವಾಗಿ ಎಂಬ ಶಬ್ದಕ್ಕರ್ಥ. ಇಂತು ಅಂಗ ಲಿಂಗವ ಧರಿಸಿಕೊಂಡು ಕರ್ಣದೊಳಗೆ ಮಹಾನುಭಾವಿಗಳ ಉಪದೇಶಾಮೃತವ ಹಡೆದು ಮನದಲ್ಲಿ ಲಿಂಗರತಿ ಭಿಕ್ಷವನುಂಡು ಆತನು ಅಂಗಪ್ರಸಾದ ಪರಿಣಾಮದಲ್ಲಿ ಸುಖವನೈದಿಪ್ಪಾತನೇ ಅಚ್ಚ ಶರಣನೆಂಬುದೀಗ ಕಿವಿಯು ಸಕಲ ಪುರಾತನರ ಕಾರುಣ್ಯವೆನುತೆ ಮನದ ಭಿಕ್ಷವನುಂಡು ತನುಪರಿಣಾಮವನೈದಿಪ್ಪ ಘನ ಮಹಿಮರ ತೋರಾ ಎಂಬ ಶಬ್ದಕ್ಕರ್ಥ.

(೨) ಹಸಿವಿಲ್ಲದೆ ಉಣಬಲ್ಲಡೆ, ಉಪಾಧಿ ಇಲ್ಲವೆ ಬೇಡಬಲ್ಲಡೆ, ಅದು ಮರ್ಮ, ಅದು ಸಂಬಂಧ. ಗಮನವಿಲ್ಲದೆ ಸುಳಿಯ ಬಲ್ಲಡೆ, ನಿರ್ಗಮನಿಯಾಗಿದ ಬಲ್ಲಡೆ ಅದು ಮರ್ಮ, ಅದು ಸಂಬಂಧ. ಅವರ ನಡೆ ಪಾವನ, ಅವರ ನುಡಿ ತತ್ವ, ಅವರು ಜಗದಾರಾಧ್ಯರೆಂಬೆ ಕಾಣಾ ಗುಹೇಶ್ವರಾ.

(೩) ಸಮತೆ ಎಂಬ ಕಂಥೆಯ ತೊಟ್ಟು ಸುಬುದ್ಧಿ ಎಂಬ ಟೊಪ್ಪರ ವನಿಕ್ಕಿ ವಿಷಯವೆಂಬ ಹಾವುಗೆಯ ಮೆಟ್ಟಿ ತಮಂಧವೆಂಬ ಕುಳಿಯ ಬೀಳದೆ ವೈರಾಗ್ಯವೆಂಬ ಕೊರಡನೆಡಹದೆ ಮದವೆಂಬ ಚೇಳ ಮೆಟ್ಟದೆ ಗುಹೇಶ್ವರನ ಶರಣ ಬಂದೆನು ಭಕ್ತಿ ಭಿಕ್ಷವನಿಕ್ಕೈ ಸಂಗನ ಬಸವಣ್ಣ.

(೪) ಹೊನ್ನಿಂಗೆ ಬಂದಾತನಲ್ಲ. ಹೆಣ್ಣಿಂಗೆ ಬಂದಾತನಲ್ಲ. ಮಣ್ಣಿಂಗೆ ಬಂದಾತನಲ್ಲ. ಅಶನಕ್ಕೆ ಬಂದಾತನಲ್ಲ. ವೇಷಕ್ಕೆ ಬಂದಾತನಲ್ಲ. ಕೂಡಲ ಚೆನ್ನಸಂಗಮದೇವಯ್ಯ ಭಕ್ತಿಯ ಪಥವ ತೋರ ಬಂದನಯ್ಯ.

(೫) ಭಕುತಿಯಿಂದ ಮಾಡುವ ಭಕ್ತ ನಿರ್ಧನಿಕನಾದಡೆ ತನ್ನ ಕೈ ಧನವ ವೆಚ್ಚಿಸಿ ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡಿ ಅವರ ದಾಸೋಹಕ್ಕೆ ನಿಲಿಸಿ ತಾ ಕರ್ತನಾಗಿ ಬಂದು ಪರಿಣಾಮಿಸಬಲ್ಲಡೆ, ಜಂಗಮ. ಅಂತವರಿಗೆ ನಮೋ ನಮೋ ಎಂಬೆ. ಅಂತಲ್ಲದೆ ಮುನ್ನ ಮಾಡಿ, ಭೋ, ಎಂದು ದೂರಿ ಈಗ ಮಾಡಿರೇ, ಭೋ ಎಂದು ಜರಿದು ಝುಂಕಿಸಿ ಹೋಹವರ ಜಂಗಮವೆಂಬೆನೆ? ಎನ್ನೆನು. ಅದೇನು ಕಾರಣವೆಂದಡೆ, ಆತ ಸೂನೆಗಾರ, ಆತ ಘಾತುಕ, ಆತ ದೋಷಾರ್ಥಿ ಆತ ಭವಭಾರಿ ಕಾಣಾ ಕೂಡಲ ಚೆನ್ನಸಂಗಮದೇವ.

(೬) ಕಂಗಳ ಕರುಳ ಕೊಯ್ವವರ ಮನದ ತಿರುಳ ಹುರಿದ ವರ ಮಾತಿನ ಮೊದಲ ಬಲ್ಲವರನೆನಗೊಮ್ಮೆ ತೋರಾ ಗುಹೇಶ್ವರಾ.

(೭) ಲಿಂಗಾಭಿಮಾನಿಗೆ ಅಂಗಾಶ್ರಯವಿಲ್ಲ ನೋಡಾ! ಬಂದುದೇ ಪರಿಣಾಮ, ನಿಂದುದೇ ನಿವಾಸ. ಅದು ಇದು ಎಂಬುದಿಲ್ಲ ಕೂಡಲ ಚೆನ್ನಸಂಗ ನಿಮ್ಮ ಶರಣಂಗೆ.

ಇಂತು ಭಕ್ತಿಕಾರಣವಾಗಿ ಚರಿಸಿದ ಚರಲಿಂಗವು ಭಕ್ತನ ಚಿದಾತ್ಮನಲ್ಲಿ ಶ್ರೀಮತ್ಪರಾಪರ ನಿರ್ಗಮನಪಂಕ್ತಿಮರ್ಯಾದೆಯೆಂದಡೆ ಮುಂದೆ ಪರ ಜಂಗಮಸ್ಥಲವಾದುದು.

---

## ೯ ಪರಸ್ಥಲ.

(೧) ಪರತತ್ವ ಪರಮಜ್ಞಾನ ಪರಮಾರ್ಥ ಪರಾಪರ ವಾಙ್ಮನಾತೀತ ಶಬ್ದಗಂಭೀರ ಉಪಮಾತೀತ ಉನ್ನತ ಪರಶಿವ ಜ್ಞಾನಜ್ಯೋತಿ ಸುಜ್ಞಾನದ ಪ್ರಭೆಯ ಬೆಳಗಿನೊಳಗೆ ಸುಳಿದಾಡುವ ಪರಮಾನಂದ ಮಹಾಮಹಿಮೋನ್ನತ ಪರಶಿವಜ್ಞಾನಜ್ಯೋತಿ ಸುಜ್ಞಾನದ ಪ್ರಭೆಯು

ಬೆಳಗಿನೊಳಗೆ ಸುಳಿದಾಡುವ ಪರಮಾನಂದ ಮಹಾಮಹಿಮಂಗೆ ಶಿವ ಜ್ಞಾನವೇ ಶೃಂಗಾರ ಮಹಾಬೆಳಗೇ ವಿಭೂತಿ ಪಂಚಬ್ರಹ್ಮವೇ ದರ್ಶನ ಗಗನಸ್ಥಾನವೇ ಕಂಥೆ ಆಕಾಶವೇ ಚಪ್ಪರ ಅಜಾಂಡ ಬ್ರಹ್ಮಾಂಡವೇ ಕರ್ಣಕುಂಡಲ, ಆದಿ ಆಧಾರವೇ ಕಕ್ಷಪಾಳ, ಅನಾಹತವೇ ಒಡಿಯಾಣ ಅದ್ವೈತವೇ ಯೋಗವಟ್ಟಿಗೆ ಅಗಮ್ಯವೇ ಯೋಗಪಾವುಗೆ ಅಚಲಿತವೇ ಖಪ್ಪರ, ಅಪ್ರಮಾಣವೇ ಲಾಕುಳ, ಅವಿಚಾರವೇ ಸುಳುಹು ಅಕಲ್ಪಿ ತವೇ ಭಿಕ್ಷ, ಕೊಂಡುದೇ ಗಮನ, ನಿಂದುದೇ ನಿವಾಸ, ನಿಶ್ಚಿಂತವೆಂಬ ಮಠದಲ್ಲಿ ನಿರಾಕುಳವೆಂಬ ಸಿಂಹಾಸನವಿಕ್ಕಿ ಗಗನ ಗಂಭೀರದ ಬಾವಿ ಯೊಳಗೆ ಅಗೋಚರದ ಅಗ್ಘವಣಿಯ ತುಂಬಿ, ಮಹಾಘನಪ್ರಾಣ ಲಿಂಗಕ್ಕೆ ಮಂಗಳ ಬೆಳಗೇ ಮಜ್ಜನ ಬಿಂದ್ವಾಕಾಶವೇ ಗಂಧ, ಮಹದಾಕಾಶವೇ ಅಕ್ಷತೆ, ಪರಾಪರವೇ ಪತ್ರೆ ಪುಷ್ಪ, ನಿರ್ಮಳವೇ ಲಿಂಗಾರ್ಚನೆ, ಮಹಾ ಪ್ರಕಾಶವೇ ಪೂಜೆ, ನಿತ್ಯನಿರಂಜನವೇ ಧೂಪದೀಪಾರತಿ, ಸಕಲ ಭುವ ನಂಗಳೇ ಸುಯಿಧಾನ, ಆಚಾರವೇ ಅರ್ಪಿತ ಮಹಾತತ್ವವೇ ಸಿತಾಳ ಅಖಂಡಿತವೇ ಅಡಿಕೆ ಏಕೋಭಾವವೇ ಎಲೆ, ಶುದ್ಧ ಶಿವಾಚಾರವೇ ಸುಣ್ಣ, ವಿವೇಕ ವಿಚಾರದಿಂದ ವೀಳೆಯುವನವಧರಿಸುವುದು, ಮಹಾ ಲಿಂಗದ ಪರಿಣಾಮವೇ ಪ್ರಸಾದ, ಸಮ್ಯಜ್ಞಾನವೇ ಸಂತೋಷ, ಸಹಜ ನಿರಾಭಾರಿಗಳ ಗುಣಮೋಕದಿಂದ ನಿಸ್ಸೀಮುದ ನಿರಾಭಾರವೇ ನಿಭ್ರಾಂತಿ. ನರು ಗಂಧವಲ್ಲಿ ನಿರಾಳಪನವೇ ಅನುಮತವಾಗಿ, ನಿಶ್ಶಬ್ದವೇ ಅನು ಭಾವ, ಅನುಪಮ ನಿರ್ಮ್ಯಾಸ್ಯವೇ ವಿಶ್ರಾಮ, ನಿರಾಕಾರವೇ ಗಮನ ನಿರಂತರವೇ ಪಾತಾಳ, ಊರ್ಧ್ವಪವನ ಸಂಯೋಗ, ತ್ರಿಭುವನಗಿರಿ ಎಂಬ ಪರ್ವತವನೇರಿ ಕಾಯುವೆಂಬ ಕದಳಿಯು ಹೊಕ್ಕು ಸುಳಿದಾಡುವ ಪರ ಮಾನಂದ ಮಹಾಮುಕಿಮಂಗೆ ಇಹಲೋಕವೇನು? ಪರಲೋಕವೇನು? ಅಲ್ಲಿಂದತ್ತತ್ತ, ಅಗಮ್ಯ, ನಿರಾಳ, ಪರಮಜ್ಞಾನ ಸಿದ್ಧಿ. ಮಹಾಲಿಂಗವ ಬೆಳಗು, ಗುಹೇಶ್ವರಾ, ನಿಮ್ಮ ನಿಜವನರಿದ ಮಹಾಮಹಿಮಂಗೆ ನಮೋ ನಮೋ ಎನುತಿರ್ದೆನು.

(೨) ಕುಲವಳಿದು, ಛಲವಳಿದು, ಮದವಳಿದು, ಮತ್ಸರವಳಿದು ಆತ್ಮತೇಜವಳಿದು, ಸರ್ವಾಹಂಕಾರವಳಿದು, ನಿಜವುಳಿದು, ಲಿಂಗಜಂಗಮ ವೆಂಬ ಶಬ್ದವಿಡಿದು ಸಾಧ್ಯವಾಯಿತ್ತು ನೋಡಾ. ತಾನಳಿದು, ತಾನು ಳಿದು, ಸಹಜಪದವಿಯಲ್ಲಿ ಕೂಡಲ ಚನ್ನಸಂಗನಲ್ಲಿ ತಾನು ತಾನಾದ.

(೩) ಅಂಗಸಂಬಂಧ, ಲಿಂಗಸಂಬಂಧವಾದ ಬಳಿಕ ಲಿಂಗೋಪ ಜೀವಿಯಾಗಿರಬೇಕು. ಪ್ರಾಣಸಂಬಂಧ ಲಿಂಗವಾದ ಬಳಿಕ ಲಿಂಗೋಪ ಜೀವಿಯಾಗಿರಬೇಕು. ಇದಾವ ಸಂಬಂಧವಿಲ್ಲದಾಶ್ರಯದ ಗುಣವಿಡಿದು ಲಾಂಛನಧಾರಿಯಾಗಿರ್ದೆನಯ್ಯಾ. ಗ್ರಂಥ। ಲಾಂಛನಂ ದುರ್ಲಭಂ ಚೈವ। ಸ್ವಾನುಭಾವಮತಃ ಪರಂ ದುರ್ಲಭಂ ಶಿವತತ್ವನಾಂ। ಪ್ರಾಣಲಿಂಗಮತಃ ಪರಂ। ಎಂದುದಾಗಿ ಆಶ್ರಯದ ಗುಣವಿಲ್ಲ. ನಿರಾಶ್ರಯದ ಗುಣವಿಡಿದು ಲಿಂಗಸಾರಾಯ ಶರಣಲಿಂಗ. ಇದು ಕಾರಣ ಕೂಡಲ ಚನ್ನಸಂಗಯ್ಯಾ ಮಹದಲನುಭಾವಿಯಾದ ಶರಣ.

(೪) ಕಾಲಿಲ್ಲದ ಗಮನಿ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ, ಭಾವವೇ ಕರ್ಪೂರವಾಗಿ, ಪರಮದೇಹಿ ಎಂದು ಜೀಡುವ ಪರ ಮನ ತೋರಾ ಗುಹೇಶ್ವರಾ.

(೫) ರೂಪವೆಂತೆಂಬನಯ್ಯಾ ರೂಪಿಸಲಿಲ್ಲಾಗಿ? ಭಾವವೆಂತೆಂಬೆ ನಯ್ಯಾ ಭಾವಿಸಲಿಲ್ಲಾಗಿ? ಜ್ಞಾನವೆಂತೆಂಬೆನಯ್ಯಾ, ಉಪಮಿಸಲಿಲ್ಲಾಗಿ? ಸಹಜಲಿಂಗದ ಬೆಳಗನಂಗವಿಸುವ ಕೂಡಲ ಚನ್ನಸಂಗನಲ್ಲಿ ಪ್ರಭು ವಿನ ನಿಲವು ವಿಪರೀತ.

(೬) ನಿಜವನರಿದ ನಿಶ್ಚಿಂತನೇ, ಮರಣವ ಗೆಲಿದ ಮಹಂತನೇ, ಘನವ ಕಂಡ ಮಹಿಮನೇ, ಪರವನೊಳಕೊಂಡ ಪರಿಣಾಮಿಯೇ, ಬಯ ಲಲೊದಗಿದ ಭರಿತನೇ, ಗುಹೇಶ್ವರ ಲಿಂಗನಿರಾಳವನೊಳಕೊಂಡ ಸಹಜವೇ.

ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧ ಸ್ಥಲಂಗಳೇಕವಾದ ಆಚಾರಲಿಂಗವು ವೀರಮಹೇಶ್ವರನ ಗುರುಲಿಂಗವು ಸತ್‌ಕ್ರಿಯೆಯಲ್ಲಿ ಆಗಮ ಸ್ವರೂಪವನೈದಿದ ಭೇದವೆಂತೆಂದಡೆ ಮುಂದೆ ಕ್ರಿಯಾ ಗಮಸ್ಥಲವಾದುದು.

# ಗುರುಲಿಂಗಸ್ಥಲ.

ವಿವರಣೆಃ-- ೪೪ ಅಂಗ ಸ್ಥಲಗಳಲ್ಲಿ ಮನುಷ್ಯನು ಮಾಡತಕ್ಕ ಮತ್ತು ಮಾಡಬಾರದ ಕ್ರಿಯೆಗಳು ಹೇಳಲ್ಪಟ್ಟಿರುತ್ತವೆ. ಅವುಗಳಲ್ಲಿ ಮಾಡ ತಕ್ಕ ಕ್ರಿಯೆಗಳಿಂದ ಮನುಷ್ಯನಲ್ಲಿ ಪ್ರಗತಿಯುತ್ಪನ್ನವಾಗುತ್ತ ಹೋಗು ತ್ತದೆ. ಆವುಗಳ ಮೂಲಕ ಅವನಲ್ಲಿ ಲಿಂಗ ಚೈತನ್ಯವು ಒಡಮೂಡ ಹತ್ತುವದು. ಈ ಚೈತನ್ಯವು ಆವನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳನ್ನು ಕ್ರಮೇಣ ವ್ಯಾಪಿಸುವದು. ಸ್ಥೂಲ ಶರೀರದಲ್ಲಿಯು ಈ ಲಿಂಗದ ವ್ಯಾಪಿ ಸುವಿಕೆಯು ಆಚಾರಲಿಂಗ ಮತ್ತು ಗುರುಲಿಂಗ ಇವುಗಳಿಗೆ ಸಂಬಂಧಿಸಿ ಉಂಟಾಗುತ್ತದೆ. ಇವುಗಳ ರೀತಿಯನ್ನು ಭಕ್ತನು ಅರಿತುಕೊಳ್ಳಬೇಕು.

ಮೊದಲನೆಯದಾದ ಆಚಾರಲಿಂಗ ಸ್ಥಲದಲ್ಲಿ ಹಿಂದೆ ಹೇಳಿದ ಮೇರೆಗೆ ಗುರುವಿನಿಂದ ದೀಕ್ಷೆಯನ್ನು ಹೊಂದಿ ಆದರ ಮೂಲಕ ಧಾರ್ಮಿಕ ಕ್ರಿಯೆಗಳನ್ನು ಮಾಡುತ್ತ ಹೋದಲ್ಲಿ ಸ್ಥೂಲ, ಸೂಕ್ಷ್ಮ ಕಾರಣಗಳಲ್ಲಿ ಲೈಂಗಿಕ ಶಕ್ತಿಯು ವೃದ್ಧಿಯಾಗುತ್ತ ಹೋಗುವದು. ಇದು ಅನುಕ್ರಮ ವಾಗಿ ಗುರು ಲಿಂಗ ಜಂಗಮವನ್ನು ಒಳಕೊಳ್ಳುವದೇ ಇರುತ್ತದೆ. ಗುರು ವಿನಲ್ಲಿ ದೀಕ್ಷಾ, ಶಿಕ್ಷಾ, ಅನುಭಾವಗಳೂ, ಲಿಂಗದಲ್ಲಿ ಇಷ್ಟ ಪ್ರಾಣ ಭಾವಗಳೂ ಜಂಗಮದಲ್ಲಿ ಸ್ವಯ ಚರ ಪರಗಳೂ ಇದ್ದು ಇವುಗಳನ್ನು ಆಯಾ ಶರೀರಗಳ ಕ್ರಿಯೆಗಳಿಗೆ ಸಂಬಂಧಪಡಿಸುತ್ತ ಅವುಗಳನ್ನು ಆಚರಿ ಸುತ್ತ ಹೋದಲ್ಲಿ ಆಚಾರಲಿಂಗದ ಉತ್ಕೃಷ್ಟತೆಯು ಸಂಭವಿಸುತ್ತದೆ.

ಇನ್ನು ಗುರುಲಿಂಗ ಸ್ಥಲದಲ್ಲಿ ಆಚಾರಲಿಂಗ ಸ್ಥಲದಲ್ಲಿ ಆವಿ ರ್ಭವಿಸಿದ ಪರಿಣಾಮಗಳನ್ನು ನಿಷ್ಠೆಯ ಮೂಲಕ ಹೆಚ್ಚಿಗೆ ದೃಢ ಪಡಿಸುವದಿರುತ್ತದೆಂದು ವಚನಕಾರರಿಂದ ಹೇಳಲ್ಪಡುತ್ತದೆ. ಈ ಸ್ಥಲ ದಲ್ಲಿ ಆಗಮಲಿಂಗ, ಕಾಯಲಿಂಗ, ಮತ್ತು ಆಚಾರಲಿಂಗ ಎಂಬ ಮುಖ್ಯ ವಿಭೇದಗಳಿವೆ. ಈ ಪ್ರತಿಯೊಂದರಲ್ಲಿ ಪುನಃ ಮೂರು ಮೂರು ಭಾಗ ಗಳಾಗಿ ಒಟ್ಟು ಒಂಬತ್ತು ವಿಭಾಗಗಳಾಗುವವು. ಇವೆಲ್ಲವೂ ಸ್ಥೂಲ ಶರೀರಕ್ಕೆ ಸಂಬಂಧಪಟ್ಟು ಅದನ್ನು ಉತ್ಕೃಷ್ಟ ಸ್ಥಿತಿಗೆ ತರುತ್ತವೆ. ಇವು ಗಳ ವಿವೇಚನೆಯು ಮುಂದೆ ಹೇಳಲ್ಪಟ್ಟಿರುವದು. ಅದು ಹೇಗೆಂದರೆಃ—

**ಆಗಮಲಿಂಗಃ—** ಆಗಮಲಿಂಗದಲ್ಲಿ ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಎಂಬ ಮೂರು ವಿಭಾಗಗಳಿರುತ್ತವೆ. ಸತ್ ಕ್ರಿಯೆಯೇ

ಕ್ರಿಯಾಗಮವೆಂತಲೂ, ಆ ಸತ್ ಕ್ರಿಯೆಯಲ್ಲಿ ನಿಷ್ಠೆ ನಿಚ್ಚೈಸಿದರೆ ಭಾವಾಗಮವೆಂತಲೂ, ಮಹಾಜ್ಞಾನ ಚಾರಿತ್ರ್ಯದೊಡಗೂಡಿದರೆ ಜ್ಞಾನಾಗಮವೆಂತಲೂ ಇಲ್ಲಿ ಹೇಳಲ್ಪಟ್ಟಿದೆ. ಪೂರ್ಣ ಶಿವಾಚಾರವೇ ಕ್ರಿಯಾಗಮವು. ಇದರಲ್ಲಿ ಅಂಗದಿಚ್ಛೆ ಏನೂ ಇರಕೂಡದು. ಸತ್ಕ್ರಿಯೆಯಲ್ಲಿ ಪೂರ್ಣವಾಗಿ ಮಗ್ನನಾಗಿರುವದೇ ಭಾವಾಗಮವು. ಇದು ಭಾವನಲ್ಲಿ ದೃಢಪಟ್ಟಿರುತ್ತದೆ. ಅದಕ್ಕೂ ಮುಂದೆ ಉಚ್ಚ ಸ್ಥಿತಿಗೆ ಹೋಗಲು ಕ್ರಿಯೆ, ಜ್ಞಾನವೆಂಬ ಭೇದವಡಗಿ ಸಾಮರಸ್ಯ ಸ್ವರೂಪು ಉಂಟಾಗುತ್ತದೆ. ಅದು ಜ್ಞಾನಾಗಮವೆನಿಸುತ್ತದೆ. ಈ ಮೂರೂ ಲಿಂಗಗಳು ಉನ್ನತ ಸ್ಥಿತಿಗೆಬಂದು ಏಕ ರೂಪವಾದಲ್ಲಿ ಅದು ಆಗಮಲಿಂಗವೆನಿಸುವದು.

**ಕಾಯಲಿಂಗ:—** ಸ್ಥೂಲವು ಲಿಂಗದಲ್ಲಿ ಬೆರೆದರೆ ಸಕಾಯವೆನಿಸುವದು. ಕಾಯಭಾವವನ್ನು ಪೂರ್ಣವಾಗಿ ಅಳಿದು ಬಿಡುವದೇ ಅಕಾಯವೆನಿಸುವದು. ಹೀಗೆ ಕಾಯಭಾವವನ್ನು ಅಳಿದು ದೇಹವು ನಿರ್ದೇಹ ಸ್ಥಿತಿಯನ್ನು ಹೊಂದಿದರೆ, ಅದು ಪರವೆನಿಸುವದು. ಈ ಪರದಲ್ಲಿ ಮಹೇಶ್ವರನು ಸಕಾಯನೂ ಅಲ್ಲ, ಅಕಾಯನೂ ಅಲ್ಲ. ಅವನು ಸ್ವತಂತ್ರನು. ಸಕಳ ನಿಷ್ಕಳಾತೀತನು.

**ಆಚಾರಲಿಂಗ: —** ಇದು ಸದ್ ವೃತ್ತಿಯ ದ್ಯೋತಕವಾಗಿದೆ. ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಇವು ಈ ಆಚಾರಲಿಂಗದ ಮೂರು ವಿಭಾಗಗಳಾಗಿವೆ. ಸದ್ಧರ್ಮದಿಂದ ನಡೆಯುವದೇ ಧರ್ಮಾಚಾರವು. ಈ ವರ್ತನೆಯು ಮನಸ್ಸಿನಲ್ಲಿ ಮೂಡಿಕೊಳ್ಳುವದೇ ಭಾವಾಚಾರವು. ಆಗ ಸದ್ಧರ್ಮದ ವಿಷಯವಾಗಿ ಮನಸ್ಸಿನಲ್ಲಿ ಏಕಾಗ್ರತೆಯೂ ದೃಢಚಿತ್ತವೂ ಇರಬೇಕು. ತನುಗುಣಗಳಳಿದು ಮಹಾ ಜ್ಞಾನದಲ್ಲಿರುವದೇ ಜ್ಞಾನಾಚಾರವು. ಆಗ ಕ್ರಿಯೆ ಮತ್ತು ಜ್ಞಾನ ಇವುಗಳಲ್ಲಿಯ ಭಿನ್ನತೆಗಳು ಅಡಿಗಿ ಹೋಗಿ ಭಕ್ತನು ಸದಾ ಸುಖದಲ್ಲಿರುವನು. ಈ ಜ್ಞಾನಾಚಾರವು ಮಹೇಶ್ವರನ ಪೂರ್ಣ ಸ್ಥಿತಿಯ ದ್ಯೋತಕವಾಗಿದೆ.

ಈ ಪ್ರಕಾರ ಆಗಮ ಲಿಂಗದ ಕ್ರಿಯೆಗಳ ಮೂಲಕ ಕ್ರಿಯೆಗಳು ಉತ್ಕೃಷ್ಟ ಸ್ಥಿತಿಯನ್ನು ಹೊಂದುವವು. ಇದರಿಂದ ಕಾಯದಲ್ಲಿ ಲಿಂಗವು ಪ್ರಕಟವಾಗಿ, ಕಾಯ ಗುಣಗಳು ನಷ್ಟವಾಗಿ, ಸಂಸಾರ

ರಹಿತವಾಗುತ್ತದೆ. ಅದು ಕಾಯವೂ ಅಲ್ಲ, ಅಕಾಯವೂ ಅಲ್ಲ. ಇದು ಕಾಯಲಿಂಗವೆನಿಸಿಕೊಳ್ಳುತ್ತದೆ. ಆಗ ಅವನ ಕ್ರಿಯೆಗಳು ಪರಿಶುದ್ಧವಾಗುತ್ತವೆ. ಅವೇ ಧರ್ಮಾಚಾರಗಳು. ಅವು ಮನದಲ್ಲಿ ಎಡೆಗೊಂಡು ಭಾವದಲ್ಲಿ ಸೇರಿದ್ದಾದರೆ ಭಾವಾಚಾರಗಳು. ಅವು ಮುಂದೆ ಮಹಾಜ್ಞಾನದೊಡನೆ ವ್ಯವಹರಿಸಿದ್ದಾದರೆ, ಜ್ಞಾನಾಚಾರಗಳು. ಇವೆಲ್ಲವೂ ಗುರುಲಿಂಗದಲ್ಲಿ ಪ್ರಾಪ್ತವಾಗುವ ಲಿಂಗ ಸ್ಥಿತಿಯನ್ನು ಸೂಚಿಸುತ್ತವೆ. ಈ ಪ್ರಕಾರ ಸ್ಥೂಲ ಶರೀರಕ್ಕೆ ಸಂಬಂಧಿಸಿದ ಆಚಾರಲಿಂಗ ಮತ್ತು ಗುರುಲಿಂಗಗಳ ಪ್ರಗತಿಯನ್ನು ವಚನಕಾರರು ವರ್ಣಿಸುತ್ತಾರೆ.

---

## ೧. ಕ್ರಿಯಾಗಮಸ್ಥಲ.

(೧) ಸಂಜೆಯ ಮಂಜಿನ ಕಪ್ಪು ಅಂಜಿದಡೆ ಶಂಕೆ. ಅದೃಶ್ಯವಾಗಿ ನಿಂದಿತ್ತು. ತನ್ನ ಭಾವದ ನಟಣೆ ನಡೆವನ್ನಕ್ಕ ನಡೆಯಿತ್ತು. ಅದು ನಿಂದಲ್ಲಿಯೇ ನಿಂದಿತ್ತು. ಅದರಂತುವನರಿದಡೆ, ಹಿಂದೆ ಮುಂದೆ ಕೂಡಲ ಸಂಗಮದೇವರ ನಿಲವು ತಾನೇ.

ಟೀಕು:— ಹಗಲಿನ ಇರುಳಿನ ಸಂಧಿ ಸಂಜೆ ಎನಿಸಿದಂತೆ ಆತ್ಮನ ಅರಿವು ದೇಹದ ಮರವೆ ಎರಡರ ಸಂಗ ಸಂಧಿಯಲ್ಲಿ ಮನವೆಂಬ ಅಜ್ಞಾನ ಹುಟ್ಟಿತ್ತೆಂಬುದೀಗ ಸಂಜೆಯ ಮಂಜಿನ ಕಪ್ಪು ಎಂಬ ಶಬ್ದಾರ್ಥ. ಅಂತಪ್ಪ ಮನದಿಂದ ದೇಹೋಹಂಮೆಂದು ಭವ ಭೀತಿಯ ಶಂಕೆದೋರಿ ದೇಹ ಶಂಕಾರೂಪವಾಗಿ ಜೀವವೆನಿಸಿ ದೃಶ್ಯವಾದನೆಂಬುದೀಗ ಅಂಜಿದಡೆ ಶಂಕೆ ತದ್ರೂಪವಾಗಿ ನಿಂದಿತ್ತೆಂಬ ಶಬ್ದಾರ್ಥ. ಅಂತು ಆತ್ಮನ ಭಾವ ದೇಹ ಭ್ರಾಂತಿಯನ್ನೈದಿ ಚರಿಸುವನ್ನಕ್ಕ ದೇಹಿಯಾಗಿ ಭವದಲ್ಲಿ ಬರುತ್ತಿರ್ದನೆಂಬುದೀಗ ತನ್ನ ಭಾವದ ನಟಣೆ ನಡೆವನ್ನಕ್ಕ ನಡೆಯಿತ್ತು ಎಂಬ ಶಬ್ದಾರ್ಥ. ಇಂತು ದೇಹಿಯಾಗಿರ್ದಾತ್ಮಂಗೆ ಜ್ಞಾನೋದಯವಾಗಲೊಡನೆ ಆ ದೇಹೋಹಂಮೆಂಬ ಭವದ ಭ್ರಾಂತಿಯಳಿಯಿತ್ತು. ಆ ದೇಹದ ಭ್ರಾಂತಿಯಳಿದಲ್ಲಿ ಈ ದೇಹ ತೋರಿಕೆ ಹುಸಿ ನಿಂದು ಹೋಯಿತ್ತು. ಅಂತು ತನ್ನಲ್ಲಿ ತೋರಿದ

ಹುಸಿವಾಸನೆಯುಡಗಿಸುವ ಕ್ರಿಯಾಭೇದವನರಿದಡೆ ಹಿಂದಣ ಜನನ ಮರಣವಿಲ್ಲ, ಮುಂದೆ ಶಿವ ತಾನೇ ಎಂಬುದೀಗ ಅದು ನಿಂದಲ್ಲಿಯೇ ನಿಂದಿತ್ತು, ಅದರಂತುವನರಿದಡೆ ಹಿಂದೆ ಹುಸಿ ಮುಂದೆ ಕೂಡಲ ಸಂಗಮದೇವರ ನಿಲವು ತಾನೇ ಎಂಬ ಶಬ್ದಕ್ಕರ್ಥ.

(೨) ಶಿವಾಚಾರವೆಂಬುದೊಂದು ಬಾಳಬಾಯ ಧಾರೆ. ಲಿಂಗ ಮೆಚ್ಚಬೇಕು. ಜಂಗಮ ಮೆಚ್ಚಬೇಕು. ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು. ಬೇರಾದರೆ ಮೆಚ್ಚುವನೇ ನಮ್ಮ ಕೂಡಲ ಸಂಗಮದೇವ?

(೩) ಭಕ್ತಂಗಾಗಲಿ, ಜಂಗಮಕ್ಕಾಗಲಿ, ಸದಾಚಾರವೇ ಬೇಕು. ಸದಾಚಾರವುಳ್ಳವರಿಗೆ ಅನಾಯತ ಹೊದ್ದಲಾಗದು. ಅನಾಯತವೆಂಬುದೇ ಅನುಸರಣೆ. ಅನುಸರಣೆ ಎಂಬುದೇ ಅಂಗದಿಚ್ಛೆ. ಅಂಗದಿಚ್ಛೆ ಎಂಬುದೇ ಅನಾಚಾರ. ಅನಾಚಾರವೆಂಬುದೇ ಪಂಚ ಮಹಾಪಾತಕ. ಆ ಪಂಚ ಮಹಾಪಾತಕವೆಂಬುದೇ ನರಕ. ಇದು ಕಾರಣ ಕೂಡಲ ಚನ್ನ ಸಂಗಯ್ಯನಲ್ಲಿ ಸದಾಚಾರವುಳ್ಳವರು ಅನುಸರಿಸಿ ನಡೆದರೆ ನಾಯಕ ನರಕ.

(೪) ಪ್ರಾಣಲಿಂಗ ಸಂಬಂಧಿಯಾದ ಲಿಂಗವಂತನು ಏಕಭುಕ್ತೋಪವಾಸವ ಮಾಡಲಾಗದು. ಅದೇನು ಕಾರಣವೆಂದಡೆ, ದೇವತಾರೋಗಣೆ ತಪ್ಪುದು. ಅಷ್ಟ ವಿಧಾರ್ಚನೆ ಷೋಡಶೋಪಚಾರ ಕ್ರಿ ತಪ್ಪುದು. ಆಗಮ ಮಾರ್ಗ ತಪ್ಪುದು. ಶ್ರೀಗುರುವಾಜ್ಞೆ ತಪ್ಪುದು. ತನಗೆ ಮುಂದೆ ಪ್ರಸಾದವಿಲ್ಲ. ಪ್ರಸಾದವಿಲ್ಲಾಗಿ ಮುಕ್ತಿ ಇಲ್ಲ. ಮುಕ್ತಿ ಇಲ್ಲವಾಗಿ ದ್ರೋಹಕಾರಿಯಪ್ಪನು ಕೇಳಿರಣ್ಣಾ! ಇದು ಕಾರಣ ನಿತ್ಯನೇಮಕ್ಕೆ ಪಂಚಪರ್ವ ತಿಥಿಗಳಲ್ಲಿ ಆವಾವ ದಿನದಲ್ಲಿಯೂ ಎಂದೆಂದು ಅಷ್ಟವಿಧಾರ್ಚನೆ ಷೋಡಶೋಪಚಾರವೇ ಕರ್ತವ್ಯ ನೋಡಾ! ದೇವತಾರೋಗಣೆಯ ಮಾಡಿಸಿ ಪ್ರಸನ್ನತ್ವವ ಪಡೆದು ಆ ಪ್ರಸಾದವ ಧರಿಸಿ ಮುಕ್ತರಪ್ಪುದಯ್ಯಾ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

(೫) ಲಿಂಗವಂತನು ಲಿಂಗವಂತರೊಡನೆ ಸತ್ಯವ ನುಡಿವುದು. ಸಹಜದಲ್ಲಿ ನಡೆವುದು. ಪ್ರೇಮದಲ್ಲಿ ಸಂಗವ ಮಾಡುವುದು. ಈ ಕ್ರಿ

ಇಹಪರ ಸಿದ್ಧಿ, ಲಿಂಗವನರಿವುದಕ್ಕೆ ದೃಷ್ಟ. ಲಿಂಗಾರ್ಚನೆಯು ಕ್ರಿ ಲಿಂಗ ಒಲಿದುದಕ್ಕೆ ಚಿನ್ಹ! ಇದು ಸತ್ಯ. ಲಿಂಗವಂತನು ಲಿಂಗವಂತರೊಡನೆ ಹೇಮದಾಸೆಗೆ ಪ್ರೇಮಗುಂದಿ ನಡೆಯಲಾಗದು. ಅಸತ್ಯವ ನುಡಿಯಲಾಗದು. ಕ್ರೋಧಿಸಿ ನುಡಿಯಲಾಗದು. ವೇದ ಶಾಸ್ತ್ರಾಗಮ ಪುರಾಣ ಪುರಾತನರ ವಚನ, ಪುರಾತನರ ಚಾರಿತ್ರ್ಯವನರಿಯದ ಆದಿ ಮಧ್ಯ ಪರಿಪಕ್ವತೆಯನರಿಯದೆ ತರ್ಕಿಸಿ ನುಡಿಯಲಾಗದು. ದುಶ್ಚಾರಿತ್ರದಲ್ಲಿ ವರ್ತಿಸಲಾಗದು. ಅಜ್ಞಾನ ಕ್ರಿಯೆ ವರ್ತಿಸಲು, ಇಹ ಪರವಿಲ್ಲ. ಲಿಂಗವನರಿಯಬಾರದು. ಲಿಂಗವಂತರನೆಂತು ಅರಿಯಬಾರದು. ಅರಿದವಂಗೆ ಪೂಜಿಸಲೆಂತುಬಾರದು. ಪೂಜೆ ಇಲ್ಲದವಂಗೆ ಭಕ್ತಿ ಎಂತಹುದು? ಇಲ್ಲದವಂಗೆ ಪ್ರಸಾದವೆಂತಹುದು? ಪ್ರಸಾದವಿಲ್ಲದವಂಗೆ ಮುಕ್ತಿ ಇಲ್ಲ. ಇದು ಸತ್ಯ. ಇದನರಿತು ಲಿಂಗವಂತರಲ್ಲಿ ಸತ್ಯ ಸಂಭಾಷಣೆ ಸದ್ಭಕ್ತಿ ಯೋಗವಾದಡೆ, ಕೇವಲ ಮುಕ್ತಿ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

ಇಂತು ಕ್ರಿಯಾಗಮ ಸ್ವರೂಪವನೈದಿದ ಲಿಂಗವು ವೀರಮಾಹೇಶ್ವರನ ಅಂಗದೊಳಗೆ ನಿಷ್ಠಾ ಸ್ವರೂಪವನೈದಿದ ಭೇದವೆಂತಿರ್ದುದೆಂಬೊಡೆ ಮುಂದೆ ಭಾವಾಗಮ ಸ್ಥಲವಾದುದು.

---

## ೨. ಭಾವಾಗಮಸ್ಥಲ.

(೧) ಸುತ್ತಿಸುತ್ತಿ ಬಂದಡಿಲ್ಲ. ಲಕ್ಷ ಗಂಗೆಯ ಮಿಂದಡಿಲ್ಲ. ತುಟ್ಟತುದಿಯ ಮೇರು ಗಿರಿಯ ಮುಟ್ಟಿ ಕೂಗಿದಡಿಲ್ಲ. ನಿತ್ಯ ನೇಮದಿಂದ ತನುವ ಮುಟ್ಟಿಕೊಂಡಡಿಲ್ಲ. ನಿಚ್ಚಕ್ಕೆ ನೆನೆವ ಮನವನಂದಂದಿಗೆ ಅತ್ತಲಿತ್ತ ಹರಿಯಲಿಯ್ಯದೆ ಚಿತ್ತದಲ್ಲಿ ನಿಲಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಲಿಂಗವು.

(೨) ಸೆಜ್ಜೆಯುಸ್ಫುರಿಸಿ ಶಿವಲಿಂಗ ಕರಸ್ಥಲಕ್ಕೆ ಬರೆ, ಪ್ರಜ್ವಲಿಸಿ ತೊಳಗಿ ಬೆಳಗುತಿಹ ಕಾಂತಿಯಲ್ಲಿ ಜಜ್ಝರಿಸಿ ತನು ಮನ ದೃಷ್ಟಿ ನಟ್ಟು ಲಿಂಗದಲ್ಲಿ ಜಜ್ಝರಿಸಿ ಶಿವ ಸುಖದೊಳಗೋಲಾಡುತ್ತ ಸಜ್ಜನ ಸದ್ಭಕ್ತಿ ರತಿಯಾತನ ಕೂಡಾಡಿ ಲಜ್ಜೆಗೆಟ್ಟು ನಾ ನಿಮ್ಮ ನೆರೆವೆ ಚನ್ನಮಲ್ಲಿಕಾರ್ಜುನ.

(೩) ಕಂಗಳ ನೋಟವು ಹೃದಯದ ಜ್ಞಾನ ಮನದಲ್ಲಿ ತಾ ಮಾತನಾಡುತಿರ್ದೆನಯ್ಯಾ! ಜೇನ ಮಳೆಗಳು ಕರೆದವು. ಅಮೃತದ ಕಳೆಗಳು ಸುರಿದವು. ಕೂಡಲ ಚನ್ನಸಂಗನೆಂಬ ರಸ ಸಾಗರದೊಳಗೋಲಾಡುತಿರ್ದೆನಯ್ಯಾ.

ಇಂತು ನಿಷ್ಠೆ ನಿಬ್ಬೆರಗೆನಿಸಿದ ವೀರಮಾಹೇಶ್ವರನ ಭಾವ ಸದ್ಭಾವ ಸನ್ನಿಹಿತವಾದ ಲಿಂಗದ ಮಹಾಜ್ಞಾನ ಚಾರಿತ್ರ್ಯವೆಂತಿರ್ದುದೆಂದಡೆ ಮುಂದೆ ಜ್ಞಾನಾಗಮ ಸ್ಥಲವಾದುದು.

---

## ೩. ಜ್ಞಾನಾಗಮಸ್ಥಲ

(೧) ದೇವಪ್ರಭೆಯೊಳಗಿಹರಲ್ಲದೆ ದೇವ ಗಹನವ ಮಾಡಬಾರದಾರಿಗೆಯೂ. ದೇವ ಸಕೀಲದೊಳಗೆ ಬೆಳೆಯ ಬಹುದಲ್ಲದೆ ದೇವ ನಷ್ಟದೊಳಗೆ ಉತ್ಪತ್ಯವಾಗಬಾರದಾರಿಗೆಯೂ. ಉತ್ಪತ್ತಿಯ ಗತಿಯನಾರೋಗಣೆಯ ಮಾಡಬಾರದಾರಿಗೆಯೂ. ಚರಾಚರವೆಲ್ಲವು ಈ ಪರಿಯಲ್ಲಿ ಸಂಭ್ರಮಿಸುತಿರ್ದುದಲ್ಲಾ! ಇದುಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಇಷ್ಟ ಭಾವವಳಿದಡೆ ಲಿಂಗೈಕ್ಯವು.

ಟೀಕು:— ಅಖಂಡ ಚಿತ್ಪ್ರಭಾಲಿಂಗದೊಳಗೆ ಸಕಲ ಜೀವರು ಇಪ್ಪರು. ಅಂತಿರ್ದ ಚಿದ್ಘನ ಲಿಂಗವು ತಮ್ಮ ನಿಜವೆಂದರಿದು ತಮ್ಮನಾ ಚಿದ್ಘನ ಲಿಂಗವ ಮಾಡಬಾರದಾರಿಗೆಯೂ ಎಂಬುದೀಗ ದೇವಪ್ರಭೆಯೊಳಗಿಹರಲ್ಲದೆ ದೇವ ಗಹನವ ಮಾಡಬಾರದಾರಿಗೆಯೂ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಘನದ ಸಕೀಲ ಮಾತ್ರವಾಗಿ ಕೃತಜ್ಞಾನಂಗಳಿಂದ ಅರಿದು ಧ್ಯಾನಿಸಿ ಪೂಜಿಸಿ ಫಲಪದಂಗಳ ಸುಖದ ಬೆಳಸು ಬೆಳೆಯಬಹುದೆಂಬುದೀಗ ದೇವ ಸಕೀಲದೊಳಗೆ ಬೆಳೆಯಬಹುದಲ್ಲದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿತ್‌ಪ್ರಭಾ ಲಿಂಗವು ತನ್ನಾತ್ಮಾಂತರ್ಗತವಾಗಿರ್ದುದನರಿದು ಗುರು ಮುಖದಿಂದ ಉತ್ಪತ್ಯವ ಮಾಡಿ ಇಷ್ಟ, ಪ್ರಾಣ, ಭಾವಲಿಂಗವಾಗಿ ಮೂರ್ತಿಗೊಳಿಸಿ ಸರ್ವಾಂಗವನರ್ಪಿಸಿ ಅಂಗವೆಲ್ಲ ಲಿಂಗವೆಯಾಗಿ ಲಿಂಗದುತ್ಪತ್ಯವಾರಿಗೆಯೂ ಆಗದೆಂಬುದೀಗ ದೇವ

ನಷ್ಟದೊಳಗೆ ಉತ್ಪತ್ತ್ಯವಾಗಬಾರದಾರಿಗೆಯೂ ಎಂಬ ಶಬ್ದಕ್ಕರ್ಥ. ಅಂತು ಲಿಂಗೋದ್ಭವವಾಗಿ ಸರ್ವಾಂಗವನೊಳಕೊಂಡು ಅಂಗವೆಲ್ಲ ಲಿಂಗವೆಯಾದುದೀಗ ಮುಕ್ತಿ ಗತಿ. ಅಂತು ಮುಕ್ತಿಗತಿ ಸ್ವರೂಪನಪ್ಪ ಲಿಂಗವೇ ತಾನಾಗಿಪ್ಪುದನರಿದು ತನ್ನ ಲಿಂಗ ಲಕ್ಷವನೇ ಗ್ರಹಿಸಿ ಶಿವಭಾವವಳವಟ್ಟು ಶಿವಸುಖವನನುಭವಿಸುತಿಪ್ಪುದಾರಿಗೆಯೂ ಬಾರದೆಂಬುದೀಗ ಉತ್ಪತ್ತಿಯ ಗತಿಯುನಾರೋಗಣೆಯ ಮಾಡಬಾರದಾರಿಗೆಯೂ ಎಂಬ ಶಬ್ದಕ್ಕರ್ಥ. ಅಂತು ಶಿವತಾನೆಂದು ಶಿಷ್ಯೋಽಹಂಭಾವ ಪುಟ್ಟಿಸಿಪ್ಪಲ್ಲಿ ಆ ಶಿಷ್ಯೋಽಹಂಮೆಂಬ ಭಾವವಡಗಿ ನಿಂದ ಲಿಂಗವೆಯಾಗಿರ್ದಲ್ಲದೆ ಲಿಂಗೈಕ್ಯವೆಂಬುದೀಗ ಇದ್ದ ಭಾವವಳಿದಡೆ ಲಿಂಗೈಕ್ಯವು ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗೈಕ್ಯವನರಿಯದೆ ದೇಹೇಂದ್ರಿಯ ವಿಷಯ ಸುಖಭೋಗದಲ್ಲಿ ಸಂಭ್ರಮಿಸುತ್ತಿರ್ದಾರು ಸಕಲಜೀವರೆಂಬುದೀಗ ಸಚರಾಚರವೆಲ್ಲವು ಈ ಪರಿಯಲ್ಲಿ ಸಂಭ್ರಮಿಸುತ್ತಿರ್ದರೆಂಬ ಶಬ್ದಕ್ಕರ್ಥ.

(೨) ಅರಿದೆನರಿದೆನು ಎಂದೊಡೆ ಅದೇಕೋ ಮುಂದಣ ಮರವೆ? ಅರಿದೆನೆಂಬುದು ಎನ್ನಲ್ಲಿ ಲೇಸಾಗಿ ಉಳ್ಳೊಡೆ ನಿನ್ನರಿವೆಲ್ಲವ ಹುರಿ ಹಂಚು ಮಾಡಿ ನೀನರಿ ಮರುಳೇ. ಸ್ವತಂತ್ರ ಘನದೊಳಗಿರ್ದ ನಿಜವನರಿದಿಹೆನೆಂದಡೆ ಮೂರ್ತಿ ಕಿರಿದಲ್ಲ, ನಿಲ್ಲು, ಮಾಣು. ಗುಹೇಶ್ವರನೆಂಬ ಲಿಂಗದ ಘನಗಟ್ಟಿಯನರಿವಡೆ ನಿನ್ನರಿವೆಲ್ಲ ಹುರಿ ಹಂಚು ಮಾಡಿ ನೀನರಿ ಮರುಳೇ.

(೩) ಮತಿಯೊಳಗೊಂದು ದುರ್ಮತಿ ಹುಟ್ಟಿ ಗಸಣಿಗೊಳಗಾದ ಪರಿಯ ನೋಡಾ! ಜ್ಞಾನವನು ಅಜ್ಞಾನ ಬಂದು ನುಂಗಿದಡೆ ಭಾನು ಗ್ರಹಣಕೊಳಗಾದಂತಾದುದಲ್ಲಾ! ಕ್ಷೀರವೃಕ್ಷ ಪಶು ಕರುವನಗಲಿ ಅರಿಯದ ಸ್ನೇಹದಂತಿರ್ದುದಲ್ಲಾ! ಹೇಳುವಲ್ಲಿ ಯುಕ್ತ, ಕೇಳುವಲ್ಲಿ ಮುಕ್ತನೆಂಬುದೆಲ್ಲವು ಅಜ್ಞಾನ ಭಾವಕ್ಕೆ ಬಂದುದಲ್ಲಾ! ನೀರ ಮೇಲಣ ಲಿಪಿಯ ನಾರು ಓದಬಲ್ಲರು? ನಾರಾಯ ವೇದ್ಯರಪ್ಪರು. ಕನ್ನಡಿಯೊಳಗೆ ನೋಡಿ ಭಿನ್ನವಿಪ್ಪುದೇ ಅಯ್ಯ, ತನ್ನ ಕಣ್ಣಿಗೆ ಕಾಣದಂತಿರ್ದುದಲ್ಲದೆ? ದರ್ಪಣದೊಳಗಣ ಬೆಳಗು ಬೆಳಗಿನೊಳಗಣ ಬೆಳಗು. ಗುಹೇಶ್ವರನಿಪ್ಪೆಡೆಯ ತಿಳಿದು ನೋಡಿರೇ.

(೪) ನಾದದಿಂದಾದ ಸಂಗ ವಿನೋದ ಸಂಗ. ಬಿಂದುವಿನಿಂದಾದ ಸಂಗ ಬಿದ್ದ ಕ್ರಿ. ದ್ವಯ ಅದ್ವಯದಿಂದಾದ ಸಂಗ ಪರಿಭಾವ. ಗವಿ

ಸುವುದೇ ನಿರವಯವು. ಬಯಸದಿರಾ. ಬೇರೆ ಮತ್ತಿಲ್ಲ. ಅನುಭಾವ
ವೆಂಬ ಘನಮಹಿಮೆಯು ನಮ್ಮಿಂದವೇ ಆಯಿತ್ತು. ಆ ನಾದವ ನಿಶ್ಚಿಂತ
ನಿಲವನರಿಯಿತ್ತೇ ಆಯಿತ್ತು. ಬಿಂದುವಿನ ಸಂಗ ಭಾವ ಸಂದಿರ್ದ
ಭೇದವ ತಿಳಿಯಿತ್ತೇ ಆಯಿತ್ತು. ಇದು ನಿಮ್ಮ ಕಲ್ಪನೆ. ಆದಿ ಅಂತ್ಯವ
ಬಲ್ಲರೆ ಬಲ್ಲುದು ಅವಚಿತ್ತದ ಅವಧಾನವ ಅಹುದೆಂಬ ಅಲ್ಲವೆಂಬ
ಉಂಟೆಂಬ, ಇಲ್ಲೆಂಬ, ಈ ಎರಡರ ಮಥನವಲ್ಲ ಕೇಳರಯ್ಯಾ. ಚಂದ
ಗೆಡದ ಮುನ್ನ ಬೇಗಮಾಡಿ ತಿದ್ದಿದಿರಾದಡೆ ಬಸವನಂತೆ ಭಾವ, ಬಸವ
ನಂತೆ ಮನ. ಬಸವನ ಪದ ಪಿಡಿವರೆ ಇದೇ ಪಥ ಕಾಣಾ ಕೂಡಲ
ಚನ್ನ ಸಂಗಮದೇವಾ.

(೫) ಅನುನೇಹದ ಅನುರುಚಿಯ ತೋರಲಿಕ್ಕಾಗಿಯೂ ಅರಿಯ
ಬಾರದು. ಅದು ಸಕ್ಕರೆಯಂತುಟಲ್ಲ. ಅದು ತವರಾಜದಂತುಟಲ್ಲ.
ಭಾವದ ಸುಖವ ಕೆಡಿಸಿತ್ತು. ಮಹಾಲಿಂಗಕಲ್ಲೇಶ್ವರ ನೀನೆ ಬಲ್ಲೆ.

(೬) ಜ್ಞಾನ ಸದ್ಭಕ್ತಿ ಸನ್ನಿಹಿತವಾಗಿ ಲಿಂಗ ಮುಂತಾಗಿ ಮಾಡುವ
ಕ್ರಿ ಲಿಂಗ ಕ್ರಿ, ದ್ರವ್ಯ ಪೂಜೆ, ಭಕ್ತಿಯುಪಿತ, ಪ್ರಸಾದ ಮುಕ್ತಿ. ಮರವೆ
ಮುಂತಾಗಿ ಮಾಡುವ ಕ್ರಿ ಅಂಗ ಕ್ರಿ. ಅದು ಹೊರಗು. ಇದು ಕಾರಣ
ಜ್ಞಾನ ಸದ್ಭಕ್ತಿ ಸನ್ನಿಹಿತವಾದುದೇ ಮುಕ್ತಿ ಉರಿಲಿಂಗ ಪೆದ್ದಿ ಪ್ರಿಯ
ವಿಶ್ವೇಶ್ವರಾ.

(೭) ತನುವಿಂಗೆ ತನುವಾಗಿ ಮನಕ್ಕೆ ಮನವಾಗಿ ಜೀವಕ್ಕೆ ಜೀವ
ವಾಗಿರ್ದುದನಾರು ಬಲ್ಲರು? ಅದು ದೂರವೆಂದು ಸಮೀಪವೆಂದು
ಮಹಾಂತ ಗುಹೇಶ್ವರನೊಳಗೆಂದು ಹೊರಗೆಂದು ಬರುಸೂರೆವೋದರು.

(೮) ಸಂಗವಿಡಿದಂತೆ ಸಂಗವಿಡಿದು ನೋಡದಿರಾ. ಶರಣ ಸಂಗ
ಸೂತಕಿಯಲ್ಲ, ಲಿಂಗ ಪರಿಚಿತನ ಸಂಗವಂತಿರಂತೆನ್ನದಿರು. ಶರಣ ಮನ
ಬಂದಂತೆ ಮಾಡುವ. ಅಹುದಾಗದೆಂಬ ಪರಿ ಬೇರೆ. ಅಲ್ಲಿ ನೋಡಾ.
ಕೂಡಲ ಚನ್ನಸಂಗನ ಶರಣನು ಸಂಗಿಯಲ್ಲ ನಿಸ್ಸಂಗಿಯಲ್ಲ.

(೯) ಮರ ಮರ ಮಥನಿಸಿ ಕಿಚ್ಚು ಹುಟ್ಟಿ ಸುತ್ತಣ ತರುವು
ರಾದಿಗಳ ಸುಡಲಾಯಿತ್ತು. ಆತ್ಮ ಮಥನಿಸಿ ಅನುಭಾವ ಹುಟ್ಟಿ ಹೊದ್ದಿದ
ತನುಗುಣಾದಿಗಳ ಸುಡಲಾಯಿತ್ತಯ್ಯಾ! ಇಂತಪ್ಪ ಮಹಾನುಭಾವರ

ತೋರಿ ಅನುಭಾವವ ತೋರಿ ಎನ್ನ ಒಡಲನುಳುಹಿಕೊಳ್ಳಾ ಚನ್ನ ಮಲ್ಲಿಕಾರ್ಜುನಾ.

(೧೦) ಸುಖದ ಸುಖಿಗಳ ಸಂಭಾಷಣೆಯಿಂದ ದುಃಖವಿಶ್ರಾಮ ವಾಯಿತ್ತು. ಭಾವಕ್ಕೆ ಭಾವ ತಾರ್ಕಣೆಯಾವಲ್ಲಿ ನೆನಹಕ್ಕೆ ವಿಶ್ರಾಮವಾ ಯಿತ್ತು. ಬೆಚ್ಚು ಬೆರಿಸಲೊಡನೆ ಮುಚ್ಚು ಒಳಕೊಂಡಿತ್ತು ಚನ್ನಬಂಕ ನಾಥನ ಮಹೇಶ್ವರಂಗೆ.

(೧೧) ನಚ್ಚು ಮಚ್ಚಿನ ಲಿಂಗವನು ಗ್ರಹಿಸುವಲ್ಲಿ ಮುಚ್ಚು ಒಳ ಕೊಂಡಿತ್ತು. ಕರ್ಪೂರದ ಕರಡಿಗೆಯು ಗಾಸಿ ಮಾಡಿದಂತಾಯಿತ್ತು. ಲಿಂಗಾ ನುಭಾವಿಗಳ ಸಂಗದಿಂದಾನು ಕಣ್ದೆರೆದನು ಕಾಣಾ ಗುಹೇಶ್ವರಾ.

ಇಂತು ಕ್ರಿಯಾಗಮ, ಭಾವಾಗಮ, ಜ್ಞಾನಾಗಮವೆಂಬ ತ್ರಿವಿಧ ಸ್ಥಲವು ಏಕವಾದ ಲಿಂಗವು ವೀರಮಾಹೇಶ್ವರನ ಸರ್ವಾಂಗ ಮಥನ ದಿಂದ ಲಿಂಗಕಾಯ ಸಂಬಂಧ ಸ್ವರೂಪವ ನೈದಿದ ಭೇದವೆಂತೆಂದು ದೆಂದಡೆ ಮುಂದೆ ಸಕಾಯ ಸ್ಥಲವಾದುದು.

---

## ೪. ಸಕಾಯಸ್ಥಲ.

(೧) ಧರೆಯುಗಲ ಜಲಕ್ಕೆ ಕರಿಯ ನೂಲಿನ ಜಾಲ, ಕರಿಯ ಕಬ್ಬಿಲ ಹೊಕ್ಕು ಸೇದುತ್ತಿರಲು ಕರವ ಕಯ್ಯಲಿ ಗಾಣ. ಸೂಕ್ಷ್ಮ ವಿಚಾ ರದಿಂದರಿದು ಕೊಂಡೊಡೆ ಗಾಣಕ್ಕೆ ಹೊರಗಾಯಿತ್ತು. ಹರಿವ ಜಲಂಗಳು ಒತ್ತಿ ಬೇಸಿಗೆಯ ಉಷ್ಣ ತೋರಿ ಬಿಳಿಯ ಮಳಲಲ್ಲಿಗೆ ಕಾಣಬರುತ್ತಿ ರಲು ಕರಿಯ ಕಬ್ಬಿಲ ಬಂದು ಏರಿಯ ಮೆಟ್ಟಿ ನೋಡಿ ಕಾಣದೆ ಮರಳಿ ಜಾಲವ ಹೊತ್ತುಕೊಂಡು ಹೋಗೆ ವಂಗಟನ ಪುಣಜೆ ಹೊಂಗ ಲೆಯ ಬಿಲ್ಲು ಕೋಲನೊಂದು ಕಯ್ಯಲ್ಲಿ ಪಿಡಿದು ಒಂದು ಕೈಯ್ಯಲ್ಲಿ ಬಿವಿರಕ್ಕೆಯ ಪಿಡಿದು ಕಂಗಳ ಮುತ್ತು ಸಡಿಲಿ ಪಾದದ ಮೇಲೆ ಬೀಳಲಿ ಅಂಗಯ್ಯೊಳಗೊಂದು ಹರಿವ ತಲೆ ಮೂಡಲು ವಂಗಟನ ಹೊತ್ತುಕೊಂಡಾಡುತ್ತಿರಲು ಸಿಂಗಾರವಾಯಿತ್ತು ಕೂಡಲ ಚನ್ನಸಂಗ ಯ್ಯನಲ್ಲಿ ಭಕ್ತಾಂಗನೆಯ ನಾನಿಂದು ಕಂಡೆನಯ್ಯ.

ಟೀಕು:— ದೇಹವೆಂಬುದೀಗ ಧರೆ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವೆಲ್ಲ ಸಂಸಾರ ವಿಷಯ ರಸವೆಯಾಗಿಪ್ಪುದೆಂಬುದೀಗ ಧರೆಯ ಗಲ ಜಲವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹೇಂದ್ರಿಯ ವಿಷಯ ರಸದಲ್ಲಿ ಅಜ್ಞಾನ ಮಾಯಾಸೂತ್ರದ ಬಲೆಯ ಬೀಸಿಹುದೆಂಬುದೀಗ ಕರೆಯ ನೂಲಿನ ಜಾಲವೆಂಬ ಶಬ್ದಕ್ಕರ್ಥ. ಕಾಮನೆಂಬವನೀಗ ಕರಿಯ ಕಬ್ಬಿಲನೆಂಬ ಶಬ್ದಕ್ಕರ್ಥ. ಕಾಮ ನೆಲೆಗೊಂಡು ವಿಷಯಾತುರದ ಬಯಕೆಯ ಹೆಚ್ಚಿಸಿ ಅಜ್ಞಾನ ಸೂತ್ರದ ಮಾಯಾ ಬಲೆಯ ಬೀಸಿ ಜೀವನ ಸೆಳೆದು ಕೆಡಹುತ್ತಿಹ ಭವವತ್ತವೆಂಬುದೀಗ ಕರಿಯ ಕಬ್ಬಿಲ ಹೊಕ್ಕು ಸೇದುತ್ತಿರಲು ಎಂಬ ಶಬ್ದಕ್ಕರ್ಥ. ಕರಣಂಗಳೆಂಬುದೀಗ ಕರದ ಕಯ್ಯೆಂಬ ಶಬ್ದಕ್ಕರ್ಥ. ಮುಚ್ಚಿನ ಮೋಹವೆಂಬುದೀಗ ಗಾಣವೆಂಬ ಶಬ್ದಕ್ಕರ್ಥ. ಅಂತಪ್ಪ ಕರಣಂಗಳೆಂಬ ಕಾಮ ಕೈಗಳಿಂದ ಮುಚ್ಚಿನ ಮೋಹ ಗಾಣದಲ್ಲಿ ಜೀವನ ಸಿಕ್ಕಿಸಿ ಜನನ ಮರಣಕ್ಕೆ ತರುತಿಹನು ಕಾಮವೆಂಬುದೀಗ ಕರದ ಕಯ್ಯಲ್ಲಿ ಗಾಣವೆಂಬ ಶಬ್ದಕ್ಕರ್ಥ. ಅಂತು ಕಾಮ ವಿಕಾರದಿಂದ ಭವಕ್ಕೆ ಬರುತಿಹ ಜೀವನು ಸಮ್ಯಜ್ಞಾನದಿಂದ ತನ್ನ ನಿಜವು ಪರಬ್ರಹ್ಮವೇ ಎಂದು ಅರಿದಡೆ ಆ ದೇಹ ಮೋಹ ಹರಿದು ಜನನ ಮರಣಕ್ಕೆ ಬಾರನೆಂಬುದೀಗ ಸೂಕ್ಷ್ಮ ವಿಚಾರದಲ್ಲಿ ಅರಿತುಕೊಂಡೊಡೆ ಗಾಣಕ್ಕೆ ಹೊರಗಾಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನದ ಪ್ರಕಾಶದ ಹೆಚ್ಚುಗೆಯ ಬಲದಿಂದ ಜಿಹ್ವೇಂದ್ರಿಯ ವಿಷಯ ರಸಂಗಳೆಲ್ಲ ನಿರಸವಾಗಿ ಹೋಗಿ ಆ ಶರಣ ಸಂಗವೊಳಿರ್ದ ಚಿತ್ಸ್ವರೂಪ ಪ್ರಕಾಶ ಲಿಂಗವು ಪ್ರತ್ಯಕ್ಷವಾಗಿ ತೋರುತ್ತಿದ್ದಿತ್ತೆಂಬುದೀಗ ಹರಿವ ಜಲಗಳು ಬತ್ತಿ ಬೇಸಿಗೆಯ ಉಷ್ಣದೋರೆ ಬೆಳೆಯ ಮಳಲಲ್ಲಿಗೆ ಕಾಣಬರಲು ಎಂಬ ಶಬ್ದಕ್ಕರ್ಥ. ಅಂತು ಲಿಂಗ ಭಾವ ಪುಷ್ಟಿಸಿದ ಬಳಿಕ ಶರಣ ಅಂತರಂಗ ಅಜ್ಞಾನ ಮಾಯಾ ಬಲೆಯ ಸಹವಾಗಿ ಹೋದನೆಂಬುದೀಗ ಬರಿಯ ಮೆಟ್ಟಿ ನೋಡಿ ಕಾಣದೆ ಜಾಲವ ಹೊತ್ತುಕೊಂಡು ಹೋಗೆ ಎಂಬ ಶಬ್ದಕ್ಕರ್ಥ. ತನ್ನ ಶರೀರವೆಂಬುದೀಗ ಸಂಗಟವೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಸ್ವದೇಹದಲ್ಲಿ ಷಡ್ವಿಧ ಶಕ್ತಿಯರೆಂಬವರು ಪಣ್ಯಾಂಗನೆಯರೆಂಬುದೀಗ ದಂಗಟನ ಪುಣಜೆಯರೆಂಬ ಶಬ್ದಕ್ಕರ್ಥ. ಅಂತಪ್ಪ ಷಡ್ವಿಧ ಶಕ್ತಿಯರೆಲ್ಲರೂ ಏಕಾಗ್ರ ಚಿತ್ತವೆಂಬುದೊಂದು ಹಸ್ತದಲ್ಲಿ ಸದ್ಭಾವವೆಂಬ ಬಿಲ್ಲಿಗೆ ಸುಜ್ಞಾನವೆಂಬ ಅಂಬ ತೊಡಚಿ ಹಿಡಿದುಕೊಂಡಿರ್ದರೆಂಬುದೀಗ ಹೊಂಗಳೆಯ ಬಿಲ್ಲು ಕೋಲನೊಂದು ಕಯ್ಯಲಿ

ಹಿಡಿದು ಎಂಬ ಶಬ್ದಕ್ಕರ್ಥ. ತನ್ನ ಭಕ್ತರಿಗೆ ತನ್ನ ಸೂರೆಯ ಕೊಂಡವ ನಿಜದ ನಿಧಿಯಪ್ಪ ನಿರ್ಮಲ ಶಿವತತ್ವವೆಂಬ ತಂಡುಲವ ಮಹದರುಹಿನ ಹಸ್ತದಲಿ ಹಿಡಿದಿರ್ದರೆಂಬುದೀಗ ಒಂದು ಕಯ್ಯಲಿ ಬಿದಿರಕ್ಕಿಯ ಹಿಡಿದು ಎಂಬ ಶಬ್ದಕ್ಕರ್ಥ. ಕಂಗಳೆಂದರೆ ಜ್ಞಾನದೃಕ್ಕು, ಮುತ್ತೆಂದರೆ ಮುಕ್ತಿ ಸ್ವರೂಪನಪ್ಪ ಲಿಂಗ, ಪಾದವೆಂದರೆ ಕ್ರಿಯಾಚಾರ, ಅಂತು ಶರಣನ ಜ್ಞಾನದೃಕ್ಕುಗಳಲ್ಲಿ ಭಿನ್ನವಿಲ್ಲದಿರ್ದ ಮುಕ್ತಿ ಸ್ವರೂಪನಪ್ಪ ಚಿತ್ಕಲಾಲಿಂಗವ ಬಹಿಷ್ಕರಿಸಿ ಇಷ್ಟಲಿಂಗವಾಗಿ ಬಂದು ಕ್ರಿಯಾಚಾರದಲ್ಲಿ ನೆಲೆಗೊಂಡಿತ್ತೆಂಬುದೀಗ ಕಂಗಳ ಮುತ್ತು ಸಡಿಲಿ ಪಾದದ ಮೇಲೆ ಬೀಳಲಿ ಎಂಬ ಶಬ್ದಕ್ಕರ್ಥ. ಅಂತು ಭಕ್ತಿಗೊಲಿದು ಅಖಂಡ ಜ್ಞಾನ ಲಿಂಗವು ಖಂಡಿತವನೈದಿ ಸೂಕ್ಷ್ಮ ರೂಪಿಂದ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದಿತ್ತೆಂಬುದೀಗ ಅಂಗಯ್ಯೊಳಗೊಂದು ಹರಿದ ತಲೆ ಮೂಡಲು ಎಂಬ ಶಬ್ದಕ್ಕರ್ಥ. ಅಂತು ತನ್ನ ದೇಹವಪ್ಪ ತನ್ನ ಆತ್ಮ ಸ್ವರೂಪೇ ಇಷ್ಟ ಲಿಂಗವಾಗಿ ಕರಸ್ಥಲಕ್ಕೆ ಧರಿಸಿಕೊಂಡು ಕ್ರಿಯಾನುಭಾವದಿಂದ ಚರಿಸುತ್ತಿರ್ದ ಶರಣಂಗೆ ಒಳಹೊರಗೆನ್ನದೆ ಸರ್ವಾಂಗಲಿಂಗವಾಯಿತ್ತೆಂಬುದೀಗ ದಂಗಟನ ಹೊತ್ತುಕೊಂಡು ಆಡುತ್ತಿರಲು ಸಿಂಗಾರವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಜ್ಞಾನ ಕ್ರಿಯಿಂದ ಸರ್ವಾಂಗ ಲಿಂಗವಾಗಿ ಭಿನ್ನವಿಲ್ಲದೆ ಕೂಡಿಪ್ಪುದೇ ಭಕ್ತಿ, ಅಂತಪ್ಪ ಭಕ್ತಿ ಎಂಬುದು ಎಂದೆಂದು ಶಿವನಲ್ಲಿ ಸಮೇತವಾಗಿಪ್ಪ ಶಕ್ತಿ, ಅಂತಪ್ಪ ಶಕ್ತಿಯು ಭಕ್ತಿಯಾಯಿತ್ತೆಂಬುದ ಶಿವನ ಕೃಪೆಯಿಂದ ಶರಣನರಿದನೆಂಬುದೀಗ ಕೂಡಲಚನ್ನಸಂಗಯ್ಯನಲ್ಲಿ ಭಕ್ತ್ಯಾಂಗನೆಯ ನಾಸಿಂದು ಕಂಡೆನಯ್ಯ ಎಂಬ ಶಬ್ದಕ್ಕರ್ಥ.

(೨) ಅಯ್ಯಾ ಸಜ್ಜನ ಸದ್ಭಾವಿಗಳ ಸಂಗದಿಂದ ಮಹಾನುಭಾವಿಗಳ ಕಾಣಬಹುದು. ಅಯ್ಯಾ ಮಹಾನುಭಾವಿಗಳ ಸಂಗದಿಂದ ಗುರುನಾಥನ ಕಾಣಬಹುದು. ಅಯ್ಯಾ ಗುರುವಿನ ಸಂಗದಿಂದ ಲಿಂಗದೇವನ ಕಾಣಬಹುದು. ಅಯ್ಯಾ ಲಿಂಗಯ್ಯನ ಸಂಗದಿಂದ ಜಂಗಮ ಸ್ವಾಮಿಯ ಕಾಣಬಹುದು. ಅಯ್ಯಾ ಜಂಗಮಗಳ ಸಂಗದಿಂದ ಪ್ರಸಾದವ ಕಾಣಬಹುದು. ಇದು ಕಾರಣ ಕೂಡಲಚನ್ನಸಂಗಮದೇವಯ್ಯ, ನಿಮ್ಮ ಸಜ್ಜನ ಶುದ್ಧ ಶಿವಾಚಾರ ಮಹಾನುಭಾವಿಗಳ ಸಂಗವನೇ ಕರುಣಿಸಯ್ಯಾ.

(೩) ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದ ಕೊಂಡು. ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದು. ಎನ್ನ ಕಂಗಳು ಶುದ್ಧವಾಯಿತ್ತು ಸಕಲ ಗಣಂಗಳ ನೋಡಿ. ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ. ಲಿಂಗ ತಂದೆ ನೆಟ್ಟನೆ ನಿಮ್ಮ ಮನ ಮುಟ್ಟಿ ಪೂಜಿಸಿ ಭವಗೆಟ್ಟೆ ನಾನು ಚನ್ನಮಲ್ಲಿಕಾರ್ಜುನಾ.

ಇಂತು ಲಿಂಗ ಕಾಯ ಮಥನದಿಂದ ವೀರ ಮಾಹೇಶ್ವರನ ದೇಹ ನಿರ್ದೇಹವಾದ ಭೇದವೆಂತಿರ್ದುದೆಂದಡೆ ಮುಂದೆ ಅಕಾಯ ಸ್ಥಲವಾದುದು.

---

## ೫ ಅಕಾಯಸ್ಥಲ.

(೧) ದೇಹ ನಿರ್ದೇಹವೆನುತಿಪ್ಪರಯ್ಯಾ. ದೇಹ ನಿರ್ದೇಹವೆಂಬ ಮರ್ಮವನರಿಯರು. ಅಹಮೆಂಬುದೇ ದೇಹ ನೋಡಾ. ದಾಸೋಹಮೆಂಬುದೇ ನಿರ್ದೇಹ ನೋಡಾ. ಅಕಾಯೋ ಭಕ್ತ ಕಾಯಸ್ತು ಎಂದುದಾಗಿ ಅಹಂ ಭಾವವಳಿದುಳಿದು ದಾಸೋಹಿಗಳಾದವರ ಕೂಡಲಚನ್ನಸಂಗಯ್ಯನಲ್ಲಿ ನಿರ್ದೇಹಿಗಳೆಂಬೆನು.

ಟೀಕು:— ವಾಗದ್ವೈತದಿಂದ ತಾನೇ ಬ್ರಹ್ಮವೆಂದು ನುಡಿವವರಿಗೆ ಎಂದೆಂದು ದೇಹವಾಸನೆ ಬಿಡದೆ ದೇಹಿಗಳಾಗಿಪ್ಪರು. ತಾನೆಂಬಹಂಕಾರವಳಿದು ದಾಸೋಹಂಭಾವದಿಂದ ಶಿವಂಗೆ ಭಕ್ತಿಯ ಮಾಡುವರೆಲ್ಲರು ಮುಕ್ತರೆಂಬುದೀ ವಚನದ ತಾತ್ಪರ್ಯಾರ್ಥ.

(೨) ಕುಲಮದವೆಂಬುದಿಲ್ಲ, ಅಯೋನಿಸಂಭವನಾಗಿ. ಛಲ ಮದವೆಂಬುದಿಲ್ಲ, ಪ್ರತಿದೋರದಾಗಿ. ಧನ ಮದವೆಂಬುದಿಲ್ಲ, ತ್ರಿಕರಣ ಶುದ್ಧನಾಗಿ. ವಿದ್ಯಾಮದವೆಂಬುದಿಲ್ಲ, ಅಸಾಧ್ಯವ ಸಾಧಿಸಿದನಾಗಿ. ಮತ್ತದ ಮದವೆಂಬುದಿಲ್ಲ ನೀನವಗ್ರಹಿಸಿದ ಕಾರಣ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಅಕಾಯ ಚರಿತ್ರನಾಗಿ.

(೩) ಆದಿಯ ಸ್ಥಲವೆಂದು ನುಡಿವರು. ಅನಾದಿಯ ಸ್ಥಲವೆಂದು ನುಡಿವರು. ಆದಿಗೆ ಒಡಲುಂಟು. ಅನಾದಿಗೆ ಒಡಲಿಲ್ಲ "ನ ಚ ಭೂಮಿ ನ ಚ ಜಲ, ನ ಚ ತೇಜ, ನ ಚ ವಾಯು, ನ ಚ ಆಕಾಶ." ಇವೆಲ್ಲವು ಘಟಕ್ಕೆ ಸಂಬಂಧವಾಗಿ ಘಟ ಕೆಡುವುದು. ॥ಗ್ರಂಥ॥ ಸ್ಥಲ ಸ್ಥಲಂಗತಂ ಸ್ಥಾಸ್ಯಂ ತಾಮಸಂ ಮನವರ್ಜಿತಂ। ಸಕಲ ನಿಃಕಲಂ ನಾಸ್ತಿ। ಘನ ಲಿಂಗ ಸ್ವಭಾವತಾ। ಎಂದುದಾಗಿ ಇಂತಹ ನಿರ್ದೇಹಿ ಶರಣನಂಗದಲ್ಲಿ ಅರಿಯಬಾರದು ಕೂಡಲಚನ್ನಸಂಗಯ್ಯ.

(೪) ಪಿಂಡದ ಮೇಲೊಂದು ಪಿಂಡವನಿರಿಸಿ, ಆ ಪಿಂಡವ ನಿಕ್ಷೇಪಿಸಿ ಮತ್ತೊಂದು ಪಿಂಡದ ಮೇಲೊಂದು ಪಿಂಡವನಿರಿಸಿ ಆ ಪಿಂಡವ ನಿಕ್ಷೇಪಿಸಿ, ಪಿಂಡಲಿಂಗವನರಿದು ಲಿಂಗಪಿಂಡವ ನರಿಯದು. ಒಳಗಿರ್ದ ಲಿಂಗಕ್ಕೆ ಅದ್ಭುತ ಸಂಕಷ್ಟವಾಯಿತ್ತು. ॥ಗ್ರಂಥ॥ ಪಿಂಡಸ್ಥಂ ಪಿಂಡ ಮಧ್ಯಸ್ಥಂ। ಪಿಂಡ ನ ತು ಘಟಕೃತಂ। ಪಿಂಡೇನ ಪಿಂಡಿತಂ। ಪಿಂಡಂ। ಪಿಂಡರೂಪ ಮುದ್ರಾ ಹೃತಂ। ಯದ್ವಾ ಶಿವಮಯಂ ಪಿಂಡಂ। ಸರ್ವ ತತ್ವಲಯಂವಿದುः। ಎಂದುದಾಗಿ ಇದು ಕಾರಣ ಕೂಡಲಚನ್ನಸಂಗಯ್ಯ ನಿಮ್ಮ ಶರಣನು ಅಕಾಯ ಚರಿತ್ರನು.

(೫) ಭಿನ್ನ ಪ್ರಾಣವಳಿದು ನಿರ್ಮಳ ಚಿತ್ತನ ಮಾಡಿ ಕಣ್ಣಾಲಿ ಉರಿ ನಟ್ಟು ಹೊರ ಸೂಸದೆ ಸಣ್ಣ ಬಣ್ಣವ ಕಳೆದು ಉಣ್ಣ ಉಣ್ಣದೆ ಇರನು. ತನ್ನ ನಿಲವನರಿತು ತಾನೊಬ್ಬನೇ ಇರನು. ಜನ್ಮ ಕರ್ಮಂಗಳಲ್ಲಿ ಕಾಳಬೆಳದಿಂಗಳಲ್ಲಿ ತನ್ನ ಪ್ರಾಣ ತನಗೆ ಪ್ರಕಾಶವೋ? ನಿನ್ನೊಳಗೆ ಹಣೆ ಹೊಕ್ಕು ಕುಂಬಳದ ಸೂಜಿಯ ಸುಮ್ಮಾನಿ ಶರಣನ ನಿಲವ ನೋಡಾ. ಅಳಲಲಿಲ್ಲ, ಬಳಲಲಿಲ್ಲ, ಅಳಿಯಲಿಲ್ಲ, ಉಳಿಯಲಿಲ್ಲ. ಎರಡಳಿದ ನಿಲವು ಉಭಯ ಮಧ್ಯದ ಕೊರಡಿಂಗೆ ಕುಂಟೆಯ ನಿಕ್ಕಿ ಕೆಡಿಸುವನು ತಾನಲ್ಲ. ಹೊರಳಲರಿಯನು. ಕೊಳಚಿಯ ಉದಕದೊಳಗೆ ಕಳಾಕಳಭೇದದಿಂ ತೊಳತೊಳಗುವವಳ ಭ್ರೂಮಧ್ಯದಿಂದ ದೃಢಮಂಡಲವ ಕಳೆದು ದಾಂಟಿ ಕೂಡಲಚನ್ನಸಂಗಯ್ಯನೊಳಗೆ ಶರಣ ಕಾಂತಿಯ ನಿಲವಿಂಗೆ ಶರಣು ಶರಣು.

(೬) ಅಕಾಯ ಸನ್ನಿಹಿತವಾಯಿತಲ್ಲಾ! ಅಕಾಯ ಅಳವಟ್ಟಿತಲ್ಲಾ! ಅಕಾಯ ನಿಂದು ನಿವಾಸವಾಯಿತಲ್ಲಾ! ಕೂಡಲಚನ್ನಸಂಗನನಿಂದೆ ನಿಂದಿತ್ತಲ್ಲಾ!

(೭) ಕಾಯದಿಂದ ಲಿಂಗ ದರುಶನ. ಕಾಯದಿಂದ ಜಂಗಮ ದರುಶನ. ಕಾಯದಿಂದ ಪ್ರಸಾದ ಸಂಪತ್ತು. ಕೂಡಲಚನ್ನಸಂಗಯ್ಯ ಆಕಾಯದಿಂದ ನಿಮ್ಮುವ ಕಂಡೆನಯ್ಯ.

(೮) ಕಾಯದೊಳಗೆ ಅಕಾಯವಾಯಿತ್ತು. ಜೀವದೊಳಗೆ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಯಿತ್ತು. ಎನ್ನ ಮನದೊಳಗೆ ಘನ ನೆನಹಾಯಿತ್ತು. ಎನ್ನ ತಲೆ ಮೊಲೆಗಳ ನೋಡಿ ಸಲಹಿದಿರಾಗಿ ಚನ್ನಮಲ್ಲಿಕಾರ್ಜುನಯ್ಯ ಧರ್ಮದವಳಾನು.

(೯) ಪ್ರಸಾದಕಾಯವಾದ ಬಳಿಕ ಸರ್ವಾಂಗ ಉತ್ತಮಾಂಗ ಪ್ರಾಣಲಿಂಗವಾದ ಬಳಿಕ ಸದಾ ಸನ್ನಿಹಿತ. ಲಿಂಗ ಶರಣನಲ್ಲಿ ಭಾವ ಭೇದ ವಿಲ್ಲ. ನಿರಂತರ ಲಿಂಗ ಸಂಗಿ. ಅಕಾಯಂ ಭಕ್ತಕಾಯಸ್ತು ಎಂದುದಾಗಿ ಕೂಡಲಚನ್ನಸಂಗನ ವಚನ.

(೧೦) ಲಿಂಗವೇ ಪ್ರಾಣವಾಯಿತ್ತಾಗಿ ಆಚಾರ ವಿಚಾರವಿಲ್ಲವಯ್ಯ. ಪ್ರಸಾದಕಾಯವಾಯಿತ್ತಾಗಿ, ಸತ್ವರಜ ತಮಕ್ರೋಧವಿಲ್ಲವಯ್ಯ. ಜಂಗಮ ಮುಖ ಲಿಂಗವಾದ ಕಾರಣ ಲಿಂಗದಲನುಭಾವಿಸಿ ನೋಡುತ್ತಿರ್ದೆನಯ್ಯ. ಭಕ್ತಕಾಯ ಮಮಕಾಯವಾಗಿ ಕೂಡಲಚನ್ನಸಂಗನ ಬಸವಣ್ಣನಲ್ಲಿ ಸುಖಿಯಾಗಿರ್ದೆನಯ್ಯ.

ಇಂತು ಅಕಾಯ ಸ್ವರೂಪವನ್ನೈದಿದ ಲಿಂಗವು ವೀರ ಮಹೇಶ್ವರ ನಲ್ಲಿ ಸಕಳ ನಿಷ್ಕಳಾತೀತ ಕಾಯವೆಂತಿರ್ಪುದೆಂಡಡೆ ಮುಂದೆ ಪರಕಾಯ ಸ್ಥಲವಾದುದು.

---

## ೬ ಪರಕಾಯಸ್ಥಲ.

ಕಕ್ಷೆಯಲ್ಲಿ ಲಿಂಗವ ಧರಿಸಿಕೊಂಡಾತನು ಬ್ರಹ್ಮ. ಕರಸ್ಥಲದಲ್ಲಿ ಲಿಂಗವ ಧರಿಸಿ ಕೊಂಡಾತನು ವಿಷ್ಣು. ಉತ್ತಮಾಂಗದಲ್ಲಿ ಲಿಂಗವ ಧರಿಸಿ ಕೊಂಡಾತನು ರುದ್ರನು. ಅಮಳೋಕ್ಯದಲ್ಲಿ ಲಿಂಗವ ಧರಿಸಿಕೊಂಡಾತನು

ಈಶ್ವರನು. ಮುಖಸೆಜ್ಜೆಯಲ್ಲಿ ಲಿಂಗವ ಧರಿಸಿ ಕೊಂಡಾತನು ಸದಾಶಿವನು. ಅಂಗಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತನು ಉಪಮಾತೀತನು. ಇವರೆಲ್ಲರು ಬಯಲನೇ ಪೂಜಿಸಿ ಬಯಲಾಗಿ ಹೋದರು. ನಾನು ನಿತ್ಯವ ಪೂಜಿಸಿ ಮಿಥ್ಯವನರಿಯದ ಇರವಿನಲ್ಲಿ ಸುಖಿಯಾದೆನು ಗುಹೇಶ್ವರಾ.

ಟೀಕು:— ಬ್ರಹ್ಮತತ್ವದ ಸುಚಿತ್ತವೆಂಬ ಕಕ್ಷೆಯಲ್ಲಿ ಆಚಾರ ಗ್ರಹಣವಾಯಿತ್ತೆಂಬುದೀಗ ಕಕ್ಷೆಯಲ್ಲಿ ಲಿಂಗವ ಧರಿಸಿ ಕೊಂಡಾತ ಬ್ರಹ್ಮನೆಂಬ ಶಬ್ದಕ್ಕರ್ಥ. ವಿಷ್ಣು ತತ್ವದ ಸುಬುದ್ಧಿ ಎಂಬ ಕೃತ ನಿಶ್ಚಯ ಹಸ್ತದಲ್ಲಿ ಗುರುಲಿಂಗ ಗ್ರಹಣವಾಯಿತ್ತೆಂಬುದೀಗ ಕರಸ್ಥಲದಲ್ಲಿ ಲಿಂಗವ ಧರಿಸಿದಾತನು ವಿಷ್ಣು ಎಂಬ ಶಬ್ದಕ್ಕರ್ಥ. ರುದ್ರ ತತ್ವದ ಅಹಂಕಾರವೆಂಬುದರ ಮಸ್ತಕದ ಮೇಲೆ ಶಿವಲಿಂಗವ ಗ್ರಹಣವಾಯಿತ್ತೆಂಬುದೀಗ ಉತ್ತಮಾಂಗದ ಮೇಲೆ ಲಿಂಗವ ಧರಿಸಿಕೊಂಡಾತನು ರುದ್ರನೆಂಬ ಶಬ್ದಕ್ಕರ್ಥ. ಈಶ್ವರ ತತ್ವದ ಅಂತರಂಗವೆಂಬ ಸುಮನ ಹಸ್ತದಲ್ಲಿ ಜಂಗಮಲಿಂಗ ಗ್ರಹಣವಾಯಿತ್ತೆಂಬುದೀಗ ಅಮಳೋಕ್ಯದಲ್ಲಿ ಲಿಂಗವ ಧರಸಿಕೊಂಡಾತನು ಈಶ್ವರನೆಂಬ ಶಬ್ದಕ್ಕರ್ಥ. ಸದಾಶಿವ ತತ್ವದ ಮುಖಸೆಜ್ಜೆ ಎಂಬ ಸುಜ್ಞಾನ ಹಸ್ತದೊಳಗೆ ಪ್ರಸಾದ ಲಿಂಗ ಗ್ರಹಣವಾಯಿತ್ತೆಂಬುದೀಗ ಮುಖಸೆಜ್ಜೆಯೊಳಗೆ ಲಿಂಗವ ಧರಿಸಿಕೊಂಡಾತನು ಸದಾಶಿವನೆಂಬ ಶಬ್ದಕ್ಕರ್ಥ. ಉಪಮಾತೀತ ತತ್ವದ ಸದ್ಭಾವವೆಂಬ ಹಸ್ತದ ಸರ್ವಾಂಗದಲ್ಲಿ ಮಹಾಲಿಂಗವ ಗ್ರಹಣವಾಯಿತ್ತೆಂಬುದೀಗ ಅಂಗಸೆಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತನು ಉಪಮಾತೀತನೆಂಬ ಶಬ್ದಕ್ಕರ್ಥ. ಈ ಆರು ತತ್ವಂಗಳೊಳಗೆ ಷಡ್ ಲಿಂಗಸ್ಥಲಂಗಳು ಐಕ್ಯವಾಗಿ ನಿರ್ವಯಲಾಗಲು ಇಲ್ಲಿ ಆ ಶರಣನು ನಿತ್ಯ ಪರಿಪೂರ್ಣನಾಗಿ ಮಾಯಾಮಿಥ್ಯೆಯನಳಿದು ಇದ್ದನೆಂಬುದೀಗ ಇವರೆಲ್ಲರು ಬಯಲನೇ ಪೂಜಿಸಿ ಬಯಲಾಗಿ ಹೋದರು, ನಾನು ನಿತ್ಯವ ಪೂಜಿಸಿ ಮಿಥ್ಯವನರಿಯದ ಇರವಿನಲ್ಲಿ ಸುಖಿಯಾದೆನೆಂಬ ಶಬ್ದಕ್ಕರ್ಥ.

(೨) ಪ್ರಾಣ ಪ್ರಾರಂಭ ಪ್ರಾರಬ್ಧವಿಲ್ಲವಾಗಿ ಪರ ಚಿಂತೆ ಪರಬೋಧೆಯ ಪರಿಚಿತನಲ್ಲ. ಉಸಿರು ಬೀಜದ ಹಸಿಯ ಬಣ್ಣದ ದಶವಿಧವಾಗಿ ವಶಗತನಲ್ಲ. ನಿರಂತರ ಸ್ವತಂತ್ರ ಶರಣ ಸಿದ್ಧಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಶಬ್ದ ಮುಗ್ಧವಾಗಿ.

(೩) ಕಾಲನ ಕಳೆದು ಕಪ್ಪೆಯ ಹೊಡೆದೆನು. ಕಲ್ಪಿತವೆಂಬವನ ನೊಸಲಾಕ್ಷರದ ತೊಡೆದೆನು. ಇನ್ನೇನೋ? ಇನ್ನೇನೋ? ಮುಂದೆ ಬಯಲಿಂಗೆ ಬಯಲು ಸನ್ನೆದೋರುತ್ತಿದೆ. ಹಿಂದಿಲ್ಲ, ಮುಂದಿಲ್ಲ, ಮತ್ತೇನೂ ಇಲ್ಲ. ಚಿಕ್ಕಯ್ಯ ಪ್ರಿಯಸಿದ್ಧಲಿಂಗ ನಾನೂ ಇಲ್ಲ, ನೀನೂ ಇಲ್ಲ.

(೪) ನಾನೆಂಬ ಭೇದ ಅಂದೂ ಇಲ್ಲ, ಇಂದೂ ಇಲ್ಲ. ಸಾಲೋಕ್ಯನಲ್ಲ, ಸಾಮೀಪ್ಯನಲ್ಲ, ಶರಣ ಸಾರೂಪ್ಯನಲ್ಲ, ಸಾಯುಜ್ಯನಲ್ಲ. ಶರಣ ಸಕಾಯನಲ್ಲ, ಅಕಾಯನಲ್ಲ, ಗುಹೇಶ್ವರಲಿಂಗ ತಾನೆಯಾಗಿ.

(೫) ತಪ್ಪಿ ನೋಡಿದಡೆ ಮನದಲ್ಲಿ ಅಜ್ಞಾತ್ತಿದ್ದಿತ್ತು. ಇಪ್ಪೆಡೆಯಲ್ಲಿ ವಿಚಾರಿಸಿದಡೆ ಇಲ್ಲದಂತಾಯಿತ್ತು. ಲೆಪ್ಪದ ಜಲವ ಪಾವದ ಘಾತದಂತೆ ಕರ್ತೃತ್ವವೆಲ್ಲಿಯದೋ ಗುಹೇಶ್ವರಾ?

(೬) ಶೂಲದ ಮೇಲಣ ತಲೆಯು ಭೋಗವನಾರು ಬಯಸಿದಡೆ ಎಲ್ಲಿಯದು? ಉಂಬರೆ, ಒಡಲಿಲ್ಲ. ಲಿಂಗಾರ್ಚನೆ ಇಲ್ಲ. ಅಂಗಭೋಗಕ್ಕೆ ಕರಚರಣಂಗಳಿಲ್ಲ. ಅಂಗವಿಲ್ಲೆಂಬ ಮಾತು ನಿಮಗೇಕೆ? ಸುಡು ಭಂಗ ಲಿಂಗ ನಿರಾಳ ಗುಹೇಶ್ವರ.

(೭) ಮೂರ್ತನಲ್ಲ, ಅಮೂರ್ತನಲ್ಲ. ಲಿಂಗದಲ್ಲಿ ಪ್ರಾಣ ಸಂಬಂಧಿ. ಪ್ರಾಣದಲ್ಲಿ ಪ್ರಸಾದ ಸಂವರಣೆ. ಪ್ರಸಾದದಲ್ಲಿ ಕಾಯಾಶ್ರಿತ. ಲೋಕ ಲೌಕಿಕ ಪ್ರಕಾರದುದಯನಲ್ಲ ಕೂಡಲಚನ್ನಸಂಗ ನಿಮ್ಮ ಶರಣನು.

(೮) ಹುಟ್ಟುಗೆಟ್ಟ. ಹಾಳ ಮೇಲೆ ಬಟ್ಟೆ ಬಯಲಿಲೊಬ್ಬನ ಕಂಡೆ. ಅಂಗವಿಲ್ಲದ ಅವಯವಕ್ಕೆ ಸಂಗವಿನ್ನೆಲ್ಲಿಯದಯ್ಯ? ಹಿಂಗುವ ಅವಯವಕ್ಕೆ ಹಿಂಗದ ತೊಡಿಗೆಯ ತೊಡಿಸಿಹೆನೆಂಬ ಭಂಗಿತರ ನೇನೆಂಬೆ ರೇಕಣ್ಣ ಪ್ರಿಯನಾಗಿನಾಥಾ?

ಇಂತು ಅಕಾಯ, ಸಕಾಯ, ಪರಕಾಯವೆಂಬ ತ್ರಿವಿಧ ಸ್ಥಲವು ಏಕವಾದ ಲಿಂಗವು ವೀರಮಹೇಶ್ವರನ ಸನ್ಮಾರ್ಗ ಚರಿತ್ರ ನಿಮಿತ್ತ ಏಕವಾದ ಭೇದವೆಂತೆನಲೆಂದಡೆ ಮುಂದೆ ಧರ್ಮಾಚಾರ ಸ್ಥಲವಾದುದು.

## ೭ ಧರ್ಮಾಚಾರಸ್ಥಲ.

(೧) ಲೋಕ ಒಂದೆಂದರೆ ತಾನೊಂದನೆನಬೇಡ. ಮತ್ತಾರನೆಂದಡೆಯೂ ತನ್ನನೆಂದರೆನಬೇಡ. ಛೈತ್ರಕ್ಕೆ ಬೆಂಗುಂಡನಿಕ್ಕಿದಂತಿರಬೇಕು ಹಿರಿಯರು ಗುಹೇಶ್ವರಾ.

ಟೀಕು:— ತಾನು ಶಿವಜ್ಞಾನ ಸಂಪನ್ನನಾದಡೆ, ಲೋಕವು ಲೋಕದಂತೆ ನುಡಿವುದಾಗಿ, ತಾನದನಹುದಲ್ಲವೆನಬೇಡ. ತನ್ನನೆಂದನೆಂದಡೆಯೂ ತಾನದನೇನೆಂದು ಅರಿಯದೆ ಮಹಾಗಂಭೀರನಾಗಿರಬೇಕೆಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ಭಕ್ತ ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಹ ವಚನವ ನುಡಿಯಬೇಕು. ಲಿಂಗಜಂಗಮದಲ್ಲಿ ಕುಂದುನಿಂದೆಗಳಿಲ್ಲದಿರಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು. ತನುಮನಧನವ ಗುರುಲಿಂಗ ಜಂಗಮಕ್ಕೆ ಸಮರ್ಪಿಸಬೇಕು. ಅಪಾತ್ರದಾನವ ಗೈಯ್ಯದಿರಬೇಕು. ಸಕಲ ಇಂದ್ರಿಯಂಗಳು ತನ್ನ ವಶಗತವಾಗಿರಬೇಕು. ಇದೇ ಮೊದಲಲ್ಲಿ ಬೇಹ ಶೌಚ ನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಎನಗಿದೇ ಸಾಧಕವು ನೋಡಾ ಕೂಡಲಸಂಗಮದೇವಾ.

(೩) ಭಕ್ತರಲ್ಲದವರೊಡನಾಡದಿರು, ಆಡದಿರು. ಅರ್ಥದಾಸೆಗೆ ದುರ್ಜನರ ಸಂಗವ ಮಾಡದಿರು, ಮಾಡದಿರು. ಉತ್ತಮರ ಕೆಡೆ ನುಡಿಯದಿರು ನುಡಿಯದಿರು. ಮುಂದೆ ಹೊತ್ತ ಹೊರೆ ದಿಮ್ಮಿತ್ತಿಹುದು. ನಿತ್ಯವಲ್ಲದ ದ್ರವ್ಯಕ್ಕೆರಗದಿರು, ಎರಗದಿರು. ಕರ್ತೃ ಸೊಡ್ಡಳನ ನೆರೆ ನಂಬು. ಡಂಭಕ ಬೇಡ.

(೪) ಪ್ರಾಣಲಿಂಗವೆಂಬುದೊಂದು ಮಾತಿನಂತುಟಲ್ಲ. ಲೋಗರ ಸುಖದುಃಖ ತನ್ನದೆನ್ನಕ್ಕರ ಚೆನ್ನಸಿದ್ಧನಾಥನೆಂಬ ಲಿಂಗವು ಸುಮ್ಮನೆ ಒಲಿವನೇ?

(೫) ಸ್ಥಾವರವೆಂತಂತೆ ಮನದಲ್ಲಿ ಭಾವಿಸಿ ಸಕಲ ಜೀವದಲ್ಲಿ ನಿಂದೆಯ ಮಾಬುದು. ಲಿಂಗಜಂಗಮ ಒಂದೇ ಎಂದು ಕಾಂಬುದು.

ಬಂದುದು ಲಿಂಗಾಧೀನವೆಂದು ಕಾಂಬುದು. ಸತ್ಯವ ನುಡಿವುದು. ಶುಚಿ ಯಾಗಿಪ್ಪುದು. ಎರಡು ವಿಡಿಯದೆ ಎರಡು ನಡೆಯದೆ ಮುನ್ನಾದಿಯ ಪುರಾತನರು ಕೂಡಿದ ಪಥವಿದು, ಸಕಳೇಶ್ವರ ದೇವರ ನೊಲಿಸಿಹೆ ನೆಂಬವಂಗೆ.

(೬) ತನ್ನ ಗುಣವ ಹೊಗಳಬೇಡ. ಇದಿರ ಗುಣವ ಹಳಿಯ ಬೇಡ. ಕೆಮ್ಮನೊಬ್ಬರ ನುಡಿಯಬೇಡ. ನುಡಿದು ನುಂಪಿತನಾಗಬೇಡ. ತನ್ನ ಮನ ವಿಕಳನಾಗಿ ಇದಿರ ಮನವ ನೋಯಿಸಬೇಡ. ತಾನು ಬದು ಕುವಪ್ಪೈಸು ದಿನ? ಸಮತೆ ಸಮಾಧಾನ ತುಂಬಿ ತುಳುಕಬೇಕು. ಮಹಾ ಲಿಂಗ ಕಲ್ಲೇಶ್ವರ ನಿಚ್ಚಳ ನಿಜವನರಿವ ಬಳಿಕ ಸಕಲವೊಳಗೆ ಬಚ್ಚ ಬರಿಯ ಮರುಳಾಗಿರಬೇಕು.

ಇಂತು ಧರ್ಮಾಚಾರ ಸ್ವರೂಪವನ್ನರಿದ ಲಿಂಗವು ವೀರ ಮಹೇ ಶ್ವರನ ಮನಸ್ಥಲದಲ್ಲಿಡಿಗೊಂಡ ಸದ್ಭಾವ ಚರಿತ್ರವೆಂತೆಂದೊಡೆ ಮುಂದೆ ಭಾವಾಚಾರ ಸ್ಥಲವಾದುದು.

---

## ೮ ಭಾವಾಚಾರಸ್ಥಲ.

(೧) ರೂಪ ಕಂಡರು. ನಿರೂಪ ಕಾಣರು. ತನುವನೇ ಕಂಡರು. ಅನುವನೇ ಕಾಣರು. ಆಚಾರವನೇ ಕಂಡರು. ವಿಚಾರವನೇ ಕಾಣರು. ಗುಹೇಶ್ವರಾ ನಿಮ್ಮ ಕುರುಹನೇ ಕಂಡರು. ಕೂಡಲರಿಯದೆ ಕೆಟ್ಟರು.

ಟೀಕು:— ಅಂಗದ ಮೇಲಣ ಇಷ್ಟಲಿಂಗ ರೂಪ ಕಾಣಬಹುದಲ್ಲದೆ ಆ ಲಿಂಗದ ಪ್ರಾಣ ಚೈತನ್ಯಕಳೆ ತಾನೆಂದರಿಯರೆಂಬುದೀಗ ರೂಪನೇ ಕಂಡರು, ನಿರೂಪವ ಕಾಣರೆಂಬ ಶಬ್ದಕ್ಕರ್ಥ. ಆ ಚೈತನ್ಯ ಲಿಂಗದ ಅನುವನು ಇದಿರಿಟ್ಟು ಕಾಣಬಹುದಲ್ಲದೆ ಸರ್ವಾಂಗಲಿಂಗಿಯಾಗಬಾರ ದೆಂಬುದೀಗ ಅನುವನೇ ಕಂಡು ತನುವನೇ ಮರೆದರೆಂಬ ಶಬ್ದಕ್ಕರ್ಥ. ಅಂಗದ ಮೇಲೆ ಇಷ್ಟ ಆಚಾರವ ಕಾಣಬಹುದಲ್ಲದೆ ಆ ಆಚಾರ ಪ್ರಾಣ

ವಪ್ಪ ಮಹಾನುಭಾವ ವಿಚಾರವ ಕಾಣಬಾರದೆಂಬುದೀಗ ಆಚಾರವನೆ ಕಂಡು ವಿಚಾರವ ಮರೆದರೆಂಬ ಶಬ್ದಕ್ಕರ್ಥ. ತಾನೇ ವಸ್ತುವೆಂಬ ಕುರುಹನು ತಮಗೆ ಅನ್ಯವಿಟ್ಟು ನೋಡಿ ಸುಖಿಸಬಹುದಲ್ಲದೆ ತಾನೆಂಬುದನರಿದು ಮರೆಯಬಾರದೆಂಬುದೀಗ ಗುಹೇಶ್ವರಾ ನಿಮ್ಮ ಕುರುಹನೇ ಕಂಡು ಕೂಡಲರಿಯದೆ ಕೆಟ್ಟರೆಂಬ ಶಬ್ದಕ್ಕರ್ಥ.

(೨) ಗುರು ಕೊಟ್ಟ ಲಿಂಗವ ತನ್ನ ಸಜ್ಜಿನ ಲಿಂಗ ಆಯತವಾಯಿತ್ತಯ್ಯ. ಪ್ರಾಣ ಸಜ್ಜಿನಿಂದ ಸ್ವಾಯತವಾಯಿತ್ತಯ್ಯ. ಉಭಯ ಸಜ್ಜಿನಿಂದ ಸಂಗವಾಯಿತ್ತು ಕೂಡಲಚನ್ನಸಂಗಯ್ಯ ನಿಮ್ಮಲ್ಲಿ.

(೩) ಸುಖ ಶೀಲ ಲಿಂಗಧ್ಯಾನ, ಸಮಶೀಲ ಜಂಗಮ ಪ್ರೇಮ, ಮಹಾಶೀಲ ಅವರೆಂದಂತೆ ಎಂಬುದು ಇಂತೀ ತ್ರಿವಿಧವಳವಟ್ಟಡೆ ಕೂಡಲಚನ್ನಸಂಗಯ್ಯನಲ್ಲಿ ಲಿಂಗೈಕ್ಯವು.

(೪) ನೆನೆನೆನೆದು ಮನ ಘನ ವೇಧಿಸಿತ್ತು. ಕಂಡು ಕಂಡು ಮನ ಡಾವರಿಸಿತ್ತು. ತತ್ತಲ್ಲೀಯವಾಯಿತ್ತು. ತಮಗತ ಶಬ್ದ ಮುಗ್ಧವಾಯಿತ್ತು. ಎತ್ತಣ ಗುಹೇಶ್ವರನೆಂದರಿಯದೆ ಉಭಯಲಿಂಗ ಒಳಕೊಂಡಿತ್ತಯ್ಯ.

(೫) ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯ. ನಿರಾಳ ಲಿಂಗಕ್ಕೆ ಬಯಲೇ ಸಜ್ಜೆ. ವಾಯುವೇ ಶಿವದಾರ. ಬೆಳಗೇ ಸಿಂಹಾಸನ. ಅತ್ತಲಿತ್ತ ಚಿತ್ತ ಹರಿಯಲೀಯದೆ ಮಜ್ಜನಕ್ಕೆರೆದು ಸುಖಿಯಾದೆ ಗುಹೇಶ್ವರಾ.

ಇಂತು ಮನೋಮಧ್ಯದಲ್ಲಿ ಸದ್ಭಾವ ಚರಿತ್ರ ಸಂಬಂಧವಾದ ಲಿಂಗವು ವೀರಮಹೇಶ್ವರನ ಮಹಾಜ್ಞಾನಾಚರಣೆಯು ನೈದಿವ ಭೇದ ವೆಂತಿರ್ಪವೆಂದಡೆ ಮುಂದೆ ಜ್ಞಾನಾಚಾರಸ್ಥಲವಾದುದು.

# ೯ ಜ್ಞಾನಾಚಾರಸ್ಥಲ.

(೧) ಅರೆಯ ಮೇಲಣ ಹುಲ್ಲೆಗೆ ಕೆಂಗರಿಯ ಬಾಣವ ತೊಟ್ಟರೆ ಅದು ತಪ್ಪದೆ ತಾಗಿತ್ತು. ಅದು ಒಂದೇ ಬಾಣದಲ್ಲಳಿಯಿತ್ತಲ್ಲಾ. ನಾರಿ ಹರಿಯಿತ್ತು. ಬಿಲ್ಲು ಮುರಿಯಿತ್ತು. ಹುಲ್ಲೆ ಎತ್ತ ಹೋಯಿತ್ತೋ ಗುಹೇಶ್ವರಾ.

ಟೀಕು:— ಅರೆ ಎಂದಡೆ ಜಡರೂಪವಪ್ಪ ಕಾಯವೆಂಬರ್ಥ. ಆ ಜಡಪಿಂಡದ ಮೇಲೆ ಮಾಯೆ ಎಂಬ ಹರಿಣಿ ಇಪ್ಪಳೆಂಬುದೀಗ ಅರೆಯ ಮೇಲಣ ಹುಲ್ಲೆ ಎಂಬ ಶಬ್ದಕ್ಕರ್ಥ. ಕೆಂಗರಿಯ ಬಾಣನೆಂದರೆ ಸುಜ್ಞಾನವೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ಎಂಬ ಮೃಗಕ್ಕೆ ಶರಣನೆಂಬ ಬೇಂಟೆಕಾರನು ನಿಷ್ಠೆ ಎಂಬ ಬಿಲ್ಲ ಹಿಡಿದು ಭಾವವೆಂಬ ನಾರಿಯೊಳಗೆ ಸುಜ್ಞಾನವೆಂಬ ಬಾಣ ಹೂಡಿ ಪರಿಪೂರ್ಣವಾಗಿ ತೆಗೆದು ಎಸೆಯಲು ಆ ಮಾಯಾಮೃಗವು ಒಂದೇ ಶಸ್ತ್ರದಲ್ಲಿ ಅಳಿಯಿತ್ತೆಂಬುದೀಗ ಅರೆಯ ಮೇಲಣ ಹುಲ್ಲೆಗೆ ಕೆಂಗರಿಯ ಬಾಣವ ತೊಟ್ಟವನೆ ತಪ್ಪದೆ ತಾಗಿತ್ತಲ್ಲಾ, ಅದು ಒಂದೇ ಬಾಣದಲ್ಲಿ ಅಳಿಯಿತ್ತಲ್ಲಾ ಎಂಬ ಶಬ್ದಕ್ಕರ್ಥ. ಇಂತಾಗಲು ಆ ಭಾವವೆಂಬ ನಾರಿಯೂ ಅಳಿದು ನಿಷ್ಠೆಯೂ ವಿಶ್ರಮಿಸಿ ಆ ಮಾಯೆಯೂ ಅಳಿದು ಹೋಯಿತ್ತೆಂಬುದೀಗ ನಾರಿ ಹರಿಯಿತ್ತು, ಬಿಲ್ಲು ಮುರಿಯಿತ್ತು, ಹುಲ್ಲೆ ಎತ್ತ ಹೋಯಿತ್ತು ಎಂಬ ಶಬ್ದಕ್ಕರ್ಥ.

(೨) ಉರವಣಿಸುವ ಮನ ಮುಟ್ಟುವನ್ನಕ್ಕ ಕಾಡುವುದು. ಘನಾಘನದಲ್ಲಿ ಮನ ನಂಬುವನ್ನಕ್ಕ ಕಾಡುವುದು. ಮಹಂತ ಗುಹೇಶ್ವರನೆಂಬ ಶಬ್ದವುಳ್ಳನ್ನಕ್ಕ ಕಾಡುವದು.

(೩) ಉಭಯ ತನುಗುಣ ವಳಿದಲ್ಲದೆ, ಅರಿವಿನಾಚಾರ ವಳವಡದು. ಅರಿವಿನಾಚಾರವಳವಟ್ಟಲ್ಲದೆ ಲಿಂಗದ ಬೆಳಗು ದೊರಕೊಳ್ಳದು. ಲಿಂಗದ ಬೆಳಗು ದೊರಕೊಂಡಲ್ಲದೆ ಕೂಡಲಚೆನ್ನಸಂಗಯ್ಯನಲ್ಲಿ ಪರಿಣಾಮ ನೆಲೆಗೊಳ್ಳದು.

(೪) ನೋಡುವುದ ನೋಡಲರಿಯದೆ ಕೆಟ್ಟಿತ್ತೀ ಲೋಕವೆಲ್ಲ. ನೋಡುವುದ ನೋಡಬಲ್ಲಡೆ ಕೂಡಲಿಲ್ಲ, ಅಗಲಲಿಲ್ಲ. ನೋಟದ ಕೂಟದ ಅಗಲದ ಸುಖವನು ಗುಹೇಶ್ವರ ನಿಮ್ಮ ಶರಣ ಬಲ್ಲ.

(೫) ಅಂಗದಾಪ್ಯಾಯನವಳಿಯದ ಕಾರಣ 'ಲಿಂಗಾ' 'ಲಿಂಗಾ' ಎನುತಿರ್ದರು. ಸಂಗದಾಪ್ಯಾಯನ ವಳಿಯದ ಕಾರಣ 'ಜಂಗಮಾ' 'ಜಂಗಮಾ' ಎನುತಿರ್ದರು. ಪರಿಣಾಮ ನೆಲೆಗೊಳ್ಳದ ಕಾರಣ 'ಪ್ರಸಾದ' 'ಪ್ರಸಾದ' ಎನುತಿರ್ದರು. ಇಂತೊಂದು ಅಂಗವಿಡಿದು ನಾವು ಭಂಗಿತರಾದರೆಲ್ಲರು. ಕೂಡಲಚನ್ನಸಂಗಯ್ಯ ನಿಮ್ಮ ಶರಣ ಆರಂಗ ವಿರಹಿತ.

(೬) ಉರುವಣಿಸುವ ಮನ ಮುಟ್ಟುವನ್ನಕ್ಕ ಕಾಡುವುದು ಘನ. ಘನದಲ್ಲಿ ಮನ ನಂಬುವನ್ನಕ್ಕ ಕಾಡುವುದು. ಮಹಂತ ಗುಹೇಶ್ವರ ನೆಂಬ ಶಬ್ದವುಳ್ಳನ್ನಕ್ಕ ಕಾಡುವುದು.

(೭) ಸಟೆ ದಿಟವಾದಲ್ಲಿ ಮುಟ್ಟಿಯೂ ಮುಟ್ಟದಂತಿರಬೇಕು. ಅತಿ ರತಿ ಗತಿ ಮತಿಗೆ ಮಂದವಾಯಿತ್ತು. ಎಂಟು ಹಿಟ್ಟು ಮುಚಮುರ ಉಂಟು. ಧರೆಯ ಮೇಲೆ ನರ ಸುರಾದಿಗಳೆಲ್ಲ ಶಲಾರವ ಹೊತ್ತುಕೊಂಡು ಇದ್ದಾರೆ. ಹಿಟ್ಟು ನಷ್ಟ ಮತ ಹಾಳು ಊರಿಗುಪಟಳ ಪಂಚ ಮತವ ಸುಟ್ಟು ಗುಹೇಶ್ವರ ಬೀದಿಗರುವಾದಾ.

(೮) ಲಿಂಗವನರಿಯದೆ ಏನನರಿದಡೂ ಫಲವಿಲ್ಲ. ಲಿಂಗವನರಿದ ಬಳಿಕ ಮತ್ತೇನನರಿದಡೂ ಫಲವಿಲ್ಲ. ಸರ್ವ ಕಾರಣ ಲಿಂಗವಾಗಿ, ಅಂಗವನರಿದರಿದು ಲಿಂಗಸಂಗವ ಮಾಡುವ. ಆ ಸಂಗದೊಳಗೋಲಾಡುವ ಗುಹೇಶ್ವರ.

(೯) ಉಂಡೆನುಟ್ಟಿಹೆನೆಂಬ ಸಂದೇಹ ನಿನಗೇಕಯ್ಯಾ? ಉಂಬುದೇ ಅಗ್ನಿ. ಉಡುವುದೇ ಪೃಥ್ವಿ? ನೀನೆಂದು ಉಂಡೆ, ನಾನೆಂದು ಕಂಡೆ. ಉಣ್ಣದೆ ಉಡದೆ ಹೊಗೆಯ ಕೈಯ್ಯಲ್ಲಿ ಸತ್ತನೆಂಬ ಅಂಜಿಕೆ ಬೇಡ. ನಿನಗೆ ಬೇಡ. ಅಂಜದಿರು ಗುಹೇಶ್ವರಾ. ನಿನಗಾವ ನಾಚಿಕೆಯೂ ಇಲ್ಲ.

(೧೦) ಏನೆಂಬೆನೇನೆಂಬೆ? ಆಪ್ಯಾಯನ ವಿರಹಿತನ ಏನೆಂಬೆ ನೇನೆಂಬೆ? ನಾಮ ನಿರ್ನಾಮವಲ್ಲದುದ ಏನೆಂಬೆ ನೇನೆಂಬೆ? ಸಾರಾಯ ಸನ್ನಿತವಲ್ಲದುದ ಏನೆಂಬೆ ನೇನೆಂಬೆ? ದೇವ ಕ್ರಿಯೆ ಮೀರಿದ ಸಂಬಂಧವ ಕೂಡಲಚನ್ನಸಂಗಯ್ಯ ಆನೆಂಬುದಿಲ್ಲದುದನೇನೆಂದುಪಮಿಸುವೆ?

(೧) ಲಿಂಗಸ್ಥಲ ಲಿಂಗದ ಸ್ಥಲದಲ್ಲಿಯೇ ನಿಂದುದು. ಜಂಗಮ ಸ್ಥಲ ಜಂಗಮಸ್ಥಲದಲ್ಲಿಯೇ ನಿಂದುದು. ಪ್ರಸಾದಸ್ಥಲ ಪ್ರಸಾದಸ್ಥಲದಲ್ಲಿಯೇ ನಿಂದುದು. ಇಂತೀ ತ್ರಿವಿಧ ಸ್ಥಲವು ತ್ರಿವಿಧದಲ್ಲಿಯೇ ನಿಂದುದು ಕೂಡಲಚನ್ನಸಂಗಾ ನಿಮ್ಮ ಶರಣಂಗೆ.

ಇಂತು ಧರ್ಮಾಚಾರ, ಭಾವಾಚಾರ, ಜ್ಞಾನಾಚಾರವೆಂಬ ತ್ರಿವಿಧ ಸ್ಥಲವು ಏಕವಾದ ಲಿಂಗವು ಅವಿರಳ ಲಿಂಗಸಂಗ ಸುಖಿಯಾದ ಲಿಂಗ ಪ್ರಸಾದಿಯ ಕಾಯದಲ್ಲಿ ಅವಗ್ರಾಹಕವಾದ ಭೇದವೆಂತಿರ್ದುದೆಂದಡೆ ಮುಂದೆ ಕಾಯಾನುಗ್ರಹ ಸ್ಥಲವಾದುದು.

---

# ಶಿವಲಿಂಗಸ್ಥಲ.

ವಿವರಣೆ:— ೫೭ ಲಿಂಗಸ್ಥಲಗಳಲ್ಲಿ ಮೊದಲನೆಯ ಎರಡು ಸ್ಥಲಗಳಾದ ಆಚಾರಲಿಂಗ ಮತ್ತು ಗುರುಲಿಂಗ ಇವುಗಳಲ್ಲಿ ಪ್ರಗತಿಯು ಹೇಗೆ ಉಂಟಾಗುವದೆಂಬದು ಹಿಂದೆ ವಿವರಿಸಲ್ಪಟ್ಟಿತು. ಇವುಗಳು ಕ್ರಿಯಾಪ್ರಧಾನವಾದ ಸ್ಥೂಲ ತನುವಿಗೆ ಸಂಬಂಧಪಟ್ಟವುಗಳಿರುತ್ತವೆ. ಈ ಕ್ರಿಯೆಗಳ ವೈಶಿಷ್ಟ್ಯಗಳು ಈ ಸ್ಥಲಗಳಲ್ಲಿ ಹೇಳಲ್ಪಟ್ಟಿರುತ್ತವೆ.

ಈ ಕ್ರಿಯೆಗಳನ್ನು ಮಾಡುತ್ತ ಹೋದ ಹಾಗೆ ಸೂಕ್ಷ್ಮ ತನುವಿನಲ್ಲಿಯೂ ಲಿಂಗದ ಹೆಚ್ಚುವಿಕೆಯು ಉಂಟಾಗುತ್ತ ಹೋಗುತ್ತದೆ. ಈ ತನುವಿಗೆ ಸಂಬಂಧಿಸಿದ ಲಿಂಗವು ಪ್ರಾಣಲಿಂಗವಿರುತ್ತದೆ. ಈ ಲಿಂಗದಲ್ಲಿ ಶಿವಲಿಂಗ ಮತ್ತು ಜಂಗಮಲಿಂಗ ಎಂಬ ಎರಡು ಮುಖ್ಯ ವಿಭೇದಗಳಿವೆ. ಇವುಗಳಲ್ಲಿ ಮೊದಲು ಶಿವಲಿಂಗದ ಜಾಗ್ರತೆಯುಂಟಾಗಿ ಆ ಮೇಲೆ ಜಂಗಮಲಿಂಗದಲ್ಲಿ ಅದು ಮತ್ತಿಷ್ಟು ಬಲಪಡುತ್ತದೆ. ಈ ಎರಡು ಲಿಂಗ ಸ್ಥಲಗಳ ಆಚರಣೆಗಳನ್ನು ವಚನಕಾರರು ಮುಂದೆ ಹೇಳಿದ್ದು, ಅವುಗಳನ್ನು ಅನುಸರಿಸಿದಲ್ಲಿ ಸೂಕ್ಷ್ಮ ಶರೀರದ ಲೈಂಗಿಕ ಗುಣಗಳು ಪ್ರಗತಿಯನ್ನು ಹೊಂದುತ್ತ ಹೋಗುತ್ತವೆ. ಈ ಸೂಕ್ಷ್ಮ ಶರೀರದೊಡನೆ ಸ್ಥೂಲ ಶರೀರವೂ ಕೂಡ ಹೆಚ್ಚೆಚ್ಚು ವೃದ್ಧಿಯನ್ನು ಹೊಂದುತ್ತ ಹೋಗುವದೆಂಬದನ್ನೂ ನಾವು ಲಕ್ಷಿಸಬೇಕು.

ಸೂಕ್ಷ್ಮ ಶರೀರದ ಲೈಂಗಿಕ ಬೆಳವಣಿಗೆಯು ಅರ್ಪಣದ ಮೇಲೆ ಅವಲಂಬಿಸಿರುತ್ತದೆ. ಅಂದರೆ ಮನುಷ್ಯನು ತನ್ನದನ್ನೆಲ್ಲ ಪರಮಾತ್ಮನಿಗೆ ಅರ್ಪಿಸಿ ಪ್ರಸಾದ ಭೋಗಿಯಾಗಬೇಕು. ಈ ರೀತಿಯ ವರ್ತನೆಯಿಂದ ಪ್ರಾಣಲಿಂಗವು ಮನುಷ್ಯನ ಅಂತರಂಗ ಮತ್ತು ಬಹಿರಂಗವನ್ನು ವ್ಯಾಪಿಸುವದು. ಈ ಆಚರಣೆಗಳು ಶಿವಲಿಂಗಸ್ಥಲ ಮತ್ತು ಜಂಗಮಲಿಂಗಸ್ಥಲ ಇವುಗಳಲ್ಲಿ ಹೇಳಲ್ಪಡುತ್ತವೆ.

## ಶಿವಲಿಂಗಸ್ಥಲ

ಶಿವಲಿಂಗ ಸ್ಥಲದಲ್ಲಿ ಅನುಗ್ರಹ ಲಿಂಗ, ಅರ್ಪಿತಲಿಂಗ, ಮತ್ತು ತನುಗುಣ ಲಿಂಗ ಎಂಬ ಮೂರು ಮುಖ್ಯ ವಿಭಾಗಗಳಿರುತ್ತವೆ.

**ಅನುಗ್ರಹಲಿಂಗ**:— ಇದರಲ್ಲಿ ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ ಎಂಬ ಮೂರು ವಿಭಾಗಗಳಿವೆ. ಕಾಯುವನ್ನು ಲಿಂಗಕ್ಕೆ ಅರ್ಪಿಸಿದಲ್ಲಿ ಕಾಯಾನುಗ್ರಹವೆನಿಸುತ್ತದೆ. ಇಂದ್ರಿಯಗಳನ್ನು ಅರ್ಪಿಸಿದಲ್ಲಿ ಇಂದ್ರಿಯಾನುಗ್ರಹವು. ಪ್ರಾಣಕ್ಕೆ ಸಂಬಂಧಿಸಿದರೆ ಪ್ರಾಣಾನುಗ್ರಹವು.

ಕಾಯುದಲ್ಲಿ ಲಿಂಗವು ವೇಧಿಸಿದರೆ, ಅಂಗ ವಿಕಾರಗಳು ದೂರಾಗುವವು. ಇಂದ್ರಿಯುಗಳಲ್ಲಿ ವೇಧಿಸಿದರೆ, ಅವೆಲ್ಲವು ಲಿಂಗ ಚೈತನ್ಯವನ್ನು ಹೊಂದಿ ಲಿಂಗಮಯುವಾಗುವವು. ಪ್ರಾಣದಲ್ಲಿ ವೇಧಿಸಿದರೆ ಬಾಹ್ಯಾಭ್ಯಂತರವೆಲ್ಲ ಲಿಂಗದಲ್ಲಿ ಸಾಮರಸ್ಯವನ್ನು ಹೊಂದುವದು.

**ಅರ್ಪಿತಲಿಂಗ**:— ಈ ಪ್ರಕಾರ ಲಿಂಗಾನುಗ್ರಹವನ್ನು ಹೊಂದಿದವರಿಗೆ ಕಾಯಾರ್ಪಿತ, ಕರಣಾರ್ಪಿತ ಮತ್ತು ಭಾವಾರ್ಪಿತಗಳಾಗುವವು. ಈ ಅರ್ಪಿತಲಿಂಗಗಳು ಹಿಂದೆ ಹೇಳಿದ ಅನುಗ್ರಹ ಲಿಂಗಗಳಿಗೆ ಅನುಸಾರವಾಗಿಯೇ ಪ್ರಕಟವಾಗುತ್ತವೆ. ಕಾಯುದಲ್ಲಿ ಅರ್ಪಿತವಾದುದು ಕಾಯಾರ್ಪಿತವೆನಿಸುವದು. ಅಂತರ್ಮುಖದಲ್ಲಿ ಸಮರ್ಪಿತವಾದುದು ಕರಣಾರ್ಪಿತವು. ಭಾವದಲ್ಲಿ ಅರ್ಪಿತವಾದುದು ಭಾವಾರ್ಪಿತವೆನಿಸುವದು. ಮೊದಲನೆಯುದರಲ್ಲಿ ಕಾಯುದ ನೆವದಿಂದ ಅರ್ಪಣವು. ಎರಡನೆಯುದರಲ್ಲಿ ಕರಣಗಳ ಮೂಲಕ ಅರ್ಪಿತವು. ಭಾವಾರ್ಪಿತದಲ್ಲಿ ಅರ್ಪಿತವಾದ ಬಳಿಕ ಇದ್ದೂ ಇಲ್ಲದಂತೆ ಇರುವ ಸ್ಥಿತಿಯು ಉಂಟಾಗುವದು.

**ತನುಗುಣಲಿಂಗ**:— ಹೀಗೆ ಅರ್ಪಿತದ ರೀತಿಯನ್ನರಿತವನಲ್ಲಿ ಶಿಷ್ಯ, ಶುಶ್ರೂಷಾ, ಸೇವ್ಯ ಎಂಬ ಭಾವಗಳುಂಟಾಗುವವು. ಲಿಂಗವನ್ನಿಚ್ಛಿಸಿ ಮೊದಲು ಗುರುವಿನಲ್ಲಿ ಶಿಷ್ಯತ್ವವನ್ನು ಅಂಗೀಕರಿಸಬೇಕು. ಮುಂದೆ ಅವನ ಶುಶ್ರೂಷೆಯಲ್ಲಿದ್ದು ಲಿಂಗ ತತ್ವವನ್ನು ತನ್ನಲ್ಲಿ ದೃಢಪಡಿಸಿಕೊಳ್ಳಬೇಕು. ಮುಂದೆ ಹೀಗೆ ಶುಶ್ರೂಷೆ ಮಾಡುವ ಶಿಷ್ಯನೂ ಶುಶ್ರೂಷೆ ಮಾಡಿಸಿಕೊಳ್ಳುವ ಗುರುವೂ ಏಕರೂಪವಾಗುವರು. ಆಗ ಶಿಷ್ಯನು ಗುರುವಿನಲ್ಲಿ, ಗುರುವು ಶಿಷ್ಯನಲ್ಲಿ ಸಮರಸವಾಗುವರು. ಇದೇ ಸೇವ್ಯವು. ಆಗ ಶಿಷ್ಯನ ತನು ಗುಣಗಳು ಲಿಂಗ ರೂಪಾಗುವವು.

ಈ ಒಂಬತ್ತು ಸ್ಥಲಗಳ ಮೂಲಕ ಶಿವಲಿಂಗವು ಭಕ್ತನಲ್ಲಿ ಎಡೆಗೊಳ್ಳುವದು. ಇವು ಶಿವಲಿಂಗದಲ್ಲಿಯ ಪ್ರಗತಿಯ ಮೆಟ್ಟಲುಗಳಾಗಿವೆ.

---

## ೧. ಕಾಯಾನುಗ್ರಹಸ್ಥಲ.

(೧) ಅರತುದಯ್ಯಾ ಅಂಗ ಗುಣ. ಬರತುದಯ್ಯಾ ಭಕ್ತಿರಸ. ಅಪರಿಸಿತಯ್ಯಾ ಅಂಗ ಲಿಂಗವನು. ಏನೆಂದರಿಯೆನಯ್ಯಾ. ಲೋಕಲೌಕಿಕವನರಿಯೆನಯ್ಯಾ. ಲಿಂಗ ಭ್ರಾಂತನಾದೆನಯ್ಯಾ ಕೂಡಲ ಚನ್ನಸಂಗಮದೇವಾ ನಿಮ್ಮ ಕರುಣವೆನ್ನನೆಡೆಗೊಂಡಿತ್ತಾಗಿ.

ಟೀಕು:— ಸಮ್ಯಜ್ಞಾನೋದಯದಿಂದ ದೇಹದ ಅಜ್ಞಾನವಳಿದು ಶಿವನಲ್ಲಿ ಅತಿ ರತಿಯಾದ ಭಕ್ತಿ ಒದಗಲು ಆ ಭಕ್ತ ಕಾಯ ಮಮ ಕಾಯವೆಂದು ಲಿಂಗವು ಆ ಭಕ್ತನ ಸರ್ವಾಂಗವನವಗ್ರಹಿಸಿ ಜೀವಭಾವ ಪಳಿದು ಲೌಕಿಕಾಚಾರ ಧರ್ಮವನು ಮರೆದು ತಾನೆಲ್ಲ ಲಿಂಗವಾಗಿ ತನ್ನ ಕಾಣುತ್ತಿಪ್ಪ ಭ್ರಾಂತಿ ನೆಲೆಗೊಂಡು ಲಿಂಗವಾಗಿಪ್ಪನು ಸದ್ಭಕ್ತನು. ಇಂತಪ್ಪ ಸದ್ಭಕ್ತನು ಶಿವನ ಕೃಪೆಯಿಂದ ಮಾಡಲಾಯಿತ್ತೆಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ಎತ್ತಣ ಮಾಮರ, ಎತ್ತಣ ಕೋಗಿಲೆ, ಎತ್ತಣಿಂದೆತ್ತಣ ಸಂಬಂಧವಯ್ಯಾ? ಬೆಟ್ಟದ ನೆಲ್ಲಿಯ ಕಾಯಿಯು ಸಾಗರದೊಳಗಣ ಲವಣವು ಎತ್ತಣಿಂದೆತ್ತ ಸಂಬಂಧವಯ್ಯಾ? ಗುಹೇಶ್ವರ ಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯಾ?

(೩) ಮರುಳ ಮದ್ದುಗುಣಿಕೆಯ ಕಾಯ ತಿಂದು, ಮರುಳೇನರಿತ ಹೇಳಲುಂಟೆ? ಶಿವಶಿವಾ, ಲಿಂಗ ತನ್ನನವಗ್ರಹಿಸಿದ ಬಳಿಕ ಅಂಗ ವಿಕಾರವೆಂಬುದನರಿಯರು, ಸಿದ್ಧಸೋಮನಾಥನೆಂಬ ಭಂಗವನಳಿದು ಸಂಗ ಉಳಿದ ಬಳಿಕ.

(೪) ಲೋಕದ ನಚ್ಚು ಮಚ್ಚು ನಿಶ್ಚಿಂತವಾಯಿತ್ತು. ಇದೇನು ಹತ್ತಿತೆಂದರಿಯೆನಯ್ಯಾ! ನಾನಿದೇನು ಹೊದ್ದಿತೆಂದರಿಯೆನಯ್ಯಾ! ಗುಹೇಶ್ವರನೆಂಬ ಗ್ರಹ ಒಳಕೊಂಡಿತ್ತಾಗಿ ನಾನೇನೆಂದರಿಯೆನಯ್ಯಾ!

ಇಂತು ಕಾಯುವಲ್ಲಿ ಸಂಬಂಧವಾಗಿ ಅನುಗ್ರಹ ಸ್ವರೂಪವನ್ನೈದಿದ ಲಿಂಗವು ಪ್ರಸಾದಿಯ ಸರ್ವೇಂದ್ರಿಯ ಮುಖದಲ್ಲಿ ಸಂಗವಾದ ಭೇದ ವೆಂತೆಂದಡೆ ಮುಂದೆ ಇಂದ್ರಿಯಾನುಗ್ರಹ ಸ್ಥಲವಾದುದು.

---

## ೨. ಇಂದ್ರಿಯಾನುಗ್ರಹ.

(೧) ಎನ್ನ ತ್ರಿವಿಧಾತ್ಮರು ನಿಮ್ಮ ಹೆಂಡಿರು. ಸತ್ವ, ರಜ, ತಮಂ ಗಳು ನಿಮ್ಮ ಭೃತ್ಯರಯ್ಯ. ಅಂತಃಕರಣ ಚತುಷ್ಟಯಂಗಳು ನಿಮ್ಮ ಮಂತ್ರಿಗಳಯ್ಯ. ಪಂಚೇಂದ್ರಿಯಂಗಳು ನಿಮ್ಮ ಪಡಿಹಾರರಯ್ಯ. ಅರಿ ಷಡ್ವರ್ಗಂಗಳು ನಿಮ್ಮ ತೊತ್ತಿಂದಿರಯ್ಯ. ಸಪ್ತಧಾತುಗಳು ನಿಮ್ಮ ಬಾಣಸಿಗರಯ್ಯ. ಅಷ್ಟ ಮದಂಗಳು ನಿಮ್ಮ ದಳವಾಯಿಗಳಯ್ಯ. ನವ ರಸಂಗಳು ನಿಮ್ಮ ಭಾಂಡಾರಿಗಳಯ್ಯ. ದಶವಾಯುಗಳು ನಿಮ್ಮ ಛತ್ರ ಚಾಮರ ಸೀಗುರಿಗಳು. ಶಂಭುಸೋಮನಾಥಲಿಂಗ ನಿಮಗೆನ್ನ ಕಾಯ ಮುಂತಾಗಿ ಬಾಹತ್ತರ ಡಿಂಗರಿಗರಯ್ಯ.

ಟೀಕು:— ಲಿಂಗಾಂಗ ಸಂಬಂಧಿಯಾಗಿಪ್ಪ ಸದ್ಭಕ್ತನ ಅಂಗಪ್ರಾಣ ಮನ ಇಂದ್ರಿಯಂಗಳೆಲ್ಲ ಲಿಂಗದ ಸೇವೋಪಚಾರವೆಂಬುದೀ ವಚನದ ತಾತ್ಪರ್ಯಾರ್ಥ.

(೨) ಪ್ರಥಮ ಗುರು ಕಾಣಲಿಕ್ಕಾಗಿ ಕರ್ಮಂಗಳು ಬೆಚ್ಚಿ ಬೆದ ರಿದವು. ಸದ್ಗುರು ಕಾರುಣ್ಯ ಹಸ್ತಮಸ್ತಕ ಸಂಯೋಗವಾದಲ್ಲಿ ಪೂರ್ವ ಗುಣವಳಿದು ಪುನರ್ಜಾತನಾಗಿ, ಕರಣಾದಿ ಗುಣಂಗಳಳಿದು ಶಿವಲಿಂಗ ದಲ್ಲಿ ಉಳಿದು, ಅನುಪಮ ಸುಖ ಸಾರಾಯ ಶರಣನೆನಿಸಿ ಇದನರಿದು ಲಿಂಗವಲ್ಲಿರ್ದೆನು. ಅರಿದು ಜಗದಲ್ಲಿ ಕಾರುಣ್ಯವ ಪಡೆದು ಭವಿಯ ನೊಲ್ಲೆನೆಂದು ಬೇರೆ ನಿಂದ ಕಾರಣ ಕೂಡಲ ಚನ್ನಸಂಗಯ್ಯ ನಿಮ್ಮ ಶರಣ ಭವಕಲ್ಪಿತವ ಕಳೆದ.

(೩) ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಪಂಚ ಭೂತಂಗಳಲ್ಲಿ ಪಂಚಮುಖ ಲಿಂಗ ಪ್ರತಿಷ್ಠೆಯ ಮಾಡಿದೆನಯ್ಯಾ.

ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯವೆಂಬ ದಶೇಂದ್ರಿಯಂಗಳಲ್ಲಿ ದಶಮುಖ ಲಿಂಗ ಪ್ರತಿಷ್ಠೆಯ ಮಾಡದನಯ್ಯ? ಅಂತರ್ಬಾಹ್ಯ ಭರಿತನಾಗಿ ಸರ್ವಾಂಗವ ಲಿಂಗವ ಮಾಡಿದ ಕೂಡಲ ಚನ್ನಸಂಗಾ ನಿಮ್ಮ ಶರಣ ಬಸವಣ್ಣನು.

(೪) ಗುರು ಸಾಹಿತ್ಯರ ಕಾಣಬಹುದು. ಲಿಂಗ ಸಾಹಿತ್ಯರ ಕಾಣಬಹುದು. ಜಂಗಮ ಸಾಹಿತ್ಯರ ಕಾಣಬಹುದು. ಪ್ರಸಾದ ಸಾಹಿತ್ಯರ ಕಾಣಬಹುದು. ಕೂಡಲ ಚನ್ನಸಂಗಯ್ಯನಲ್ಲಿ ಇಂದ್ರಿಯ ಸಾಹಿತ್ಯ ಭಕ್ತ ಬಸವಣ್ಣಂಗಲ್ಲದೆ ಮತ್ತಾರಿಗೂ ಇಲ್ಲ.

(೫) ಶಬ್ದ, ಸ್ಪರ್ಶ, ರೂಪು, ರಸ, ಗಂಧ, ಪಂಚೇಂದ್ರಿಯಂಗಳೆಲ್ಲ ಏಕಾಕಿಗಳಾಗಿರ್ದವು. ತಮ್ಮೊಳಗೆ ತಾವು ಹರಿಯದೆ ಏಕಾಕಿಗಳಾಗಿರ್ದವು. ಸಕಳೇಶ್ವರ ದೇವರಲ್ಲಿ ಪರಿಣಾಮ ಪ್ರಸಾದದ ಪದವಿಯ ಪಡೆದೆನಾಗಿ ಎನ್ನೊಡನೆ ಹುಟ್ಟಿ ನೀವೆಲ್ಲ ಸುಖಿಗಳಾದಿರಯ್ಯ.

ಇಂತು ಸರ್ವೇಂದ್ರಿಯದಲ್ಲಿ ಸಂಗವಾದ ಲಿಂಗವು ಪ್ರಸಾದಿಯ ಪ್ರಾಣಸ್ಥಲದಲ್ಲಿ ಸಂಗವಾದ ಭೇದವೆಂತಿರ್ದುದೆಂದಡೆ ಮುಂದೆ ಪ್ರಾಣಾನುಗ್ರಹ ಸ್ಥಲವಾದುದು.

---

## ೩. ಪ್ರಾಣಾನುಗ್ರಹಸ್ಥಲ.

(೧) ಆಚಾರವನಾಚಾರವಾಯಿತ್ತು. ಸೀಮೆ ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಲ ತಪ್ಪಿ, ಲಿಂಗ ಸಂಚಲವಾಯಿತ್ತು. ಎಲ್ಲಿ ಶಬ್ದವಲ್ಲಿ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಸೋಂಕಲ್ಲಿಯೇ ಲಿಂಗ ಸ್ವಾಯತವಾಯಿತ್ತು. ಎಲ್ಲಿ ರೂಪಲ್ಲಿಯೇ ಲಿಂಗ ಸ್ವಾಯತವಾಯಿತ್ತು. ಎಲ್ಲಿ ರುಚಿಯಲ್ಲಿ ಅಲ್ಲಿಯೇ ಲಿಂಗಸ್ವಾಯತವಾಯಿತ್ತು. ಎಲ್ಲಿ ಗಂಧವಲ್ಲಿಯೇ ಲಿಂಗಸ್ವಾಯತವಾಯಿತ್ತು. ಕೂಡಲಚನ್ನಸಂಗಮದೇವರ ಕರುಣ ಕಡೆಗೋಡಿವರಿಯಿತ್ತಯ್ಯಾ ಎನ್ನ ಮೇಲೆ.

ಟೀಕು:— ಆಚಾರದ ಸೀಮೆ ಸಂಬಂಧವೆಲ್ಲವೂ ಅಳಿದು ಲಿಂಗಾಚಾರವಳವಟ್ಟು ಅಂಗ ಪ್ರಾಣ ಇಂದ್ರಿಯಂಗಳೆಲ್ಲ ಲಿಂಗಮಯವಾದ ಕಾರಣ, ಕೇಳಿದ ಶಬ್ದ ಮುಟ್ಟಿದ ಸ್ಪರ್ಶನ ನೋಡಿದ ರೂಪು ಸವಿದ ರುಚಿ ವಾಸಿಸಿದ ಗಂಧ ಮೊದಲೆಲ್ಲ ಲಿಂಗಮಯವಾದ ಕಾರಣ, ಗುರುಕೃಪೆಯಾದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ.

(೨) ಹೊರಗನೇ ಹಾರೈಸಿ ಹೊರಗಣ ಸದಾಚಾರ ಕ್ರಿಗಳ ಮನ ಮುಟ್ಟಿ ಮಾಡುತ್ತಿರಲು ಇವೆಲ್ಲಿಯು ಹೊರಗಣ ಸುಖವೆಂದು ವಿಚಾರ ಕಣ್ದೆರೆದು ನೋಡಲು, ಕನ್ನಡಿಯೊಳಗಣ ರೂಪು ತಾನೆಂದರಿವಂತೆ ಮೆಲ್ಲನೆ ಒಳಗಡಗಿತ್ತಯ್ಯಾ. ಲಿಂಗ ಸುಖದ ಸುಗ್ಗಿಯೊಳಗೆ ಎನ್ನ ಪ್ರಾಣ ಮನ ಕರಣಂಗಳು ಮೀರಿದಪ್ಪಿ ಸಮುದ್ರದೊಳಗೆ ಅದ್ದಿದಂತೆ ಆದೆನಯ್ಯಾ. ಮುಳುಗಿದೆನಯ್ಯಾ ಸ್ವಾನುಭಾವವೆಂಬ ಗುರುವಿನ ಕರುಣದಲ್ಲಿ. ಇಂತಾದ ಬಳಿಕ್ಕ ಕೂಡಲಚನ್ನಸಂಗಯ್ಯನೇ ಪ್ರಾಣವಾಗಿರ್ದನಯ್ಯಾ.

ಇಂತು ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹವೆಂಬ ತ್ರಿವಿಧಸ್ಥಲವೇಕವಾದ ಲಿಂಗವು ಅವಿರಳ ಲಿಂಗಸಂಗ ಸುಖಿಯಾದ ಲಿಂಗ ಪ್ರಸಾದಿಯು ಕಾಯದಲ್ಲಿ ಅರ್ಪಿತ ಲಿಂಗ ಮುಖವಾದ ಭೇದವೆಂತಿದರ್ದಪೆಂದೊಡೆ ಮುಂದೆ ಕಾಯಾರ್ಪಿತ ಸ್ಥಲವಾದುದು.

---

## ೪ ಕಾಯಾರ್ಪಿತಸ್ಥಲ.

(೧) ಕಾಯವೇ ಲಿಂಗಾರ್ಪಿತ. ಅರ್ಪಿತವೇ ಪ್ರಸಾದ. ಅದೇ ಮತ್ತೆ ಮತ್ತೆ ಅರ್ಪಿತ ದರ್ಶನದಿಂದಲಾಯಿತ್ತು, ಸ್ಪರ್ಶನದಿಂದಲಾಯಿತ್ತು. ಅರ್ಪಿಸಿದ ಸೋಂಕಿನ ಸುಖದ ಅರ್ಪಿಸಲರಿಯದಿರ್ದಡೆ. ಅದು ಭ್ರಾಂತಿ. ಕೂಡಲಚನ್ನಸಂಗನ ಪ್ರಸಾದವನತಿಗಳೆದಡೆ ಮುಂದೆ ಅದಕಿನ್ನೆಂತೋ?

ಟೀಕು:— ಅಂಗಲಿಂಗ ಸಂಬಂಧವಾದ ಬಳಿಕ, ಅಂಗ ಮನೇಂದ್ರಿಯಂಗಳೆಲ್ಲ ಲಿಂಗಾರ್ಪಿತವಾದ ಕಾರಣ ಪ್ರಸಾದ ಕಾಯವಾಯಿತ್ತು. ಅಂತಪ್ಪ ಪ್ರಸಾದಕಾಯ ಸೋಂಕಿದ ಮುಟ್ಟಿದ ಪದಾರ್ಥಂಗಳೆಲ್ಲ ಪ್ರಸಾದ

ವಾಯಿತ್ತು. ಅಂತಾದ ಪ್ರಸಾದವನೆ ಇಷ್ಟಲಿಂಗಕ್ಕರ್ಪಿಸಬೇಕು. ಆ ಇಷ್ಟ ಲಿಂಗ ಪ್ರಸಾದವನೇ ಪ್ರಾಣಲಿಂಗಕ್ಕರ್ಪಿಸಬೇಕು. ಆ ಪ್ರಾಣಲಿಂಗ ಪ್ರಸಾದವನೆ ಭಾವಲಿಂಗಕ್ಕರ್ಪಿಸಬೇಕು. ಇಂತು ಅರ್ಪಿಸಿದುದ ಅರ್ಪಿಸುವ ಮರ್ಮವನರಿಯದಿರ್ದೊಡೆ, ಜೀವಭಾವ ಹಿಂಗದು. ಅದು ಕಾರಣ ಶಿವ ಪ್ರಸಾದಿಗಳು ಪ್ರಸಾದ ಲಿಂಗಕ್ಕೆ ಸಲ್ಲರೆಂಬವರುಗಳ ಪಾತಕಕ್ಕೆ ಎಣೆ ಇಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

(೨) ಲಿಂಗ ಗಂಭೀರ ನಿಸ್ಸಂಗಿಯು ಸಂಗವ ನಾನೇನೆಂಬೆನಯ್ಯಾ? ಪಾರಮಾರ್ಥದಿಂದ ಗಮಿಸುವ ಗಮನವ ನಾನೇನೆಂಬೆನಯ್ಯಾ? ಕೂಡಲ ಸಂಗನ ಶರಣರು ಕಾಯದ ನೆಪದಿಂದ ಅರ್ಪಿಸುವ ಜಡಗ ನಾನೇ ನೆಂಬೆನಯ್ಯಾ?

(೩) ಅಂಗ ಅನಂಗ ವೆಂಬೆರಡರ ಸಂದಳಿದ ಮಹಂತನ ಅಂಗ ಸೋಂಕಿತ್ತೆಲ್ಲ ಪವಿತ್ರ ಕಾಣಿರೇ. ಪವಿತ್ರವಿದ್ದಲ್ಲಿ ಪದಾರ್ಥವಿಹುದು. ಪದಾರ್ಥವಿದ್ದಲ್ಲಿ ಮನವಿಹುದು. ಮನವಿದ್ದಲ್ಲಿ ಹಸ್ತವಿಹುದು. ಹಸ್ತ ವಿದ್ದಲ್ಲಿ ಜಿಹ್ವೆ ಇಹುದು. ಜಿಹ್ವೆ ಇದ್ದಲ್ಲಿ ರುಚಿ ಇಹುದು. ರುಚಿ ಇದ್ದಲ್ಲಿ ಅವಧಾನವಿಹುದು. ಅವಧಾನವಿದ್ದಲ್ಲಿ ಭಾವವಿಹುದು. ಭಾವವಿದ್ದಲ್ಲಿ ಲಿಂಗವಿಹುದು. ಲಿಂಗವಿದ್ದಲ್ಲಿ ಅರ್ಪಿತವಿಹುದು. ಅರ್ಪಿತವಿದ್ದಲ್ಲಿ ಪ್ರಸಾದ ವಿಹುದು. ಪ್ರಸಾದವಿದ್ದಲ್ಲಿ ಪರಿಣಾಮವಿಹುದು. ಇದು ಕಾರಣ ಮಹಾ ಘನ ಸದ್ಗುರು ಸಿದ್ಧ ಸೋಮನಾಥ ನಿಮ್ಮ ಶರಣರು ಪ್ರಾಣಲಿಂಗ ಪ್ರವೇ ಶಿಗಳಾಗಿ ಪರಿಣಾಮ ಪ್ರಸಾದಿಗಳಯ್ಯ.

(೪) ಕಾಯ ವಿರೋಧಿ ಸ್ಪರುಶನ, ಭಾವ ವಿರೋಧಿ ದರುಶನ, ರುಚಿ ವಿರೋಧಿ ಪ್ರಸಾದಿ. ಕೂಡಲಚನ್ನಸಂಗಾ ನಿಮ್ಮ ಶರಣನ ಕಾಯವೇ ಲಿಂಗಕ್ಕೋಗರವಾಯಿತ್ತು.

(೫) ಲಿಂಗ ಗಂಭೀರ ನಿಸ್ಸಂಗಿಯು ಸಂಗವ ನಾನೇನೆಂಬೆನಯ್ಯ? ಪರಮಾರ್ಥದಿಂದ ಗಮಿಸುವ ಗಮನವ ನಾನೇನೆಂಬೆನಯ್ಯ? ಕೂಡಲ ಚನ್ನಸಂಗನ ಶರಣರು ಕಾಯದ ನೆಪದಿಂದ ಅರ್ಪಿಸುವ ಜಡಗ ನಾನೇ ನೆಂಬೆನಯ್ಯ.

ಇಂತು ಕಾಯದಲ್ಲಿ ಅರ್ಪಿತ ಮುಖವನ್ನೈದಿದ ಲಿಂಗವು ಪ್ರಸಾದಿಯ ಅಂತರ್ಮುಖದಲ್ಲಿ ಸಮರ್ಪಿತ ಮುಖವಾದ ಭೇದವೆಂತೆಂದೊಡೆ ಮುಂದೆ ಕರಣಾರ್ಪಿತ ಸ್ಥಲವಾದುದು.

---

## ೫ ಕರಣಾರ್ಪಿತಸ್ಥಲ.

(೧) ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡ ಹುಟ್ಟಿ ತಲೆ ಇಲ್ಲದ ಮೃಗ ಬಂದು ಮೇಯಿತ್ತಾ ಗಿಡವನು. ಕಣ್ಣಿಲ್ಲದ ವ್ಯಾಧನು ಕಂಡನಾ ಮೃಗವ. ಕೈಯಿಲ್ಲದ ವ್ಯಾಧನು ಎಚ್ಚನಾ ಮೃಗವನು. ಕಿಚ್ಚಿಲ್ಲದ ನಾಡಿಗೊಯ್ದು ಸುಟ್ಟು ಬಾಣಸವ ಮಾಡಿ ಲಿಂಗಾರ್ಪಿತವಾಯಿತ್ತು ಗುಹೇಶ್ವರಾ.

ಟೀಕು:— ನೀರೇ ಮನಸ್ಸು, ನೆಳಲೆಂದರೆ ಮಾಯೆ, ಬೇರೆಂದರೆ ಮೂಲಾಹಂಕಾರ, ಇಂತು ಮನಪ್ರಕೃತಿ ಮಾಯಾಪ್ರಕೃತಿ ಮೂಲಾಹಂಕಾರ ಪ್ರಕೃತಿಗಳೆಂಬ ಈ ತ್ರಯವು ಅಳಿದುಳಿದ ಶಿವಯೋಗಿಯಲ್ಲಿ ವಿವೇಕವೆಂಬ ವೃಕ್ಷ ಉದಯವಾಗಲು ಅದೀಗ ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡ ಹುಟ್ಟಿ ಎಂಬ ಶಬ್ದಕ್ಕರ್ಥ. ಆ ವಿವೇಕವೆಂಬ ವೃಕ್ಷವನು ತಲೆ ಎಂಬ ಜ್ಞಾನವಿಲ್ಲದ ಮಾಯಾ ಮೃಗವು ಅವಿಚಾರ ರೂಪಿಂ ಬಂದು ತಾನಾ ಸುಖವನು ಸೇವಿಸುತ್ತಿದ್ದಿತ್ತು. ಅದೆಂತೆಂದೊಡೆ ವಿಚಾರವಳವಡದ ಘನವ ವಿಚಾರಿಸುವದೇ ಮಾಯೆಯಾದ ಕಾರಣ ಅದೀಗ ತಲೆ ಇಲ್ಲದ ಮೃಗ ಬಂದು ಮೇಯಿತ್ತಾ ಆ ಗಿಡವನು ಎಂಬ ಶಬ್ದಕ್ಕರ್ಥ. ಆ ಮಾಯೆಯನು ಶರಣನು ಭಿನ್ನ ದೃಷ್ಟಿ ಇಲ್ಲದೆ ನೋಡಿ ಕಂಡು ಭಿನ್ನ ಹಸ್ತವಳಿದು ಅಭಿನ್ನ ಹಸ್ತದಲ್ಲಿ ಭಾವನೆಂಬ ಬಿಲ್ಲ ತುಂಬಿ ತೆಗೆದು ಜ್ಞಾನವೆಂಬ ಬಾಣವ ಹೂಡಿ ಎಸೆದು ಕೆಡಹಲು ಆ ಮಾಯೆ ಅಳಿದು ವಿದ್ಯಾಶಕ್ತಿಯಾಯಿತ್ತೆಂಬುದೀಗ ಕಣ್ಣಿಲ್ಲದ ಕುರುಡನು ಕಂಡನಾ ಮೃಗವನು ಕೈ ಇಲ್ಲದ ವ್ಯಾಧನು ಎಚ್ಚನಾ ಮೃಗವನೆಂಬ ಶಬ್ದಕ್ಕರ್ಥ. ಅಸದ್ವಿದ್ಯಾ ಸುಖವನು ಅವಿದ್ಯಾಗ್ನಿ ಅರತ ಮಹಾ ಜ್ಞಾನಾಗ್ನಿಯಲ್ಲಿ ಸಮರಸ ಪಾಕವ ಮಾಡಿ ಮಹಾ ಲಿಂಗ ಮುಖಕ್ಕೆ ನಿವೇ

ದಿಸುತ್ತಿರಲು ಅದೀಗ ಕಿಚ್ಚಿಲ್ಲದ ನಾಡಿಗೆ ಹೋಗಿ ಸುಟ್ಟು ಬಾಣಸವ ಮಾಡಿ ಲಿಂಗಾರ್ಪಿತವೆಂದ ನಮ್ಮ ಗುಹೇಶ್ವರನೆಂಬ ಶಬ್ದಕ್ಕರ್ಥ.

(೨) ಶ್ರೀಮದ್ಭಾವದಿಂದಾದ ಶೇಷವ ಕ್ರಿಯಕ್ಕರ್ಪಿಸುವೆ. ಕ್ರಿಯದಿಂದಾದ ಶೇಷವ ನಿಷ್ಕ್ರಿಯಕ್ಕರ್ಪಿಸುವೆ, ಜಂಗಮದಿಂದಾದ ಶೇಷವ ಪ್ರಸಾದಕ್ಕರ್ಪಿಸುವೆ. ಪ್ರಸಾದದಿಂದಾದ ಶೇಷವ ಲಿಂಗಕ್ಕರ್ಪಿಸುವೆ. ಲಿಂಗದಿಂದಾದ ಜ್ಞಾನ, ಆ ಜ್ಞಾನದಿಂದ ತೃಪ್ತನಾದೆನು ಕಾಣಾ ಕಲಿದೇವರ ದೇವಯ್ಯಾ.

(೩) ಶಿವಾಚಾರವೇ ಲಿಂಗ, ಶಿವಭಕ್ತಿಯೇ ಅಂಗ, ಶಿವಶರಣರ ನಿಷ್ಠೆಯೇ ಅಂಗ, ಲಿಂಗ ಸಂಗವೆಂದು ಹಿಂಗದಿಹುದೇ ಸತ್ಸಂಗ? ಆವ ಪದಾರ್ಥವಾದಡೇನು ? ತನ್ನ ನೇಮಿಸಿ ಬಂದುದು ಸಕಲೇಂದ್ರಿಯಂಗಳ ಹೊದ್ದಲೀಯ್ಯದೆ ಭಾವ ಮುಖದಲ್ಲಿ ಸಂದಿಸಿ ಕೂಡಲಚನ್ನಸಂಗಯ್ಯಂಗರ್ಪಿಸಿಕೊಳಬಲ್ಲಡೆ ಅದೇ ಅಂಗಲಿಂಗ ಸಂಯೋಗ.

(೪) ಶಬ್ದ, ಸ್ಪರ್ಶ, ರೂಪು. ರಸ, ಗಂಧ ಪಂಚೇಂದ್ರಿಯಂಗಳು ಮೊದಲಾಗಿ ನಡೆವವು ಲಿಂಗದತ್ತತ್ತಲೆ. ತಮತಮಗೆ ಬಂದ ಭೋಗ ಸುಖ ಲಿಂಗಾರ್ಪಿತವೆಂದು, ನಡೆವವು ಲಿಂಗದತ್ತತ್ತಲೆ, ಕೂಡಲಚನ್ನ ಸಂಗಯ್ಯ ಲಿಂಗ ನೀವಾದ ಶರಣಂಗೆ.

(೫) ಆಯತ, ಸ್ವಾಯತ, ಸನ್ನಿಹಿತ ಅನಾಯತಂಗಳು ಮುಟ್ಟಲಮ್ಮವು ನೋಡಾ! ಕಂಗಳ ಕೈಗಳಲ್ಲಿ ಅರ್ಪಿಸುವ ಶ್ರೋತ್ರದ ಕೈಗಳಲ್ಲಿ ಅರ್ಪಿಸುವ ನಾಸಿಕದ ಕೈಗಳಲ್ಲಿ ಅರ್ಪಿಸುವ ಜಿಹ್ವೆಯ ಕೈಗಳಲ್ಲಿ ಅರ್ಪಿಸುವ ಮನದ ಕೈಗಳಲ್ಲಿ ಅರ್ಪಿಸುವ ಕೈಗಳ ಕೈಗಳಲರ್ಪಿಸುವ ಅಲ್ಲಲ್ಲಿಗೆ ತಾಗಿದ ಸುಖವಲ್ಲಲ್ಲಿಗೆ ಲಿಂಗಾರ್ಪಿತವ ಮಾಡಬಲ್ಲನಾಗಿ ಕೂಡಲಚನ್ನ ಸಂಗನಲ್ಲಿ ಆತ ಮಹಾ ಪ್ರಸಾದಿ.

(೬) ಭಾವದಿಂದಾದ ಶೇಷವ ಕ್ರಿಗೆ ಅರ್ಪಿಸುವೆ. ಕ್ರಿಯಿಂದಾದ ಶೇಷವ ನಿಃಕ್ರಿಗರ್ಪಿಸುವೆ. ನಿಃಕ್ರಿಯಿಂದಾದ ಶೇಷವ ಜಂಗಮಕ್ಕರ್ಪಿಸುವೆ. ಜಂಗಮದಿಂದಾದ ಶೇಷವ ಲಿಂಗಕ್ಕರ್ಪಿಸುವೆ. ಲಿಂಗದಿಂದಾದ ಶೇಷವ ಪ್ರಸಾದಕ್ಕರ್ಪಿಸುವೆ. ಪ್ರಸಾದದಿಂದಾದ ಜ್ಞಾನವ ಆಜ್ಞಾನದಿಂದಾದ ತೃಪ್ತಿಯಾದೆನು ಕಾಣಾ ಕಲಿದೇವಯ್ಯ.

ಇಂತು ಅಂತಃಕರಣದಲ್ಲಿ ಅರ್ಪಿತ ಮುಖವನ್ನೈದಿದ ಲಿಂಗವು ತಾನೇ ಪ್ರಸಾದಿಯು ಸರ್ವಾಂಗದಲ್ಲಿ ತಾನೇ ಸರ್ವಾರ್ಪಿತವಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಭಾವಾರ್ಪಿತ ಸ್ಥಲವಾದವು.

---

## ೬ ಭಾವಾರ್ಪಿತಸ್ಥಲ.

(೧) ಘನವೆಂಬ ಮನದ ತಲೆವಾಗಿ, ಅಲ್ಲಿ ಸದಾ ಸನ್ನಿಹಿತವಾಗಿ, ನೀನಿಪ್ಪೆ ಎಲೆ ಅಯ್ಯಾ. ಬಂದ ಪದಾರ್ಥದ ಪೂರ್ವಾಶ್ರಯವ ಕಳೆದು ನೀನೇ ಅವಧರಿಸುತ್ತಿಪ್ಪೆಯಲ್ಲಾ ಎಲೆ ಅಯ್ಯಾ. ನಿಮ್ಮ ಮುಟ್ಟಿ ಬಹುದಲ್ಲದೆ ನಿಮ್ಮ ಮುಟ್ಟದೆ ಬಾರದೆಂಬುದಕ್ಕೆ ನೀವೇ ಸಾಕ್ಷಿಯಲ್ಲಾ ಕೂಡಲಚೆನ್ನಸಂಗಮದೇವಾ.

ಟೀಕು:— ಅಖಂಡ ಪರಿಪೂರ್ಣ ಮಹಾಲಿಂಗವು ತನಗೆ ಅನ್ಯವೆಂದರಿಯದೆ ಭಿನ್ನ ಭಾವವಳಿದು ತನ್ನನೆಲ್ಲ ಮಹಾಘನಲಿಂಗವೆಯಾಗಿ ಕಾಣುತ್ತಿಪ್ಪ ಶರಣನ ಸರ್ವಾಂಗವೆಲ್ಲ ಲಿಂಗವು ತಾನೆಯಾಗಿಪ್ಪ ಕಾರಣ ಅಂಗ ಸುಖ ಭೋಗಂಗಳನೆಲ್ಲವ ಲಿಂಗವೇ ಅರಿದು ಅರ್ಪಿಸಿಕೊಂಬ ಭೇದವನರಿದು ಲಿಂಗಾರ್ಪಿತವಾಯಿತ್ತೆಂಬ ನಿಶ್ಚಯದಿಂದ ಸಂಶಯವ ನಳಿದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ.

(೨) ತನುವ ತಾಗದ ಮುನ್ನ, ಮನವ ತಾಗದ ಮುನ್ನ, ಆಪ್ಯಾಯನ ಬಂದು ಎಡೆಗೊಳ್ಳದ ಮುನ್ನ, ಅರ್ಪಿತವ ಮಾಡಬೇಕು. ಗುರುವಿನ ಕೈಯ್ಯಲಿ ಎಳತಟವಾಗದ ಮುನ್ನ ಅರ್ಪಿತವ ಮಾಡಬೇಕು. ಎಡದ ಕೈಯ್ಯಲ್ಲಿ ಕಿಚ್ಚು, ಬಲದ ಕೈಯ್ಯಲ್ಲಿ ಹುಲ್ಲು, ಉರಿ ಹತ್ತಿತ್ತು ಗುಹೇಶ್ವರಾ ನಿಮ್ಮ ಪರವು ಪ್ರಸಾದಿಯು.

(೩) ಕಾಯದ ಕೈಯ್ಯಲು ಲಿಂಗಾರ್ಪಿತ. ಖಂಡಿತ ಭಾಷೆ. ಭಾವದ ಕೈಯ್ಯಲು ಲಿಂಗಾರ್ಪಿತ. ಖಂಡಿತ ಭಾಷೆ. ಶ್ರೋತ್ರದ ಕೈಯ್ಯಲು ಲಿಂಗಾರ್ಪಿತ. ಖಂಡಿತ ಭಾಷೆ. ಘ್ರಾಣದ ಕೈಯ್ಯಲು ಲಿಂಗಾರ್ಪಿತ. ಖಂಡಿತ ಭಾಷೆ. ಜಿಹ್ವೆಯ ಕೈಯ್ಯಲು ಲಿಂಗಾರ್ಪಿತ. ಖಂಡಿತ ಭಾಷೆ. ಸ್ಪರ್ಶನದ

ಕ್ರೈಯ್ಯಲು ಲಿಂಗಾರ್ಪಿತ. ಖಂಡಿತ ಭಾಷೆ. ಲಿಂಗ ಮಧ್ಯೆ ಶರಣ, ಶರಣ ಮಧ್ಯೆ ಲಿಂಗ. ಅಲ್ಲಲ್ಲಿ ತಾಗಿದ ಸುಖವನಲ್ಲಲ್ಲಿಯೇ ಲಿಂಗಾರ್ಪಿತ ಮಾಡಬಲ್ಲಡೆ ಕೂಡಲಚನ್ನಸಂಗನಲ್ಲಿ ಅವರು ಸಹಜರೆಂಬೆ.

(೪) ಸ್ಥಲದಿಂದ ಸ್ಥಲವನರ್ಪಿಸುವುದು ಒಡಲಗುಣ. ನಿಃಸ್ಥಲದಿಂದ ನಿಃಸ್ಥಲವನರ್ಪಿಸುವುದು ಪ್ರಾಣನ ಗುಣ. ನೋಡಿ ಆರೈವುದೇ ಅರ್ಪಿತ. ಗುಣ ಸ್ಥಲವೆನ್ನದೆ, ನಿಃಸ್ಥಲವೆನ್ನದೆ ನೋಡದೆ ಆರೈಯ್ಯದೆ ಅರ್ಪಿಸುವುದು ನಿರ್ಗುಣ. ಇಂತಹ ಮಹಂತರ ತಾವ ತೋರಿ ಬದುಕಿಸಯ್ಯಾ ಕೂಡಲಚನ್ನಸಂಗಮದೇವಾ.

(೫) ಪಂಚೇಂದ್ರಿಯಂಗಳ ಮುಖಂಗಳಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ, ಲಿಂಗಾರ್ಪಿತವೆಂಬರು. ಇದು ಲಿಂಗಾರ್ಪಿತವೇ? ಅಲ್ಲ. ಅರ್ಪಿತವ ಮಾಡದೆ, ಅನರ್ಪಿತವ ಹೊದ್ದದೆ, ಅರ್ಪಿಸಬೇಕು. ಅರ್ಪಿಸುವ ಭಾವವುಳ್ಳನ್ನಕ್ಕ ಶರಣನೆನಿಸಬಾರದು ಕೂಡಲಚನ್ನಸಂಗಯ್ಯಾ.

(೬) ಲಿಂಗಾರ್ಪಿತವ ಮಾಡಿದ ಪ್ರಸಾದವನಲ್ಲದೆ ಭೋಗಿಸೆನೆಂಬ ಪ್ರಸಾದಿಗಳಿನ್ನೆಂತಯ್ಯಾ ? ಅನರ್ಪಿತ ಭೋಗವೇ ಸಂಭವಿಸಿ, ದೋಷವೇ ಪ್ರಾಪ್ತವಾದ ಪರಿಯ ನೋಡಾ ! ಅದೆಂತೆಂದೊಡೆ, ಅನರ್ಪಿತ ನೇತ್ರದಲ್ಲಿ ನೋಡಬಹುದು. ಅದೆಂತೋ ? ಅನರ್ಪಿತವ ಮನದಲ್ಲಿ ನೆನೆಯಬಹುದು. ಅದೆಂತೋ ? ಅನರ್ಪಿತವ ಶ್ರೋತ್ರದಲ್ಲಿ ಕೇಳಬಹುದು. ಅದೆಂತೋ ? ಅನರ್ಪಿತವ ಘ್ರಾಣದಲ್ಲಿ ವಾಸಿಸಬಹುದು. ಅದೆಂತೋ ? ಅನರ್ಪಿತವ ಹಸ್ತದಲ್ಲಿ ಸ್ಪರ್ಶಿಸಬಹುದು. ಅದೆಂತೋ ? ಅನರ್ಪಿತವ ಜಿಹ್ವೆಯಲ್ಲಿ ರುಚಿಸಬಹುದು. ಅದೆಂತೋ? ಅಕಟಕಟಾ ಎಂತಯ್ಯಾ ! ಅರ್ಪಿತವಿಲ್ಲದೆ ಸರ್ವ ವಸ್ತುವನು ಅಂಗವಿಸಿ ಭೋಗಿಸುವ ಪರಿ ಅಂಗ ಲಿಂಗವಾಗಿ, ಲಿಂಗ ಪ್ರಾಣವಾಗಿ, ಪ್ರಾಣ ಮನವಾಗಿ, ಮನ ಲಿಂಗ ಸ್ವಾಯತವಾಗಿ, ಭಾವ ಶುದ್ಧವಾಗಿ, ಮನವೇ ಲಿಂಗ, ಲಿಂಗವೇ ಮನವಾಗಿ, ಲಿಂಗ ಮುಂತಾಗಿ, ಮನ ಹಿಂತಾಗಿ, ಸರ್ವ ಕ್ರಿ ವರ್ತಿಸುವುದು. ಈ ಕ್ರಿಯೆ ಸರ್ವಾರ್ಪಿತ, ಇದೇ ತಾತ್ಪರ್ಯ ಕಳೆ, ಇದೇ ಮರ್ಮ ಕಳೆ, ಇದೇ ಮಹಾಮಹಿಮಂಗೆ ಸರ್ವವೂ ಪ್ರಸಾದ. ಆ ಮಹಾಮಹಿಮನ ಪಂಚೇಂದ್ರಿಯವೆಲ್ಲವು ಲಿಂಗಾರ್ಪಿತ. ಆತನ ಭೋಗವೆಲ್ಲವು ಪ್ರಸಾದ ಭೋಗ. ಆತನು ಸರ್ವೋನ್ಮುಕ್ತನಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

ಇಂತು ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತವೆಂಬ ತ್ರಿವಿಧ ಸ್ಥಲವೇಕವಾದ ಲಿಂಗವು ಪ್ರಸಾದಿಯ ಅಂಗದಲ್ಲಿ ಉಪದೇಶಿತ ಸ್ವರೂಪದಿಂದ ಶಿಷ್ಯಭಾವವನೈದಿದ ಭೇದವೆಂತಿರ್ಪುದೆಂಬುದೆ ಮುಂದೆ ಶಿಷ್ಯಸ್ಥಲವಾದುದು.

---

## ೭. ಶಿಷ್ಯಸ್ಥಲ.

(೧) ಜ್ಯೋತಿಯೊಳಗಣ ಕರ್ಪುರಕ್ಕೆ, ಅಪ್ಪುವಿನ ಕಯ್ಯಲ್ಲಿಪ್ಪ ಉಪ್ಪಿಂಗೆ, ಶ್ರೀಗುರುವಿನ ಹಸ್ತದೊಳಗಿಪ್ಪ ಶಿಷ್ಯಂಗೆ, ಈ ಮೂರಕ್ಕೆಯೂ ಬೇರೆ ಕ್ರಿಯಾ ವರ್ತನೆಯುಂಟೇ, ಗುಹೇಶ್ವರಾ ?

ಟೀಕು:— ಜ್ಯೋತಿಯೊಳಗಿದ್ದ ಕರ್ಪುರ ಜ್ಯೋತಿಯಾಗಿಪ್ಪುದಲ್ಲದೆ, ಬೇರೇನೂ ಇಲ್ಲದೆ, ಅಪ್ಪುವಿನ ಕಯ್ಯಲ್ಲಿಪ್ಪ ಲವಣ ಉದಕವಾಗಿ ತೋರುವದಲ್ಲದೆ ಬೇರೇನೂ ಇಲ್ಲ. ಹೀಗೆ ಶ್ರೀಗುರುವಿನ ಹಸ್ತದೊಳಗಿಪ್ಪ ಶಿಷ್ಯನು ಶ್ರೀಗುರು ತತ್ವವಾಗಿಪ್ಪನಲ್ಲದೆ ಬೇರೇನೂ ಇಲ್ಲ. ಅಲ್ಲಿ ಭಿನ್ನವಾಗಿ ತೋರನೆಂಬುದೀ ವಚನವರ್ಥ.

(೨) ಕಂಡುದ ಹಿಡಿಯಲೊಲ್ಲದೆ, ಕಾಣದುದನರಸಿ ಹಿಡಿಯಲೆನೆಂದಡೆ ಸಿಕ್ಕದೆಂಬ ಬಳಲಿಕೆಯ ನೋಡಾ. ಕಂಡುದನೆ ಕಂಡು ಗುರುಪಾದವ ಹಿಡಿದಲ್ಲಿ ಕಾಣದುದ ಕಂಡು, ಕಾಣಬಹುದಯ್ಯಾ ಗುಹೇಶ್ವರಾ.

(೩) "ಯಥಾ ಬೀಜಂ ತಥಾಂಕುರಂ" ತಪ್ಪದು ತಪ್ಪದು. ಕಲ್ಪವೃಕ್ಷದಿಂದಾದ ಬೀಜ ಕಲ್ಪವೃಕ್ಷವಪ್ಪುದು ತಪ್ಪದು. ದಿಟದಿಟ! ತಪ್ಪದು ನೋಡಾ! ಕಾಮಧೇನುವಿನ ಶಿಶು ಕಾಮಧೇನುವಪ್ಪುದು ತಪ್ಪದು ತಪ್ಪದು ನೋಡಾ! ಸದ್ಗುರುವಿನಿಂದಾದ ಶಿಷ್ಯನು ಸದ್ಗುರು ವಪ್ಪುದು ತಪ್ಪದು ನೋಡಾ! ಯಥಾ ಬೀಜಂ ತಥಾಂಕುರಂ ಎಂಬ ವಾಕ್ಯ ತಪ್ಪದು ಶಿವಬಲ್ಲ, ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

(೯) ಜ್ಯೋತಿಯ ಸಂಗದಿಂದ ಕರ್ಪೂರ ಜ್ಯೋತಿಯಪ್ಪಂತೆ ಅಪ್ಪು
ವಿನ ಸಂಗದಿಂದ ಉಪ್ಪು ಅಪ್ಪುವಪ್ಪಂತೆ ಶ್ರೀ ಗುರು ವಪ್ಪದು ತಪ್ಪದು
ಶಿವನಾಣೆ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ.

(೫) ಗುರುಶಿಷ್ಯ ಸಂಬಂಧವನರಸುವ ಮಹಾಂತರು ನೀವು ಕೇಳಿ
ರಯ್ಯಾ ! ಶಿಷ್ಯಂಗೆ ಗುರು ಶಿವ ಸಹೋದರ. ಇದು ಕಾರಣ ಗುರುವಿನಲ್ಲಿ
ಗುಣ, ಲಿಂಗದಲ್ಲಿ ಲಕ್ಷಣ, ಜಂಗಮದಲ್ಲಿ ಕುಲ, ಪ್ರಸಾದದಲ್ಲಿ ರುಚಿ,
ಪರಿಣಾಮದಲ್ಲಿ ಕುರುಹನರಸುವ ಪಾತಕರನೆನಗೊಮ್ಮೆ ತೋರದಿರು
ಕೂಡಲಚೆನ್ನಸಂಗಯ್ಯ.

ಇಂತಪ್ಪ ಶಿಷ್ಯ ಭಾವವನೈದಿದ ಲಿಂಗವು ಪ್ರಸಾದಿಯ ಅಂಗದಲ್ಲಿ
ಶಿಶ್ರೂಷಾ ಭಾವವನೈದಿದ ಭೇದವೆಂತಿರ್ದುದೆಂದಡೆ ಮುಂದೆ ಶಿಶ್ರೂಷಾ
ಸ್ಥಲವಾದುದು.

---

## ೮. ಶುಶ್ರೂಷಾಸ್ಥಲ.

(೧) ಪರಿಣಾಮದೊಳಗೆ ಮನದ ಪರಿಣಾಮವೇ ಚಲುವ. ಸಂಗ
ದೊಳಗೆ ಶರಣರ ಸಂಗವೇ ಚಲುವ. ಕಾಯಗೊಂಡು ಹುಟ್ಟಿದ ಪುರುಷ
ರೆಲ್ಲ ಸಾಯದ ಸಂಚವನರಿವುದೇ ಚೆಲುವ ಗುಹೇಶ್ವರಾ.

ಟೀಕು:— ಮನದ ಸಂಕಲ್ಪ ವಿಕಲ್ಪವ ಕೆಡಿಸಿ ಆ ಮನ ಲಿಂಗ
ವೇದಿಯಾಗಲು ಅದೇ ಪರಮಸುಖ. ಮಹಾನುಭಾವಿಗಳ ಸಂಗದಲ್ಲಿರ್ದು
ಕರ್ಕಶವಿಲ್ಲದ ಸಮರಸ ಗೋಷ್ಠಿಯ ಮಾಡಬಲ್ಲಡೆ ಅದೇ ಪರಮ
ಸುಖ. ಶರೀರದ ನಿತ್ಯತ್ವವನರಿದು ನಿತ್ಯವಾದ ವಸ್ತುವ ಸಾಧ್ಯವ ಮಾಡಿ
ಕೊಳಬಲ್ಲಡೆ ಅದೇ ಪರಮಸುಖವೆಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ಸ್ವಾಮಿಭೃತ್ಯ ಸಂಬಂಧಕ್ಕೆ ಆವುದು ಪಥವೆಂದಡೆ, ದಿಟವ
ಹಿಡಿವುದು. ಸಟೆಯ ಬಿಡುವುದು. ನುಡಿದಂತೆ ನಡೆವುದು. ನಡೆದಂತೆ
ನುಡಿವುದು. ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯನೊಲ್ಲ
ನಮ್ಮ ಕೂಡಲ ಸಂಗಮದೇವ.

(೩) ತರು ಮರಾದಿಗಳಲ್ಲಿಗೆ ಹೋಗಿ ಅನಂತಕಾಲ ತಪಸ್ಸಿಹು ವನು ಒಂದು ದಿನ ಗುರುಚರಣಸೇವೆ ಸಾಲದೇ? ಅನಂತ ಕಾಲ ಗುರುಚರಣಸೇವೆಯ ಮಾಡುವವನು ಒಂದು ದಿನ ಲಿಂಗಪೂಜೆ ಸಾಲದೇ? ಅನಂತಕಾಲ ಲಿಂಗ ಪೂಜೆಯ ಮಾಡುವುವನು ಒಂದು ದಿನ ಜಂಗಮ ತೃಪ್ತಿ ಸಾಲದೇ? ಅನಂತ ಕಾಲ ಜಂಗಮ ತೃಪ್ತಿ ಮಾಡುವುವನು ಒಂದು ನಿಮಿಷದನುಭಾವ ಸಾಲದೇ ಕೂಡಲ ಚನ್ನಸಂಗಾ ನಿಮ್ಮ ಶರಣ?

(೪) ಗುರುಕರುಣ ಚರಣಸೇವೆ ಭವದ ಬಳ್ಳಿಯ ಬೀಜವನತಿ ಗಳೆಯಿತ್ತು. ಘನ ಘನ ಪಥವ ತೋರಿತ್ತು ನೋಡಾ. ಉದಯಿಸಿತ್ತು ಸಿದ್ಧಾಕುಳ ನಿರಹರಣ ಮಹಾಲಿಂಗ ಕಲ್ಲೇಶ್ವರ.

(೫) ಸವಿ ಕರದಿಂದ ಪರಿ ಕರದಿಂದ ಪದಾರ್ಥ ಕರದಿಂದ ತನು ಮನ ಧನದಲ್ಲಿ ವಂಚನೆ ಇಲ್ಲದೆ ನಿಮ್ಮ ಶರಣರಿಗೆ ಮಾಡುವಲ್ಲಿ ನೀ ನೋಡುವಲ್ಲಿ ಕೂಡಲ ಚನ್ನಸಂಗಯ್ಯ ನಿಮಗೆಂದು ತನಗೆನ್ನದ ಕಾರಣ.

ಇಂತು ಶುಶ್ರೂಷಾ ಭಾವದಲ್ಲಿ ಭರಿತವಾದ ಲಿಂಗವು ಪ್ರಸಾದಿಯ ಅಂಗದಲ್ಲಿ ಇತರೇತರ ಭಾವವ ಮರೆದು, ಶಿಷ್ಯನೇ ಗುರು, ಗುರುವೇ ಶಿಷ್ಯನಾಗಿರ್ಪ ಭೇದವೆಂತಿರ್ಪುದೆಂದಡೆ ಮುಂದೆ ಸೇವ್ಯಸ್ಥಲವಾದುದು.

---

## ೯. ಸೇವ್ಯಸ್ಥಲ.

(೧) ಪಾದವಿಲ್ಲದ ಗುರುವಿಂಗೆ ತಲೆ ಇಲ್ಲದ ಶಿಷ್ಯನು. ಅನಾಚಾರಿ ಗುರುವಿಂಗೆ ವ್ರತಗೇಡಿ ಶಿಷ್ಯನು. ಈ ಗುರು ಶಿಷ್ಯರಿಬ್ಬರು ಸತ್ತ ಸಾವ ನಿಮ್ಮಲ್ಲಿ ಅರಸುವೆ ಗುಹೇಶ್ವರಾ.

ಟೀಕು:— ಪಾದವೆಂದರೆ ಆಚಾರದ ಚರ್ಯೆ. ಆ ಆಚಾರದ ಚರ್ಯವರತ ಸುಜ್ಞಾನ ಪರಿಪೂರ್ಣವಾದ ಚಿದ್ಗುರುವಿಂಗೆ ತಲೆ ಎಂಬ ನಿವೃತ್ತಿಜ್ಞಾನವಿಲ್ಲದ ಶಿಷ್ಯನೇ ಶಿಷ್ಯನೆಂಬುದೀಗ ಪಾದವಿಲ್ಲದ ಗುರುವಿಂಗೆ

ತಲೆ ಇಲ್ಲದ ಶಿಷ್ಯನೆಂಬ ಶಬ್ದಕ್ಕರ್ಥ. ಇಂತು ಗುರುಶಿಷ್ಯರೆಂಬ ಆಚಾರ ವೆಂಬುದಳಿದು ನಿರ್ಗಮನಿಯಾದ ಗುರುವಿನಲ್ಲಿ ಭಿನ್ನವ್ರತನಿಯಮಂಗ ಳಳಿದು ಅಲ್ಲಿ ಲೀನವಾದ ಶಿಷ್ಯನು ನಿಸ್ತರಂಗ ಯುಕ್ತನೆಂಬುದೀಗ ಅನಾ ಚಾರಿ ಗುರುವಿಂಗೆ ಪ್ರತಗೇಡಿ ಶಿಷ್ಯನೆಂಬ ಶಬ್ದಕ್ಕರ್ಥ. ಈ ಗುರುಶಿಷ್ಯ ರೆಂಬೆರಡು ಭಾವ ಸಮರಸವಾಗಿ ಪರಬ್ರಹ್ಮದಲ್ಲಿ ಐಕ್ಯವಾದುದನು ನಿಜ ತತ್ವದಲ್ಲಿಯೇ ಕಾಣಬಹುದೆಂಬುದೀಗ ಗುರುಶಿಷ್ಯರಿಬ್ಬರು ಸತ್ತ ಸಾವ ನಿಮ್ಮಲ್ಲಿಯೇ ಅರಸುವೆ ಗುಹೇಶ್ವರಾ ಎಂಬ ಶಬ್ದಕ್ಕರ್ಥ.

(೨) ಮೊದಲೊಳು ಮನದಲ್ಲಿ ಅಜ್ಞೋತ್ಪತ್ತಿದ ಕಾರಣ ಎಚ್ಚರಿಕೆ ಯಾಯಿತ್ತು. ಗುರುಲಿಂಗದ ಕಾರುಣ್ಯದಿಂದರಿವಾಯಿತ್ತು. ಜಂಗಮ ಲಿಂಗದಿಂದಾಚಾರವಾಯಿತ್ತು. ಲಿಂಗಜಂಗಮದಿಂದ ತಿಳಿದ ತಿಳಿವಿನಲ್ಲಿ ಪ್ರಸಾದ ಸಾಧ್ಯವಾಯಿತ್ತು. ಕೂಡಲ ಚನ್ನಸಂಗಯ್ಯನಲ್ಲಿ ಏಕಾರ್ಥ ವಾಯಿತ್ತು.

(೩) ಗುರುಲಿಂಗ ಉದಯವಾದವರ ಉದಯವ ನೋಡಿರಯ್ಯ. ಹಿಂದೆ ಕತ್ತಲೆ ಮುಂದೆ ಬೆಳಗಾಯಿತ್ತು. ಬೆಳಗು ಬೆಳದಿಂಗಳಾಯಿತ್ತು. ಕೂಡಲ ಚನ್ನಸಂಗನಲ್ಲಿ ಏಕಾರ್ಥವಾಯಿತ್ತು

(೪) ಶಿಷ್ಯನ ಪೂರ್ವಾಶ್ರಯವಾವುದು ಗುರುವಿಂಗೆ? ಸಹಜ ಶಿಷ್ಯನು ತನ್ನ ಪೂರ್ವಾಶ್ರಯವ ಕಳೆದು ಶ್ರೀಗುರು ಲಿಂಗವ ಮುಟ್ಟುವ ಪರಿ ಎಂತೋ? ಅರ್ಪಿತ ಹೋಗಿ ಪ್ರಸಾದವನರಸುವುದೋ? ಪ್ರಸಾದ ಹೋಗಿ ಅರ್ಪಿತವನರಸುವದೋ? ಕೂಡಲ ಚನ್ನಸಂಗಯ್ಯನಲ್ಲಿ ಮಹಾಪ್ರಸಾ ದಿಯೇ ಬಲ.

(೫) ಗುರು ಶಿಷ್ಯ ಸಂಬಂಧದಿರವನಿನ್ನಾರು ಬಲ್ಲರಯ್ಯ? ನೆರೆದ ನೆರವಿಂಗೆ ಹೇಳಲುಂಟೇ? ಈ ಮಾತು ಸ್ತ್ರೀಪುರುಷರು ಕೂಡಿದ ಕೂಟವ ಮತ್ತೊಬ್ಬರಿಗರುಹಬಾರದು. ಗುರು ಶಿಷ್ಯಸಂಬಂಧವ ಇನ್ನಾರು ಬಲ್ಲ ರಯ್ಯಾ ಕಲಿದೇವಯ್ಯ?

(೬) ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದಡೆ ಆಗಲೇ ಮಹಾಪ್ರಸಾದವೆಂದೆನಯ್ಯಾ. ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಯಿದು ಬುದ್ಧಿಯ ಕಲಿಸಿದಡೆ ಆಗಲೇ ಮಹಾ

ಪ್ರಸಾದವೆಂದೆನಯ್ಯ. ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದಡೆ ಆಗಲೇ ಮಹಾಪ್ರಸಾದವೆಂದೆನಯ್ಯಾ. ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದಡೆ ಆಗಲೇ ಮಹಾ ಪ್ರಸಾದವೆಂದೆನಯ್ಯ. ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನು.

(೭) ಗುರುಕಾರುಣ್ಯ ಲಿಂಗನಿಷ್ಠೆ ಪ್ರಸಾದ ವಿಶ್ವಾಸ ಭಾವದ ನಿಜವನಾರು ಬಲ್ಲರಯ್ಯ? ಗುರುವಿನಲ್ಲಿ ಲಿಂಗಪ್ರವೇಶ, ಲಿಂಗದಲ್ಲಿ ಜಂಗಮ ಪ್ರವೇಶ, ಜಂಗಮದಲ್ಲಿ ಪ್ರಸಾದ ಪ್ರವೇಶ, ಪ್ರಸಾದದಲ್ಲಿ ಪರಿಣಾಮ ಪ್ರವೇಶ, ಪರಿಣಾಮದಲ್ಲಿ ಭಾವ ಪ್ರವೇಶ. ಗುರುವಿಂಗೆ ಲಿಂಗವಿಲ್ಲ, ಲಿಂಗಕ್ಕೆ ಜಂಗಮವಿಲ್ಲ, ಜಂಗಮಕ್ಕೆ ಪ್ರಸಾದವಿಲ್ಲ, ಪ್ರಸಾದಕ್ಕೆ ಪರಿಣಾಮವಿಲ್ಲ, ಪರಿಣಾಮಕ್ಕೆ ಭಾವವಿಲ್ಲ. ಇದು ಆಗುಹೋಗಿನ ಸಕೀಲ ಸಂಬಂಧವನು ಕೂಡಲ ಚನ್ನಸಂಗಾ ನಿಮ್ಮ ಶರಣ ಬಲ್ಲ.

(೮) ಗುರುವೇ ಹೆಂಡತಿಯಾಗಿ ಹೆಂಡತಿಯೇ ತಾಯಾಗಿ ತಾಯೇ ಹೆಂಡತಿಯಾಗಿ ಶಿಷ್ಯನೇ ಗಂಡನಾಗಿ ಏನೆಂದು ಹೇಳುವೆನೇನೆಂದುಪಮಿಸುವೆ ಕೂಡಲ ಚನ್ನಸಂಗಯ್ಯ ಇಹಪರವಿಲ್ಲಾಗಿ?

(೯) ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ, ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು, ಏನೆಂಬನೇನೆಂಬೆ? ಎರಡಿಲ್ಲದ ಘನವ ಏನೆಂಬೆನೇನೆಂಬೆ? ಉಭಯವಳಿದೊಂದಾದುದನೇನೆಂಬೆನೇನೆಂಬೆ? ಕೂಡಲ ಚನ್ನಸಂಗನಲ್ಲಿ ಗುರುಶಿಷ್ಯ ಸಂಬಂಧವಪೂರ್ವ.

(೧೦) ಗುರು ಶಿಷ್ಯಸಂಬಂಧದನುಭಾವವ ಕೇಳಿರಯ್ಯ! ಗುರುವೆಂಬ ಪರಾಪರ, ಶಿಷ್ಯನೆಂಬ ಇಹಪರ, ಗುರುವೆಂಬ ಪರಮಾರ್ಥ, ಶಿಷ್ಯನೆಂಬ, ಏಕಾರ್ಥ ಗುರುವೆಂಬವನಲ್ಲಿ ಶಿಷ್ಯನೆಂಬವನೆಂತೋ? ಶಿಷ್ಯನೆಂಬವನಲ್ಲಿ ಗುರುವೆಂಬವನೆಂತೋ? ಸಿದ್ಧಸೋಮನಾಥನಲ್ಲಿ ಶಬ್ಧಕ್ಕಿಂಬಿಲ್ಲ.

(೧೧) ಅರಿವು ನೆನೆಯಲಿಲ್ಲ ಮರೆವು ಪೂಜಿಸಲಿಲ್ಲ. ತೆರಹಿಲ್ಲದ ಘನಕ್ಕೆ ಕುರುಹು ಮುನ್ನಿಲ್ಲ. ತನಗೆ ಗುರುವಿಲ್ಲ. ಗುರುವಿಗೆ ತಾನಿಲ್ಲ. ಗುರುವಿಗೆ ಶಿಷ್ಯನು ಹೊಡೆವಡದ ಕಾರಣ ಮುನ್ನಿಲ್ಲ. ಬಯಲ ಬತ್ತಲೆ ಇಲ್ಲ. ಒಕ್ಕಲಿಲ್ಲ, ತೂರಲಿಲ್ಲ. ಗುಹೇಶ್ವರ ಲಿಂಗಕ್ಕೆ ಕುರುಹು ಮುನ್ನಿಲ್ಲ.

ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧಂಗಳಾಗೇಕವಾದ ಶಿವ ಲಿಂಗವು ಮಹಾನುಭಾವಿಯಾದ ಪ್ರಾಣಲಿಂಗಿಯು ಜಂಗಮಲಿಂಗ ಸಂಬಂಧವಲ್ಲಿ ಜೀವಭಾವವಂ ನಿವೃತ್ತಿವಾಡಿ, ಲಿಂಗ ಸಜ್ಜೀವ ಸವ್ಯಕ್ತನವ್ವ ಭೇದನೆಂತಿರ್ದಿತೆಂಪಡೆ ಮುಂದೆ ಜೀವಾತ್ಮಸ್ಥಲವಾದುದು.



# ಜಂಗಮಲಿಂಗ.

ವಿವರಣೆ:— ಜಂಗಮಲಿಂಗ ಸ್ಥಲದಲ್ಲಿ ಹಿಂದಿನ ಶಿವಲಿಂಗ ಸ್ಥಲದಲ್ಲಿ ಆವಿರ್ಭಾವಿಸಿದ ಗುಣಗಳು ಮತ್ತಿಷ್ಟು ಹೆಚ್ಚಿಗೆ ವೃದ್ಧಿ ಪಡುವವು. ಈ ಜಂಗಮ ಲಿಂಗದ ಅಂತ್ಯ ಸ್ಥಲದಲ್ಲಿ ಸೂಕ್ಷ್ಮ ಶರೀರವು ತನ್ನಲ್ಲೌಕಿಕ ಉನ್ನತಿಯನ್ನು ಹೊಂದುವದು. ಶಿವಲಿಂಗ ಮತ್ತು ಜಂಗಮಲಿಂಗಗಳ ಹೀಗೆ ಉಚ್ಚ ಸ್ಥಿತಿಯನ್ನು ಹೊಂದಿದಲ್ಲಿ ಭಕ್ತನಿಗೆ ಉಂಟಾಗುವ ಮಾನಸಿಕ ವಿಕಾರಗಳು ದೂರಾಗುತ್ತವೆ. ಈ ಜಂಗಮಲಿಂಗಸ್ಥಲವನ್ನೊಡಗೊಂಡು ಮುಂದಿನ ಮೂರು ಸ್ಥಲಗಳಲ್ಲಿ ಸಿದ್ಧಿಗಳೂ ಸಹ ಅವನ ವಿಶೇಷ ಶಕ್ತಿಗಳಿಗೆ ಅನುಗುಣವಾಗಿ ಪ್ರಕಟವಾಗುತ್ತವೆಂತಲೂ ತಿಳಿಯಲ್ಪಟ್ಟಿರುತ್ತದೆ.

ಜಂಗಮಲಿಂಗದಲ್ಲಿ ಒಲವುಲಿಂಗ, ನಿರೂಪಲಿಂಗ, ಪ್ರಸಾದಲಿಂಗ ಮತ್ತು ಪಾದೋದಕ ಲಿಂಗ ಎಂದು ನಾಲ್ಕು ವಿಭಾಗಗಳಿವೆ. ಇವುಗಳ ಅನುಭವದಿಂದ ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿದ ಜಂಗಮಲಿಂಗವು ಪ್ರಕಟವಾಗುವದು.

ಈ ನಾಲ್ಕರಲ್ಲಿ ಒಲವು ಲಿಂಗ ಮತ್ತು ನಿರೂಪಲಿಂಗವೆಂದು ಮತ್ತು ಪ್ರಸಾದಲಿಂಗ, ಪಾದೋದಕಲಿಂಗವೆಂದು ಹೀಗೆ ಪುನಃ ಎರಡು ಭಾಗಗಳನ್ನು ಮಾಡಬಹುದು. ಯಾಕೆಂದರೆ ಮೊದಲಿನ ಎರಡರಲ್ಲಿ ಮತ್ತು ಕಡೆಯ ಎರಡರಲ್ಲಿ ಹೆಚ್ಚಿಗೆ ಪರಸ್ಪರ ಸಂಬಂಧವಿರುತ್ತದೆ. ೧ ನೆಯ ವಿಭಾಗಕ್ಕೆ ಸಂಬಂಧಿಸಿದ ಎರಡು ಸ್ಥಲಗಳ ಉದ್ದೇಶವು ಜೀವ ಭಾವವನ್ನು ಒಲವು ಲಿಂಗಗಳ ಮೂಲಕ ಮೊದಲು ದೂರ ಮಾಡಿ, ಆಮೇಲೆ ನಿರೂಪ ಲಿಂಗಕ್ಕೆ ಸಂಬಂಧಿಸಿದ ಆಗಮ ಎಂದರೆ ಕ್ರಿಯೆಗಳನ್ನು ಬಲಪಡಿಸುವದೇ ಇರುತ್ತದೆ.

ಎರಡನೆಯ ವಿಭಾಗಕ್ಕೆ ಸಂಬಂಧಿಸಿದ ಪ್ರಸಾದಲಿಂಗ ಮತ್ತು ಪಾದೋದಕ ಲಿಂಗಗಳಲ್ಲಿ ಗುರು ಲಿಂಗ ಜಂಗಮದ ಮೂಲಕ ಪ್ರಾಣಲಿಂಗಕ್ಕೆ ಶ್ರೇಷ್ಠ ಸ್ಥಿತಿಯನ್ನು ಉಂಟುಮಾಡುವದೇ ಮುಖ್ಯ ಕಾರ್ಯವಾಗಿರುತ್ತದೆ.

ಈ ಜಂಗಮಲಿಂಗ ಸ್ಥಲದಲ್ಲಿ ಶೀರಕ್ಷೆಯಲ್ಲಿ ಅತ್ಯಂತ ಮಹತ್ವವಾದ ಪ್ರಸಾದ, ಮತ್ತು ಪಾದೋದಕಗಳ ವಿಚಾರಗಳ ತತ್ವಗಳು ವಿಶೇ

ಷವಾಗಿ ವಿವೇಚಿಸಲ್ಪಟ್ಟಿರುತ್ತವೆ. ಇದಕ್ಕೋಸ್ಕರ ಮೊದಲು ಜೀವ ಭಾವ ವನ್ನು ಬಿಡಬೇಕು. ಬಿಟ್ಟು ಕ್ರಿಯೆಗಳನ್ನು ಶುದ್ಧಗೊಳಿಸಬೇಕು. ಹೀಗೆ ಸತ್ ಕ್ರಿಯೆಗಳನ್ನು ಮಾಡಿ ಪ್ರಸಾದವನ್ನು ಹೊಂದಬೇಕು. ಮುಂದೆ ಪಾದೋ ಕವನ್ನೂ ಪಡೆಯಬೇಕು. ಪ್ರಸಾದದ ಅನುಭವವು ಗುರುಲಿಂಗ ಜಂಗ ಮುಗಳ ಮೂಲಕ ಆಗುತ್ತದೆ. ಪಾದೋದಕದ ಅನುಭವವು ದೀಕ್ಷಾ ಗುರು, ಶಿಕ್ಷಾಗುರು, ಜ್ಞಾನ ಗುರುವಿನಿಂದಲೇ ಆಗಬೇಕು. ಈ ಪಾದೋ ದಕವು ಕಡೆಗೆ ಪರಮಾನಂದ ರೂಪವಾಗಿ ಪ್ರವಹಿಸುತ್ತದೆ.

**ಒಲವುಲಿಂಗ:**— ಜೀವಾತ್ಮ, ಅಂತರಾತ್ಮ, ಪರಮಾತ್ಮವೆಂದು ಒಲವು ಲಿಂಗದ ಮೂರು ವಿಭಾಗಗಳಿವೆ. ಜೀವಾತ್ಮನು ಭವದಲ್ಲಿ ಬಳಲುವನು. ಇಂಥ ಜೀವಾತ್ಮನು ತನ್ನ ಜೀವ ಭಾವವನ್ನು ನಿವೃತ್ತಿ ಮಾಡಿ ಆತ್ಮ ವಿವೇಕಿಯಾದಲ್ಲಿ ಅಂತರಾತ್ಮನು. ಮುಂದೆ ಆತ್ಮ ವಿವೇಕದಿಂದ ಪರಮಾತ್ಮನನ್ನು ಪರಾಮರ್ಶಿಸಿದ್ದಾದರೆ ಪರಮಾತ್ಮನು. ತನ್ನನ್ನು ತಾನು ಅರಿವುದೇ ಈ ಪರಮಾತ್ಮ ಸ್ಥಿತಿಯಾಗಿರುತ್ತದೆ. ಇವೆಲ್ಲವು ಗಳು ಒಲವು ಲಿಂಗದ ಭೇದಗಳಾಗಿರುವವು. ಇವುಗಳ ಉದ್ದೇಶವು ಆತ್ಮವನ್ನು ಬಲಪಡಿಸುವದೇ ಇರುತ್ತದೆ.

**ನಿರೂಪಲಿಂಗ:**— ಇದರಲ್ಲಿ ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ ಎಂಬ ಮೂರು ವಿಭೇದಗಳಿವೆ. ದೇಹ ಭಾವವನ್ನು ಅಳಿದು ಸ್ವಾಭಾವಿಕವಾದ ಚಾರಿತ್ರ್ಯವುಳ್ಳವನಾಗಿ ವರ್ತಿಸುವುದೇ ನಿರ್ದೇಹಾಗ ಮವು. ನಿರ್ಭಾವ ಚಾರಿತ್ರ್ಯವುಳ್ಳವನಾಗಿ ವರ್ತಿಸುವದೇ ನಿರ್ಭಾವಾ ಗಮವು. ಇಲ್ಲಿ ಅವನು ಅತ್ಯಂತ ನಿಷ್ಠೆಯಿಂದ ವರ್ತಿಸಿ ಶುದ್ಧ ಭಾವ ದಿಂದ ಕ್ರಿಯೆಗಳನ್ನು ಮಾಡುತ್ತಾನೆ. ಇದಾದ ಮೇಲೆ ಆಚರಣೆಗಳಲ್ಲಿ ಇದ್ದೂ ಇಲ್ಲದ ಸ್ಥಿತಿಯು ಉತ್ಪನ್ನವಾಗುವದು. ಇದು ನಷ್ಟಾಗಮವು ಹೀಗೆ ಜಂಗಮಲಿಂಗದ ಕ್ರಿಯೆಗಳು ನಿರೂಪಿಸಲ್ಪಟ್ಟಿರುತ್ತವೆ.

**ಪ್ರಸಾದಲಿಂಗ:**— ಇದರಲ್ಲಿ ಆದಿ ಪ್ರಸಾದಿ, ಅಂತ್ಯ ಪ್ರಸಾದಿ, ಸೇವ್ಯ ಪ್ರಸಾದಿ ಎಂದು ಮೂರು ವಿಭಾಗಗಳಿವೆ. ಗುರುವಿನ ಮೂಲಕ ಸುಖ ಪ್ರಸಾದ ಸೇವನೆ ಮಾಡುವವನೇ ಆದಿ ಪ್ರಸಾದಿಯು. ಇಲ್ಲಿ ಗುರು ಮಾರ್ಗ ದಲ್ಲಿ ಭೃತ್ಯಾಚಾರಿಯಾಗಿ ನಡೆಯಬೇಕು. ಇಲ್ಲಿ ಕ್ರಿಯಾ ಲಿಂಗಕ್ಕೆ ಅರ್ಪಿಸಿ ಪ್ರಸಾದವನ್ನು ಪಡೆಯಬೇಕು. ಈ ಅರ್ಪಣೆಯು ಕ್ರಿಯೆಯುಳ್ಳದು. ಲಿಂಗ

ಮುಖ ಪ್ರಸಾದ ಸೇವನೆಯೇ ಎರಡನೆಯದಾದ ಅಂತ್ಯ 'ಪ್ರಸಾದಿಯು. ಅಂದರೆ ಲಿಂಗೇಂದ್ರಿಯ ಮುಖವುಳ್ಳವನಾಗಿ ಆಚರಿಸಬೇಕು. ಮುಂದೆ ಜಂಗಮ ಮುಖದಿಂದ ತೃಪ್ತಿಯನ್ನು ಅನುಭವಿಸಬೇಕು. ಹೀಗೆ ಮಾಡುವವನು ಸೇವ್ಯ ಪ್ರಸಾದಿಯು. ಇಂಥವನಿಗೆ ಭ್ರಮೆ ಎಂಬುದು ಇಲ್ಲ. ಇವನು ಮಾಯಾ ಪ್ರಪಂಚವನ್ನು ಅತಿಗಳೆಯುವನು. ಹೀಗೆ ಭಕ್ತನು ಪ್ರಸಾದ ಲಿಂಗದಲ್ಲಿ ಪ್ರಸಾದ ರೂಪನಾಗಿ ವ್ಯವಹರಿಸುತ್ತಾನೆ.

**ಪಾದೋದಕಲಿಂಗಃ** — ಇದರಲ್ಲಿ ದೀಕ್ಷಾ ಪಾದೋದಕ ಶಿಕ್ಷಾ ಪಾದೋದಕ ಜ್ಞಾನ ಪಾದೋದಕ ಎಂದು ಮೂರು ವಿಭಾಗಗಳಿರುತ್ತವೆ ದೀಕ್ಷಾಗುರು ಮುಖದಿಂದಾದುದು ದೀಕ್ಷಾ ಪಾದೋದಕವು. ಇದು ಕ್ರಿಯಾ ರೂಪಾದದ್ದು. ಇದರಲ್ಲಿ ಪುನಃ ಅನೇಕ ಉಪಭಾಗಗಳನ್ನು ವಚನಕಾರರು ಹೇಳುವದುಂಟು. ಇವೆಲ್ಲವು ಬಾಹ್ಯ ಕ್ರಿಯೆಗಳಾಗಿರುತ್ತವೆ. ಆದರೂ ಅವು ಶರಣನ ಮಲತ್ರಯಗಳನ್ನು ದೂರ ಮಾಡುವವು. ಶಿಕ್ಷಾಗುರು ಮುಖದಿಂದುಂಟಾದುದು ಶಿಕ್ಷಾ ಪಾದೋದಕವು. ಅದರ ಪರಿಣಾಮಗಳು ಮನಸ್ಸಿನ ಮೇಲೆ ಸಂಭವಿಸುತ್ತವೆ. ಜ್ಞಾನಗುರು ಮುಖದಿಂದಾದುದು ಜ್ಞಾನ ಪಾದೋದಕವು. ಅದು ಪರಮಾನಂದೋದಕವು. ಅದು ತೋರಿಕೆಗೆ ಬಾರದೆ ಅಂತರಂಗ ಬಹಿರಂಗವನ್ನು ಆವರಿಸುತ್ತದೆ.

ಈ ಮೇರೆಗೆ ಅಂಗವಿಕಾರಗಳನ್ನು ದೂರ ಮಾಡಿ ಜಂಗಮ ಲಿಂಗದ ಕ್ರಿಯೆಗಳನ್ನು ಆಚರಿಸುತ್ತ ಪ್ರಸಾದ ಲಿಂಗದಲ್ಲಿ ಪ್ರಸಾದ ರೂಪಾಗಿ ವರ್ತಿಸಬೇಕು. ಮಲತ್ರಯಗಳನ್ನು ದೂರ ಮಾಡಬೇಕು. ಹೀಗೆ ಪಾದೋದಕ ಲಿಂಗವನ್ನು ಹೊಂದಿ ಪರಮಾನಂದೋದಕವನ್ನು ಪಡೆದು ಸುಖಿಸಬೇಕು. ಇದರಿಂದ ಅಂಗ ವಿಕಾರಗಳು ಲಯವಾಗುವವು. ಕ್ರಿಯೆಗಳ ಸ್ಥೂಲ ಸಂಬಂಧವು ನಷ್ಟವಾಗಿ ಅವುಗಳಲ್ಲಿ ಇದ್ದೂ ಇಲ್ಲದಂತಿರುವನು.

ಇದರಿಂದ ಈ ಸ್ಥಲದಲ್ಲಿ ಭಕ್ತನು ಪ್ರಸಾದ ರೂಪಾಗಿ ವ್ಯವಹರಿಸುತ್ತಾನೆ. **ಇವನ** ಮೇಲೆ ಕ್ರಿಯೆಗಳ ಪರಿಣಾಮಗಳು ಏನೂ ಆಗುವದಿಲ್ಲ. ಕರ್ಮ**ವು ನಷ್ಟ**ವಾಗುವದು, ಮಹಾ ಜ್ಞಾನವು ತುಂಬಿಕೊಳ್ಳುವದು. ಅದು ಪ್ರವಾಹ ರೂಪಾಗಿ **ಅವನಲ್ಲಿ** ಹರಿಯ ಹತ್ತುವದು. ಅದೇ ಜ್ಞಾನ ಪಾದೋದಕವೆನಿಸುವದು. **ಪರಮಾನಂದ** ರೂಪಾಗಿರುವದು.

63

ಇದೇ ಜಂಗಮ ಲಿಂಗದ ಪರಿಪೂರ್ಣ ಸ್ಥಿತಿಯು. ಇಲ್ಲಿ ಪ್ರಾಣ ಲಿಂಗವು ಪೂರ್ಣತೆಯನ್ನು ಹೊಂದುವದು. ಅದು ಅವನ ಸೂಕ್ಷ್ಮ ಶರೀರವನ್ನು ವ್ಯಾಪಿಸುವದು. ಅದರ ಮೂಲಕ ಅವನು ತನ್ನ ಸ್ಥೂಲ ಶರೀರದ ಕ್ರಿಯೆಗಳನ್ನು ಮಾಡತೊಡಗುತ್ತಾನೆ. ಹೀಗೆ ಮಾಡಿದ ಕ್ರಿಯೆಗಳು ಅತ್ಯುನ್ನತ ಸ್ಥಿತಿಯನ್ನು ಹೊಂದುತ್ತವೆ. ಇದು ಸೂಕ್ಷ್ಮ ಶರೀರದ ಲೈಂಗಿಕ ಶ್ರೇಷ್ಠ ಬೆಳವಣಿಗೆಯು.

---

## ೧. ಜೀವಾತ್ಮಸ್ಥಲ.

(೧) ಸರ್ವ ಸಂಸಾರಿಯೊಡನಾಡಿ ಕಟ್ಟುವಡೆಯಿತ್ತು. ಮನದ ತಮಂಧ ಬಿಡದು. ಮನದ ಕಪಟ ಬಿಡದು. ಸಟೆಯೊಳಗೆ ದಿಟವಾಡಿ ಬಯಲು ಬಡಿವಡೆಯಿತ್ತು. ಕಾಯದ ಸಂಗದ ಜೀವವುಳ್ಳನ್ನಕ್ಕರ ಎಂದೂ ಭವ ಹಿಂಗದು ಗುಹೇಶ್ವರಾ.

(೨) ಇಂದ್ರದಳ ಅಗ್ನಿದಳ ಯಮದಳ ನೈಋತ್ಯದಳ ವರುಣದಳ ವಾಯುವ್ಯದಳ ಕುಬೇರದಳ ಈಶಾನ್ಯದಳ. ಇವಕ್ಕೆ ವಿವರ. ಇಂದ್ರದಳವೇರಲು ಗುಣಿಯಾಗಿಹನು. ಅಗ್ನಿದಳವೇರಲು ಹಸಿವನು. ಯಮದಳವೇರಲು ದುರಿತ ಚೇಷ್ಟಿತನಾಗುವನು. ನೈಋತ್ಯ ದಳವೇರಲು ಕೋಪಿಸುತ್ತಿಹನು. ವರುಣ ದಳವೇರಲು ನಿದ್ರೆಗೈವನು. ವಾಯುವ್ಯ ದಳವೇರಲು ಸಂಚಲನಾಗಿಹನು. ಕುಬೇರ ದಳವೇರಲು ಧರ್ಮ ಬುದ್ಧಿಯಾಗಿಹನು. ಈಶಾನ್ಯದಳವೇರಲು ವಿಷಯಾತುರನಾಗಿಹನು. ಮಧ್ಯಸ್ಥಾನಕ್ಕೆ ಬಂದಲ್ಲಿ ಸದ್ಭಾವಿಯಾಗಿ ಮೋಕ್ಷವ ಬಯಸುತ್ತಿಹನು. ಇಂತೀ ಅಷ್ಟ ದಳಂಗಳಲ್ಲಿ ತಿರುಗುವ ಹಂಸನ ನೆಲೆಯ ಕೆಡಿಸಿ ಸದ್ಭಾವಿಯಾಗಿಹ ಕೂಡಲ ಚನ್ನಸಂಗಾ ನಿಮ್ಮ ಶರಣ.

(೩) ತನುವ್ಯಸನ ಮನವ್ಯಸನ ಧನವ್ಯಸನ ರಾಜ್ಯವ್ಯಸನ ವಿಶ್ವಾಸವ್ಯಸನ ಉತ್ಸಾಹವ್ಯಸನ ಸೇವಕವ್ಯಸನ. ಇವಕ್ಕೆ ವಿವರ. ತನುವ್ಯಸನವೆತ್ತಿದಲ್ಲಿ ವಸ್ತ್ರಾಭರಣ ಅನುಲೇಪನ ತಾಂಬೂಲವ ಬಯಸುತ್ತಿಹನು. ಮನವ್ಯಸನವೆತ್ತಿದಲ್ಲಿ ಹಸಿವು ಕಳವು ಪರದಾರವನು ಬಯಸುತ್ತಿಹನು.

ಧನವ್ಯಸನವೆತ್ತಿದಲ್ಲಿ ಧನ ಧಾನ್ಯವ ಬಯಸುತ್ತಿಹನು. ರಾಜ್ಯವ್ಯಸನವೆತ್ತಿದಲ್ಲಿ ಕುದುರೆ ಸೇನೆಯಂ ಬಯಸುತ್ತಿಹನು. ವಿಶ್ವಾಸವ್ಯಸನವೆತ್ತಿದಲ್ಲಿ ಚತುರ್ವಿಧ ಕರ್ತವ್ಯವ ಬಯಸುತ್ತಿಹನು. ಉತ್ಸಾಹವ್ಯಸನವೆತ್ತಿದಲ್ಲಿ ಪುತ್ರ ಮಿತ್ರ ಕಳತ್ರಾದಿಗಳ ಬಯಸುತ್ತಿಹನು. ಸೇವಕವ್ಯಸನವೆತ್ತಿದಲ್ಲಿ ಉಣ್ಣಲಾರೆ ಉಡಲಾರೆ ಕೊಳಲಾರೆ ಕೊಡಲಾರೆ ಎನ್ನುತ್ತಿಹನು. ಇಂತೀ ಸಪ್ತವ್ಯಸನಂಗಳ ಬಯಸಿ ಬಳಲುವ ಹಂಸನ ನೆಲೆಯ ಕೆಡಿಸಿ ಲಿಂಗ ವ್ಯಸನಿಯಾದ ಕೂಡಲ ಚನ್ನಸಂಗಾ ನಿಮ್ಮ ಶರಣ.

(೪) ಪೃಥ್ವಿ ಸಲಿಲ ಪಾವಕ ಪವನ ಅಂಬರ ರವಿ ಶಶಿ ಆತ್ಮ ಇಂತಿವು ಅಷ್ಟಮದಂಗಳು. ಇವಕ್ಕೆ ವಿವರ. ಪೃಥ್ವಿ ಮದವೆತ್ತಿದಲ್ಲಿ ತನುಗುಣ ಭರಿತನಾಗಿಹನು. ಸಲಿಲ ಮದವೆತ್ತಿದಲ್ಲಿ ಸಂಸಾರ ಭರಿತನಾಗಿಹನು. ಪಾವಕ ಮದವೆತ್ತಿದಲ್ಲಿ ಕಾವ್ಯ ರಸ ಭರಿತನಾಗಿಹನು. ಪವನ ಮದವೆತ್ತಿದಲ್ಲಿ ಇದ್ದ ಠಾವಿನಲ್ಲಿ ಇರ್ದು ಜಂಬೂದ್ವೀಪ ಭರಿತನಾಗಿಹನು. ಅಂಬರ ಮದವೆತ್ತಿದಲ್ಲಿ ವಾಹನ ಭರಿತನಾಗಿಹನು. ರವಿ ಮದವೆತ್ತಿದಲ್ಲಿ ಕೋಪಾಗ್ನಿ ಭರಿತನಾಗಿಹನು. ಶಶಿ ಮದವೆತ್ತಿದಲ್ಲಿ ಚಿಂತಾಭರಿತನಾಗಿಹನು. ಆತ್ಮ ಮದವೆತ್ತಿದಲ್ಲಿ ಅಹಂಕಾರ ಭರಿತನಾಗಿಹನು. ಇಂತೀ ಅಷ್ಟ ಮದಂಗಳ ಗುಣವಳಿದು ಸದ್ಗುಣ ಭರಿತನಾಗಿಹ ಕೂಡಲ ಚನ್ನಸಂಗಾ ನಿಮ್ಮ ಶರಣ.

ಇಂತು ಜೀವಭಾವಮಂ ನಿವೃತ್ತಿಯಂ ಮಾಡಿದ ಲಿಂಗವು ಪ್ರಾಣಲಿಂಗಿಯೊಳಗೆ ಆತ್ಮವಿವೇಕಿಯಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಅಂತರಾತ್ಮ ಸ್ಥಲವಾದುದು.

---

## ೨. ಅಂತರಾತ್ಮಸ್ಥಲ.

(೧) ಒಳಗೊಂದು ಬೆಳಗುವ ಜ್ಯೋತಿಯಂತಪ್ಪ ವಿಚಾರವದೇನೋ? ಅತ್ತ ಹೊದ್ದದು. ಇತ್ತ ಹೊದ್ದದು. ಬಾಹ್ಯವಿಚಾರವ ವಿಚಾರಿಸುವ ವಿಚಾರ ತಾನಾಗಿದ್ದುದನರಿಯದು. ಅರಿಯದೆ ಮತ್ತೆ ಮರೆದಿರದು. ಹೊದ್ದುವ ಕಾಳಿಕೆಯಲ್ಲಿ ಹೊದ್ದದು. ನಿಸ್ಸಂದೇಹವಿಲ್ಲ.

ಹೊದ್ದಿಯೂ ಹೊದ್ದದೆ ಇದ್ದಿತ್ತು. ತುದಿ ಮೊದಲಲ್ಲಿ ತುದಿ ಇದ್ದಿತ್ತು. ಮೊದಲೆರಡನು ಕೂಡಿಕೊಂಡು ನಡುವೆ ಅಂತರಾತ್ಮನಾಗಿದ್ದಿತ್ತು. ಜೀವಗುಣವಳಿದಲ್ಲಿ ಪರಮಾತ್ಮನ ಮುಂದೆ ಪ್ರತಿಬಿಂಬವಾಗಿರ್ದಲ್ಲಿ ಸಂಧಾನವನರಸುತ್ತಿರ್ದೆನಯ್ಯ ಕೂಡಲ ಚನ್ನಸಂಗಮದೇವಾ.

(೨) ದೇಹ ಪ್ರಸಾದವೆಂದೆನ್ನೆ. ಅಂತರ್ದೇಹ ಪ್ರಸಾದವೆಂದೆಂಬೆ. ಜಾಗ್ರತ್ ಪ್ರಸಾದವೆಂದೆನ್ನೆ. ಸ್ವಪ್ನ ಪ್ರಸಾದವೆಂದೆಂಬೆ. ಅಂತರ್ದೇಹಕ್ಕೆ ಆಕಾರವಿಲ್ಲ. ಸ್ವಪ್ನಕ್ಕೆ ಬೀಜವಿಲ್ಲ ಇದು ಕಾರಣ ಕೂಡಲ ಚನ್ನಸಂಗಮನು ದೇಹದಲ್ಲಿ ತೋರಿದನಾಗಿ ಅಕಾಯದಲ್ಲಿ ನಿಮ್ಮುವ ಕಂಡೆ.

(೩) ನವನಾಳ ಪದ್ಮದ ಅಷ್ಟದಳದೊಳಗೆ ಇಪ್ಪತ್ತುಮೂರು ನಾಳ ನೋಡಾ? ಸುಳಿದು ಬೀಸುವ ವಾಯು. ಒಳಗೆ ಆತ್ಮಜ್ಯೋತಿ. ಅಲ್ಲಿಂದೊಳಗಿಪ್ಪ ಹಂಸನ ಗೃಹವ ನೋಡಾ! ಹಿರಿದೊಂದು ಭೂತವು ಹುದುಗಿಪ್ಪ ಭೇದವ ನಿಲುಕಿ ನೋಡಿಯೇ ಕಂಡೆನೆಂದಾತನಂಬಿಗ ಚೌಡಯ್ಯ.

(೪) ಶುಕ್ಲ ಶೋಣಿತ ಪಿಂಡೈಕ್ಯ ಚಿತ್ತ ವಾಯು ಅಬು ಪದ್ಮ ದಳದಲ್ಲಿ ಮೊಲೆ ಮುಡಿ ಬಂದಡೆ ಹೆಣ್ಣೆಂಬರು. ಗಡ್ಡ ಮೀಸೆಯಾದಡೆ ಗಂಡೆಂಬರು. ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ. ಆದರಂತುವ ತಿಳಿಯಲಿಕೆ ಶ್ರುತಿತತಿಗೆ ತಿಳಿಯದೆಂದಾತನಂಬಿಗರ ಚೌಡಯ್ಯ.

(೫) ಜಗವೊಂದೆಸೆ, ತಾನೊಂದೆಸೆ. ಮತ್ತಾ ಜಗದೊಳಗೆ ತಾ, ತನ್ನೊಳಗೆ ಜಗ. ಆಗಮವೊಂದೆಸೆ, ತಾನೊಂದೆಸೆ. ಮತ್ತಾ ಆಗಮದೊಳಗೆ ತಾ, ತನ್ನೊಳಗೆ ಆಗಮ. ವಿಧಿಯೊಂದೆಸೆ, ತಾನೊಂದೆಸೆ. ಮತಾ ವಿಧಿಯೊಳಗೆ ತಾ, ತನ್ನೊಳಗೆ ವಿಧಿ. ಕ್ರಿಯೊಂದೆಸೆ ತಾನೊಂದೆಸೆ, ಮತ್ತಾ ಕ್ರಿಯೊಳಗೆ ತಾ, ತನ್ನೊಳಗೆ ಕ್ರಿ. ಇಂತೀ ಜಗ ಆಗಮ ವಿಧಿ ಕ್ರಿ ನಿಷೇಧವಾಗಿ ಹೊದ್ದಿಯೂ ಹೊದ್ದದು ನೀರ ತಾವರೆಯಂತೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಇಂತು ಅಂತರಾತ್ಮ ವಿವೇಕಾನುಭಾವಿಯಾಗಿರ್ದ ಲಿಂಗವು ಪ್ರಾಣ ಲಿಂಗವು. ಆತ್ಮ ವಿವೇಕದಿಂ ಪರಮಾತ್ಮನ ಪರಾಮರ್ಶಿಸಿದ ಭೇದ ವೆಂತಿರ್ದುದೆಂದಡೆ ಮುಂದೆ ಪರಮಾತ್ಮ ಸ್ಥಲವಾದುದು.

---

## ೩ ಪರಮಾತ್ಮಸ್ಥಲ.

(೧) ಭೂತಳದ ಮತಿವಂತರು ಅಂತು ಮನಸ್ಥಲ ವಿಡಿಯಲು ಮಾಣಿಕವ ನುಂಗಿ ಜಾತಿ ಧರ್ಮವನುಡುಗಿ ಭ್ರಾಂತಿ ಭ್ರಮೆಗಳನ್ನು ಸುಟ್ಟು ಚಿತ್ರ ಭಸ್ಮವ ಧರಿಸಿ ಅಣಿಮಾದಿ ಗುಣಂಗಳ ಗತಿಯ ಪದ ವನೇ ಮೀರಿ ಭ್ರಾಂತಳಿದು ಜ್ಯೋತಿ ಬೆಳಗುತ್ತಿದೆ ಗುಹೇಶ್ವರಾ.

ಟೀಕು:— ಪರಮಾತ್ಮ ಸ್ವರೂಪು ತಾನೆಂದರಿಯದೆ ಮತಿಯ ಬಲುಮೆವಿಡಿದು ಆತ್ಮನ ನಿಲವನರಿದೆವೆಂಬುದೆಲ್ಲವು ಮಾತಿನ ಮಥನ ವಲ್ಲದೆ ನಿಜವಲ್ಲ. ಅದೇನು ಕಾರಣವೆಂದಡೆ, ಆ ಮಾತು ಪರಮಾತ್ಮ ತತ್ವ ಜ್ಞಾನವೆಂಬ ರತ್ನವ ನುಂಗಿ ಉಗುಳದೆ ಇಪ್ಪುದಾಗಿ ಇದೀಗ ಭೂತ ಳದ ಮತಿವಂತರು ಆತ್ಮನ ಸ್ಥಲವಿಡಿಯಲು ಮಾತು ಮಾಣಿಕವ ನುಂಗಿತೆಂಬ ಶಬ್ದಕ್ಕರ್ಥ. ಇದರ ಸಕೀಲ ಸಂಬಂಧವನರಿದು ಜಾತಿ ವರ್ಣ ಆಶ್ರಮ ನಾಮ ಗೋತ್ರಂಗಳ ತ್ಯಜಿಸಿ ವ್ರತ ನಿಯಮೋಪಾಸ ನೆಗಳ ತೊರೆದು ಇತ್ಯಾದಿ ಭ್ರಮೆಯನು ಜ್ಞಾನಾಗ್ನಿಯಲ್ಲಿ ದಹಿಸಿದನೆಂ ಬುದೀಗ ಜಾತಿ ಧರ್ಮವನುಡುಗಿ ವ್ರತದ ಭ್ರಮೆಗಳ ಸುಟ್ಟು ಅವ ಶೇಷಿತವಾದ ಚಿದ್ವಿಭೂತಿಯ ಧರಿಸಿದನೆಂಬ ಶಬ್ದಕ್ಕರ್ಥ. ಇಂತು ಅವ ಶೇಷಿತವಾದ ಚಿದ್ವಿಭೂತಿಯನು ಧರಿಸಲು ಅಣಿಮಾದಿ ಗುಣಂಗಳ ಪರವನು ಮೀರಿ ಸಕಲ ಭ್ರಾಂತಿಯಳಿದು ಪರಂಜ್ಯೋತಿಯಾಗಿ ಆ ಶರಣ ತೊಳಗಿ ಬೆಳಗುತ್ತಿರ್ದನೆಂಬುದೀಗ ಅಣಿಮಾದಿ ಗುಣಂಗಳ ಗತಿಯ ಪಥವನು ಮೀರಿ ಭ್ರಾಂತಳಿದು ಬೆಳಗುತ್ತಿದೆ ಗುಹೇಶ್ವರಾ ಎಂಬ ಶಬ್ದಕ್ಕರ್ಥ.

(೨) ಆತ್ಮೋಹಂ ಎಂಬರು ತಾಪಾತ್ಮಸಿತ್ತುಗಳೆಲ್ಲ. ಆತ್ಮನಂತಹ ನಿಂತಹನೆಂದು ಕಂಡವರುಂಟೇ ಅಯ್ಯಾ? ಆತ್ಮ ಜ್ಞಾತೋಹಂ ಎಂಬು

ದಕ್ಕೆ ಶೃತಿ ಪ್ರಮಾಣ ಉಂಟು. ಆತ್ಮನು ವಾಙ್ಮನಕ್ಕಗೋಚರನಯ್ಯಾ. ಆತ್ಮನು ತತ್ವಮಸಿ ವಾಕ್ಯದಿಂದತ್ತತ್ತ. ಆತ್ಮನನರಿದಿಹೆನೆಂಬವರೆಲ್ಲ ಅರಿ ಮರುಳುಗಳಲ್ಲವೇ ಅಯ್ಯಾ? ಆತ್ಮ ತಾನಾದವಸ್ಥೆ ನೀರು ನೀರು ಕೂಡಿ ದಂತೆ. ಆತ್ಮನ ಕಾಂಬಡೆ ಕಾಯವಿಡಿದು ಕಾಣಬಹುದೇ ಅಯ್ಯಾ? ಆತ್ಮ ಪ್ರಾಣೇಶ ಲಿಂಗ, ಪ್ರಸಾದ ಕಾಯ. ಆತ್ಮನೆಂಬಾತ ನಮ್ಮ ಉರಿ ಲಿಂಗಪೆದ್ದಿ ಪ್ರಿಯ ವಿಶ್ವೇಶ್ವರ.

(೩) ಸತ್ವ ರಜ ತಮನೆಂಬವು ಪ್ರಪಂಚವೆಂದೆಂಬಿರಿ. ಆ ಸತ್ವವೇ ಪರತತ್ವ ಕಾಣಾ. ಉದಯಾಸ್ತಮಾನವೆಂಬ ಒಂದೆರಡೆಣಿಕೆಯ ಉದ ಯಾಸ್ತಮಾನ ಉಂಟೇ? ಆತ್ಮವಿತ್ತುವಿಂಗೆ ಉದಕವನುಂಡ ಲೋಹದ ಪರಿಯಂತೆ ಇರಬೇಕು. ಮೂಗ ಕಂಡ ಕನಸ ನೀವು .ಬಲ್ಲರೆ ಹೇಳಿರೇ. ಉಪಾಧಿ ಇಲ್ಲದುಪಮೆ, ಭಾವವಿಲ್ಲದ ಭರಿತನು, ಇಂದ್ರಿಯವರತ ಪ್ರಕಾಶ ನೋಡಿರೇ. ಕಾರಣವಿಲ್ಲದ ಕಾರ್ಯ, ಕೇಳಲಿಲ್ಲದ ಉಲುಹು, ಬೇಡಲಿ ಲ್ಲದ ಪದವಿದು. ತೋರಿ ಆದಿ ಅಂತ್ಯ ಇಲ್ಲದ ತೃಪ್ತಿಯಡಗಿದ ನಿಜಕ್ಕೆ ಪ್ರತಿಯುಂಟೇ? ನಿಜ ಭಾವವಳಿದಾತ್ಮ ನಿತ್ಯವೆಂಬುದನು ಎಲ್ಲ ಶೃತಿಗ ಳಲ್ಲಿ ಕೇಳಿಕೊಳ್ಳಿ. ಸುಖದ ಸೋಂಕಿನ ಪರಿಣಾಮದ ಪದವನು ಕೂಡಲ ಚನ್ನಸಂಗಮನಲ್ಲಿ ಪ್ರಭುವೇ ಬಲ್ಲ.

(೪) ಪದ್ಮಾಸನದಲ್ಲಿ ಕುಳ್ಳಿರ್ದು ಕುಂಡಲಿಯ ಜ್ಞಾನವನರಿದು ಅಂಡಲೆದು ಅಧೋವಾಯುವನೂರ್ಧ್ವ ಮುಖವ ಮಾಡಿ ಷಡಂಗುಲವ ನೆತ್ತಿ ಊರ್ಧ್ವ ವಾಯುವಿನಧೋ ಮುಖಕ್ಕೆ ತಂದು ಉತ್ತರ ಪೂರ್ವ ದಕ್ಷಿಣಮಂ ನೇತಿಗಳೆದು ಪಶ್ಚಿಮ ಸುಷುಮ್ನೆಯಲ್ಲಿ ಮನ ಶಕ್ತಿ ಸಂಧಾನ ಸಂಯೋಗದಿಂದ ಸಹಸ್ರ ದಳ ಕಮಲದಲ್ಲಿ ನಾದ ಭ್ರಮರನೆರಗಿ ಮಹಾವಾಸನಾಮೃತವ ದಣಿಯುಂಡು, ತ್ರಿಸಂಧಾನ ಒಂದಾದ ಬಳಿಕ ಆತ್ಮ ಪರಮಾತ್ಮ ಇಂತಾಗಿ ಮರಳಿ ಅಂತರಾತ್ಮ ವಿಚಾರಕ್ಕೆ ಇಳಿದಲ್ಲಿ ಅಭ್ಯಾಸಕ್ಕೆ ಬರಲಾಗದು. ಅದೆಂತೆಂದೊಡೆ ದೇವಲೋಕಕ್ಕೆ ಸಂದು ಮರಳಿ ಮಾನವನಪ್ಪಡೆ ಅದೇ ಪಾತಕ. ಹಸಿದವನಮೃತವ ದಣಿ ಯುಂಡು, ತ್ರಿಸಂಧಾನ ಒಂದಾದ ಬಳಿಕ ಮರಳಿ ಹಸಿದುಂಡಿಹೆನೆಂ ದಡೆ ಅದೇ ಪ್ರಕೃತಿ ಗುಣ. ಇದು ಕಾರಣ ಪರಮಾತ್ಮ ತಾನಾದಾ ತನು ಪರಮಾತ್ಮನಾಗಿ ತನ್ನಲ್ಲಿ ತಾನೇ ಭವಿಸಿರಬೇಕು ಗುಹೇಶ್ವರಾ.

(೫) ಉದಕದೊಳಗಣ ವಿಕಾರ ಪವನನಿಂದಲ್ಲದೆ ಉದಕ ಸಹಜ ಬೀಜವೆಂದರಿಯಬಹುದೆ? ದೇಹ ಪ್ರಪಂಚಿಗಳು ವಾಯುವಿನಿಂದಲ್ಲದೆ ದೇಹವಲ್ಲಿ ಬೇರೊಂದು ಗುಣವ ತೋರಿ ಮಂಜಿನ ಉರಿಯ ಬಿಸಿಲಂ ಬಿನಲ್ಲಿ ಎಚ್ಚಡೆ ಕರ ಹೊಸತಾಯಿತ್ತು. ಸಹಜದ ನಿಲವು ಜೀವ ಪರ ಮಾತ್ಮನೆಂಬೆರಡನು ನುಡಿಯಲು ಬೇಡ. ನೆನೆವ ಮನ ತಾನೆಯಾಗಿ ತೆರಹಿಲ್ಲದ ಘನ ನೋಡುವ ಮೂರುತಿಯಲ್ಲಿ ಕೇಳುವ ಕೀರ್ತಿಯಲ್ಲಿ ಪರಿಪೂರ್ಣ ಪರಂಜ್ಯೋತಿ ನಿರ್ಗುಣ ಮಹಿಮ ಭಾವವಿಲ್ಲದ ಶಬ್ದವನು ನಮ್ಮ ಕೂಡಲ ಚನ್ನಸಂಗನಲ್ಲಿ ಪ್ರಭುವೇ ಬಲ್ಲ.

(೬) ಜ್ಞಾತೃ ಜ್ಞಾನವ ನುಂಗಿ, ಜ್ಞಾನವ ಜ್ಞೇಯ ನುಂಗಿ, ಜ್ಞೇಯವು ತನ್ನ ನುಂಗಿ, ತನ್ನ ತಾನರಿದು ಶ್ರವಣ ಮನ ನಿಧಿ ಧ್ಯಾಸಂಗಳಲ್ಲಿಯೇ ತಲ್ಲೀಯ್ಯವಾಗಿ ಸ್ಥೂಲ ಸೂಕ್ಷ್ಮ ಕಾರಣಂಗಳನೇ ಕೀಭವಿಸಿ ಒಂದೇ ಸಂಧಾನವಾಗಿ, ಅನ್ಯ ಸಂಧಾನವರತು ಪರಮಾಮೃ ತವೇ ಆಲಿಂಗನವಾಗಿ ಆಲಿಂಗನವೇ ಪರಮಾಮೃತವಾಗಿ ಪ್ರತಿಬಿಂಬವು ಅಪ್ರತಿಯಾಗಿರ್ದುದೇ ಭಕ್ತ ಜಂಗಮೈಕ್ಯ. ಇಂತಿರ್ದುದೇ ಪ್ರಸಾದಿ, ಪ್ರಾಣಲಿಂಗಿ, ಐಕ್ಯ. ಇಂತಿರ್ದುದೇ ಲಿಂಗ ಶರಣನೈಕ್ಯ. ಇಂತಿರ್ದಡೆ ಜೀವ ಪರಮೈಕ್ಯವಯ್ಯ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

(೭) ತನ್ನ ತಾನರಿವುದೇ ಪರಮಾತ್ಮಯೋಗ. ತನ್ನ ತಾ ಮರೆ ವುದೇ ಮಾಯಾ ಸಂಬಂಧ. ಅಂತರಂಗ, ಬಹಿರಂಗ, ಪರಮಾಕಾಶ ಮಧ್ಯದಲ್ಲಿ ಪರಮಾತ್ಮನು ಪರಬ್ರಹ್ಮ ಸ್ವರೂಪನು ನಿತ್ಯ ನಿರಂಜನ ಉಪಮಾತೀತನು ನಿಷ್ಪತ್ತಿ ಕೇವಲ ನಿಃಕಲ ಸ್ವರೂಪನು. ಭ್ರೂಮಧ್ಯ ದಲ್ಲಿ ಪರಮಾತ್ಮನೇ ಅಂತರಾತ್ಮನೆನೆಸಿ ಸಕಲ ನಿಃಕಲನಾಗಿಪ್ಪನು. ಹೃದಯ ಸ್ಥಾನದಲ್ಲಿ ಪರಮಾತ್ಮನೇ ಜೀವಾತ್ಮನಾಗಿ ಕೇವಲ ಸಕಲನಾ ಗಿಪ್ಪನು. ಬ್ರಹ್ಮಸ್ಥಾನದಲ್ಲಿ ನಿಷ್ಕಲ ಗುರುಮೂರ್ತಿ. ಲಿಂಗ ಭ್ರೂಮ ಧ್ಯದಲ್ಲಿ ನಿಃಷ್ಕಲ ಪರಂಜ್ಯೋತಿರ್ಲಿಂಗ. ಹೃದಯ ಸ್ಥಾನದಲ್ಲಿ ಕೇವಲ ಸಕಲ ಜಂಗಮಲಿಂಗ. ಇಂತೀ ಪರಮಾತ್ಮನೇ ಅಂತರಾತ್ಮ, ಪರಮಾ ತ್ಮನೆ ಜೀವಾತ್ಮ. ಬಹಿರಂಗದಲ್ಲಿ ಪರಮಾತ್ಮನೇ ಗುರುಲಿಂಗ, ಪರಮಾ ತ್ಮನೇ ಶಿವಲಿಂಗ, ಪರಮಾತ್ಮನೇ ಜಂಗಮಲಿಂಗ. ಇಂತು ಪರಬ್ರ ಹ್ಮವೇ ಪರಮಾತ್ಮ, ಪರಮಾತ್ಮನೇ ಸರ್ವಾತ್ಮ, ಪರಮಾತ್ಮನೇ ಸರ್ವ

ಗತ, ಪರಮಾತ್ಮನೇ ಆತ್ಮಗತ. ಇದು ಕಾರಣ ಪರಮಾತ್ಮನೇ ಅಂತರಂ
ಬಹಿರಂಗ ಭರಿತ ಪ್ರಾಣಲಿಂಗ. ಇಂತರಿದುದೇ ಪರಮಾತ್ಮ ಯೋ
ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

ಇಂತು ಜೀವಾತ್ಮ ಅಂತರಾತ್ಮ ಪರಮಾತ್ಮವೆಂಬ ತ್ರಿವಿಧ ಸ್ಥಲ
ಗಳೇಕವಾದ ಲಿಂಗವು ಪ್ರಾಣಲಿಂಗಿಯ ನಿರ್ದೇಹದಲ್ಲಿ ಸ್ವಭಾವ ಚ
ತ್ರವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ನಿರ್ದೇಹಾಗಮ ಸ್ಥ
ವಾದುದು.

---

## ೪. ನಿರ್ದೇಹಾಗಮಸ್ಥಲ.

(೧) ಅಂತರಂಗ ಸನ್ನಿಹಿತ ಬಹಿರಂಗ ನಿಶ್ಚಿತವೋ ಅಯ್ಯಾ?
ತನು ತನ್ನ ಸುಖ, ಮನ ಪರಮಸುಖ. ಇದು ಕಾರಣ ಕಾಯ ವಾಯುವೋ
ಗುಹೇಶ್ವರ ನಿರಾಳವೋ ಅಯ್ಯಾ?

ಟೀಕು:— ದೇಹ ಕರಣಂಗಳೊಳಗೆ ಇರಿಸಿಕೊಂಡು ಅಂತರಂಗ
ವಾಗಿಪ್ಪ ಚಿತ್ಪರಮಲಿಂಗವ ಸಮ್ಯಜ್ಞಾನತ್ವದಿಂದ ಕಂಡರಿದು ಶಿವ
ಭಾವ ಘಟಿಸಿತ್ತೆಂಬುದೀಗ ಅಂತರಂಗ ಸನ್ನಿಹಿತವೆಂಬ ಶಬ್ದಕ್ಕರ್ಥ.
ಅಂತು ಅಂತರಂಗದಲ್ಲಿ ಶಿವಭಾವ ಘಟಿಸಿತ್ತಾಗಿ ಬಹಿರಂಗದ ಕ್ರಿಯೆಯೊಳ
ಪಟ್ಟು ಸಕಲ ದೇಹೇಂದ್ರಿಯಂಗಳೆಲ್ಲವ ಲಿಂಗಕ್ಕರ್ಪಿಸಿ ದೇಹಸಂಸಾರ
ನಿರ್ಲೇಪಿಯಾದ ಶರಣನೆಂಬುದೀಗ ಬಹಿರಂಗ ನಿಶ್ಚಿಂತವೋ ಅಯ್ಯ ಎಂಬ
ಶಬ್ದಕ್ಕರ್ಥ. ಅಂತಹ ಶರಣನ ತನು ಸುಖವೆಲ್ಲ ಲಿಂಗಕ್ಕಾಗಿ, ಲಿಂಗದ
ಪರಮಾನಂದ ಸುಖವೆಲ್ಲ ಶರಣನ ಮನಕ್ಕಾಗಿ ಹೋಯಿತ್ತೆಂಬುದೀಗ
ತನು ತನ್ನ ಸುಖ ಮನ ಪರಮ ಸುಖವೆಂಬ ಶಬ್ದಕ್ಕರ್ಥ. ಅಂತು
ದೇಹೇಂದ್ರಿಯಂಗಳು ಶಿವಾರ್ಪಿತವಾಗಿ ದೇಹವಾಸನೆಯಳಿದು ದಗ್ಧಪಟ
ದಂತಿಪ್ಪ ಹುಸಿದೇಹವಿಡಿದಿರ್ದ ಶರಣನೆಂಬುದೀಗ ಇದು ಕಾರಣ ಕಾಯ
ವಾಯುವೋ ಎಂಬ ಶಬ್ದಕ್ಕರ್ಥ. ಅಂತು ವಾಸನೆ ನಷ್ಟವಾದ ದೇಹ
ವಿಡಿದುಕೊಂಡು ನಿಃಕಲ ಬ್ರಹ್ಮವಾಗಿರ್ದ ಶರಣನೆಂಬುದೀಗ ಗುಹೇ
ಶ್ವರ ನಿರಾಳವೋ ಎಂಬ ಶಬ್ದಕ್ಕರ್ಥ.

(೨) ಮಲಿನ ದೇಹಿಗೆ ಮಜ್ಜನವಲ್ಲದೆ ನಿರ್ಮಲ ದೇಹಿಗೆ ಮಜ್ಜನವೇಕೋ? ವಿಷಯ ಉಂಟೇ ಲಿಂಗ ನಿಷ್ಪತ್ತಿಯಾದ ಶರಣಂಗೆ ಅಗಮ್ಯ ಅಗೋಚರ ಅಪ್ರಮಾಣ ಗುಹೇಶ್ವರಾ.

(೩) ಯತಿಗೆ ಲಾಂಛನವೇಕೆ? ರುಚಿಗ ಮೊದಲು ಏಕೆ? ಕಲಿಗೆ ಕತ್ತಿ ಏಕೆ? ದಿಟವುಳ್ಳ ಮನಕ್ಕೆ ಆಚಾರವೇಕೆ? ಸಜ್ಜನ ಸ್ತ್ರೀಗೆ ಜೇರೆ ಸೊಂಪಿ ಏಕೆ? ಭೃತ್ಯಾಚಾರವಿಂಬುಗೊಂಡವರ ಮನವ ಮಹಾಂತ ಸಕಳೇಶ್ವರದೇವ ತಾನೇ ಬಲ್ಲ.

(೪) ಅಂಗವು ಲಿಂಗದಲ್ಲಿ ಸಂಬಂಧವಾದವರ ಲಿಂಗವೆಂದೇ ಕಾಂಬುದು. "ಕೀಟೋಽಪಿ ಭ್ರಮರಾಯತೆ" ಎಂಬ ನ್ಯಾಯದಂತೆ ಅಂಗ ಲಿಂಗ ಸೋಂಕಿ ಲಿಂಗವಾಯಿತ್ತಾಗಿ, ನೀವೆಂದೇ ಕಾಂಬುದು. ಲಿಂಗ ಮುಂತಾಗಿಯೇ ನಡೆ, ಲಿಂಗ ಮುಂತಾಗಿಯೇ ನುಡಿ, ಲಿಂಗ ಮುಂತಾಗಿಯೇ ನೋಡುವವರಾಗಿ ಅಂಗೇಂದ್ರಿಯಂಗಳೆಂಬುದಿಲ್ಲ. ಅವೆಲ್ಲವು ಲಿಂಗೇಂದ್ರಿಯಂಗಳಾದವಾಗಿ ಕಾರಣ ಲಿಂಗವೆಂದೇ ಕಾಂಬುದು. ಸರ್ವಾಂಗಲಿಂಗ ಕೂಡಲ ಚನ್ನಸಂಗಾ ನಿಮ್ಮ ಶರಣ.

(೫) ಪದಿಗಳ ಪದಂಗಳ ವಿಚಾರಿಸಲು, ಸಾಧಾರಣ ಪ್ರಾಣಿಗಳ ಪದವಿಯಿಂದ ಮಾನವರ ಪದವಿ ಶ್ರೇಷ್ಠ. ಮಾನವರ ಪದವಿಯಿಂದ ಮಾನವ ರಾಜಪದ ವಿಶೇಷ. ಆ ರಾಜಪದವಿಯಿಂದ ದಾನವರ ಪದ ವಿಶೇಷ. ದಾನವರ ಪದವಿಯಿಂದ ದೇವಜಾತಿಗಳ ಪದ ವಿಶೇಷ. ದೇವಜಾತಿಗಳ ಪದವಿಯಿಂದ ಇಂದ್ರಪದ ವಿಶೇಷ. ಇಂದ್ರ ಪದವಿಯಿಂದ ಬ್ರಹ್ಮಪದ ವಿಶೇಷ. ಬ್ರಹ್ಮಪದವಿಯಿಂದ ವಿಷ್ಣು ಪದ ವಿಶೇಷ. ವಿಷ್ಣು ಪದವಿಯಿಂದ ರುದ್ರಪದ ವಿಶೇಷ. ರುದ್ರಪದವಿಯಿಂದ ಲಿಂಗಪದ ವಿಶೇಷ. ಲಿಂಗವಂತನು ಲಿಂಗಕ್ಕೆ ಕರ್ತನಪ್ಪ ಪದವಿಯಲ್ಲಿರ್ದು ಮಹಾಲಿಂಗವಿಂತು ಅಂತರಂಗ ಬಹಿರಂಗ ಭರಿತವಾಗಿರ್ದ ಬಳಿಕ ಅಲ್ಲಿ ಪದವನಾಸೆಗೈವುದೆ ಜ್ಞಾನಿ ಅಲ್ಲಿ ಭಕ್ತನಲ್ಲಿ ಶರಣನಲ್ಲಿ ಲಿಂಗವಂತನಲ್ಲ. ಆವಂಗೆ ಲಿಂಗವಿಲ್ಲವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಇಂತು ನಿರ್ದೇಹ ಚಾರಿತ್ರ್ಯಾತ್ಮಕವಾದ ಲಿಂಗವು ಪ್ರಾಣಲಿಂಗಿಯಲ್ಲಿ ನಿರ್ಭಾರವಾದ ಚರಿತ್ರೆ ಎಂತಿರ್ದುದೆಂದಡೆ ಮುಂದೆ ನಿರ್ಭಾರಸ್ಥಲವಾದುದು.

---

## ೫. ನಿರ್ಭಾವಾಗಮಸ್ಥಲ.

(೧) ಮಣ್ಣಿಲ್ಲದ ಹಾಳಮೇಲೆ ಕಣ್ಣಿಲ್ಲದಾತ ಒಂದು ಮಣಿಯ ಕಂಡ. ಕೈಯಿಲ್ಲದಾತ ಪವಣಿಸಿದ. ಕೊರಳಿಲ್ಲದಾತ ಕಟ್ಟಿಕೊಂಡ. ಅಂಗವಿಲ್ಲದ ಸಿಂಗಾರಕ್ಕೆ ಭಂಗ ಉಂಟೇ ಗುಹೇಶ್ವರಾ?

ಅರ್ಥ:— ಮಣ್ಣೆಂದರೆ ದೇಹಕ್ಕೆ ಹೆಸರು. ಅಂತಪ್ಪ ದೇಹಧರ್ಮಂಗಳಿಲ್ಲವನು ತನ್ನಿಂದನ್ಯವೆಂದು ಅದೇತರದು ಎಂದು ಅರಿದ ಅರಿವಿಗೆ ಮಣ್ಣಿಲ್ಲದ ಹಾಳ ಮೇಲೆ ಎಂಬ ಶಬ್ದಕ್ಕರ್ಥ. ಅಂತು ಮೂರುಲೋಕದೊಳಗೆ ಸಾರಿ ಹೆಜ್ಜೆಯ ನೋಡಿ ತೆರೆಯ ಬೆಂಬಳಿವಿಡಿದು ತೋಹಿನಲ್ಲಿ ಬಂದಿತ್ತು. ಮೃಗವು ಸೋಹಂ ಸೋಹಂ ಎಂದೆನುತ್ತಿದ್ದಿತ್ತು. ಇಹಪರವ ಮೀರಿ ಬಂದಿತ್ತು. ತೋರಲಿಲ್ಲದ ಬಿಲ್ಲು ಬೇರೆನಿಸಿದ ಬಾಣ ಅರುಹಿನ ಕೈಯ್ಯಲು ಕುರುಹ ಬಾಣಸವ ಮಾಡಿ ತೆರಹಿಲ್ಲದ ಪಾಕದಲ್ಲಿ ಅಡಿಗೆಯ ಮಾಡಿದ ಬೋನವ ಅರ್ಪಿತವ ಮಾಡಿದ ಪ್ರಸಾದದಿಂದ ಸುಖಿಯಾದೆನು ಗುಹೇಶ್ವರಾ.

(೨) ಆರು ಬಣ್ಣದ ಮೃಗ ತೋರೆ ಅಡಗಿತ್ತು. ಬಯಲು ಮೂರು ಲೋಕದೊಳಗೆ ಸಾರಿ ಹೆಜ್ಜೆಯ ನೋಡಿ ತೊರೆಯ ಬೆಂಬಳಿವಿಡಿದು ತೋಹಿನಲ್ಲಿ ಬಂದಿತ್ತು. ಸೋಹಂ ಸೋಹಂವೆನುತಿದ್ದ ಮೃಗವು ಇಹ ಪರವ ಮೀರಿ ನಿಂದಿತ್ತು. ತೋರಲಿಲ್ಲದ ಬಿಲ್ಲು, ಬೇರೆನಿಸಿದ ಬಾಣ, ಅರುಹಿನ ಕಯ್ಯಲ್ಲಿ ಕುರುಹ ಬಾಣಸವ ಮಾಡಿ ತೆರಹಿಲ್ಲದ ಪಾಕದಲ್ಲಿ ಅಡಿಗೆಯ ಮಾಡಿದನು. ಅಡಿಗೆಯ ಮಾಡಿದ ಬೋನು ಅರ್ಪಿತವ ಮಾಡಿದ ಪ್ರಸಾದದಿಂದ ಸುಖಿಯಾದೆ ಗುಹೇಶ್ವರಾ.

ಟೀಕು:— ಷಡುವರ್ಣಾತ್ಮಕ ಸ್ವರೂಪವಾಗಿಪ್ಪುದು ಮಾಯೆ. ಆ ಮಾಯೆ ಎಂಬುದು ಅನಿತ್ಯತ್ವವಪ್ಪುದೇ ಕಾರಣವಾಗಿ ತೋರೆ ಅಡಗಿತ್ತು. ಅಡಗಿ ತೋರುತ್ತ ಇಪ್ಪುದೆಂಬುದೀಗ ಆರು ಬಣ್ಣದ ಮೃಗ ತೋರೆ ಅಡಗಿತ್ತು ಎಂಬ ಶಬ್ದಕ್ಕರ್ಥ. ಆ ಮಾಯೆ ಎಂಬಾ ಮೃಗವನು ಸಂಹಾರ ಮಾಡಿಹೆನೆಂದು ವಿಚಾರಿಸಿ ನೋಡಲು ಆರು ವಿಷ್ಟಪೊಳಗೆಲ್ಲಿಯು ತಾನೆಯಾಗಿದ್ದಿತ್ತೆಂಬುದನರಿದು ಆ ಮಾಯೆಯು ನಿಂದಲವನರಿಯಲು ತೋರೆ ಎಂದರೆ ಹರಿವ ಮನದ ಬಳಿಯಲು ಬಂದು

ಆ ಮಾಯಾ ಮೃಗವು ಆ ಶರಣನ ಕಣ್ಣ ಮುಂದೆ ಗುರಿಯಾಗಿದ್ದಿತ್ತೆಂಬು ದೀಗ ಬಯಲು ಮೂರು ಲೋಕದೊಳಗೆ ಸಾರಿ ಹೆಜ್ಜೆಯ ನೋಡಿ ತೂರೆಯ ಬೆಂಬಳಿವಿಡಿದು ತೋಹಿನಲ್ಲಿಗೆ ಬಂದಿತ್ತೆಂಬ ಶಬ್ದಕ್ಕರ್ಥ. ಅಂತು ಶರಣನ ಕಣ್ಣ ಮುಂದೆ ಸಿಕ್ಕಿದ ಮಾಯಾಭ್ರಾಂತು ಜೀವನನು ಸೋಹಂ ಸೋಹಂ ಮೆಂಬ ಪದದ ಅಹಂಕಾರವಂತರ್ಗತನಲ್ಲದೆ ಮತ್ತಾರೂ ಇಲ್ಲವೆಂದು ಅಹಂಕಾರವನ್ನೈದಿ ಇಹ ಪರವೆಂಬ ಸುಖವನು ತೋರ ಲೀಸದೆ ತಾನೇ ಘನವನಾಡಿ ತೋರುತ್ತಿಪ್ಪನೆಂಬುದೀಗ ಸೋಹಂ ಸೋಹಂ ಮೆನುತಿದ್ದ ಮೃಗವು ಇಹಪರವ ಮೀರಿ ನಿಂದಿತ್ತೆಂಬ ಶಬ್ದಕ್ಕರ್ಥ. ಆ ಮಾಯಾ ಮೃಗವನು ಭಿನ್ನಭಾವವಿಲ್ಲದ ಸದ್ಭಾವವೆಂಬ ಬಿಲ್ಲಿನಲ್ಲಿ ಏಕೋಸಿಷ್ಠೆ ಎಂಬ ಭಾವ ತೊಟ್ಟು ಏಕಾಗ್ರದಿಂದ ಲಕ್ಷಿಸಿ ಎಸೆದು ಕೆಡ ಹಲು ಆ ಮಾಯೆ ಅಳಿದು ಶುದ್ಧವಿದ್ಯೆ ಉಳಿಯಲು ಆ ಸದ್ವಿದ್ಯೆಯ ಕುರುಹನು ಮಹಾ ಜ್ಞಾನಾಗ್ನಿಯಿಂದ ಸಮರಸಸಾರವ ಮಾಡಿದನೆಂಬು ದೀಗ ತೋರಲಿಲ್ಲದ ಬಿಲ್ಲು ಜೇರಿಸಿಸಿದ ಬಾಣ ಅರುಹಿನ ಕೈಯಲ್ಲಿ ಕುರುಹ ಬಾಣಸವ ಮಾಡಿ ತಿರಕಿಲ್ಲದ ಪಾಕದಲ್ಲಿ ಅಡಿಗೆಯ ಮಾಡಿ ದನೆಂಬ ಶಬ್ದಕ್ಕರ್ಥ. ಇಂತು ಸಾಮರಸ್ಯವಾದ ಮಹಾ ಪದಾರ್ಥವನು ಮಹಾಲಿಂಗಕ್ಕೆ ಅರ್ಪಿಸಿ ಸೇವ್ಯ ಪ್ರಸಾದಿಯಾಗಿ ಸುಖಿಯಾದನೆಂಬು ದೀಗ ಅಡಿಗೆಯ ಮಾಡಿದ ಬೋನದ ಅರ್ಪಿತವ ಮಾಡಿದ ಪ್ರಸಾದ ದಿಂದ ಸುಖಿಯಾದೆ ಗುಹೇಶ್ವರನೆಂಬ ಶಬ್ದಕ್ಕರ್ಥ.

(೩) ನಿಷ್ಠೆಯುಳ್ಳಾತಂಗೆ ನಿತ್ಯನೇಮದ ಹಂಗೇತಕ್ಕೆ? ಸತ್ಯ ವುಳ್ಳಾತಂಗೆ ತತ್ವ ವಿಚಾರದ ಹಂಗೇತಕ್ಕೆ? ಮನ ಶುದ್ಧವುಳ್ಳಾತಂಗೆ ಮಂತ್ರದ ಹಂಗೇತಕ್ಕೆ? ಅರಿವುಳ್ಳಾತಂಗೆ ಅಗ್ಗಣಿಯ ಹಂಗೇತಕ್ಕೆ? ಕೂಡಲ ಚನ್ನಸಂಗಯ್ಯ ನಿಮ್ಮ ನರಿದಾತಂಗೆ ನಿಮ್ಮ ಹಂಗೇತಕ್ಕೆ?

(೪) ಒಂದೇ ಹೂ ಒಂದೇ ಅಗ್ಗವಣಿ ಒಂದೇ ಓಗರ ಒಂದೇ ಪ್ರಸಾದ ಒಂದೇ ಮನ ಒಂದೇ ಲಿಂಗ ಎಂದು ನಂದಾದೀವಿಗೆ ಕುಂದದ ಬೆಳಗು ಸ್ವತಂತ್ರ ಪೂಜೆ ಒಂದೇ ಅನಾಹತವೆರಡಾಗಿ ಬರು ಮುಖ ವಾಗಿ ಕೆಟ್ಟು ಹೋದರು ಗುಹೇಶ್ವರ.

(೫) ಒಂದೇ ಅರಿವು ಒಂದೇ ನದಿ ಒಂದೇ ಸ್ನಾನದೊಳಗೆ ಪ್ರಸಾ ದದಂತವನರಿವಡೆ ನಿಶ್ಚಿಂತ ಪರಿವನು ರಾಮನಾಥಾ.

ಇಂತು ನಿರ್ಭಾವ ಚರಿತ್ರಾತ್ಮಕವಾದ ಲಿಂಗವು ಪ್ರಾಣಲಿಂಗಿಯಲ್ಲಿ ಆದ ಚರಿತ್ರವು ನಷ್ಟವಾಗಿ ಆಗಮವಿರಹಿತವಾದ ಭೇದವೆಂತಿರ್ದರೆಂದಡೆ ಮುಂದೆ ನಷ್ಟಾಗಮಸ್ಥಲವಾದುದು.

---

## ೬. ನಷ್ಟಾಗಮಸ್ಥಲ.

(೧) ಬಯಲು ಬಯಲನೇ ಬಿತ್ತಿ, ಬಯಲು ಬಯಲನೇ ಬೆಳೆದು ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ಬಯಲು ಜೀವನವೆಂಬ ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು. ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ.

ಟೀಕು:— ಬಯಲೆಂದರೆ ನ ಅಲ್ಲ. ಪರಶಿವಲಿಂಗವು ತನ್ನ ಲೀಲೆಯಿಂದ ತಂದೆ ತನ್ನ ನಿರವಯದ ನಿಜವ ತನ್ನ ತಾನುದ್ಭವಿಸಿ ಬೆಳೆದು ಅಖಂಡ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು. ಅಂತಾದ ಮಹಾಲಿಂಗವು ತನ್ನ ನಿರವಯದ ನಿಜಭಾವದಲ್ಲಿ ಭರಿತನಾಗಿಪ್ಪನೆಂಬುದೀಗ ಬಯಲು ಬಯಲನೆ ಬಿತ್ತಿ ಬಯಲು ಬಯಲನೇ ಬೆಳೆದು ಬಯಲು ಬಯಲಾಗಿ ಬಯಲಾಯಿತ್ತಯ್ಯಾ ಎಂಬ ಶಬ್ದಕ್ಕರ್ಥ. ಅಂತು ಮಹಾ ಲಿಂಗಾಕಾರನಾದಲ್ಲಿ ಆ ಲಿಂಗದ ಕಲಾಂಶಿಕವೇ ಜೀವಾತ್ಮನೆಂಬ ಅಂಗವಾಯಿತ್ತು ಎಂಬುದೀಗ ಬಯಲು ಜೀವನವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನಿಗೆ ಅಂಗಭಾವ ಘಟಿಸಿತ್ತೆಂಬುದೀಗ ಬಯಲಭಾವನೆ ಎಂಬ ಶಬ್ದಕ್ಕರ್ಥ. ಅಂತು ಆತ್ಮನಿಗೆ ಲಿಂಗಭಾವ ಘಟಿಸಿದಲ್ಲಿ ಮಿಥ್ಯಾದೇಹವೆಂಬ ಬಯಲು ಬಯಲಾಗಿ ಹೋಗಿ ಅತನೆಲ್ಲ ಲಿಂಗವೆಂಬ ಬಯಲಾಯಿತ್ತೆಂದೀಗ ಬಯಲು ಬಯಲಾಗಿ ಬಯಲಾಯಿತ್ತಯ್ಯಾ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಭಾವ ಪೂಜಾಕ್ರಿಯಿಂದ ಪ್ರಾಣ ಮನ ಭಾವಂಗಳೆಲ್ಲವು ಲಿಂಗವೆಯಾದ ಬಳಿಕ ತಾನೇ ಲಿಂಗವೆಂಬ ಅಭಿನ್ನ ಪರಿವಿನ ವಿಶ್ವಾಸ ಘಟಿಸಿ ಲಿಂಗವ ಭಿನ್ನವಿಟ್ಟು ಅರಿಯಲಿಲ್ಲದೆ ಲಿಂಗವೆಯಾಗಿರ್ದ ಶರಣನೆಂಬುದೀಗ ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು, ನಾ ನಿಮ್ಮ ನಂಬಿ ಬಯಲಾದೆನೆಂಬ ಶಬ್ದಕ್ಕರ್ಥ.

(೨) ಮಹಾಮೇರುವಿನ ಮರೆಯಲ್ಲಿರ್ದ ಘೂತದ ನೆಳಲನರಸುವ ಕರ್ಮಿ ನೀ ಕೇಳಾ! ಆ ಮಹಾಲಿಂಗಕ್ಕೆ ಮಜ್ಜನವೆಂದೇನೋ? ಪರಿಮಳ ಲಿಂಗಕ್ಕೆ ಪುಷ್ಪವೆಂದೇನೊ? ಜಗಜ್ಯೋತಿ ಲಿಂಗಕ್ಕೆ ಧೂಪ ದೀಪಾರತಿ ಎಂದೇನೋ? ಅಮೃತ ಲಿಂಗಕ್ಕೆ ಆರೋಗಣೆ ಎಂದೇನೋ? ಗುಹೇಶ್ವರ ಲಿಂಗದಂತುವ ಬಲ್ಲವರಾರೋ?

(೩) ಮಜ್ಜನಕ್ಕೆರವಡೆ ನೀನು ಶುದ್ಧ ನಿರ್ಮಲದೇಹಿ. ಪೂಜೆಯ ಮಾಡುವಡೆ ನಿನಗೆ ಗಗನಕಮಳ ಕುಸುಮದ ಅಖಂಡಿತ ಪೂಜೆ. ಧೂಪ ದೀಪಾರತಿಗಳ ಬೆಳಗುವಡೆ ನೀನು ಸ್ವಯಂಜ್ಯೋತಿ ಪ್ರಕಾಶನು. ಅರ್ಪಿತವ ಮಾಡುವಡೆ ನೀನು ನಿತ್ಯ ತೃಪ್ತನು. ಅಷ್ಟವಿಧಾರ್ಚನೆಯ ಮಾಡುವಡೆ ನೀನು ಮುಟ್ಟಬಾರದ ಘನವೇದ್ಯನು. ನಿತ್ಯ ನೇಮಂಗಳ ಮಾಡುವಡೆ ನಿನಗನಂತ ನಾಮಂಗಳಾದವು ಗುಹೇಶ್ವರಾ.

(೪) ಎರಡೆಂಬರಯ್ಯ ಕರಣದ ಕಂಗಳಲ್ಲಿ ನೋಡಿದವರು. ಎರಡುವನತಿಗಳಿದು ಒಂದೆಂಬರಯ್ಯಾ. ಕಾಮಿಸುವದಿಲ್ಲಾಗಿ ಕಲ್ಪಿಸುವದಿಲ್ಲಾಗಿ ಭಾವಿಸುವದಿಲ್ಲಾಗಿ ಬಯಸುವದಿಲ್ಲಾಗಿ ಗುಹೇಶ್ವರನೆಂಬುದಿಲ್ಲಾಗಿ, ಮುಂದೆ ಬಯಲೆಂಬುದೂ ಇಲ್ಲ.

(೫) ಶ್ವೇತ, ಪೀತ, ಹರಿತ, ಕಪೋತ, ಮಾಂಜಿಷ್ಠ, ಕೃಷ್ಣವೆಂಬ ಷಡುವರ್ಣವೆಂದೆನ್ನು. ಉಂಡು ಉಪವಾಸಿ ಎಂದೆನ್ನು. ಬಳಸಿ ಬ್ರಹ್ಮಚಾರಿ ಎಂದೆನ್ನು. ಲಿಂಗವಿಂತುಂಟೆನ್ನು. ಲಿಂಗೈಕ್ಯದ ನುಡಿಯು. ಅಭಂಗನ ನಿಲವ ಭಂಗಿತ್ತರಿತ್ತ ಬಲ್ಲರು ಗುಹೇಶ್ವರ?

(೬) ಸಾರಾಯ ಪದಾರ್ಥವನಾರಯ್ಯ ಅರಿವವರು? ಅರದಲ್ಲಿ ತೋರಲಿಲ್ಲೆನಿಸಿತ್ತು. ಹೆಸರೆನಿಸಿಕೊಂಬರೆ ಹೆಸರಾಗಿಯೂ ಕುರುಹಿಲ್ಲ. ಹೆಸರಿಲ್ಲವು ಪರಿಣಾಮಿಸಲಾಯಿತ್ತು. ಕಂಡೆನೆಂದಡೆ ಕಾಣಲಾಯಿತ್ತು. ಕಂಡು ನುಡಿಸುವಂತಹದಲ್ಲ. ಕಂಡಾತ ಕಲಿಕೆಯೊಳಗಿಲ್ಲದಂತಿಪ್ಪ ಕಾಯಕ ವಿಲ್ಲದ ಕಾರಣ ಕರ್ತ ಮೂರರಿಂದತ್ತತ್ತ. ತಾನಿಲ್ಲೆಂದೆನಿಸಿತ್ತು. ಕೂಡಲಚೆನ್ನಸಂಗಯ್ಯ ಆನು ಮಹಾನುಭಾವ ಶರಣ ಫಲಸಂಬಂಧವ ಮೀರಿತ್ತು.

(೭) ನೆನೆ ನೆನೆ ಎಂದಡೆ ಏನ ನೆನೆವೆನಯ್ಯಾ? ಎನ್ನ ಕಾಯವೇ ಕೈಲಾಸವಾಯಿತ್ತು. ಎನ್ನ ಮನವೇ ಲಿಂಗವಾಯಿತ್ತು. ಎನ್ನ ತನುವೇ

ಸೆಜ್ಜೆಯಾಯಿತ್ತು. ನೆನೆವಡೆ ದೇವರುಂಟೇ? ನೋಡುವಡೆ ಭಕ್ತರುಂಟೇ? ಗುಹೇಶ್ವರಲಿಂಗ ಲೀಯವಾಯಿತ್ತು.

(೮) ಉಟ್ಟುದ ತೊರೆದವಂಗೆ ಊರೇನು, ಕಾಡೇನು? ನಷ್ಟ ಸಂತಾನಕ್ಕೆ ಕುಲವೇನು ಛಲವೇನು? ಹುಟ್ಟುಗೆಟ್ಟಾತಂಗೆ ಪುಣ್ಯವೇನು, ಪಾಪವೇನು? ಅದು ಕೆಟ್ಟುದು ಕಟ್ಟುದು. ತನ್ನ ತಾನರಿಯದೆ ಬಟ್ಟ ಬಯಲಲ್ಲಿ ಬಿದ್ದ ನಮ್ಮ ಅಜಗಣ್ಣ ತಂದೆ.

(೯) ನೋಡಲಿಲ್ಲದ ಶೃಂಗಾರ, ಮಾತಾಡಲಿಲ್ಲದ ಶಬ್ದ, ಹಾಡ ಲಿಲ್ಲದ ಸ್ವರ, ಬೇಡಲಿಲ್ಲದವರ ನೋಡಲಿಲ್ಲದ ಸಿರಾಳ, ಬಾಡಲಿಲ್ಲದ ಶಶಿಯ ಬೆಳಗು, ಕೂಡದೆ ಕೂಡಿತ್ತೊಂದು ಸೋಜಿಗವ ಕಂಡೆ ನಾನು. ಇಲ್ಲದು ಪಕಾರ ಮೊಲ್ಲದ ಸವಿಯಿಂದ ಸುಖಿಯಾದೆ ಗುಹೇಶ್ವರಾ.

(೧೦) ಭಾವ ಭಾವಿಸ ಬಲ್ಲುದೇ? ಭಾವ ಭಾವಿಸಲರಿಯದು. ಅದೇನು ಕಾರಣ? ಭಾವದಲ್ಲಿ ಭಾವಿಸುವ ಭಾವಿಕ ತಾನಾಗಿ. ನೇತ್ರ ನೋಡ ಬಲ್ಲುದೇ? ನೇತ್ರ ನೋಡಲರಿಯದು. ಅದೇನು ಕಾರಣ? ನೇತ್ರದ ಬಾಗಿಲಲ್ಲಿ ನಿಂದು ನೋಡುವಾತ ತಾನಾಗಿ. ಶ್ರೋತ್ರ ಕೇಳ ಬಲ್ಲುದೇ? ಶ್ರೋತ್ರ ಕೇಳಲರಿಯದು. ಅದೇನು ಕಾರಣ? ಶ್ರೋತ್ರದ ಬಾಗಿಲಲ್ಲಿ ನಿಂದು ಕೇಳುವಾತ ತಾನಾಗಿ. ನಾಸಿಕ ಪರಿಮಳವ ವಾಸಿಸ ಬಲ್ಲುದೇ? ವಾಸಿಸಲರಿಯದು. ಅದೇನು ಕಾರಣ? ನಾಸಿಕದ ಬಾಗಿ ಲಲ್ಲಿ ನಿಂದು ವಾಸಿಸುವಾತ ತಾನಾಗಿ. ಜಿಹ್ವೆ ರುಚಿಸ ಬಲ್ಲುದೇ? ಜಿಹ್ವೆ ರುಚಿಸಲರಿಯದು. ಅದೇನು ಕಾರಣ? ಜಿಹ್ವೆಯ ಬಾಗಿಲಲ್ಲಿ ನಿಂದು ರುಚಿಯ ನಿಕ್ಷೈಸುವಾತ ತಾನಾಗಿ. ಜಂತ್ರಗಳಾಡ ಬಲ್ಲವೇ? ಜಂತ್ರ ಗಳಾಡಲರಿಯವು. ಅದೇನು ಕಾರಣ? ಜಂತ್ರಗಳನಾಡಿಸುವ ಯಂತ್ರ ವಾಹಕನಾಗಿ. ಇದು ಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ ಸರ್ವಾಂಗ ಲಿಂಗಿ.

(೧೧) ಸಂಕಲ್ಪವೆಂಬ ಸಂಕೋಲೆಯು ಹರಿಯಿತ್ತಯ್ಯಾ. ಕ ವ ವೆಂಬ ಕಂಭ ಕಿತ್ತೀಡಾಡಿತ್ತಯ್ಯಾ. ಮಾಯೆಯೆಂಬ ಮಾವತಿಗನ ಮಾರಿತ್ತು. ಆಶೆ ಎಂಬ ಅಂಕುಶಕ್ಕೆ ನಿಲ್ಲದು. ಮಾಯಾ ಪಾಶವೆಂಬ ಪಾಯವಳ ಅಂಜಿ ಓಡಿತ್ತು. ಮದಗಜವೆಂಬ ಆನೆ ಉಳಿದ ಬಳಿಕ ನಿಮ್ಮಲಿಗೆಯ

ಚನ್ನರಾಮನೆಂಬ ಲಿಂಗದಲ್ಲಿ 'ಆನೆ' 'ಆನೆ' ಎಂಬುವೇನೂ ಇಲ್ಲದೆ ಹೋಯಿತ್ತು.

(೧೨) ತಾ ನಡೆದಡೆ ನಡೆಗೆಟ್ಟು ನಡೆಯಬೇಕು. ತಾ ನುಡಿದಡೆ ನುಡಿಗೆಟ್ಟು ನುಡಿಯಬೇಕು. ರೂಪಿಲ್ಲದ ಸಂಗವ ಮಾಡಬೇಕು. ಭಾವವಿಲ್ಲದ ಭಕ್ತಿಯ ಮಾಡಬೇಕು. ತಾನಾವನೆಂದರಿಯದಂತೆ ಗುಹೇಶ್ವರ.

(೧೩) ಅಂಬರವಿಲ್ಲದ ಮೇರುವ ಅಂಬುಧಿಯಲ್ಲಿದ್ದ ಗುಣ್ಣುವ ತಂದವರಿಲ್ಲದೆ ಬಂದಿತ್ತು. ನಿಂದಂತೆ ನಿಜ ಒಳಕೊಂಡಿತ್ತು. ಸಾಧನವಿಲ್ಲದ ಓಗರ ಭೋಜನವಿಲ್ಲದೆ ತೃಪ್ತಿಯಾಯಿತ್ತು. ನೋಡಯ್ಯ. ಕ್ರಿಯಾವಿರಹಿತ ಯೋಗ ಫಲದಾಯಕ, ಹೀನ ಭಕ್ತಿ ಆಯತ ಸ್ವಾಯತ ಮರಿಯದೆ ಹೋಯಿತ್ತು ಗುಹೇಶ್ವರಾ.

(೧೪) ಮಣ್ಣಿಲ್ಲದ ಹಾಳ ಮೇಲೆ ಕಣ್ಣಿಲ್ಲದಾತನೊಂದು ವಿರವಿಲ್ಲದ ಮಣಿಯ ಕಂಡ. ಕೈಯಿಲ್ಲದಾತ ಪವಣಿಸಿದ. ಕೊರಳಿಲ್ಲದಾತ ಕಟ್ಟಿಕೊಂಡ. ಅಂಗವಿಲ್ಲದ ಸಿಂಗಾರಕ್ಕೆ ಭಂಗವುಂಟೆ ಗುಹೇಶ್ವರಾ?

ಇಂತು ನಿರ್ದೇಹಾಗಮ ನಿರ್ಭಾವಾಗಮ ನಷ್ಟಾಗಮವೆಂಬ ತ್ರಿವಿಧಸ್ಥಲಂಗಳೇಕವಾದ ಲಿಂಗವು ಪ್ರಾಣಲಿಂಗಿಯಲ್ಲಿ ಸುಖ ಪ್ರಸಾದ ಸ್ವರೂಪವನೈದಿದ ಭೇದವೆಂತೆಂದಡೆ ಮುಂದೆ ಆದಿಪ್ರಸಾದಿ ಸ್ಥಲವಾದುದು.

---

## ೭ ಆದಿಪ್ರಸಾದಿಸ್ಥಲ.

(೧) ಮದ್ದ ನಂಬಿ ಕೊಂಡರೆ ರೋಗ ಹೋಗದಿಹುದೇ? ಪಥ್ಯಕೆ ಮುನ್ನರೆ ಪ್ರಸಾದಕಾಯ ಕೆಡುವುದೇ? ಪ್ರಾಣಲಿಂಗವಾದರೆ ಪ್ರಾಣ ಬೇರಿಪ್ಪುದೇ? ಪ್ರಾಣಲಿಂಗ ಪ್ರಸಾದವ ತಿಳಿದು ನೋಡಿ ನಾದ ಬಿಂದು ಕಳೆಯುವ ಮುನ್ನ ಆದಿಯ ಪ್ರಸಾದವ ಭೇದಿಸಿಕೊಂಡರು ಗುಹೇಶ್ವರಾ ನಿಮ್ಮ ಶರಣರು.

ಟೀಕು:— ಸಜ್ಜನ ಸದ್ಭಾವ ಸದಾಚಾರದಿಂದ ಕಾಯುವ ಮೂಲಾ-
ಕ್ರಮವ ಕಳೆದು ಲಿಂಗವೇದಿಯಾಗಿ ಸರ್ವಾಂಗ ಪ್ರಸಾದ ಕಾಯವಾದ

ಬಳಿಕ ಆ ಕಾಯಕ್ಕೆ ಕೇಡಿಲ್ಲವಾಗಿ ಮುಟ್ಟನಂಜಿಕೊಂಡರೆ ರೋಗಹೋಗ
ದಿಹುದೇ, ಸಜ್ಜನಿಕೆಯುಳ್ಳರೆ ಪ್ರಸಾದ ಕಾಯ ಕೆಡುವುದೇ. ಎಂಬ ಶಬ್ದ
ಕ್ಕರ್ಥ. ಆ ಕಾಯದಲ್ಲಿ ಪ್ರಾಣವೇ ಲಿಂಗವಾಗಿ ಇದ್ದ ಬಳಿಕ ಜೀವ ಪಾತ್ರೆ
ನಾಯು ಪ್ರಾಣವಿಲ್ಲದೆಂಬುದೀಗ ಪ್ರಾಣಲಿಂಗವಾದರೆ ಪ್ರಾಣ ಜೀವಿಸುವುದೇ
ಎಂಬ ಶಬ್ದಕ್ಕರ್ಥ. ಅದು ಕಾರಣ ಪ್ರಾಣಲಿಂಗ ಪ್ರಸಾದವನು ತಿಳಿದು ನೋಡಿ
ಅರ್ಪಿತವಿಲ್ಲದ ಮುನ್ನವೇ ಅನರ್ಪಿತ ಪ್ರಸಾದವಾಗಿಪ್ಪ ಅವಿ ಪ್ರಸಾದ
ವನು ನಾದ ಬಿಂದು ಕಳೆ ಎಂಬ ಶಿವಶಕ್ತಿ ಕಳೆಯದ ಮುನ್ನವೇ
ಲಿಂಗಕ್ಕೆ ಅರ್ಪಿತವ ಮಾಡಿ ಪ್ರಸನ್ನ ಪ್ರಸಾದವ ಸ್ವೀಕರಿಸುತ್ತಿದ್ದನೆಂ
ಬುದೀಗ ಪ್ರಾಣಲಿಂಗ ಪ್ರಸಾದವ ತಿಳಿದು ನೋಡಿ ನಾದ ಬಿಂದು
ಕಳೆಯದ ಮುನ್ನ ಆದಿಯ ಪ್ರಸಾದವ ಭೇದಿಸಿಕೊಂಡನು ಗುಹೇಶ್ವರಾ
ನಿಮ್ಮ ಶರಣರು ಎಂಬ ಶಬ್ದಕ್ಕರ್ಥ.

(೨) ಮಾರ್ಗ ಕ್ರಿಯೆ ಸಂಪಾದಿಸನಾಗಿ ದ್ವೈತಿಯಲ್ಲ. ಮೀರಿದ ಕ್ರಿಯೆ ಸಂಪಾದಿಸನಾಗಿ ಅದ್ವೈತಿಯಲ್ಲ. ಮೀರಿ ಜಾರ, ಹದುಳಿಗನಾಗಿ ಸ್ವರ್ಗಿಯಲ್ಲ, ಅಪವರ್ಗಿಯಲ್ಲ. ಕೂಡಲಚೆನ್ನಸಂಗಯ್ಯನಲ್ಲಿ ಸ್ವಾಯತ ನಾದ ನಮ್ಮ ಗುರು ಬಸವಣ್ಣನು.

(೩) ಶಿವ ಕ್ಷೇತ್ರದಲಾದ ಪದಾರ್ಥವ ಕಿಂಕಲದಿಂದ ಅತಿ ಪ್ರೇಮ ದಿಂದ ತನು ಮುಟ್ಟಲೀಯ್ಯದೆ, ಮನ ಮುಟ್ಟಲೀಯ್ಯದೆ, ನಾಸಿಕ ಮುಟ್ಟ ಲೀಯ್ಯದೆ, ಲಿಂಗಾರ್ಪಿತವ ಮಾಡುವುದು. ಆ ಪ್ರಸಾದವ ಸತಿಸುತಾದಿ ಗಳಿಗೆನ್ನದೆ, ಭೃತ್ಯಾಚಾರದಲ್ಲಿ ಗ್ರಹಿಸುವುದು. ಪ್ರಸಾದ ಜೀವರವಾದರೆ ಭಕ್ತಿ ಸಹಜವಾಗದು. ನಿಮಗೆಂದಿಗೂ ದೂರ ಕೂಡಲಚೆನ್ನಸಂಗಯ್ಯ.

(೪) ಅರಸು ಮನೆಯೊಳಗಿರ್ದಲ್ಲಿ ಬಾಗಿಲಿಗೆ ಪದಾರ್ಥವ ತಂದು ಅರ್ಪಿತವೆಂದರೆ ಅರ್ಪಿತವಹುದೇ? ಅವಸರಕ್ಕೆ ಬಂದ ಪದಾರ್ಥವ ಅರ್ಪಿ ತವ ಮಾಡಿ, ಅರಸಕ್ಕೆ ಬಂದ ಪದಾರ್ಥವ ಸಲ್ಲಿಸಿದಡೆ, ಆತ ಲಿಂಗ ಪ್ರಸಾದಿಯಲ್ಲ. ತನ್ನ ಲಿಂಗಕ್ಕೆ ಬಾರದ ರುಚಿಯು ಕೃತ ಕಿಲ್ಬಿಷವೆಂದುದು ಕೂಡಲಚೆನ್ನಸಂಗನ ವಚನ.

(೫) ಪ್ರಸಾದವೆಂದು ಪ್ರಸಾದಿಗಳೆಂದು ಪ್ರಸಾದವ ಕೊಂಡೆವೆಂದು ನುಡಿವುತಿರ್ಪರು. ಇನ್ನೆಂತಯ್ಯಾ? ಶಿವಾಶಿವಾ, ಅರ್ಪಿತವಿಲ್ಲದೆ ಪ್ರಸಾದ

ನಾದ ಪರಿ ಎಂತಯ್ಯಾ? ಆವಾವ ಪದಾರ್ಥಂಗಳನು ಆವಾವ ದ್ರವ್ಯಂಗ
ಳನು ಹೇಗೆ ಹೇಗೆ ಅರ್ಪಿಸುವಿರಿ ಹೇಳಿರಣ್ಣಾ! ಪ್ರಸಾದ ಹೇಗಾದುದು
ಹೇಳಿರೇ. ಶಬ್ದ, ಸ್ಪರ್ಶ ರೂಪು, ರಸ, ಗಂಧಂಗಳನು ಹೇಗೆ ಹೇಗೆ ಅರ್ಪಿ
ಸುವಿರಿ ಹೇಳಿರೇ. ಅದು ಹೇಗೆ ಅರ್ಪಿಸಬಹುದು? ಪ್ರಸಾದವಪ್ಪುದೆ
ಕೊಳ್ಳೆನೆಂಬುದು ಅರ್ಪಿಸುವುದಂತಿರಲಿ. ಮುನ್ನ ಪ್ರಸಾದಿಗೆ ಅನರ್ಪಿತದ
ನೆನೆವ ಪರಿ ಎಂತೆಲೋ? ಅನರ್ಪಿತದ ನೋಡುವ ಪರಿ ಎಂತೆಲೋ?
ಅನರ್ಪಿತದ ಕೇಳುವ ಪರಿ ಎಂತೆಲೋ? ಅನರ್ಪಿತದ ರುಚಿಸುವ ಪರಿ
ಎಂತೆಲೋ? ಅನರ್ಪಿತವ ಸ್ಪರ್ಶಿಸುವ ಪರಿ ಎಂತೆಲೋ? ನೆನೆಯಬಾರದು
ನೋಡಬಾರದು ಕೇಳಬಾರದು ವಾಸಿಸಬಾರದು ರುಚಿಸಬಾರದು ಮುಟ್ಟ
ಬಾರದು. ಶಿವಶಿವಾ, ತೊಡಕು ಬಂದಿತ್ತಲ್ಲಾ! ಅನರ್ಪಿತವ ಕೊಳ್ಳ
ಬಾರದು. ಅರ್ಪಿಸಿದ ಪ್ರಸಾದವ ಕೊಳ್ಳಬೇಕು. ಇನ್ನೆಂತಯ್ಯಾ?
ಆವಾವನು ಪ್ರಸಾದಿಗೆ ಅನರ್ಪಿತವ ನೆನೆಯಬಾರದು. ಅರ್ಪಿಸುವ
ಪರಿ ಇನ್ನೆಂತಯ್ಯಾ, ಪೂರ್ಣ ಜ್ಞಾನಾಗದನ್ನಕ್ಕ, ಭಾವ ಶುದ್ಧವಾಗದ
ನ್ನಕ್ಕ, ಆ ಲಿಂಗವಂತನು ಲಿಂಗಪ್ರಾಣವಾಗದನ್ನಕ್ಕ, ಮಹಾನು
ಭಾವರ ಸಂಗವಿಲ್ಲದನ್ನಕ್ಕ? ಇದು ಕಾರಣ ಪೂರ್ಣಜ್ಞಾನವಾಗಿ ಭಾವ
ಶುದ್ಧವಾಗಿ ಲಿಂಗ ಪ್ರಾಣವಾಗಿ ಮಹಾನುಭಾವರ ಸಂಗದಿಂದರಿದು
ಅರ್ಪಿಸಿದ ಪ್ರಸಾದವ ಕೊಂಡು ಮುಕ್ತರಪ್ಪುದಯ್ಯಾ ಉರಿಲಿಂಗಪೆದ್ದಿ
ಪ್ರಿಯವಿಶ್ವೇಶ್ವರಾ.

(೬) ಲಿಂಗಕ್ಕೆ ಕೊಟ್ಟು ಕೊಂಡರೆ ಪ್ರಸಾದಿ. ಜಂಗಮಾರೋ
ಗಣೆಯ ಮಾಡಿ ಮಿಕ್ಕುದು ಪ್ರಸಾದ. ಇದೇ ಪ್ರಸಾದದಾದಿ ಕಂಡಯ್ಯಾ.
ಮುನ್ನಾದಿಯ ಪ್ರಸಾದವ ಭೇದಿಸಬಲ್ಲಡೆ ಇದೇ ಕಂಡಯ್ಯಾ. ಲಿಂಗಕ್ಕೆ
ಕೊಡದೆ ಜಂಗಮಕ್ಕೆ ನೀಡದೆ ಕೊಂಡರೆ ಹುಳುಗೊಂಡದಲ್ಲಿಕ್ಕುವ ನಮ್ಮ
ಕೂಡಲಚನ್ನಸಂಗಮದೇವಾ.

(೭) ಬಯಸಿ ಬಂದುದು ಅಂಗಭೋಗ. ಬಯಸದೆ ಬಂದುದು
ಲಿಂಗಭೋಗ. ಅಂಗಭೋಗ ಅನರ್ಪಿತ. ಲಿಂಗಭೋಗ ಪ್ರಸಾದ. ಬೇಕೆಂ
ಬುದು ಕಾಯಗುಣ. ಬೇಡೆಂಬುದು ವೈರಾಗ್ಯ. ಬೇಕೆಂಬುದು ಇಲ್ಲ.
ಬೇಡೆಂಬುದು ಇಲ್ಲ. ಈ ಉಭಯ ಮನತಿಗಳಿದು ಭೋಗಿಸಬಲ್ಲ ಕೂಡಲ
ಚನ್ನಸಂಗಾ ನಿಮ್ಮ ಶರಣ.

(೮) ಪ್ರಾಣಲಿಂಗದಲ್ಲಿ ಪ್ರವೇಶಿಯಾಗಿ ಪ್ರಸಾದದಲ್ಲಿ ಸನ್ನಿಹಿತನಯ್ಯಾ. ಲಿಂಗಾರ್ಪಿತವಲ್ಲದೆ ಅನರ್ಪಿತವ ಮುಟ್ಟಲೀಯನಯ್ಯಾ. ಅಂಗಗುಣಂಗಳನೆಲ್ಲವ ಕಳೆದು ಪ್ರಸಾದ ಬ್ರಹ್ಮಚಾರಿ ಕೂಡಲಚೆನ್ನಸಂಗಯ್ಯನಲ್ಲಿ ಚೆನ್ನಬಸವಣ್ಣನು.

(೯) ಪ್ರಾತಃಕಾಲದಗ್ಘೋದಕವ ತಂದು ಲಿಂಗದನುವನರಿದು ಪಾದೋದಕವ ತಪ್ಪದೆ ಕೊಂಬನು. ತನ್ನವಸರವೆಂದರಿಯದೆ ಲಿಂಗದವಸರವೆಂದರಿತು ಮಹಾ ಮಜ್ಜನಾದಿಗಳಂ ಮಾಡಿಸಿ ಪ್ರಸಾದದರಿವನೊಮ್ಮೆ ಅರಿವನು. ಇದು ಕಾರಣ ಕೂಡಲಚೆನ್ನಸಂಗಯ್ಯಾ ನಿಮ್ಮ ಪ್ರಸಾದಿಗೆ ನಮೋ ನಮೋ ಎಂಬೆ.

(೧೦) ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದವೆಂತುಂಟೆಂದು ಬೆಸಗೊಂಡಡೆ ಹೇಳಿಹೇ ಕೇಳಿರಿ. ಶುದ್ಧ ಪ್ರಸಾದ ಲಿಂಗ ಮುಖದಿಂದ ಬಂದುದು. ಸಿದ್ಧ ಪ್ರಸಾದ ಜಂಗಮ ಮುಖದಿಂದ ಬಂದುದು ಪ್ರಸಿದ್ಧ ಪ್ರಸಾದ ಗುರು ಮುಖದಿಂದ ಬಂದುದು. ಇದರೊಳಗಾವುದು ಘನವೆಂದೆ ಆವುದು ಕಿರಿದೆಂಬೆ ಘನಕ್ಕೆ ಘನವಾದ ಮಹಾಘನ ಪ್ರಸಾದವು? ಗುರು ಪ್ರಸಾದದಿಂದ ತನು ಶುದ್ಧವಾಯಿತ್ತು. ಲಿಂಗ ಪ್ರಸಾದದಿಂದ ಮನ ಶುದ್ಧವಾಯಿತ್ತು. ಜಂಗಮ ಪ್ರಸಾದದಿಂದ ಪ್ರಾಣ ಶುದ್ಧವಾಯಿತ್ತು. ಶರಣಸಂಗದಿಂದ ಪ್ರಸಾದ ಸಾಧ್ಯವಾಯಿತ್ತು. ಇದು ಕಾರಣ ಕೂಡಲಚೆನ್ನಸಂಗಯ್ಯಾ ಇಂತೀ ತ್ರಿವಿಧ ಪ್ರಸಾದವ ಕೊಂಡೆನ್ನ ಭವಂ ನಾಸ್ತಿಯಾಯಿತ್ತು.

ಇಂತು ಶುದ್ಧ ಮುಖದಿಂದ ಆದಿ ಪ್ರಸಾದವ ಕೊಂಡ ಲಿಂಗವು ಪ್ರಾಣಲಿಂಗಿಯಲ್ಲಿ ಸಿದ್ಧ ಮುಖದಿಂದ ಅಂತ್ಯ ಪ್ರಸಾದವ ಕೊಂಡ ಘನ ಸಂತೃಪ್ತವೆಂದಡೆ ಮುಂದೆ ಅಂತ್ಯ ಪ್ರಸಾದಿ ಸ್ಥಲವಾದುದು.

## ೮. ಅಂತ್ಯಪ್ರಸಾದಿಸ್ಥಲ.

(೧) ಆತ್ಮ ಲಿಂಗ ಪರಮಾತ್ಮ ಜಂಗಮ ತನು ಮುಖ್ಯ ಪ್ರಸಾದ ವಾಯಿತ್ತು. ನಿಶ್ಚಿಂತ ನಿವಾಸವಾಯಿತ್ತು. ಕೂಡಲಸಂಗನ ಶರಣರ ಸಂಗದಿಂದ ನಿಶ್ಚಿಂತ ನಿವಾಸವಾಯಿತ್ತು.

ಟೀಕು:—ಗಣಸಮ್ಮುಖದಿಂ ಶ್ರೀಗುರು ಇಷ್ಟಲಿಂಗ ಕರ ಸಂಬಂಧವ ಜೀವಾತ್ಮಂಗೆ ಸಂಬಂಧವ ಮಾಡಿ ಜೀವ ಭಾವವಳಿದು ಶಿವಾತ್ಮನಂ ಮಾಡಿದರಾಗಿ ಆತ್ಮ ಲಿಂಗವೆಂಬ ಶಬ್ದಕ್ಕರ್ಥ. ಅಂತು ಜೀವ ಭಾವ ವಳಿದು ತನ್ನನೆಲ್ಲ ಲಿಂಗವೆಂದೇ ಕಂಡ ಪರಮ ಚೈತನ್ಯ ಜ್ಞಾನ ಸ್ವರೂಪ ಜಂಗಮವೆಂಬುದೀಗ ಪರಮಾತ್ಮ ಜಂಗಮವೆಂಬ ಶಬ್ದಕ್ಕರ್ಥ. ಅಂತು ಅರಿವ ಪರಮ ಚೈತನ್ಯ ಜ್ಞಾನವೇ ಜಂಗಮವಾಗಿ ಅರುಹಿಕೊಂಬ ಜೀವಾತ್ಮನೆಲ್ಲ ಲಿಂಗವಾಗಿರ್ದ ಶರಣನ ದೇಹ ಮುಖಂಗಳನರಿದು ಅರ್ಪಿ ಸುವ ಅರಿವೆಲ್ಲ ಜಂಗಮದ ಅರ್ಪಿಸಿಕೊಂಡು, ಭೋಗಿಸುವುದೆಲ್ಲ ಲಿಂಗ ವಾದ ಕಾರಣ ಅರ್ಪಿತವಾದ ದೇಹಾದಿ ಮುಖಂಗಳೆಲ್ಲ ಲಿಂಗವಾದ ವೆಂಬುದೀಗ ತನು ಮುಖ್ಯ ಪ್ರಸಾದವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಜೀವ ಭಾವವಳಿದು ದೇಹ ಲಿಂಗವಾದ ಬಳಿಕ ಭವಬಂಧನದ ಚಿಂತೆ ಹೋಗಿ ನಿಶ್ಚಿಂತ ನಿವಾಸವಾಯಿತ್ತು ಶರಣಂಗೆ. ಅಂತಾದ ನಿಶ್ಚಿಂತ ಸುಖವು ನಿಮ್ಮ ಶರಣರ ಅನುಭಾವ ಸಂಗದಿಂದಲೆಂಬುದೀಗ ನಿಶ್ಚಿಂತ ನಿವಾಸ ಲಿಂಗದಲಾಯಿತ್ತು, ಕೂಡಲಸಂಗನ ಶರಣರ ಸಂಗದಿಂದ ನಿಶ್ಚಿಂತನಿವಾಸವಾಯಿತ್ತು ಎಂಬ ಶಬ್ದಕ್ಕರ್ಥ.

(೨) ಭಕ್ತಿಯ ಪರಿಯನರಿಯರು. ಭಕ್ತರಾದ ಪರಿ ಎಂತಯ್ಯ? ಭಾವಶುದ್ಧವಿಲ್ಲ. ಮಹೇಶ್ವರರೆಂತಪ್ಪರಯ್ಯಾ? ಅರ್ಪಿತದನುವನರಿದು ಅರ್ಪಿಸಲರಿಯರು. ಪ್ರಸಾದವ ಅನುಗ್ರಹಿಸುವ ಪರಿ ಎಂತಯ್ಯ? ಈ ಷಟ್ಸ್ಥಲದ ಮರ್ಮವ ನಾರಿಗೂ ಅರಿಯಬಾರದು. ಈ ಕ್ರಿಯಾ ಕರ್ಮವನರಿದಾತ ಪ್ರಸಾದಿ ಕೂಡಲಸಂಗಯ್ಯ.

(೩) ತನು ಒಳಗಿರಲು, ಪ್ರಸಾದ ಹೊರಗಿರಲು ಏನಯ್ಯ? ನಿಮ್ಮ ಮನಕ್ಕೆ ಮನ ನಾಚದಯ್ಯಾ. ಪ್ರಾಣಲಿಂಗದಲ್ಲಿ ಪ್ರಸಾದವ ಕೊಂಡೊಡೆ ವ್ರತಕ್ಕೆ ಭಂಗ ಗುಹೇಶ್ವರಾ.

ಯಲ್ಲದೆ ಸ್ವಾಮಿ ಭೃತ್ಯ ಸಂಬಂಧಕ್ಕೆ ದೂರನೆಂದು ಭಕ್ತರ ಕೈ ಮುಟ್ಟಿ ದಲ್ಲಿ ಪಾವನವೆಂಬ ಶಬ್ದ ಸಂಪಣೆಯಲ್ಲಿ ಹೋಗದು. ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ಆರೂಢ ಪ್ರಸಾದಿಯು ಪ್ರಸಾದಿಯಾದನು.

ಇಂತು ಸಿದ್ಧ ಮುಖದಿಂದ ಅಂತ್ಯ ಪ್ರಸಾದ ಸ್ವರೂಪವನ್ನರಿದ ಲಿಂಗವು ಪ್ರಾಣಲಿಂಗಿಯಲ್ಲಿ ಪ್ರಸಿದ್ಧ ಮುಖದಿಂದ ತೃಪ್ತಿಯನ್ನರಿದ ಭೇದವೆಂತಿರ್ದುದೆಂದಡೆ ಮುಂದೆ ಸೇವ್ಯ ಪ್ರಸಾದ ಸ್ಥಲವಾದುದು.

---

## ೯ ಸೇವ್ಯಪ್ರಸಾದಿಯಸ್ಥಲ.

(೧) ಆದಿ ಕಾಲ ಸಮ್ಯಕ್ತವಾದ ಏಕಾದಶ ಪ್ರಸಾದದ ಭೇದವ ತಿಳುಹಿ. ಪ್ರಥಮದಲ್ಲಿ ಗುರು ಪ್ರಸಾದ, ದ್ವಿತೀಯದಲ್ಲಿ ಲಿಂಗ ಪ್ರಸಾದ, ತೃತೀಯದಲ್ಲಿ ಜಂಗಮ ಪ್ರಸಾದ, ಚತುರ್ಥದಲ್ಲಿ ಪ್ರಸಾದಿಯ ಪ್ರಸಾದ, ಪಂಚಮದಲ್ಲಿ ಅನ್ಯಾಯದ ಪ್ರಸಾದ, ಷಷ್ಠಮದಲ್ಲಿ ಸಮಯ ಪ್ರಸಾದ, ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ, ಅಷ್ಟಮದಲ್ಲಿ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದ, ನವಮದಲ್ಲಿ ಸದ್ಭಾವ ಪ್ರಸಾದ, ದಶಮದಲ್ಲಿ ಸಮತೆ ಪ್ರಸಾದ, ಏಕಾದಶದಲ್ಲಿ ಜ್ಞಾನ ಪ್ರಸಾದ. ಇಂತೀ ಏಕಾದಶ ಪ್ರಸಾದ ಸ್ಥಲಂಗಳಿಂದ ಕೂಡಲಚನ್ನಸಂಗಯ್ಯನಲ್ಲಿ ಐಕ್ಯ ಪ್ರಸಾದಿಗೆ ನಮೋ ನಮೋ ಎಂಬೆನು.

ಟೀಕು — ಜ್ಞಾನೋದಯವಾಗಿ ಗುರುವ ನೆರೆವಾತಂಗೆ ಗುರು ಕರುಣಿಸಿ ಪ್ರಸನ್ನನಾದುದರಿಂದ ಪ್ರಥಮವಾದ ಕಾರಣ ಪ್ರಥಮದಲ್ಲಿ ಗುರು ಪ್ರಸಾದವೆಂಬ ಶಬ್ದ ಸ್ಫುರಿತ. ಅಂತು ಗುರು ಕಾರುಣ್ಯವಾದಲ್ಲಿ ಪರಾ ಲಿಂಗವು ಕರಸ್ಥಲಕ್ಕೆ ಬಂದು ಪ್ರಸನ್ನವಾದುದು ಎರಡನೆಯದೆಂಬುದರಿಂದ ದ್ವಿತೀಯದಲ್ಲಿ ಲಿಂಗ ಪ್ರಸಾದವೆಂಬ ಶಬ್ದ ಸ್ಫುರಿತ. ಅಂತಪ್ಪ ಲಿಂಗ ಕಳಾ ಚೈತನ್ಯವೇ ಜಂಗಮವಾದ ಕಾರಣ ಆ ಲಿಂಗ ಕಳಾ ಚೈತನ್ಯ ಅರಿವಿಂಗೆ ಪ್ರಸನ್ನವಾದುದರಿಂದ ಮೂರನೆಯದು ತೃತೀಯದಲ್ಲಿ ಜಂಗಮ ಪ್ರಸಾದ ವೆಂಬ ಶಬ್ದ ಸ್ಫುರಿತ. ಅಂತಪ್ಪ ಗುರುಲಿಂಗ ಜಂಗಮದ ಪ್ರಸನ್ನ ಪ್ರಸಾದವ

ಪಡೆದಿಪ್ಪ ತ್ರಿವಿಧ ಲಿಂಗಾನುಭಾವಿಗಳೇ ಅನುಭಾವ ತನ್ನ ಅರುಹಿಂಗೆ
ಪ್ರಸನ್ನವಾದುದು ನಾಲ್ಕನೆಯದೆಂಬುದೀಗ ಚತುರ್ಥದಲ್ಲಿ ಪ್ರಸಾದಿಯ
ಪ್ರಸಾದ ಎಂಬ ಶಬ್ದಕ್ಕರ್ಥ. ಇಂತು ಶಿವಶರಣರ ಅನುಭಾವ ಸಂಗ
ದಿಂದ ಅರುಹಿಂಗೆ ಶಿವಾಪೇಕ್ಷೆಯು ಆಪ್ಯಾಯನವೇ ಘನವಾದುದು
ಐದನೆಯದಾದ ಕಾರಣ ಪಂಚಮದಲ್ಲಿ ಆಪ್ಯಾಯನ ಪ್ರಸಾದವೆಂಬ
ಶಬ್ದಕ್ಕರ್ಥ. ಇಂತು ಶಿವಶರಣರ ಅನುಭಾವ ಸಂಗದಿಂದ ಶಿವಾಪೇಕ್ಷೆ
ಘನವಾಗಿ ಶಿವಲಾಂಛನವನೆಲ್ಲ ಶಿವನೆಂಬ ಭಾವ ಘಟಿಸಿ ಅವರ ಪ್ರಸಾ
ದವ ಕೊಂಡುದು ಆರನೆಯದೆಂಬುದೀಗ ಷಷ್ಠದಲ್ಲಿ ಸಮಯ ಪ್ರಸಾ
ದವೆಂಬ ಶಬ್ದಕ್ಕರ್ಥ. ಶಿವಲಾಂಛನವೆಲ್ಲ ಶಿವನೆಂಬ ದೃಢಭಾವದಿಂದ
ಶಿವಲಾಂಛನಕ್ಕೆ ರೂಪಾದಿ ಪದಾರ್ಥಂಗಳನರ್ಪಿಸಿ ಪಡೆದ ಸಮಯ
ಪ್ರಸಾದ ರೂಪ ಇಷ್ಟಲಿಂಗಾರ್ಪಿತವ ಮಾಡಿ ಪ್ರಸಾದವ ಭುಂಜಿಸಿದುದೆ
ದೇಹೇಂದ್ರಿಯಂಗಳೆಲ್ಲ ಅಂಗರೂಪಿಯಾದ ಕಾರಣ ಅದು ಏಳನೆಯ
ದೆಂಬುದೀಗ ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದವೆಂಬ
ಶಬ್ದಕ್ಕರ್ಥ. ಅಂತು ಇಷ್ಟ ಲಿಂಗಕ್ಕರ್ಪಿಸಿದ ರೂಪಿನೊಳಗಣ ರುಚಿಯ
ಪ್ರಸಾದವ ಪ್ರಾಣಲಿಂಗಕ್ಕೆ ಅರ್ಪಿಸಲು ಪ್ರಾಣ ಮೊದಲಾದ ಅಂತಃಕ
ರಣಂಗಳೆಲ್ಲ ಲಿಂಗವಾಗಿಪ್ಪುದು ಎಂಟನೆಯದೆಂಬುದೀಗ ಅಷ್ಟಮದಲ್ಲಿ
ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು
ಸಗುಣ ಪ್ರಸಾದದ ರೂಪು ರುಚಿಗಳ ಆನಂದ ಪ್ರಸಾದವ ಭಾವಲಿಂಗಕ್ಕೆ
ಅರ್ಪಿಸಿ ಭಾವಲಿಂಗವಾದುದು ಒಂಬತ್ತನೆಯದು ಎಂಬುದೀಗ ನವಮದಲ್ಲಿ
ಸದ್ಭಾವ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಒಳಹೊರಗೆನ್ನದೆ ಸರ್ವಾಂಗ
ಲಿಂಗವಾಗಿ ಭಿನ್ನದೋರದೆ ಇರ್ದ ಶರಣಂಗೆ ಲಿಂಗವು ಪೂರಸ್ಥವೆಂದು
ಭಾವಿಸಬೇಕು, ಬೆರಸಬೇಕು ಎಂಬ ಅವಸ್ಥೆಗಳೇನೂ ಇಲ್ಲದೆ, ನಿರಾತಂಕ
ವಾಗಿ ಸಮಾಧಾನವನೆಯ್ದಿರ್ದುದು ಹತ್ತನೆಯದಾದ ಕಾರಣ ದಶಮ
ದಲ್ಲಿ ಸಮತೆ ಪ್ರಸಾದವೆಂಬ ಶಬ್ದಕ್ಕರ್ಥ. ಅಂತು ಭಿನ್ನಾವಸ್ಥೆಗಳೇನೂ
ಇಲ್ಲದೆ ಸಮಾಧಾನಿಸಿ ನಿಂತ ನಿಲುಕಡೆಯಲ್ಲಿ ನಿರ್ಧಾರವಾಗಿ ಲಿಂಗ
ತಾನಾಗಿ ಕಾಣುತ್ತಿಪ್ಪ ಅಭಿನ್ನ ಜ್ಞಾನಾನಂದ ಸುಖದಲ್ಲಿಪ್ಪುದು ಹನ್ನೊಂದ
ನೆಯದಾದ ಕಾರಣ ಏಕಾದಶದಲ್ಲಿ ಜ್ಞಾನ ಪ್ರಸಾದವೆಂಬ ಶಬ್ದಕ್ಕರ್ಥ.
ಅಂತು ಪ್ರಸಾದ ಹನ್ನೊಂದನೆಯದೆಂಬ ಖಂಡಿತವಳಿದು ಅಖಂಡಿತ
ಲಿಂಗದೊಳಗೆ ಬೆರೆದು ಬೇರಿಲ್ಲದಿಪ್ಪ ಕಾರಣ ಭೋಗಿಸುವದೆಲ್ಲ ಲಿಂಗಾ

ರ್ಪಿತವಾಗಿ ಪ್ರಸಾದವಪ್ಪುದು. ಅಂತಪ್ಪ ಅಖಂಡಿತ ಪ್ರಸಾದಿಗೆ ನಮಸ್ಕಾರವ ಮಾಡುತ್ತಿರ್ದನು ಶರಣನೆಂಬುದೀಗ ಇಂತೀ ಏಕಾದಶ ಪ್ರಸಾದವನತಿಗಳೆದ ಐಕ್ಯ ಪ್ರಸಾದಿಗೆ ನಮೋ ನಮೋ ಎಂಬೆನೆಂಬ ಶಬ್ದಕ್ಕರ್ಥ.

(೨) ಏರಾಳ ಲಿಂಗಕ್ಕೆ ವಿರೋಧ ಬಂದಿತ್ತಲ್ಲಾ. ? ರೂಪಿಂಗೆ ಭಂಗ ಬಂದಿತ್ತಲ್ಲಾ. ವೇಹಾರವ ಮಾಡುವರಳಿದರು. ವೇಹಾರ ವೇಹದೊಳಗಡಗಿದುದೆಂತು ? ವೇಹಾರ ಆಹಾರವಾಗಿ ಅರ್ಪಿಸಲಿಲ್ಲ. ಪ್ರಸಾದಿ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲಿ ಇಲ್ಲದ ಹುಸಿಯುಲ್ಲಿ.

(೩) ಶಬ್ದವೆಂಬೆನೆ? ಶ್ರೋತ್ರದೆಂಜಲು. ಸ್ಪರ್ಶನವೆಂಬೆನೆ? ತ್ವಕ್ಕಿನೆಂಜಲು. ರೂಪವೆಂಬೆನೆ ? ನೇತ್ರದೆಂಜಲು. ರುಚಿಯೆಂಬೆನೆ? ಜಿಹ್ವೆ ಎಂಜಲು. ಪರಿಮಳವೆಂಬೆನೆ ? ಘ್ರಾಣದೆಂಜಲು. ನಾನೆಂಬೆನೇ ಅರಿವಿನೆಂಜಲು. ಎಂಜಲೆಂಬ ಭಂಗವಳಿದು ಬೆಳಗಿನೊಳಗಣ ಬೆಳಗು ಗುಹೇಶ್ವರ ನಿಮ್ಮ ಶರಣ.

(೪) ತನ್ನ ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳನೆಂಬ ಶರಣನು. ಬಿಸಲಿಲ್ಲದಲ್ಲಿ ಬಿಸಿಲ ಲಿಂಗಾರ್ಪಿತವ ಮಾಡಬೇಕು. ಧೂಪ ದೀಪ ಪರಿಮಳ ನಾಯು ರುಚಿ ರೂಪನು ಕಾಯದ ಕೈ ಮುಟ್ಟಿ ಅರ್ಪಿಸುವುದರಿದಲ್ಲದೆ, ನಿಲ್ಲು, ಮಾಣು, ಭಾವ ಕೈ ಮುಟ್ಟಿ ಲಿಂಗಕ್ಕೆಂಬರು. ನಾದವನರಿಯೆ ಮಯ್ಯ. ನಯನೇಂದ್ರಿಯ ಶಯನ ಅಶನ ಸ್ಪರ್ಶನ ನಿರವಯ ಲಿಂಗದಲ್ಲಿ. ಈ ತೆರನನರಿಯ ಬಲ್ಲಡೆ ಕೂಡಲಚನ್ನಸಂಗಯ್ಯನಲ್ಲಿ ಆತ ಮಹಾಪ್ರಸಾದಿ.

(೫) ಲಿಂಗದ ಬೆಂಬಳಿಯಲು ಭಂಗವೆಂದರಿಯರು. ಅಂಗದ ಬೆಂಬಳಿಯಲು ಭಂಗವೆಂದು ಪ್ರಸಾದಿಯು ಅರ್ಪಿತವನರಿಯ. ಪ್ರಸಾದದಲ್ಲಿ ಪರಿಣಾಮಿಯಾಗಿಹ ಘನ ಸೋಮೇಶ್ವರನು ಮುಂತಾಗಿ ಅರಿವೇ ಆ ಭಾವವಾದ ಪ್ರಸಾದಿ.

(೬) ಆಯತ ಪ್ರಸಾದಿ, ಸ್ವಾಯತ ಪ್ರಸಾದಿ. ಸನ್ನಿಹಿತ ಪ್ರಸಾದಿ. ಸಮುಭೋಗ ಪ್ರಸಾದಿ. ಪ್ರಸಾದವೇ ಪ್ರಾಣವಾಗಿ ಪ್ರಸಾದವು ಪ್ರಸಾದಿಯು

## ೧೦ ದೀಕ್ಷಾ ಪಾದೋದಕಸ್ಥಲ.

(೧) ಪಾದೋದಕವಿಡಿದು ಪಾದೋದಕವ ಧರಿಸುವ ಕ್ರಮವೆಂತಯ್ಯಾ? ಲಿಂಗೋದಕವಿಡಿದು ಲಿಂಗೋದಕವ ಧರಿಸುವ ಕ್ರಮವೆಂತಯ್ಯಾ? ಪ್ರಸಾದೋದಕವಿಡಿದು ಪ್ರಸಾದೋದಕವ ಧರಿಸುವ ಕ್ರಮವೆಂತಯ್ಯಾ? ಈ ತ್ರಿವಿಧೋದಕದ ಭೇದವ ಭೇದಿಸಿ ಗ್ರಹಿಸಬಲ್ಲ ಕೂಡಲಚೆನ್ನಸಂಗಾ ನಿಮ್ಮ ಶರಣ

(೨) ಸದ್ಗುರು ಸ್ವಾಮಿ ಶಿಷ್ಯಂಗೆ ಅನುಗ್ರಹವ ಮಾಡುವಲ್ಲಿ, ಹಸ್ತ ಮಸ್ತಕ ಸಂಯೋಗವ ಮಾಡುವ ಕಾಲದಲ್ಲಿ, ಪಂಚಕಳಸದ ನಿರ್ಮಲ ಜಲವ ತನ್ನ ಕರುಣ ಜಲವ ಮಾಡಿ, ಅತ್ತ ಜನ್ಮದ ಮೈಲಿಗೆಯ ಕಳೆಯಲು. ತಾ ನಿರ್ಮಲನಾಗಿ ಲಿಂಗವ ಗ್ರಹಿಸಿದಲ್ಲಿ, ಲಿಂಗಕ್ಕೆ ಮಜ್ಜನಕ್ಕೆರೆಯ ತೊಡಗಿ, ಮಜ್ಜನೋದಕವನರಿವೆ. ಲಿಂಗ ಸ್ಪರ್ಶನದಿಂದ ಪಾದೋದಕವನರಿವೆ. ಲಿಂಗಾರ್ಪಿತ ಭೋಗೋಪಭೋಗದಲ್ಲಿ ಅರ್ಪಿತ ಪ್ರಸಾದೋದಕವನರಿವೆ. ಅರಿದು ತ್ರಯೋದಕವ ಮರೆದು ನಿಮ್ಮಲ್ಲಿ ತದ್ಗತನಾಗಿರ್ದೆನಯ್ಯ ಮಹಾಲಿಂಗ ಕಲ್ಲೇಶ್ವರಾ.

(೩) ಲಿಂಗಾರ್ಪಿತ ಮುಖದಿಂದ ಬಂದುದು ಪ್ರಸಾದೋದಕ ಮಜ್ಜನ ಭೋಜನ ಅರ್ಪಿತ ಮುಖದಿಂದ ಪಾದೋದಕವ ಕೂಡಲಚೆನ್ನಸಂಗಾ ನಿಮ್ಮ ಶರಣನೆ ಬಲ್ಲ.

(೪) ಪಾದೋದಕವಿದು. ಪಾದೋದಕವ ಧರಿಸುವ ಕ್ರಮ ಭೇದವೆಂತಯ್ಯ? ಲಿಂಗೋದಕವಿದು. ಲಿಂಗೋದಕವ ಧರಿಸುವ ಕ್ರಮಭೇದವೆಂತಯ್ಯ? ಪ್ರಸಾದೋದಕವಿದು. ಪ್ರಸಾದೋದಕವ ಧರಿಸುವ ಕ್ರಮ ಭೇದವೆಂತಯ್ಯ? ಇಂತೀ ತ್ರಿವಿಧೋದಕದ ಭೇದವ ಭೇದಿಸಿ ಗ್ರಹಿಸಬಲ್ಲ ಕೂಡಲಚೆನ್ನಸಂಗಾ ನಿಮ್ಮ ಶರಣ.

(೫) ಪ್ರಥಮದಲ್ಲಿ ಪಾದೋದಕ. ದ್ವಿತೀಯದಲ್ಲಿ ಲಿಂಗೋದಕ. ತೃತೀಯದಲ್ಲಿ ಮಜ್ಜನೋದಕ. ಚತುರ್ಥದಲ್ಲಿ ಸ್ಪರ್ಶನೋದಕ. ಪಂಚಮದಲ್ಲಿ ಅವಧಾನೋದಕ. ಷಷ್ಠಮದಲ್ಲಿ ಆಪ್ಯಾಯನೋದಕ, ಸಪ್ತಮದಲ್ಲಿ ಹಸ್ತೋದಕ, ಅಷ್ಟಮದಲ್ಲಿ ಪರಿಣಾಮೋದಕ, ನವಮದಲ್ಲಿ ನಿರ್ನಾ

ಪೋದಕ, ಪರಮದಲ್ಲಿ ಸತ್ಯೋದಕ, ಇಂತೀ ದಶವಿಧ ಪಾದೋದಕವ ತಿಳಿದು ಕೊಳ್ಳಬಲ್ಲ ಕೂಡಲಚನ್ನಸಂಗಾ ನಿಮ್ಮ ಶರಣ.

ಇಂತು ದೀಕ್ಷಾಗುರುತತ್ವದಲ್ಲಿ ಇಷ್ಟ ಪಾದೋದಕ ಸ್ವರೂಪವನ್ನೈದಿದ ಲಿಂಗವು ಶರಣಸಂಗದಲ್ಲಿ ಶಿಕ್ಷಾಗುರು ಮುಖದಿಂದ ದೃಷ್ಟ ಪಾದೋದಕ ಸ್ವರೂಪವನ್ನೈದಿದ ಭೇದವೆಂತೆಂದಡೆ ಮುಂದೆ ಶಿಕ್ಷಾ ಪಾದೋದಕ ಸ್ಥಲವಾದುದು.

---

## ೧೧ ಶಿಕ್ಷಾಪಾದೋದಕಸ್ಥಲ.

(೧) ಕರುಣಜಲ ವಿನಯಜಲ ಸಮತೆಜಲ. ಕರುಣಜಲವೇ ಗುರು ಪಾದೋದಕ, ವಿನಯಜಲವೇ ಲಿಂಗಪಾದೋದಕ, ಸಮತೆ ಜಲವೇ ಜಂಗಮಪಾದೋದಕ. ಗುರುಪಾದೋದಕ ಸಂಚಿತಕರ್ಮನಾಸ್ತಿ. ಲಿಂಗ ಪಾದೋದಕ ಪ್ರಾರಬ್ಧಕರ್ಮನಾಸ್ತಿ. ಜಂಗಮಪಾದೋದಕ ಆಗಾಮಿ ಕರ್ಮನಾಸ್ತಿ. ಇಂತೀ ತ್ರಿವಿಧೋದಕದಲ್ಲಿ ತ್ರಿವಿಧ ಕರ್ಮನಾಸ್ತಿ. ಇದು ಕಾರಣ ಕೂಡಲಚನ್ನಸಂಗಮದೇವಾ ತ್ರಿವಿಧೋದಕವ ನಿಮ್ಮ ಶರಣಬಲ್ಲ.

ಟೀಕು — ಗುರುಭಕ್ತಿಯಿಂದ ಗುರು ಪಾದೋದಕವ ಸೇವಿಸಿದಾತಂಗೆ ಸಂಚಿತ ಕರ್ಮವಕ್ಕು ಜನನದ ಅಜ್ಞಾನದ ಭವಿತ್ವವಳಿದು ಶಿವ ಭಕ್ತಿ ಜ್ಞಾನವ ಕೊಡುವುದೆಂಬುದೀಗ ಕರುಣಜಲ. ಗುರುಪಾದೋದಕ ಸಂಚಿತಕರ್ಮನಾಸ್ತಿ ಎಂಬ ಶಬ್ದಾರ್ಥ. ಲಿಂಗ ಭಕ್ತಿಯಿಂದ ಲಿಂಗದ ಪಾದೋದಕವ ನಿತ್ಯ ಸೇವನೆಯ ಮಾಡಿದಾತಂಗೆ ಇಹ ಲೋಕದ ತನುಭೋಗವಕ್ಕು ಪ್ರಾರಬ್ಧ ಕರ್ಮವಳಿದು ಶಿವಲೋಕದ ಶಿವಸನ್ನಿಧಿಯಾಗಿ ಇತ್ತ ಬಾ ಎನಿಸಿಕೊಂಬ ಪದವಹುದೆಂಬುದೀಗ ವಿನಯ ಜಲ ಲಿಂಗ ಪಾದೋದಕ ಪ್ರಾರಬ್ಧಕರ್ಮನಾಸ್ತಿ ಎಂಬ ಶಬ್ದಾರ್ಥ. ಜಂಗಮ ಪಾದೋದಕವ ಜಂಗಮ ಭಕ್ತಿಯಿಂದ ನಿತ್ಯ ಸೇವನೆಯ ಮಾಡಿದಾತಂಗೆ ಉದ್ಭವಕರ್ಮವಕ್ಕು ಆಗಾಮಿ ಕರ್ಮವಳಿದು ಇಹದ ಕ್ಷೇಮವಾಹುವ ಅವಸ್ಥೆಗಳೆಲ್ಲಾ ಇಲ್ಲದ ಪರಬ್ರಹ್ಮಾನಂದ ಸ್ವರೂಪನಾಗಿ

ಕೊಂಡೊಡೆ, ತನ್ನ ಭವಕ್ಕೆ ಪ್ರಳಯಕಾಲಜಲ. ಈ ಉಭಯವ ಭೇದಿಸಿ ಸಂಸಾರ ಮಲಿನವ ತೊಳೆದಡೆ ಕೂಡಲಚೆನ್ನಸಂಗಾ ನಿಮ್ಮ ಶರಣ ಬಲ್ಲ.

ಇಂತು ಶಿಕ್ಷಾ ಗುರು ತತ್ವದಲ್ಲಿ ದೃಷ್ಟ ಪಾದೋದಕ ಲಿಂಗವು ತ್ರಿಪುಟಿ ರಹಿತವಾಗಿ ಮುಂದಾ ಜ್ಞಾನ ಗುರುತತ್ವದಲ್ಲಿ ಪರಮಾನಂದ ಸ್ವರೂಪವನೈದಿದ ಭೇದವೆಂತಿರ್ಪುದೆಂದಡೆ ಮುಂದೆ ಜ್ಞಾನ ಪಾದೋದಕ ಸ್ಥಲವಾದುದು.

---

## ೧೨. ಜ್ಞಾನಪಾದೋದಕಸ್ಥಲ.

(೧) ಚಿತ್ತವೆಂಬ ಭಕ್ತನ ಮನೆಗೆ ಘನಚೈತನ್ಯವೆಂಬ ಜಂಗಮ ಬಂದರೆ ಬಲಿದಿಲ್ಲದ ಜಲದಲ್ಲಿ ಪಾದಾರ್ಚನೆಯ ಮಾಡಿ, ಆ ಪಾದೋದಕವೇ ಜ್ಞಾನಪಾದೋದಕವಯ್ಯ. ಆ ಪಾದೋದಕದಲ್ಲಿ ಪರಮ ಪರಿಣಾಮ ಕೂಡಲಚೆನ್ನಸಂಗಾ ನಿಮ್ಮ ಶರಣ.

(೨) ಉತ್ತರ ದಕ್ಷಿಣ ಪೂರ್ವ ಪಶ್ಚಿಮ ಎಂಬ ಬಟ್ಟೆಯನಾರು ನಡೆದಾಯು ಬಂಧನದ ಮಾಯಿ ಪಶ್ಚಿಮ ದ್ವಾರದಲ್ಲಿ ನಿವಾಸಿಯಾಗಿದ್ದ ಶರಣರು ಅಧೋನಾಳದಲ್ಲಿ ನಿಂತು, ಮಧ್ಯನಾಳದಲ್ಲಿ ನಿಂದು ಊರ್ಧ್ವನಾಳದಲ್ಲಿ ಸುರಿದು. ವ್ಯೋಮ ಕುಸುಮ ಕೊನೆಯ ಶಶಿಕಳಾಮೃತದ ಧರಿಸಿದ ಘಟಕ್ಕೆ ಕೈವಲ್ಯಾಗಿ ಲಿಂಗಕ್ಕೆ ಪ್ರಾಣಕ್ಕೆ ಒಂದೆಂಬ ಕಾರಣ ಅರ್ಚನೆಸಿತ್ತು. ಇದು ಕಾರಣ ಕೂಡಲಚೆನ್ನಸಂಗಯ್ಯ ಎನ್ನ ಪ್ರಾಣಕ್ಕೆ ಭವವಿಲ್ಲ ಬಂಧನವಿಲ್ಲ.

(೩) ತಾನು ಗುರು ಲಿಂಗ ಜಂಗಮದ ಪಾದಕ್ಕೆರಗಿ ಲೀಯವಾದ ಬಳಿಕ, ಇದು ಚೆನ್ನ ನೋಡಯ್ಯ! ಗುರುಲಿಂಗಜಂಗಮದ ಪಾದವೇತದ ಸರ್ವಾಂಗದಲ್ಲಿ ಅಚೇತನತೃಪ್ತಿಮಂತ್ರಾಯಿತ್ತಾಗಿ, ಅಲ್ಲಿಯೇ ಪಾದಾರ್ಚ

ಅಲ್ಲಿಯೇ ಪಾದೋದಕ ಸೇವನೆ ಬೇರೆ ಇಲ್ಲವಯ್ಯ! ಅದೆಂತೆಂದೊಡೆ ಪರಮ ಜ್ಞಾನ ಲಿಂಗ ಜಂಗಮ ಸಂಬಂಧ ಸಮರತಿಯ ಸೋಂಕಿನಲ್ಲಿ ಪರ ಮಾನಂದ ಜಲವೇ ಪ್ರವಾಹವಾಗಿ ಸರ್ವಾಂಗದಲ್ಲಿ ಪುಳಕಿತವಾಗಿ ಹರಿಯುತ್ತಿರಲು ಆ ಪರಮ ಸುಖಸೇವನೆಯ ಮಾಡುವಲ್ಲಿ ಪಾದೋದಕ ಸೇವನೆಯೇ ಈ ಪರಮಾಮೃತ ತೃಪ್ತಿ ಬಸವಣ್ಣಂಗಾಯಿತ್ತು. ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯ ಕಲಿದೇವಯ್ಯ.

(೪) ಅಂಗವಿಕಾರದ ಆಚಾರದೊಳಡಗಿ ಆಚಾರ ಕ್ರಿಯೆಗಳು ಗುರುವಿನೊಳಡಗಿ ಗುರುವೆನ್ನಂಗದೊಳಗಡಗಿ ಅಂಗಲಿಂಗ ತೃಪ್ತಿಯೊಳಗಡಗಿ ಲಿಂಗನಿಷ್ಠೆ ಅಂಗನಾಚರಣೆಯ ಆಚಾರವಾವರಿಸಿ ಆಚಾರದ ನಿಲವ ಗುರುಮೂರ್ತಿಯಾವರಿಸಿ ಗುರುಮೂರ್ತಿಯ ಸರ್ವಾಂಗವಾವರಿಸಿ ಸರ್ವಾಂಗವ ಲಿಂಗನಿಷ್ಠೆಯಾವರಿಸಿ ಲಿಂಗನಿಷ್ಠೆಯ ಸಾವಧಾನವಾವರಿಸಿ ಸಾವಧಾನವ ಸುವಿಚಾರವಾವರಿಸಿ ಸುವಿಚಾರವ ಮಹಾಜ್ಞಾನವಾವರಿಸಿ ಮಹಾಜ್ಞಾನದೊಳಗೆ ಪರಮಾನಂದ ನಿಜ ನಿಂದು ಆ ನಿಜದೊಳಗೆ ಪರಮಾಮೃತ ತುಂಬಿ ಮೊದಲ ಕಟ್ಟೆಯ ನೆರೆದು ನಡುವಣ ಕಟ್ಟೆಯನಾಂತು ನಿಂದು ನಡುವಣ ಕಟ್ಟೆಯೂ ಮೊದಲ ಕಟ್ಟೆಯೂ ಎರಡು ಕೂಡಿ ಒಂದು ಕಡೆಯ ಕಟ್ಟೆಯನಾಂತುದು. ಈ ಮೂರು ಕಟ್ಟೆಯೊಳದ ಮಹಾ ಜಲವನು ಪರಮ ಪದನಾಂತುದು. ಆ ಪದದಲ್ಲಿ ನಾನೆರಗಿ ಪಾದೋದಕವ ಕೊಂಡು ಎನ್ನ ನಾನರಿಯದಾದೆ ಕಾಣಾ ಗುಹೇಶ್ವರ.

ಇಂತು ದೀಕ್ಷಾ ಪಾದೋದಕ. ಶಿಕ್ಷಾ ಪಾದೋದಕ. ಜ್ಞಾನ ಪಾದೋದಕವೆಂಬ ತ್ರಿವಿಧ ಸ್ವಲಿಂಗಸೇಕವಾದ ಲಿಂಗವು ಚರಣದ ಸತ್ಕ್ರಿಯೆಯುಳ್ಳ ನಿಷ್ಠೆಯು ಸ್ವರೂಪನೆಯ್ದಿದ ಭೇದವೆಂತೆಂಬುದದೆ ಮುಂದೆ ತ್ರಯಾ ನಿಷ್ಠೆ ಸ್ಥಲವಾದುದು.

# ಪ್ರಸಾದಲಿಂಗ.

**ವಿವರಣೆ:**— ಹಿಂದಿನ ಎರಡು ಲಿಂಗಗಳಾದ ಶಿವಲಿಂಗ ಮತ್ತು ಜಂಗಮಲಿಂಗ ಇವುಗಳಲ್ಲಿ ಸೂಕ್ಷ್ಮ ಶರೀರವು ಉಚ್ಚತರ ಸ್ಥಿತಿಯನ್ನು ಹೊಂದುತ್ತದೆ. ಈ ಸ್ಥಿತಿಯುಂಟಾದ ಬಳಿಕ ಅವರ ಕೆಳಗಿನ ಶರೀರಗಳಾದ ಸ್ಥೂಲ ಮತ್ತು ಸೂಕ್ಷ್ಮ ಇವುಗಳಲ್ಲಿಯು ಪರಿಣಾಮಗಳು ಮುಂದಿನದಾದ ಕಾರಣ ಶರೀರದಲ್ಲಿ ತೋರಹತ್ತುವವು. ಇವು ತೋರಹತ್ತಿದ ಹಾಗೆ ಇವಕ್ಕೆ ಸಂಬಂಧಿಸಿದ ಪ್ರಸಾದಲಿಂಗ ಮತ್ತು ಮಹಾಲಿಂಗ ಇವುಗಳು ಉಜ್ವಲ ಸ್ಥಿತಿಯನ್ನು ಹೊಂದುವವು. ಪ್ರಸಾದಲಿಂಗದಲ್ಲಿ ಜ್ಞಾನದ ಪರಿಪೂರ್ಣತೆಯುಂಟಾಗುತ್ತದೆ. ಇದರ ರೀತಿಗಳು ಈ ಸ್ಥಲದಲ್ಲಿ ಹೇಳಲ್ಪಟ್ಟಿರುತ್ತವೆ. ಮನುಷ್ಯನ ಬಾಹ್ಯ ಕ್ರಿಯೆಗಳೂ ಮಾನಸಿಕ ವ್ಯಾಪಾರಗಳೂ ಇದರಲ್ಲಿ ಅತ್ಯುತ್ಕೃಷ್ಟತೆಯನ್ನು ಹೊಂದುವವು. ಮತ್ತು ಅಲ್ಲಿ ಮಹಾಲಿಂಗ ಸ್ಥಲದಲ್ಲಿ ಏಕಾಕಾರವನ್ನು ಹೊಂದಿ ಕಡೆಗೆ ಲಯವಾಗುತ್ತವೆ. ಈ ವಿಷಯಗಳು ಪ್ರಸಾದಲಿಂಗ ಮತ್ತು ಮಹಾಲಿಂಗ ಇವುಗಳಲ್ಲಿ ಹೇಳಲ್ಪಟ್ಟಿವೆ. ಇವುಗಳಲ್ಲಿ ಪ್ರಸಾದಲಿಂಗದ ವಿಭಾಗಗಳು ಅವವೆಂದರೆ—

ಪ್ರಸಾದಲಿಂಗದಲ್ಲಿ ಮೂರು ವಿಭಾಗಗಳಿವೆ ಅವು ನಿಷ್ಪತ್ತಿಲಿಂಗ, ಆಕಾಶಲಿಂಗ, ಪ್ರಕಾಶಲಿಂಗ ಎಂದು ಇರುತ್ತವೆ. ಇವೆಲ್ಲವೂ ಜ್ಞಾನದ ಸ್ವರೂಪಗಳಾಗಿವೆ. ಆರಂಭದ ಸ್ಥಲವಾದ ನಿಷ್ಪತ್ತಿಲಿಂಗ ಇದರಿಂದ ಆರಂಭವಾಗಿ ಆಕಾಶಲಿಂಗದ ಅನುಭವಗಳನ್ನು ಹೊಂದಿ ಕ್ರಿಯೆ, ಭಾವ, ಮತ್ತು ಜ್ಞಾನಗಳಲ್ಲಿ ಪ್ರಕಾಶವನ್ನು ಹೊರಪಡಿಸುವದೇ ಈ ಲಿಂಗದ ಅಂತಿಮ ಧ್ಯೇಯವಾಗಿದೆ. ಜ್ಞಾನಪ್ರಕಾಶವು ಈ ಸ್ಥಲದ ಕಡೆಯ ಮೆಟ್ಟಿಲಾಗಿದೆ. ಪ್ರಸಾದಲಿಂಗದ ಅಂಗಸ್ಥಲವು ಶರಣನಿದ್ದು ಶರಣನಲ್ಲಿ ಹೀಗೆ ಜ್ಞಾನ ಪ್ರಕಾಶವು ಬೆಳಗುತ್ತಿರುವದು.

**ನಿಷ್ಪತ್ತಿಲಿಂಗ:**— ಇದರಲ್ಲಿ ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಮತ್ತು ಜ್ಞಾನನಿಷ್ಪತ್ತಿ ಎಂದು ಮೂರು ವಿಭಾಗಗಳಿರುತ್ತವೆ. ಲಿಂಗಾನುಭವವು ಕ್ರಿಯೆಯಲ್ಲುಂಟಾಗಲು ಕ್ರಿಯಾನಿಷ್ಪತ್ತಿಯು. ಅದು ಭಾವದಲ್ಲಿ ವ್ಯಕ್ತವಾಗಲು ಭಾವನಿಷ್ಪತ್ತಿಯು. ಜ್ಞಾನದಲ್ಲಿ ವ್ಯಕ್ತವಾಗಲು ಜ್ಞಾನನಿಷ್ಪತ್ತಿಯು.

**ಆಕಾಶಲಿಂಗ:**— ಇದರಲ್ಲಿ ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ, ಎಂಬ ಮೂರು ಭೇದಗಳಿವೆ. ನಿಷ್ಪತ್ತಿಯ ಮೂಲಕ ಜ್ಞಾನವು

ಎಲ್ಲವರಲ್ಲಿ ಸೂಕ್ಷ್ಮವಾಗಿ ಪ್ರವಹಿಸತೊಡಗುವವು. ಆಗ ಶರಣನ ಚಿತ್
ಪಿಂಡವು ಮಹತ್ ಪಿಂಡ ಸ್ವರೂಪವನ್ನು ಹೊಂದುವದು. ಇದು ಲಿಂಗವು
ಪಿಂಡದಲ್ಲಿ ನಿರ್ವಯಲಾದ ಸ್ಥಿತಿಯಾಗಿರುತ್ತದೆ. ಲಿಂಗದಲ್ಲಿ ಹೀಗೆ
ಪಿಂಡವು ನಿರ್ವಯಲಾದ ಬಳಿಕ ಅದು ಚಿದಾಕಾಶ ಸ್ವರೂಪವನ್ನೈದಿ
ಕೇವಲ ಶರಣನ ಅರುಹನ್ನು ಆಶ್ರಯಿಸಿಕೊಳ್ಳುವದು. ಮುಂದೆ ಈ
ಅರುಹಿನ ಕುರುಹೂ ಕೂಡ ಅಳಿದು ಮಹಾಘನ ಚೈತನ್ಯದಲ್ಲಿ ಅದು
ಬೆರೆಯುವದು. ಇದೇ ಕಡೆಯದಾದ ಮಹದಾಕಾಶವು.

**ಪ್ರಕಾಶಲಿಂಗ:**— ಮುಂದೆ ಕ್ರಿಯಾ, ಭಾವ, ಜ್ಞಾನ ಇವುಗಳಲ್ಲಿ
ಮಹಾಘನ ಚೈತನ್ಯವು ಪ್ರಕಾಶರೂಪವಾಗಿ ತಲೆದೋರುವದು. ಹೀಗೆ
ಇದರಲ್ಲಿ ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ ಎಂದು ಮೂರು
ವಿಭಾಗಗಳಾಗಿವೆ. ಪ್ರಕಾಶವು ಕ್ರಿಯೆಗಳಲ್ಲಿ ತೋರಿದರೆ ಅದು ಕ್ರಿಯಾ
ಪ್ರಕಾಶವು. ಭಾವ ಮಧ್ಯದಲ್ಲಿ ತೋರಿದರೆ ಅದು ಭಾವ ಪ್ರಕಾಶವು.
ಮುಂದೆ ಅದು ಎಲ್ಲ ತರದ ಭಿನ್ನತೆಗಳನ್ನಳಿದು ತನ್ನಲ್ಲಿ ತಾನೇ
ಪ್ರಕಾಶಿಸುತ್ತ ಮಹಾಜ್ಞಾನವೇ ತಾನಾಗಿ ಬೆಳಗುತ್ತದೆ. ಇದು ಜ್ಞಾನ
ಪ್ರಕಾಶವು ಈ ಪ್ರಕಾರ ಪ್ರಕಾಶಲಿಂಗದ ಭೇದಗಳಿರುತ್ತವೆ.

ಈ ಪ್ರಕಾರ ಪ್ರಸಾದಲಿಂಗವು ಒಂಬತ್ತು ತರದ ಮೆಟ್ಟಲುಗಳಿಂ
ದ ಸಾಯುಜ್ಯ ಸ್ಥಾನಸ್ಥಿತಿಗೆ ಒಯ್ಯುತ್ತದೆ. ಇದು ಪ್ರಸಾದಲಿಂಗದ
ಪ್ರಗತಿಯು.

---

## ೧. ಕ್ರಿಯಾನಿಷ್ಪತ್ತಿಸ್ಥಲ

(೧) ಲಿಂಗವಿಡಿದು ಲಿಂಗಮಹೇಶ್ವರನೆನಿಸಿಕೊಂಡೆ. ಲಿಂಗ
ವಿಡಿದು ಲಿಂಗಪ್ರಾಣಿ ಎನಿಸಿಕೊಂಡೆ. ಅರಿವರತು ಕ್ರಿಯಾನುಭಾವವಿಡಿದಿ
ದ್ದರೆ ಕೂಡಲ ಚೆನ್ನಸಂಗಮನಾಥ.

ಟೀಕು:— ಲಿಂಗಾಂಗ ಸಂಬಂಧಿಯಾದ ಶರಣನ ಅಂಗಪ್ರಾಣ
ಭಾವಂಗಳೆಲ್ಲ ಲಿಂಗಮಯವಾಗಿ ಲಿಂಗ ತಾನೆಂಬ ಅಹಂಭಾವದರಿವು ಆದ

ಗಿರೆ ಅಭಿನ್ನವಾಗಿರ್ದುದೇ ಭಕ್ತಿ. ಅಂತಪ್ಪ ಭಕ್ತಿ ಈಗ ಮೀರಿದ ಕ್ರಿ ಎನಿಸುವದು. ಅಂತು ಮೀರಿದ ಅಭಿನ್ನ ಕ್ರಿ ಇಲ್ಲದೆ ಲಿಂಗವು ತಾನಾದ ಶರಣನೆಂಬುದೀಗ ಈ ವಚನದ ತಾತ್ಪರ್ಯಾರ್ಥ.

(೨) ಗುರು ಕೊಟ್ಟ ಲಿಂಗ, ತನ್ನ ನಟ್ಟಿನ ಲಿಂಗ, ಆಯತವಾಯಿತ್ತಯ್ಯಾ. ಪ್ರಾಣ ನಟ್ಟಿನಿಂದ ಸ್ವಾಯತವಾಯಿತ್ತಯ್ಯಾ. ಉಭಯ ನಟ್ಟಿನಿಂದ ಸಂಗವಾಯಿತ್ತು ಕೂಡಲಚನ್ನಸಂಗ ನಿಮ್ಮಲ್ಲಿ.

(೩) ಅಂಗದ ಲಿಂಗ ಲಿಂಗವೆಂದು ಪೂಜಿಸುವೆನೇ? ಅದು ಅಂಗದ ಲಿಂಗವಲ್ಲ. ಅದೇನು ಕಾರಣ? ಅದು ಅಂಗದ ಮೇಲಿರದು ಮುಂದೆ ಜಂಗಮ ಲಿಂಗವೆಂದು ತೋರಿತ್ತಾಗಿ. ಜಂಗಮಲಿಂಗವೆಂದು ಅರ್ಚಿಸಿ ಪೂಜಿಸಿಕೊಂಡಿಹೆನೆ? ಅದು ಜಂಗಮಲಿಂಗವಲ್ಲ. ಅದೇನು ಕಾರಣ? ಮುಂದೆ ಪ್ರಸಾದಲಿಂಗವೆಂದು ತೋರಿತ್ತಾಗಿ. ಆ ಪ್ರಸಾದ ಲಿಂಗವೆಂದು ಅರ್ಚಿಸಿ ಪೂಜಿಸಿಕೊಂಡಿಹೆನೆ? ಅದು ಪ್ರಸಾದಲಿಂಗವಲ್ಲ ಅದೇನು ಕಾರಣ? ಮುಂದೆ ಮಹಾ ಪ್ರಸಾದವೆಂದು ತೋರಿತ್ತಾಗಿ. ಆ ಮಹಾಪ್ರಸಾದವೇ ನೀನಾಗಿ ಸುಖಿಯಾದೆ ಕೂಡಲಚನ್ನಸಂಗಮದೇವ.

(೪) ಮಾರ್ಗಕ್ರಿಯಾಸಮಯದಲ್ಲಿ ಶಿವ ಭಕ್ತಿ ಸಂಪುಟ. ಮೀರಿದ ಕ್ರಿಯಾ ಸಮಯದಲ್ಲಿ ಶಿವಲಿಂಗ ಸಂಪುಟ. ಕ್ರಿಯಾನುಭಾವ ನೆಲೆಗೊಂಡಲ್ಲಿ ಮನಲಿಂಗ ಸಂಪುಟ. ಮನ ಲಿಂಗಲೀಯವಾದ ಬಳಿಕ ತೆರಹಿಲ್ಲದ ಕುರುಹಳಿದ ಲಿಂಗೈಕ್ಯಂಗೆ ಸುತ್ತಿದ ಪ್ರಪಂಚು ಮು ಮುಲ್ಲದೆ ಅಪ್ಪುಗಳಿಲ್ಲದ ಲಿಂಗವು ಕೂಡಲ ಚನ್ನಸಂಗ.

(೫) ಇಹಪರವೆಂಬ ಇಷ್ಟಕಿಷ್ಟುಕಿಯಾದವನ ಪರಿ ಹೇಗೆಂತೆ. ನೀರು ಪತ್ತದ ನಾಲಿಗೆಯಂತೆ, ಮಣಿ ಪತ್ತದ ಗಾಳಿಯಂತೆ, ಕಾಡಿಗೆ ಪತ್ತದ ಅಲಿಯಂತೆ ಇರ್ದೆನಯ್ಯಾ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಆಚರಿಸುತ್ತ ಆಚರಿಸುತ್ತ ಆಚರಿಸದಂತಿರ್ದೆನಯ್ಯಾ.

(೬) ಅಂಗಲಿಂಗ ಸಂಗವು. ಲಿಂಗದಲ್ಲಿ ಆಯತವಾಯಿತ್ತಯ್ಯಾ. ನಿಮಿಷ ಕರಸ್ಥಲ ಹಿಂಗಿದಡೆ ಭಂಗವಯ್ಯಾ. ಅಂಗವೇ ಕರುವಾಗಿ ಲಿಂಗವೇ ಗೂಡಾಗಿ ನಿಂದ ನಿಷ್ಪತ್ತಿಯಲ್ಲಿ ಕೂಡಲಚನ್ನಸಂಗಾ ನಿಮ್ಮ ಶರಣ.

(೭) ಆಚಾರಲಿಂಗಪಿಡಿದು ಅನುಭಾವ ಲಿಂಗಸಿದ್ಧಿ. ಅನುಭಾವ ಲಿಂಗಪಿಡಿದು ಪರಾಗ ಕ್ರಿಯಾ ಲಿಂಗಸಿದ್ಧಿ. ಪರಾಗ ಕ್ರಿಯಾ ಲಿಂಗಪಿಡಿದು ಪಿರಾರಿಪ ಕ್ರಿಯಾಲಿಂಗಸಿದ್ಧಿ. ಪಿರಾರಿಪ ಕ್ರಿಯಾಲಿಂಗಪಿಡಿದು ಕ್ರಿಯಾ ನಿಷ್ಪತ್ತಿ ಲಿಂಗಸಿದ್ಧಿ. ಇದು ಕಾರಣ ಕೂಡಲ ಚೆನ್ನಸಂಗಯ್ಯ ಲಿಂಗ ಪಿಡಿದು ಲಿಂಗಸಿದ್ಧಿ.

(೮) ಅಯುತ, ಸ್ವಾಯುತ, ಸಂಯೋಗ. ಸಂಬಂಧಿಯು ಆಚಾರವಡಗಿತ್ತು, ಅನುಭಾವ ತೊರೆಯಿತ್ತು. ಕೂಡಲ ಚೆನ್ನಸಂಗಯ್ಯ ತ್ರಿವಿಧ ಸಂಬಂಧಿಗೆ.

(೯) ಲಿಂಗನಾಚಾರದಲ್ಲಿ ಸಂಗನಾಯಿತ್ತು. ಆಚಾರ ಪ್ರಾಣದಲ್ಲಿ ಸಂಗನಾಯಿತ್ತು. ಪ್ರಾಣ ಲಿಂಗದಲ್ಲಿ ಸಂಗನಾಯಿತ್ತು. ಪ್ರಾಣಕ್ಕೆ ಪ್ರಾಣ ಉಭಯ ಪ್ರಾಣ ಕೂಡಲ ಚೆನ್ನಸಂಗ.

ಇಂತು ಕ್ರಿಯಾನಿಷ್ಪತ್ತಿಯಾದ ಲಿಂಗವು ಶರಣನ ಅಂಗದಲ್ಲಿರುತು ಪ್ರಾಣದ ಕೊನೆಯು ಮೊನೆಯು ಮೀರಿ ತೋರುವ ಭಾವದೊಳಗೆ ಭಾವವಾಗಿ ತೋರಿ ಆ ಭಾವ ನಿಷ್ಪತ್ತಿ ಸ್ವರೂಪವನ್ನುಳ್ಳ ಭೇದವೆಂತೆಂದರೆ ಮುಂದಣ ಮುಂದೆ ಭಾವ ನಿಷ್ಪತ್ತಿಸ್ಥಲವಾದುದು.

---

## ೨. ಭಾವನಿಷ್ಪತ್ತಿಸ್ಥಲ.

(೧) ಅಂಗದ ಮೇಲೆ ಲಿಂಗವಿರಲು. ಲಿಂಗದ ಮೇಲೆ ಅಂಗವಿರಲು. ಭಾವ ತುಂಬಿ ಪರಿಣಾಮವಿರಲು. ನಾಮವಿಲ್ಲದ ಠಾವಿಗೆ ನಾಮ ನಿಲ್ಲಿಯುವರೇ ಗುಹೇಶ್ವರಾ?

ಟೀಕು — ಮಹಾಘನಲಿಂಗವೇ ಇಷ್ಟಲಿಂಗವಾಗಿ ಶರಣನಂಗವ ಸೋಂಕೊಂಡು ಆ ಅಂಗದೊಳಗೆಲ್ಲ ಲಿಂಗವೇ ಪರಿಪೂರ್ಣವಾಗಿ ಅಂಗ ಲಿಂಗವೆಂಬ ಭೇದವಳಿದು ಅಂಗ ಮನ ಭಾವವೆಲ್ಲ ಅಖಂಡ ಪರಿಪೂರ್ಣ ಲಿಂಗವೆಯಾಗಿ ಲಿಂಗಾನಂದ ಉಬ್ಬಿ ಪರಿಣಾಮ ನೆಲೆಗೊಂಡು ಶಿವೋಹಂ ಎನುತಿರ್ದವಾಗ, ಆ ಶರಣನ ಶಿವೋಹಂ ಎಂಬ ಮಹದ ಅಹಂಕಾ

(೨) ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಬತ್ತು, ಹತ್ತೆಂಬ ಮಾತು ನಿಮಗೇಕೆ ಹೇಳಿರೇ? ನಾದ ಮುನ್ನ ಉತ್ಪತ್ಯವೋ, ಬಿಂದು ಮುನ್ನ ಉತ್ಪತ್ಯವೋ? ಈ ನಾದ ಬಿಂದುವಿನ ಕುಳಸ್ಥಲವ ಬಲ್ಲಿರೇ ನೀವು ಹೇಳಿರೇ? ಈಡಾಪಿಂಗಳ ಸುಷುಮ್ನ ನಾಡಿಗಳ ಭೇದವ ಬಲ್ಲರೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ, ನಿಲ್ಲು ಮಾಣು.

(೩) ಒಂದನೆಯ ಬಾಗಿಲಲ್ಲಿ ಮನವಿಪ್ಪದು. ಎರಡನೆಯ ಬಾಗಿಲಲ್ಲಿ ನೆನಹಿಪ್ಪುದು. ಮೂರನೆಯ ಬಾಗಿಲಲ್ಲಿ ಭಾವವಿಪ್ಪುದು. ನಾಲ್ಕನೆಯ ಬಾಗಿಲಲ್ಲಿ ಧ್ಯಾನವಿಪ್ಪುದು. ಐದನೆಯ ಬಾಗಿಲಲ್ಲಿ ಯೋಗವಿಪ್ಪುದು. ಆರನೆಯ ಬಾಗಿಲಲ್ಲಿ ಷಟ್ಸ್ಥಲಂಗಳಿಪ್ಪವು. ಏಳನೆಯ ಬಾಗಿಲಲ್ಲಿ ಸಪ್ತಮಾತೃಕೆಯರಿಪ್ಪರು. ಎಂಟನೆಯ ಬಾಗಿಲಲ್ಲಿ ಅಷ್ಟಮೂರ್ತಿಗಳಿಪ್ಪರು. ಒಂಬತ್ತನೆಯ ಬಾಗಿಲಲ್ಲಿ ನವಚಕ್ರಂಗಳಿಪ್ಪವು. ಹತ್ತನೆಯ ಬಾಗಿಲಲ್ಲಿ ಜ್ಞಾನವಿಪ್ಪುದು. ಒಂಬತ್ತು ಬಾಗಿಲ ಕದವ ನಿಕ್ಕಿ ಹೃದಯಾಕಾಶವೆಂಬ ಬಯಲೊಳಗೆ ಘಟಿತನಾಗಿರ್ದ ನಮ್ಮ ಕೂಡಲ ಚನ್ನಸಂಗಮದೇವಾ.

(೪) ಉದಕ ಮೂರ್ತಿಯಾಗಿ ಉದಕವಾಯಿತ್ತು. ಸಿಂಹಿಗೆಯಲ್ಲಿಯೇ ಮೂಲಸ್ಥಾನ ಸ್ಥಾಪ್ಯವಾಯಿತ್ತು. ಸ್ವದೇಹ ಶಿವಪುರದಲ್ಲಿ ವಾಯು ಪೂಜೆ. ಗುಹೇಶ್ವರ ಗುಹೇಶ್ವರನೆಂಬುದಲ್ಲಿಯೇ ನಿಂದುದುವೋ.

(೫) ಇಹಲೋಕ ಪರಲೋಕ ತಾನಿರ್ದಲ್ಲಿ. ಗಗನ ಮೇರು ಮಂದಿರ ತಾನಿರ್ದಲ್ಲಿ. ಸಕಲ ಭುವನ ಸತ್ಯಲೋಕ ತಾನಿರ್ದಲ್ಲಿ. ನಿತ್ಯ ನಿರಂಜನ ಪರತತ್ತ್ವ ತಾನಿರ್ದಲ್ಲಿ. ಉತ್ತರೋತ್ತರ ಚತುರ್ವರ್ಣಯು ತಾನಿರ್ದಲ್ಲಿ. ಚಂದ್ರ ಸೂರ್ಯರ ತಾರಾಮಂಡಲ ತಾನಿರ್ದಲ್ಲಿ. ಅಂತರ ಮಹದಂತರ ತಾನಿರ್ದಲ್ಲಿ. ಸ್ವತಂತ್ರ ಗುಹೇಶ್ವರ ತಾನಿರ್ದಲ್ಲಿ.

ಇಂತು ಪಿಂಡಾಕಾರದಲ್ಲಿ ನಿರಾಮಯನಾದ ಲಿಂಗವು ಪಿಂಡ ಮಧ್ಯಸ್ಥನಾದ ಚಿತ್ತಿನಲ್ಲಿ ಬಿಂದ್ವಾಕಾರ ಸ್ವರೂಪವನ್ನೈದಿ ಬಿಂದುನಾದ ಸಹವಾಗಿರ್ದ ಭೇದವೆಂತೆಂದಡೆ ಮುಂದೆ ಬಿಂದ್ವಾಕಾರ ಸ್ಥಲವಾದುದು.

(೩) ಏಳು ತಾಳದ ಮೇಲೆ ಕೇಳುವ ಸುನಾದದ ಸ್ಥೂಲ ಸೂಕ್ಷ್ಮ ಕೈಲಾಸದ ರಭಸ ಗಂಗೆ ವಾಳುಕ ಸಮ ರುದ್ರರ ತಿಂಥಿಣಿ ಗಗನ ಗಂಭೀರದ ಶಿವ ಸುತ್ತಿಯು ನೋಡಲು ಪಿಂಡ ಬ್ರಹ್ಮಾಂಡವಾಯಿತ್ತು ಅಖಂಡಿತ ನಿರಾಳ ಗುಹೇಶ್ವರಾ.

(೪) ಪಂಚವರ್ಣ ಬಿಂದು ಪ್ರಪಂಚವನಾವರಿಸಿರಲು, ಸಂಚರಿಸುವಡೆ, ಆ ಎಡೆಯು ಇಲ್ಲ. ನಿಂದ ಪೃಥ್ವಿಯಂಗದ ನಡೆ ನುಂಗಿ, ಹಿಂದು, ಮುಂದು, ಎಡ, ಬಲ, ಎಂಬುದಿಲ್ಲ. ಕೆಳಗೆ ನಿಲ್ಲಲು, ಆಧಾರ ಮೊದಲಿಂಗಿಲ್ಲ. ಹೆಸರಿಲ್ಲ. ಕಡೆಗೆ ನಿಲುವೆನೆನಲು ವ್ಯರ್ಥ. ಎಲ್ಲ ನಡುವೆ ನಾನೇನಾಗಿರ್ದೆನೆಂಬಡೆ, ತನ್ನೊಡಲೊಳಗೆ ಒಡೆದು ಮೂಡಿತ್ತು. ತನ್ನಂತೆ ಬಯಲು. ಈ ಬೆಡಗು ಬಿನ್ನಾಣದ ಬಡದರಿವರೇ? ಇದನರಿದು ನುಡಿದು ತೋರಿದನು ಗುಹೇಶ್ವರನ ಶರಣ ಚೆನ್ನಬಸವಣ್ಣನು.

(೫) ತೋರದೆ ತೋರಿದ. ನೆಳಲಿನ ಬಿಂದುವ ನುಂಗಿ ಬಾರದ ಬಯಲು ಕೂಡಿದ ಕಾರಣವೇನು? ಬಿಂದುವರಿದುದರಿಂದವ ತಾನರಿಯದು. ಅದು ಭೂತಪ್ರಥೆಯುಳ್ಳ ನಿವೃತ್ತಿ ಎಂಬುದರಿಂದ ಬಂದುದು. ಆಶ್ರಯವಿಲ್ಲದೆ ನಿಂದುದು. ನಿರವಯವು ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ.

ಇಂತು ಬಿಂದುನಾದ ನಷ್ಟವಾದ ನಿರ್ವಯಲ ಲಿಂಗವು ಶರಣನ ಅರುಹಿನ ಕುರುಹಿಂದೆ ಆಶ್ರಯವಾಗಿರ್ದ ಮಹಾಘನ ಚೈತನ್ಯದ ಅರುಹಿನ ಕುರುಹಳಿದು ನಿರವಯವಾಗಿರ್ದ ಭೇದನೆಂತಿರ್ದುದೆಂಬುದೆ ಮುಂದೆ ಮಹಾಮಾಕಾರ ಸ್ಥಲವಾದುದು.

---

## ೬ ಮಹಾಮಾಕಾರಸ್ಥಲ

(೧) ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವು ನಾಸ್ತಿಯಾಯಿತ್ತು. ತಾನಿಲ್ಲದನ್ನ ವಾಸನೆ ಇಲ್ಲಾಗಿ ಅಲ್ಲಿಯೂ ಮಹತ್ತಪ್ಪ ತೃಪ್ತಿಯಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವು ಜಿಹ್ವೆಯಾಯಿತ್ತು ತಾನಿಲ್ಲದನ್ನರುಚಿ

ಅದು ತನ್ನಲ್ಲಿ ತಾನಾದ ಬಯಲು ತಾನಾದ ಘನವು ಇನ್ನೇನೆನಲಿಲ್ಲ. ಅದು ಮುನ್ನವೇ ತಾನಿಲ್ಲ. ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲ.

(೫) ಅನಾದಿ ಶರಣ ಹೃತ್ಕಮಲ ಮಧ್ಯದ ತೇಜೋಮಯನ ಏನೆಂದು ಪೂಜಿಸುವೆನಯ್ಯಾ! ಜಲವೇ ಪಾದಪೀಠ, ಪೃಥ್ವಿಯೇ ಪಿಂಡಿಗೆ, ಆಕಾಶವೇ ಲಿಂಗ, ಸಪ್ತ ಸಮುದ್ರಂಗಳೇ ಪಂಚಾಮೃತ, ಮೇಘವೇ ಅಗ್ಘವಣಿಯ ಬಿಂದುಗೆ, ಮಳೆಗಾಲವೇ ಮಜ್ಜನ, ಚಂದ್ರಮನೇ ನೊಸಲ ಗಂಧ, ನಕ್ಷತ್ರವೇ ಅಕ್ಷತೆ, ತರು ಮುಂತಾದಿಗಳೇ ಪತ್ರ ಪುಷ್ಪ, ಒಂಗೆ ಪಂಚ ಮಹಾ ವಾದ್ಯ, ಮಾಗಿ ಎಂಬ ಪರಿಯಾಣದ ಬೇಗಿ ಬೇಸಗೆ ಎಂಬ ಓಗರದ ಗಡಣಿಸಿ, ಸರ್ವ ಪರಿಮಳವೆಂಬ ತುಪ್ಪವನೆರೆದು ಪರವೆಂಬ ಮೇಲೋಗರವನಿಕ್ಕಿ, ಬೆಳಗು ಕತ್ತಲೆ ಎಂಬ ಕನ್ನಡಕವ ಕಟ್ಟಿ, ಇಂತು ಲಿಂಗಾರೋಗಣೆಯ ಮಾಡಿಸಿ, ಸುಜ್ಞಾನದಲ್ಲಿ ಕೈಗರೆದು, ಭಾವವೆಂಬ ವೀಳೆಯವ ಕೊಟ್ಟು, ಆನು ನೀನೆಂಬ ಅನುಲೇಪನ ಗಂಧವ ಪೂಸಿ, ಕಾಯವೆಂಬ ವಸ್ತ್ರವನುಡಿಸಿ ಎಲೆ ಗುಹೇಶ್ವರನೆಂಬ ಲಿಂಗವು ಪರಿಪೂರ್ಣವಾಗಿರ್ದ ಬಳಿಕ ಮಜ್ಜನಕ್ಕೆರೆವ ಠಾವುಂಟೆ, ಸಂಗನ ಬಸವಣ್ಣ.

ಇಂತು ಪಿಂಡಾಕಾರ ಬಿಂದ್ವಾಕಾರ, ನಾದಾಕಾರವೆಂಬ ತ್ರಿವಿಧ ಸ್ಥಲವು ಏಕವಾದ ಲಿಂಗವು ಶರಣನ ಸರ್ವಕ್ರಿಯೆಗಳೊಳಗೂ ತಾನೇ ಪ್ರಕಾಶವಾಗಿ ತೋರುತ್ತಿರ್ದ ಭೇದವೆಂತೆಂದಡೆ ಮುಂದೆ ಕ್ರಿಯಾ ಪ್ರಕಾಶ ಸ್ಥಲವಾದುದು.

---

## ೭ ಕ್ರಿಯಾಪ್ರಕಾಶಸ್ಥಲ.

(೧) ಕಾಲ ನಡೆಗರ ಕಯ್ಯಲಿದೆ. ಕಯ್ಯ ನಡೆಗರ ಕಂಗಳಲಿದೆ. ಅದೇನು ಕಾರಣವೆಂದಡೆ, ಕಂಗಳೇ ಕಾರಣವಾಗಿ. ಒಂದು ಮಾತಿನೊಳಗೆ ವಿಚಾರಿಸಿದೆ. ಕನ್ನಡಿಯೊಳಗೆ ಕಾಯನಿರಿಸಿದೆ. ಇದೇನು ಕಾರಣ ತಿಳಿಯದು ಹೇಳಾ ಗುಹೇಶ್ವರಾ ?

ಮಿಂಚು ಇದ ಬಲ್ಲವರನಲ್ಲಿಸಿಸಿತ್ತು ಸಿಮ್ಮಲಿಗೆಯ ಚೆನ್ನರಾಮನೆಂಬ ನಾಮದೊಡಕು.

(೭) ಆತನ ನೋಡಿದಡೆ ದೆಸೆಗಳ ಮರೆದೆ. ಇನ್ನೆಂತಪ್ಪ! ಆತ ನುಡಿಸಿದಡೆ ಪ್ರೈ ಜೆಮರ್ದ. ಇನ್ನೆಂತಪ್ಪ! ಅವ್ವಾ ಕೆಯ್ಯ ಹಿಡಿದಡೆ ಎನ್ನ ಸಿರಿಗಳು ಸಡಿಲಿದವು ಎನ್ನೆಂತಪ್ಪ! ಅವ್ವಾ, ನಮ್ಮ ಮಹಾಲಿಂಗ ಗಜೇಶ್ವರನಪ್ಪಿದನೆಂದಡೆ ಆ ನಷ್ಟವ ಮರೆದೆನಿನ್ನೆಂತಪ್ಪ!

(೮) ಸಾವಯವೆಂದಡೆ ನಿರವಯವಾಯಿತ್ತು. ನಿರವಯವೆಂದಡೆ ಸಾವಯವಾಯಿತ್ತು. ಸಾವಯ ನಿರವಯ ತನ್ನೊಳಗಡಗಿತ್ತು. ಸ್ಫಟಿಕದ ಘಟದೊಳಗಣ ಜ್ಯೋತಿಯಂತೆ ಕೂಡಲಚೆನ್ನಸಂಗನ ಶರಣನ ನಿಲವು.

(೯) ಸ್ಥಲ ಹೋಯಿತ್ತೆನಗೆ. ನಿಸ್ಥಲ ಹೋಯಿತ್ತೆನಗೆ. ಗೋಚರಕ್ಕೆ ಮಾಡಹೋಯಿತ್ತೆನಗೆ. ಮುನ್ನಿನ ನಿಮಾನ ಹೋಯಿತ್ತೆನಗೆ. ಒಸನ ಹೋದನೆನಗೆ. ಒಸನದ ಮನೆಯು ಜಂಗಮು ಹೋದನೆನಗೆ. ಇನ್ನು ಒಸನಾ ಒಸನಾ ಎಂದೆನಾದಡೆ ಕೂಡಲಚೆನ್ನಸಂಗಮದೇವಾ ನಿಮ್ಮಾಣೆ.

ಇಂತು ಭಾವ ಪ್ರಕಾಶವನ್ನುಳಿದ ಅಂಗವು ಮಹದ್ಭಕ್ತ ಭಾವ ಭಾಸಿಕ ಅಹತ್ವಗಳೆಂಬ ತ್ರಿವಿಧವು ನಷ್ಟವಾಗಿ ಮಹಾಜ್ಞಾನವೇ ತಾನಾಗಿ ತನ್ನಲ್ಲಿ ತಾನು ಪ್ರಕಾಶವಾದ ಘನವೇ ತಿರ್ದವೆಂದಡೆ ಮುಂದೆ ಜ್ಞಾನ ಪ್ರಕಾಶ ಸ್ಥಲವಾದುದು.

---

(೫) ತಾ ಜಗ ಜಗವೆಲ್ಲ ತಾನೆಂಬರಿತ ಘನವೇದ್ಯನು. ಭೇದ ರೂಪನಾಗಿ ಅನ್ಯವಿಲ್ಲದ ಅನ್ಯವನರಿಯದೆಲ್ಲಿಯದು? ನಿರಂಜನ ನಿಜ ಚಿದ್ರೂಪ ತಾನಾಗಿ ಅರಿವು ತಾನೆಂಬ ಮಮತೆಗೆಡೆಯೆಲ್ಲಿಯದು? ಅನ್ಯವೆನ್ನದ ತಾನೆನ್ನದಳಿದುಳಿದುದನುಪಮಿಸಬಹುದೆ? ಅನುಪಮ ಸುಖ ಸಾರಾಯ ಕೂಡಲ ಚೆನ್ನಸಂಗಾ ನಿಮ್ಮ ಶರಣ.

ಇಂತು ಸ್ವಸರಾಜ್ಯ ಸ್ಥಲದ ನಿಶ್ಚಿಂತ ಲಿಂಗವು ಮಹದೈಕ್ಯನಲ್ಲಿ ಭಾವಾಭಾವವೆಂಬಿರವು ನಷ್ಟವಾದ ಭೇದವೆಂತೆಂದಡೆ ಮುಂದೆ ಭಾವಾಭಾವ ನಷ್ಟಸ್ಥಲವಾದುದು.

---

## ೮. ಭಾವಾಭಾವ ನಷ್ಟಸ್ಥಲ.

(೧) ಸತ್ಯವನೊಳಕೊಂಡು ಮಿಥ್ಯಕ್ಕೆ ಭಂಗ. ಮಿಥ್ಯವನೊಳಕೊಂಡು ಸತ್ಯಕ್ಕೆ ಭಂಗ. ಸತ್ಯ ಮಿಥ್ಯವನೊಳಕೊಂಡು ಮನ ಭಂಗ. ಮನವನೊಳಕೊಂಡ ಜ್ಞಾನಕ್ಕೆ ಭಂಗ. ಜ್ಞಾನವನೊಳಕೊಂಡ ನಿಜಕ್ಕೆ ಭಂಗ ಉಂಟೇ ಗುಹೇಶ್ವರಾ?

ಟೀಕು — ತನ್ನ ಆನಂದವೆಂಬುದು ಸತ್ಯವೆಂದು ತಾನರಿವುತಿರಲು ಅದೇ ಮಿಥ್ಯವಾದ ಕಾರಣ ಅದೇ ಭಂಗವೆಂಬುದೀಗ ಸತ್ಯವನೊಳಕೊಂಡು ಮಿಥ್ಯಕ್ಕೆ ಭಂಗವೆಂಬ ದೃಷ್ಟಾಂತ. ಅಂತಲ್ಲ ಮಿಥ್ಯವನೊಳಕೊಂಡಿದ್ದ ಅಸತ್ಯಭಾವಕ್ಕೆ ಭಂಗವೆಂಬುದೀಗ ಮಿಥ್ಯವನೊಳಕೊಂಡಿದ್ದ ಸತ್ಯಕ್ಕೆ ಭಂಗವೆಂಬ ದೃಷ್ಟಾಂತ. ಇಂತಲ್ಲ ಸತ್ಯಮಿಥ್ಯವ ಎರಡನು ಇದಿರಿಟ್ಟುಕೊಂಡಿಹುದು ಮನವಾದ ಕಾರಣ. ಆ ಮನವುಳ್ಳನ್ನಕ್ಕರ ಭವ ಉಂಟೆಂಬುದೀಗ ಸತ್ಯಮಿಥ್ಯವನೊಳಕೊಂಡ ಮನಕ್ಕೆ ಭಂಗವೆಂಬ ದೃಷ್ಟಾಂತ. ಇಂತಲ್ಲ ಮನವನೊಳಕೊಂಡಿದ್ದ ಸಂಕಲ್ಪ ಜ್ಞಾನವು ವಿಕಲ್ಪದಿಂದ ಅಳಿವುದಾಗಿ ಅದೀಗ ಮನವನೊಳಕೊಂಡ ಜ್ಞಾನಕ್ಕೆ ಭಂಗ ಉಂಟೇ ಎಂಬ ದೃಷ್ಟಾಂತ. ಇಂತಲ್ಲ ಜ್ಞಾನವು ನಿಜದಲ್ಲಿ ಬೆರಸಿ ತನ್ನಲ್ಲಿ ತಾನೆ ಪರಾಮರಿಸಿ ನಿರ್ಮಯವಾದ ನಿಜಕ್ಕೆ ಭಂಗವಿಲ್ಲವೆಂಬುದೀಗ ಜ್ಞಾನವನೊಳಕೊಂಡ ನಿಜಕ್ಕೆ ಭಂಗ ಉಂಟೇ ಗುಹೇಶ್ವರಾ ಎಂಬ ದೃಷ್ಟಾಂತ.

## (೨) ನಾದ, ಬಿಂದು, ಕಳೆಗಳು.

ವೀರಶೈವ ಧರ್ಮ ಗ್ರಂಥಗಳಲ್ಲಿ ನಾದ ಬಿಂದು ಕಳೆಗಳೆಂಬ ಶಬ್ದಗಳು ಆಗಿಂದಾಗ್ಗೆ ಬರುತ್ತವೆ. ಜಗತ್ತಿನ ಮತ್ತು ಮನುಷ್ಯನ ಎಲ್ಲ ಅವಸ್ಥೆಗಳಲ್ಲಿಯೂ ಇವು ಪರಿಣಾಮ ಮಾಡುತ್ತವೆಂದು ತಿಳಿಯಲ್ಪಟ್ಟಿದೆ. ಜಗತ್ತಿನ ಸೃಷ್ಟಿಯ ಕಾಲಕ್ಕೆ ಇವುಗಳು ಉತ್ಪನ್ನವಾಗುತ್ತವೆ. ಇವು ಉತ್ಪನ್ನವಾಗಿ ಪರಮಾತ್ಮನ ಮೂಲ ಚಿತ್ತುವಿನೊಡನೆ ಕೂಡಿದ ಕೂಡಲೆ ಲಿಂಗಾಕಾರ ಸ್ವರೂಪವು ಪ್ರಾರಂಭಿಸುತ್ತದೆ. ಇದೇ ಮಹಾಲಿಂಗವೆಂದೆನಿಸಿಕೊಳ್ಳುತ್ತದೆ. ಮತ್ತು ಈ ಮಹಾಲಿಂಗದಿಂದ ಜಗತ್ತಿನಲ್ಲಿ ಪಂಚ ಸಾದಾಖ್ಯಗಳೂ ಉಂಟಾಗುತ್ತವೆ. ( ಪುಟ ೭ ರಿಂದ ೧೬ ರ ವರೆಗೆ ನೋಡಿರಿ. )

ಜಗತ್ತು ಆರಂಭದಲ್ಲಿ ಸರ್ವ ಶೂನ್ಯ ನಿರಾಲಂಬ ಸ್ಥಿತಿಯಲ್ಲಿರುತ್ತದೆ. ಆಗ ಪರಶಿವನಲ್ಲಿ ಜಗತ್ತನ್ನು ಉತ್ಪನ್ನ ಮಾಡಬೇಕೆಂಬ ಇಚ್ಛೆಯು ತಲೆದೋರಲು ಮಹಾಜ್ಞಾನ ಚಿತ್ತು ಉದಯವಾಗುವದು. ಆ ಚಿತ್ತಿನಿಂದ ಅಕಾರ ಉಕಾರ ಮಕಾರಗಳೆಂಬ ಅಕ್ಷರತ್ರಯಗಳು ಉತ್ಪನ್ನವಾಗುತ್ತವೆ. ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ. ಈ ಮೂರರೊಡನೆ ಮೂಲ ಚಿತ್ತು ಬೆರೆಯಲು ಓಂಕಾರವೆಂಬ ಪ್ರಣವವು ಉತ್ಪನ್ನವಾಗುತ್ತದೆಂದು ವೀರಶೈವ ಸಿದ್ಧಾಂತವು ಹೇಳುತ್ತದೆ.

ನಾದವು ಒಂದು ಬಗೆಯ ಅಲುಗಾಡುವಿಕೆ ಅಥವಾ ಹೊಯ್ಲು ಎಂದು ಹೇಳಬಹುದು. ಇದೇ ಜಗದುತ್ಪತ್ತಿಗೆ ಮೂಲಕಾರಣವು. ಈ ಹೊಯ್ಲಾಟದಿಂದ ಬಿಂದುವಿನ ಪ್ರಾದುರ್ಭಾವವು. ಬಿಂದುವು ಜಗತ್ ಘನೀಭೂತವಾಗುವ ಕೊನೆಯ ಸ್ಥಿತಿಯೆಂದು ಹೇಳಬಹುದು, ನಾದ ಬಿಂದುಗಳು ಉದಯವಾಗಿ ಅವುಗಳ ಪರಸ್ಪರ ಸಂಯೋಗವಾಗುವದು. ಆಗ ಕಳೆಯು ಉತ್ಪನ್ನವಾಗುತ್ತದೆ. ಈ ಕಳೆಯು ಜಗತ್ತನ್ನು ತೋರುವ ದೃಶ್ಯಶಕ್ತಿ ಎಂದು ಹೇಳಬಹುದು. ಇದರ ಮೂಲಕವೇ ಪದಾರ್ಥಗಳಲ್ಲಿ ಗುಣಗಳೂ ಕ್ರಿಯೆಗಳೂ ಸಂಭವಿಸುತ್ತವೆ. ಈ ನಾದ ಬಿಂದು ಕಳೆಗಳು ಜಗತ್ತಿನಲ್ಲಿ ಇಷ್ಟೇ ಅಲ್ಲ, ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲಿಯೂ ಅಣುವಿನಲ್ಲಿಯೂ ತೋರಿಬರುತ್ತವೆ.

ನಾದವು ಮೊದಲು ಚಿತ್ ಸ್ವರೂಪವಾಗಿರುತ್ತದೆ. ಅದು ಓಂ ಓಂ ಓಂ ಎಂದು ಸುನಾದ ಘೋಷವುಳ್ಳದೆಂದು ಹೇಳಲ್ಪಡುತ್ತದೆ. ಬಿಂದು ನಾದದೂ ಆರಂಭದಲ್ಲಿ ಚಿತ್ ಸ್ವರೂಪವುಳ್ಳದು. ಅದು ಪ್ರಜ್ವಲಿಸುವ ಕಂಭದಂತೆ ಝಗಝಗಿಸಿ ಬೆಳಗುತ್ತದೆ. ಹಾಗೆಯೇ ಚಿತ್ ಸ್ವರೂಪವುಳ್ಳ ಮಕಾರವು ಮಧ್ಯಾಹ್ನ ಕಾಲದ ಪ್ರಚಂಡ ಸೂರ್ಯ ಕೋಟಿಗಳ ಪ್ರಕಾಶಕ್ಕಿಂತಲೂ ಮಿಗಿಲಾದ ಮಹಾಪ್ರಕಾಶವುಳ್ಳದೆಂದು ಹೇಳಲ್ಪಡುತ್ತದೆ. ಹೀಗೆ ಇವುಗಳ ಸ್ವರೂಪವನ್ನು ವಚನಕಾರರು ಹೇಳುವುದುಂಟು.

ನಾದವು ಜಗತ್ತಿಗೆ ಬೀಜ ಸ್ವರೂಪವಾಗಿದೆ. ಬಿಂದುವು ಅದಕ್ಕೆ ಪುಷ್ಟಿ ಸಪ್ತಲಿ ಸ್ವರೂಪವುಳ್ಳದ್ದಾಗಿದೆ. ಕಲೆಯು ವಿಮರ್ಶಶಕ್ತಿಯ ದ್ಯೋತಕವು. ಹೀಗೆ ನಾದ ಬಿಂದು ಕಲೆಗಳ ಕಾರ್ಯಗಳನ್ನು ವೀರಶೈವ ಧರ್ಮ ಗ್ರಂಥಕಾರರು ವಿವರಿಸುತ್ತಾರೆ. ಇವುಗಳೊಡನೆ ಪರಮಾತ್ಮನ ಮೂಲ ಚಿತ್ತು ಕೂಡಿದಲ್ಲಿ ಓಂಕಾರದ ಉತ್ಪತ್ತಿಯು. ಈ ಓಂಕಾರವೇ ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಾದ ಮಹಾಲಿಂಗವು.

ದೇಹದಲ್ಲಿ ನಾದವೇ ಪ್ರಾಣವು, ಬಿಂದುವೇ ಸ್ಥೂಲ ಶರೀರವು, ಕಲೆಯೇ ಚೈತನ್ಯಾತ್ಮಕ ಮನವಾಗಿರುತ್ತದೆ. ಇವುಗಳು ಕೂಡಿದಾಗಲೇ ಮನುಷ್ಯನಲ್ಲಿ ಕಾರ್ಯಗಳು ಸಂಭವಿಸುತ್ತವೆ.

ಹೀಗೆ ಜಗತ್ತಿನಲ್ಲಿರುವ ಪದಾರ್ಥಗಳ ಪ್ರಾದುರ್ಭಾವ, ಅಸ್ತಿತ್ವ, ನಾಶ ಇವುಗಳು ಉಂಟಾಗುತ್ತವೆ. ಇವುಗಳೆಲ್ಲವೂ ನಾದ ಬಿಂದು ಕಲೆಗಳ ಮೂಲಕವಾಗಿಯೇ ಸಂಭವಿಸುತ್ತವೆಂದು ವಚನಕಾರರು ಹೇಳುತ್ತಾರೆ.

## (೩) ಪಂಚಸಾದಾಖ್ಯಗಳು.

ಜಗತ್ ಸೃಷ್ಟಿಯ ಕಾಲದಲ್ಲಿ ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಾದ ಮಹಾಲಿಂಗವು ಹಿಂದೆ ಹೇಳಿದ ಪ್ರಕಾರ ಉದ್ಭವಿಸುತ್ತದೆ. ಈ ಮಹಾಲಿಂಗದಿಂದ ಪಂಚಸಾದಾಖ್ಯಗಳು ಪ್ರಕಟವಾಗುತ್ತವೆ. ಈ ಸಾದಾಖ್ಯಗಳು ಜಗತ್ತು ವ್ಯಕ್ತವಾಗುವಾಗ ಉಂಟಾಗುವ ಐದು ಬೇರೆ ಬೇರೆ ಸ್ವರೂಪಗಳೆಂದು

ಹೇಳಬಹುದು. ಇವು ಮಹಾಸಾದಾಖ್ಯ ಶಿವಸಾದಾಖ್ಯ ಅಮೂರ್ತಿ ಸಾದಾಖ್ಯ ಮೂರ್ತಿಸಾದಾಖ್ಯ ಕರ್ತೃಸಾದಾಖ್ಯ ಕರ್ಮಸಾದಾಖ್ಯ ಎಂಬ ವುಗಳಿದ್ದು ಮೊದಲಿನ ಸಾದಾಖ್ಯಕ್ಕಿಂತ ಅದರ ಮುಂದಿನ ಸಾದಾಖ್ಯವು ಹೆಚ್ಚು ಹೆಚ್ಚು ಸ್ಥೂಲಸ್ಥಿತಿಯನ್ನು ಹೊಂದುತ್ತ ಹೀಗೆ ಒಂದರ ಹಿಂದೊಂದು ಅವು ಉಗಮವಾಗುತ್ತ ಹೋಗುತ್ತವೆ. ಈ ಐದು ಸಾದಾಖ್ಯಗಳಲ್ಲಿ ಸೃಷ್ಟಿಯ ಕಾರ್ಯದಲ್ಲಿ ಅವಶ್ಯವಾಗಿರುವ ಶಕ್ತಿಗಳೂ ಕಲೆಗಳೂ ಅಂಗಗಳೂ ಪಂಚಾಕ್ಷರಗಳೂ, ಪಂಚಮುಖಗಳೂ ಕಳಾಮೂರ್ತಿಗಳೂ ಅಧಿದೇವತೆಗಳೂ ಉತ್ಪನ್ನವಾಗುತ್ತವೆ. (ಪುಟ ೧೬೦ರಿಂದ ೩೩೮ ವರೆಗೆ ನೋಡಿರಿ.) ಸೃಷ್ಟಿಯ ಕ್ರಮದಲ್ಲಿ ಕಾರ್ಯಗಳು ಸರಿಯಾಗಿ ನಡೆಯಲು ಇವೆಲ್ಲವೂ ಅವಶ್ಯವಾದವುಗಳು. ಇವು ಕ್ರಮವಾಗಿ ಪ್ರಕಟವಾಗುತ್ತ ಮುಂದೆ ಕಟ್ಟಕಡೆಗೆ ಪದಾರ್ಥಗಳಿಗೆ ಪ್ರತ್ಯಕ್ಷ ಕಾರಣವಾಗಿರುವ ಪಂಚಮಹಾಭೂತಗಳೂ ಉತ್ಪನ್ನವಾಗುತ್ತವೆ. ಇವುಗಳೂ ಸೃಷ್ಟಿಗೆ ಕಾರಣವಾಗಿವೆ ಸಾದಾಖ್ಯಗಳು ಜಗತ್ತಿನಲ್ಲಿ ತಲೆದೋರುವಂತೆ ಮನುಷ್ಯನಲ್ಲಿಯೂ ಕೂಡ ಕಂಡುಬರುತ್ತವೆ. ಅವುಗಳ ಕ್ರಿಯೆಗಳು ಈ ಗ್ರಂಥದ ೧೮೬ನೆಯ ಪುಟದಲ್ಲಿ ಹೇಳಲ್ಪಟ್ಟಿವೆ. ಹೀಗೆ ಸಾದಾಖ್ಯಗಳು ಜಗತ್ತಿನ ಸೃಷ್ಟಿಯ ಕಾಲದಲ್ಲಿ ವಿಧವಿಧ ಸ್ವರೂಪಗಳನ್ನು ತಾಳುತ್ತ ಜಗತ್ತಿಗೆ ಕಾರಣವಾಗಿವೆ. ಪ್ರತಿಯೊಂದು ಸಾದಾಖ್ಯದಲ್ಲಿ ಸೃಷ್ಟಿಯ ಕಾರ್ಯಕ್ಕೆ ಅವಶ್ಯವಾಗಿ ಬೇಕಾಗುವ ಎಲ್ಲ ತರ ವಸ್ತುಗಳೂ ಶಕ್ತಿಗಳೂ ಹುಟ್ಟುತ್ತವೆ. ಅವುಗಳ ಕಾರ್ಯಗಳನ್ನು ನಡೆಸಲಿಕ್ಕೆ ಸದಾಶಿವ ಈಶ್ವರ ರುದ್ರ ವಿಷ್ಣು ಮತ್ತು ಬ್ರಹ್ಮ ಈ ಅಧಿದೇವತೆಗಳು ಇರುತ್ತಾರೆ. ಹಾಗೆಯೇ ಪರಾಶಕ್ತಿ ಆದಿಶಕ್ತಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿ ಎಂಬ ಶಕ್ತಿಗಳೂ ಇಲ್ಲಿ ಉತ್ಪನ್ನವಾಗುತ್ತವೆ. ಜಗತ್ತಿನಲ್ಲಿಯ ಕ್ರಿಯೆಗಳಿಗೆ ಇವೂ ಕಾರಣಗಳು. ಮುಂದೆ ಆಕಾಶ ವಾಯು ಅಗ್ನಿ ಜಲ ಮತ್ತು ಪೃಥ್ವಿ ಎಂಬ ಪಂಚಮಹಾಭೂತಗಳು ಉದ್ಭವಿಸುತ್ತವೆ. ಅವುಗಳ ತತ್ವಗಳು ಪ್ರತಿಯೊಂದು ಪದಾರ್ಥದಲ್ಲಿ ಸೇರಿಕೊಂಡು ಪದಾರ್ಥಗಳ ಗುಣಧರ್ಮಗಳಿಗೆ ಕಾರಣವಾಗಿರುತ್ತವೆ. (ಪುಟ ೭೯ ನೋಡಿರಿ)

ಪಂಚಸಾದಾಖ್ಯಗಳು ಶಿವನ ಪಂಚಮುಖಗಳೆಂತಲೂ ಹೇಳಲ್ಪಡುತ್ತವೆ. ಈ ಪ್ರತಿಯೊಂದು ಮುಖದಲ್ಲಿ ಪಂಚಾಕ್ಷರಿಯ ಐದು ಅಕ್ಷರಗಳೂ ನೆಲೆಗೊಂಡಿವೆ. ಈ ಪಂಚಾಕ್ಷರಿಯು ಪಂಚಲಿಂಗ ಸ್ವರೂ

ವನ್ನು ಹೊಂದಿ ಅವುಗಳಲ್ಲಿ ಪ್ರಕಾಶಿಸುತ್ತದೆ. ಈ ಸಾದಾಖ್ಯಗಳಲ್ಲಿ ಶಾಂತ್ಯಾತೀತೋತ್ತರಕಲೆ ಶಾಂತ್ಯಾತೀತಕಲೆ ಶಾಂತಿಕಲೆ ವಿದ್ಯಾಕಲೆ ಪ್ರತಿಷ್ಠಾಕಲೆ ಮತ್ತು ನಿವೃತ್ತಿಕಲೆ ಎಂಬ ಕಲೆಗಳು ಬೆಳಗುತ್ತವೆ. ಇವೆಲ್ಲವುಗಳು ಶಿವನ ನೆನಹು ಮಾತ್ರದಿಂದ ಉಂಟಾಗಿ ಜಗತ್ತನ್ನು ವ್ಯವಸ್ಥೆಯಿಂದ ನಡಿಸಿಕೊಂಡು ಹೋಗುತ್ತವೆಂದು ವೀರಶೈವ ತತ್ವಜ್ಞರು ತಿಳಿದಿರುತ್ತಾರೆ.

## (ಕ) ಷಡಧ್ವಗಳು.

ಅಧ್ವಗಳು ಆರು ಇರುತ್ತವೆ. ಅವು ಮಂತ್ರಾಧ್ವ, ಪದಾಧ್ವ, ವರ್ಣಾಧ್ವ, ಭುವನಾಧ್ವ, ತತ್ವಾಧ್ವ, ಕಲಾಧ್ವಗಳಾಗಿವೆ. ಶಿವಾಗಮಗಳಲ್ಲಿ ಇವುಗಳಿಗೆ ಬಹು ಮಹತ್ವದ ಸ್ಥಾನವಿದೆ. ಶೈವ ಧರ್ಮ ಗ್ರಂಥಗಳಲ್ಲಿ ಇವುಗಳ ವಿವೇಚನೆಯು ಬಹು ವಿಸ್ತಾರವಾಗಿ ಮಾಡಲ್ಪಡುವದುಂಟು. ವೀರಶೈವ ಸಿದ್ಧಾಂತದಲ್ಲಿಯೂ ಇವುಗಳ ಉಲ್ಲೇಖವು ಅಲ್ಲಲ್ಲಿ ಬರುತ್ತದೆ. ಆದರೆ ದೀಕ್ಷೆಯ ಮೂಲಕ ಷಡಧ್ವ ಶುದ್ಧಿಯನ್ನು ಹೊಂದಿದ ಬಳಿಕ ಷಟ್ಸ್ಥಲ ಮಾರ್ಗದಂತೆ ವೀರಶೈವನು ನಡೆಯಬೇಕಾದುದರಿಂದ ಈ ಷಡಧ್ವಗಳ ಬದಲು ಷಟ್ಸ್ಥಲ ವಿಷಯಗಳು ವೀರಶೈವ ಗ್ರಂಥಗಳಲ್ಲಿ ಹೆಚ್ಚಾಗಿ ನಿರೂಪಿಸಲ್ಪಡುತ್ತವೆ.

ಪರಶಿವನ ಮೂಲಕ ಸಾದಾಖ್ಯಗಳು ಹೊರಹೊಮ್ಮುವವೆಂದು ಹಿಂದೆ ಹೇಳಲ್ಪಟ್ಟಿತಷ್ಟೇ. ಈ ಸಾದಾಖ್ಯಗಳು ಪ್ರಕಟವಾಗುವಾಗ ವಿಶ್ವದಲ್ಲಿ ಸಂಚಲನೆಯು ಉತ್ಪನ್ನವಾಗಿ ಅದು ಯಾವ ಮಾರ್ಗದಿಂದ ಮುಂದೆ ಪ್ರವಹಿಸುತ್ತದೆಯೋ ಅದೇ ಅಧ್ವವೆನಿಸಿಕೊಳ್ಳುವದು. ಶಕ್ತಿಯು ಪ್ರವಹಿಸಲು ಅದಕ್ಕೊಂದು ಮಾರ್ಗವು ಅಥವಾ ಆಧಾರವು ಬೇಕು. ಈ ಆಧಾರವು ಅದಕ್ಕೆ ದೊರೆತಾಗಲೇ ಅದು ಪ್ರಕಟವಾಗುತ್ತದೆ. ಇಂಥ ಆಧಾರವೇ ಅಧ್ವವೆಂದು ಹೇಳಬಹುದು. ಈ ಅಧ್ವಗಳ ಮೂಲಕ ಶಿವಶಕ್ತಿಯು ಜಗತ್ತಿನಲ್ಲಿ ಹರಿದಾಡುತ್ತದೆ.

ಅಧ್ವಗಳು ವಿದ್ಯುಚ್ಛಕ್ತಿಯು ಹರಿದು ಹೋಗುವಂಥ ತಾರಾಯಂತ್ರದ ತಂತಿಗಳಂತಿರುತ್ತವೆ. ವಿಶ್ವವು ಪ್ರಕಟವಾಗಲು ಅವು ಸಾಧನಗಳಾಗಿವೆ.

ರಿಂದ ವರ್ಣಾಧ್ವದೊಡನೆ ಕಲಾಧ್ವವು, ಪದಾಧ್ವದೊಡನೆ ತತ್ತ್ವಾಧ್ವವು, ಮಂತ್ರಾಧ್ವದೊಡನೆ ಭುವನಾಧ್ವವು ಕೂಡಿಕೊಂಡು ಚಲಿಸುತ್ತವೆ. ಈ ಜೋಡಿಗಳಲ್ಲಿ ಪರಸ್ಪರ ಸಂಬಂಧವಿದೆ. ಈ ಸಂಬಂಧವನ್ನು ಮಂತ್ರ, ಪದ, ವರ್ಣಾಧ್ವಗಳು ಶಬ್ದಸ್ವರೂಪವೆಂತಲೂ ಭುವನ, ತತ್ತ್ವ, ಕಲಾಧ್ವಗಳು ಅರ್ಥಸ್ವರೂಪವೆಂತಲೂ ಆಗಮಜ್ಞರು ವಿವರಿಸಿ ಹೇಳುವದುಂಟು. ಮೊದಲಿನವು ಶಬ್ದಾತ್ಮಕವೆಂತಲೂ ಎರಡನೆಯವು ವಸ್ತ್ವಾತ್ಮಕವೆಂತಲೂ ವರ್ಣಿಸಲ್ಪಟ್ಟಿರುತ್ತವೆ. ಮೊದಲನೆಯ ವರ್ಗವು ಶಕ್ತ್ಯಾತ್ಮಕವೂ ಎರಡನೆಯ ವರ್ಗವು ಸ್ವರೂಪಾತ್ಮಕವೂ ಎಂತಲೂ ಹೇಳಲ್ಪಟ್ಟಿರುತ್ತವೆ.

ಮಂತ್ರ, ಪದ, ವರ್ಣಾಧ್ವಗಳು ರೂಪಾಧ್ವಗಳಾಗಿವೆ. ಭುವನ, ತತ್ತ್ವ, ಕಲಾಧ್ವಗಳು ಅರೂಪಾಧ್ವಗಳಾಗಿವೆ.

ಈ ಅಧ್ವಗಳಲ್ಲಿ ಎಲ್ಲಕ್ಕೂ ಸ್ಥೂಲವಾದುದು ಕಲಾಧ್ವವು. ಮತ್ತು ಎಲ್ಲಕ್ಕೂ ಸೂಕ್ಷ್ಮವಾದುದು ಮಂತ್ರಾಧ್ವವು. ಆದುದರಿಂದ ಕಲೆಯಲ್ಲಿ ತತ್ತ್ವ, ತತ್ತ್ವದಲ್ಲಿ ಭುವನ, ಭುವನದಲ್ಲಿ ವರ್ಣ, ವರ್ಣದಲ್ಲಿ ಪದ, ಪದದಲ್ಲಿ ಮಂತ್ರ ಹೀಗೆ ಈ ಅಧ್ವಗಳು ಪರಸ್ಪರ ಕೂಡಿಕೊಳ್ಳುತ್ತವೆ.

ಷಡಧ್ವಗಳ ಈ ಜ್ಞಾನ ಮಾಡಿಕೊಂಡಾಗಲೇ ಮನುಷ್ಯನಿಗೆ ಪ್ರಗತಿಯ ದ್ವಾರವು ತೆರೆಯುತ್ತದೆ. ಮನುಷ್ಯನು ಮೊದಲಿನ ಮೂರು ರೂಪಾಧ್ವಗಳ ಜ್ಞಾನಮಾಡಿಕೊಂಡು ಬಳಿಕ ಮೂರು ಅರ್ಥಾಧ್ವಗಳ ಜ್ಞಾನಮಾಡಿಕೊಳ್ಳಬೇಕು. ಅಂದರೆ ಅವನು ಜ್ಞಾನಿಯೆನಿಸಿಕೊಳ್ಳುವನು ಮತ್ತು ಮಹಾಮಾಯೆಯಿಂದ ದೂರಾಗುವನು. ಆಗ ಅರೂಪಾಧ್ವಗಳು ಬಿಂದುವಿನಲ್ಲಿಯೂ ರೂಪಾಧ್ವಗಳು ನಾದದಲ್ಲಿಯೂ ಅಡಗುವವು. ಮುಂದೆ ಈ ಬಿಂದುವೂ ಸಹ ನಾದದಲ್ಲಿ ಅಡಗುವದು ಮತ್ತು ನಾದವು ಪರಾಶಕ್ತಿಯಲ್ಲಿ ಅಡಗುವದು ಮತ್ತು ಪರಾಶಕ್ತಿಯು ಪರಮಾತ್ಮನಲ್ಲಿ ಅಡಗುವದು. ಆಗ ಮನುಷ್ಯನು ಷಡಧ್ವಗಳ ಜಾಳಿಗೆಯಿಂದ ಪಾರಾಗಿ ಮೋಕ್ಷವನ್ನು ಹೊಂದುವನು. ಹೀಗೆ ಅಧ್ವಗಳು ಆಗಮ ಗ್ರಂಥಗಳಲ್ಲಿಯೂ ಸಿದ್ಧಾಂತ ಗ್ರಂಥಗಳಲ್ಲಿಯೂ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತವೆ.

ಮಂತ್ರಾಧ್ವ :– ಇದರಲ್ಲಿ ಹನ್ನೊಂದು ಮಂತ್ರಗಳಿವೆ. ಅವು ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರಗಳು. ಇವು ಐದು ಇವೆ. ಇವುಗಳಿ

ಡನೆ ಹೃದಯ ಮಂತ್ರ, ಶಿರೋಮಂತ್ರ, ಮೊದಲಾದ ಷಡಂಗಮಂತ್ರ
ಗಳು ಆರು ಕೂಡಿ ಹನ್ನೊಂದು ಮಂತ್ರಗಳಾಗುತ್ತವೆ. ಇವು ಮಂತ್ರಾ
ರ್ಥಗಳು. (ಈ ಗ್ರಂಥದ ೩೪-೩೬ ಪುಟಗಳನ್ನು ನೋಡಿರಿ.)

ಪದಾರ್ಥ್ವ:— ಇವು ೮೧ ಇವೆ. (ಗ್ರಂಥದ ಪುಟ ೩೫ ನೋಡಿರಿ.)
ಕೆಲವು ಆಗಮಗ್ರಂಥಗಳಲ್ಲಿ ಇವು ಎಂಭತ್ತೊಂದು ಇವೆ ಎಂದು ಹೇಳಲ್ಪ
ಟ್ಟಿದೆ. ಮಂತ್ರಾರ್ಥ್ವಕ್ಕೆ ಈ ಪದಾರ್ಥ್ವವೇ ಅವಲಂಬನವು. ಪದಗಳಿಂದಲೇ
ಮಂತ್ರಗಳು ಉದ್ಭವಿಸುತ್ತವೆ.

ವರ್ಣಾರ್ಥ್ವ:— ಇವು ಐವತ್ತೆರಡು ಅಕ್ಷರಗಳು. ಪದಾರ್ಥ್ವಕ್ಕೆ
ವರ್ಣಾರ್ಥ್ವವು ಮೂಲವಾಗಿದೆ. ಅಂದರೆ ವರ್ಣಗಳ ಸಹಾಯದಿಂದ
ಪದಗಳು ರಚಿಸಲ್ಪಡುತ್ತವೆ. ಮತ್ತು ಪದಗಳಿಂದ ಮಂತ್ರಗಳು ಉತ್ಪ
ನ್ನವಾಗುತ್ತವೆ. ಮಂತ್ರಗಳು ಎಲ್ಲೆಲ್ಲಿಯೂ ತುಂಬಿವೆ. (ಈ ಗ್ರಂಥದ
೩೬ನೆಯ ಪುಟ ನೋಡಿರಿ)

ಮೇಲೆ ಕಾಣಿಸಿದ ಅರ್ಥ್ವಗಳು ನಾದಾತ್ಮಕವಾಗಿವೆ ನಾದದಿಂದಲೇ
ಇವು ಹುಟ್ಟುತ್ತವೆ. ಇವುಗಳಿಂದಲೇ ವೇದಗಳ ಆಗಮಗಳ ಉಗಮವು.

ಪದಗಳ ಸಂಘವೇ ಮಂತ್ರಗಳು. ಇವುಗಳಲ್ಲಿ ಪಂಚಬ್ರಹ್ಮಮಂತ್ರ
ಗಳು. ಷಡಂಗಮಂತ್ರಗಳು ಎಂದು ಎರಡು ವಿಧಗಳಿರುತ್ತವೆ.

ಪಂಚಬ್ರಹ್ಮ ಮಂತ್ರಗಳು ಮೂರ್ತಿಬ್ರಹ್ಮ, ತತ್ವಬ್ರಹ್ಮ, ಭೂತ
ಬ್ರಹ್ಮ, ಪಿಂಡಬ್ರಹ್ಮ, ಕಲಾಬ್ರಹ್ಮ, ಎಂದು ಐದು ಪ್ರಕಾರವಾಗಿರು
ತ್ತವೆ. ಸಾಕಲ್ಯ, ರಾಂಭವ, ಸೌಖ್ಯ, ಸಾವಧ್ಯ, ಸಾಯುಜ್ಯಗಳೆಂಬ
ಪಂಚಪ್ರಣವಗಳು ಮೂರ್ತಿಬ್ರಹ್ಮ ಮಂತ್ರಗಳು. ಶುದ್ಧಪ್ರಸಾದ, ಮೂಲ
ಪ್ರಸಾದ. ತತ್ವಪ್ರಸಾದ, ಆದಿಪ್ರಸಾದ, ಆತ್ಮಪ್ರಸಾದ ಎಂಬ ಪಂಚ
ಪ್ರಸಾದಗಳು, ತತ್ವಬ್ರಹ್ಮ ಮಂತ್ರಗಳು. ಲ ವ ರ ಯ ಹ ಕಾರಗಳ
ಭೂತಬ್ರಹ್ಮ ಮಂತ್ರಗಳು. ತನ್ನ ತನ್ನ ಬೀಜಾಕ್ಷರಗಳಿಂದ ಯುಕ್ತ
ವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ
ಳೆಂಬ ಪಂಚಮಂತ್ರಗಳು ಪಿಂಡಬ್ರಹ್ಮ ಮಂತ್ರಗಳು. ಈ ಪಂಚಬ್ರ
ಮುಖಗಳಿಗೆ ಸಂಬಂಧಿಸಿ ಮೂವತ್ತೆಂಟು ಕಲೆಗಳಿವೆ. ಅವುಗಳ
ಕೂಡಿದ ಪಂಚಮಂತ್ರಗಳು ಕಲಾಬ್ರಹ್ಮ ಮಂತ್ರಗಳು.

ಇನ್ನು ಷಡಂಗ ಮಂತ್ರಗಳು ಶಿವಾಂಗ, ಭೂತಾಂಗ, ವಿದ್ಯಾಂಗ, ಕೂಟಾಂಗ, ಶಕ್ತ್ಯಂಗ, ಸಾಮಾನ್ಯಾಂಗ ಎಂದು ಆರು ತೆರನಾಗಿರುತ್ತವೆ.

ಆಗಮಕಾರರು ಹೀಗೆ ಅನೇಕ ಭೇದವಿಭೇದಗಳನ್ನು ಕಲ್ಪಿಸಿ ಈ ಷಡಧ್ವಗಳಿಂದ ಶಿವಾಗಮಗಳೂ ೨೦೮ ಉಪಭೇದಗಳಿಂದ ಕೂಡಿದ ೨೮ ಸಂಹಿತೆಗಳೂ ಉತ್ಪನ್ನವಾದವೆಂದು ತಿಳಿಸುತ್ತಾರೆ. ಗ್ರಂಥ ವಿಸ್ತಾರ ಭಯಕ್ಕಾಗಿ ನಾವು ಇವುಗಳನ್ನು ಇಲ್ಲಿ ವಿವರಿಸಿಲ್ಲ.

ಭುವನಾಧ್ವ:· ಇವು ೨೨೪ ಇರುತ್ತವೆ. ಬ್ರಹ್ಮಾಂಡದಲ್ಲೆಲ್ಲ ಇವು ಪಸರಿಸಿರುತ್ತವೆ. ಇವು ಈ ಗ್ರಂಥದ ಪುಟ ೩೬ರಲ್ಲಿ ವಿವರಿಸಲ್ಪಟ್ಟಿವೆ.

ತತ್ತ್ವಾಧ್ವ:— ಇವು ೩೬ ಇವೆ. ಇವುಗಳ ಸವಿಸ್ತಾರ ವಿವೇಚನೆಯನ್ನು ೨ನೇ ಅನುಬಂಧದಲ್ಲಿ ಮಾಡುವೆವು.

ಕಲಾಧ್ವ:— ಇವು ಐದು ಇರುತ್ತವೆ ಇವು ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯಾತೀತಗಳು ಇರುತ್ತವೆ. ಈ ಕಲೆಗಳು ಮಹಾಭೂತಗಳೊಡನೆ ಬೆರೆದು ಅವುಗಳಲ್ಲಿ ಅನೇಕ ತರದ ಪರಿಣಾಮಗಳನ್ನುಂಟು ಮಾಡುತ್ತವೆ. ಇವುಗಳ ಸಂಕ್ಷಿಪ್ತ ವಿವರವು ಇಂತಿದೆ:—

ನಿವೃತ್ತಿಕಲೆ:— ಪರಮಾತ್ಮನ ಅರಿವು ಮನುಷ್ಯನಲ್ಲಿ ಉತ್ಪನ್ನವಾಗಲು ಈ ನಿವೃತ್ತಿಕಲೆಯು ಜಾಗ್ರತಿಯನ್ನು ಹೊಂದುತ್ತದೆ. ಆಗ ಇವನು ದುಷ್ಟ ವಾಸನೆಗಳನ್ನು ಬಿಟ್ಟು ಪರಮಾತ್ಮನೊಡನೆ ಕೂಡಲು ಬಯಸುತ್ತಾನೆ. ಇದರ ಅಧಿದೇವತೆಯು ಬ್ರಹ್ಮನಿರುತ್ತಾನೆ. ಪ್ರತಿಷ್ಠಾ ಕಲೆ:— ಈ ಕಲೆಯ ಮೂಲಕ ಮೋಕ್ಷೋನ್ಮುಖನಾದ ಆತ್ಮನು ದೃಢಚಿತ್ತನಾಗಿರುತ್ತಾನೆ. ವಿಷ್ಣುವೇ ಇಲ್ಲಿ ಅಧಿದೇವತೆಯು. ವಿದ್ಯಾಕಲೆ:— ಇಲ್ಲಿ ಸಾಧಕನ ರಾಗಗಳು ನಾಶಹೊಂದುತ್ತವೆ. ಬುದ್ಧಿಯು ನಿರ್ಮಲವಾಗುತ್ತದೆ. ದುಃಖಗಳು ದೂರವಾಗುತ್ತವೆ. ರುದ್ರನು ಇಲ್ಲಿ ಅಧಿದೇವತೆಯು. ಶಾಂತಿಕಲೆ:— ಇಲ್ಲಿ ಅಹಂಕಾರವು ತೊಲಗಿ ಹೋಗುತ್ತದೆ. ಎಲ್ಲೆಲ್ಲಿಯೂ ಸಮಾಧಾನವು ನೆಲೆಗೊಳ್ಳುತ್ತದೆ. ಇದರ ಅಧಿದೇವತೆಯು ಮಹೇಶ್ವರನು. ಶಾಂತ್ಯಾತೀತಕಲೆ:— ಇದರ ಮೂಲಕ ಪರಮಾತ್ಮನ ಪ್ರೇಮ ಮತ್ತು ಕರುಣೆಯನ್ನು ಮನುಷ್ಯನು ಹೊಂದಿ ಪರಮಾತ್ಮನಲ್ಲಿಯೇ ಜೀವಿಸುತ್ತಾನೆ. ಇದು ಸೌಖ್ಯದ ಪರಮಾವಧಿಯಾಗಿದೆ. ಹೀಗೆ ಕಲೆಗಳು

# ಅನುಬಂಧ ೨.

## ೩೬ ತತ್ತ್ವಗಳು.

ವೀರಶೈವರಲ್ಲಿ ೩೬ ತತ್ತ್ವಗಳಿರುತ್ತವೆ. ಶಿವಾಗಮಗಳಲ್ಲಿಯೂ ಕೂಡ ೩೬ ತತ್ತ್ವಗಳ ವಿವೇಚನೆಯು ವಿಸ್ತಾರವಾಗಿ ಮಾಡಲ್ಪಡುತ್ತದೆ. ಆದರೆ ಕೆಲವು ವಿಷಯಗಳ ಸಂಬಂಧವಾಗಿ ಈ ಉಭಯ ವಿವೇಚನೆಗಳಲ್ಲಿ ಕೆಲವು ವ್ಯತ್ಯಾಸಗಳು ತೋರಿಬರುತ್ತವೆ.

ಸೃಷ್ಟಿಯ ರಚನೆಯಲ್ಲಿ ವೀರಶೈವರು ಸಾದಾಖ್ಯಗಳಿಗೆ ಬಹಳ ಮಹತ್ತ್ವವನ್ನು ಕೊಟ್ಟಿದ್ದಾರೆ. ಷಡ್ಸ್ಥಲಗಳನ್ನು ಅವರು ನಂಬುತ್ತಾರೆ. ಆದರೆ ಶಿವಸಿದ್ಧಾಂತಗಳು ಷಡಧ್ವಗಳಿಗೆ ಮಹತ್ತ್ವಕೊಟ್ಟು ಅವುಗಳ ಜ್ಞಾನದಿಂದ ಮೋಕ್ಷವು ಹೇಗಾಗುತ್ತದೆಂಬುದನ್ನು ಹೆಚ್ಚಾಗಿ ವಿವರಿಸುತ್ತಾರೆ. ಆದರೆ ವೀರಶೈವರು ಸಾದಾಖ್ಯಗಳಿಗೆ ಮಹತ್ತ್ವಕೊಟ್ಟು ಕರಣಹಸಿಗೆಯ ಜ್ಞಾನವು ಅವಶ್ಯವಾದುದೆಂದು ಹೇಳಿ ಷಟ್‌ಸ್ಥಲವನ್ನು ವಿವರಿಸುತ್ತಾರೆ. ಅವರು ಆರು ಅಧ್ವಗಳಲ್ಲಿ ಬರುವ ವರ್ಣ, ಪದ, ಮಂತ್ರ ಈ ಅಧ್ವಗಳನ್ನು ಷಡಕ್ಷರ ಮಂತ್ರ ಮತ್ತು ಅದರ ಬೀಜಾಕ್ಷರಗಳಲ್ಲಿ ಸಮಾವೇಶ ಮಾಡುತ್ತಾರೆ. ಆದರೆ ಭುವನಾಧ್ವದ ವರ್ಣನೆಯು ಅವರಲ್ಲಿ ಹೆಚ್ಚಾಗಿ ಇಲ್ಲ. ಆದರೆ ಕಲಾಧ್ವದ ವರ್ಣನೆಯು ಆಯಾ ಸ್ಥಲಗಳಲ್ಲಿ ಬರುವದುಂಟು. ತತ್ತ್ವಾಧ್ವವನ್ನು ಮಾತ್ರ ಅವರು ಹೆಚ್ಚು ವಿಸ್ತಾರವಾಗಿ ವರ್ಣಿಸುವದುಂಟು. ಆದರೆ ಇದರಲ್ಲಿ ಅವರು ಕೆಲವು ಬದಲಾವಣೆಗಳನ್ನು ಮಾಡಿ ಅವುಗಳನ್ನು ವಿವರಿಸುತ್ತಾರೆ.

ವೀರಶೈವರು ೩೬ ತತ್ತ್ವಗಳ ವಿವೇಚನೆಮಾಡುವಲ್ಲಿ ಅವರು ಅದರಲ್ಲಿ ಕೆಲವು ಭಾಗಗಳನ್ನು ಮಾಡುತ್ತಾರೆ. ಆತ್ಮತತ್ತ್ವ ೨೫, ವಿದ್ಯಾತತ್ತ್ವ ೧೦, ಮತ್ತು ಶಿವತತ್ತ್ವ ೧, ಹೀಗೆ ೩೬ ತತ್ತ್ವಗಳಲ್ಲಿ ಮೂರು ವಿಭಾಗಗಳನ್ನು ಮಾಡಿರುವರು. ಅವುಗಳ ವಿವರಣೆಯನ್ನು ಈ ಗ್ರಂಥದಲ್ಲಿ ವಾಚಕರು [illegible]ನೆಯ ಪುಟದಿಂದ ೩೬ನೆಯ ಪುಟಗಳವರೆಗೆ ನೋಡಬೇಕು. ಅಲ್ಲಿ ಅವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಅವುಗಳನ್ನು ನಾವು ಇಲ್ಲಿ ಮತ್ತೆ ಹೇಳುವ ಅವಶ್ಯವಿಲ್ಲ. ೨೫ ಆತ್ಮತತ್ತ್ವಗಳು ದೇಹಕ್ಕೆ ಸಂಬಂಧ

ರಿಂದ ಅವು ಅಶುದ್ಧ ತತ್ತ್ವಗಳು. ಅವು ಯಾವವೆಂದರೆ:— ಮಾಯೆ, ಕಾಲ, ನಿಯತಿ, ಕಲೆ, ವಿದ್ಯಾ, ರಾಗ ಎಂಬಿವು ಇರುತ್ತವೆ. ಇವುಗಳು ೬, ಮತ್ತು ಮೊದಲಿನವು ೨೫ ಹೀಗೆ ಒಟ್ಟು ೩೧ ತತ್ತ್ವಗಳು ಅಶುದ್ಧ ತತ್ತ್ವಗಳು. ಇವುಗಳೂ ಉಳಿದ ಐದು ಶುದ್ಧ ತತ್ತ್ವಗಳೂ ಕೂಡಿ ೩೬ ತತ್ತ್ವಗಳಾಗುತ್ತವೆ. ಇವುಗಳ ಮೂಲಕವಾಗಿಯೇ ಪ್ರಪಂಚದ ವ್ಯವಹರಣೆ ಎಂದು ಆಗಮಗ್ರಂಥಕಾರರು ಹೇಳುತ್ತಾರೆ.

ಈ ೩೬ ತತ್ತ್ವಗಳ ಸಂಕ್ಷಿಪ್ತ ವಿವರಣೆ ಏನೆಂದರೆ:—

ಶಿವತತ್ತ್ವ:— ಪರಶಿವನೇ ಶಿವತತ್ತ್ವವು. ಈ ಶಿವತತ್ತ್ವವೇ ಪ್ರಪಂಚಕ್ಕೆ ಕಾರಣವಾಗಿರುತ್ತದೆ. ಆತನೊಬ್ಬನನ್ನೇ ಎಲ್ಲರೂ ನಂಬತಕ್ಕದ್ದು.

ಶಕ್ತಿತತ್ತ್ವ:— ಪರಶಿವನಲ್ಲಿ ಶಕ್ತಿತತ್ತ್ವವು ಉದ್ಭವಿಸುತ್ತದೆ. ಈ ಶಕ್ತಿ ತತ್ತ್ವವೇ ಪ್ರಪಂಚಕ್ಕೆ ಉಪಾದಾನ ಕಾರಣವಾಗಿರುತ್ತದೆ. ಇದರ ಮೂಲಕವೇ ಜಗತ್ತಿನ ಉದ್ಭವವು.

ಸದಾಶಿವತತ್ತ್ವ:— ಇಲ್ಲಿ ಸೃಷ್ಟಿಯು ಸಂಚಲನವು ಆರಂಭವಾಗುತ್ತದೆ. ಇಲ್ಲಿಂದ ಮುಂದೆ ಜಗತ್ತು ಪ್ರಕಟವಾಗುತ್ತ ಹೋಗುತ್ತದೆ. ಇಲ್ಲಿ 'ನಾನೇ ಈ ಪ್ರಪಂಚ' ಎಂಬ ಭಾವವು ಉತ್ಪನ್ನವಾಗುತ್ತದೆ.

ಈಶ್ವರತತ್ತ್ವ:— ಇಲ್ಲಿ ಹಿಂದೆ ಹೇಳಿದ ಶಕ್ತಿಯು ಹೆಚ್ಚಿಗೆ ಪ್ರಕಟವಾಗುತ್ತದೆ. ಇಲ್ಲಿ 'ಪ್ರಪಂಚವೆಲ್ಲವೂ ನಾನೇ' ಎಂಬ ಅಹಂವೃತ್ತಿಯು ಮನನದಲ್ಲಿ ಹುಟ್ಟುತ್ತದೆ. ಇಲ್ಲಿ ಕ್ರಿಯಾಶಕ್ತಿಯು ಹೆಚ್ಚಿಗೆ ಪ್ರಕಟವಾಗುತ್ತದೆ. ಈಶ್ವರ ತತ್ತ್ವಕ್ಕೆ ಮಹೇಶ್ವರ ತತ್ತ್ವವೆಂತಲೂ ಬೇರೊಂದು ಹೆಸರು ಇರುತ್ತದೆ. ಇಲ್ಲಿ ಪರಶಿವನು ಸಕಲಾವಸ್ಥೆಯಲ್ಲಿರುತ್ತಾನೆ.

ಶುದ್ಧವಿದ್ಯಾ:— ಇಲ್ಲಿ ಐಕ್ಯಜ್ಞಾನವು ಅಥವಾ ಆಧ್ಯಾತ್ಮಿಕ ಜ್ಞಾನವು ಉದಯಿಸುತ್ತದೆ. ಇದು ಜಗತ್ತಿನ ಉತ್ಕೃಷ್ಟತರ ಸ್ಥಿತಿಯು. ಈ ಎಲ್ಲ ತತ್ತ್ವಗಳಿಗೆ ಶುದ್ಧಾಧ್ವಗಳೆಂಬ ಹೆಸರು. ಇವೆಲ್ಲವೂ ನಾದದಿಂದ ಉತ್ಪನ್ನವಾಗಿರುತ್ತವೆ.

ಮಾಯಾ:— ಇದು ಭೇದಬುದ್ಧಿಯು ಇದೇ ಜಗತ್ತಿಗೆ ಕಾರಣವು. ಶಿವಸಿದ್ಧಾಂತಿಗಳು ಜಗತ್ತು ನಿಜವೆಂದು ತಿಳಿದಿದ್ದಾರೆ. ಆದರೆ ಮಾಯೆಯು ಈ ಭೇದಬುದ್ಧಿಗೆ ಕಾರಣಮಾತ್ರವಾಗಿದೆ.

ಕಾಲ — ಭೂತ, ವರ್ತಮಾನ, ಭವಿಷ್ಯತ್ ಕಾಲಗಳ ರೂಪ ದಿಂದ ಎಣಿಕೆ ಮಾಡುವ ಶಕ್ತಿಯೇ ಕಾಲವಾಗುತ್ತದೆ. ಪದಾರ್ಥಗಳ ಉತ್ಪತ್ತಿಗೆ ಇದಾದರೂ ಅವಶ್ಯಕವು.

ನಿಯತಿ — ಪರಮೇಶ್ವರನ ವ್ಯಾಪಕಶಕ್ತಿಯು ಸಂಕುಚಿತವಾಗಲು ನಿಯತಿಯೆಂದು ಹೇಳಲ್ಪಡುತ್ತದೆ. ಇದರಿಂದ ಎಲ್ಲ ಪದಾರ್ಥಗಳು ವ್ಯವಸ್ಥೆಯನ್ನು ಹೊಂದುತ್ತವೆ. ಮನುಷ್ಯನು ಮಾಡುವ ಕರ್ಮಗಳನ್ನು ಅವನು ಅನುಭವಿಸುವಂತೆಯೂ ಇದು ಮಾಡುತ್ತದೆ.

ಕಲಾ — ಇದು ಪರಮೇಶ್ವರನ ಕರ್ತೃತ್ವಶಕ್ತಿಯು. ಇದರಿಂದ ಮನುಷ್ಯನ ಉತ್ಕೃಷ್ಟತೆಯು ತೋರಪಡುತ್ತದೆ. ಇದು ಮನುಷ್ಯನಲ್ಲಿಯ ಚೈತನ್ಯ ಶಕ್ತಿಯು.

ವಿದ್ಯಾ — ಪರಮಾತ್ಮನ ಸರ್ವಜ್ಞತಾ ಶಕ್ತಿಯು ಸಂಕೋಚತ್ವವನ್ನು ಹೊಂದಲು ಅದು ವಿದ್ಯಾತತ್ವವೆಂದೆನಿಸಿಕೊಳ್ಳುತ್ತದೆ. ಇದರ ಮೂಲಕವಾಗಿಯೇ ಪುರುಷನಲ್ಲಿ ಜ್ಞಾನವು ಉಂಟಾಗುತ್ತದೆ. ಇದರಿಂದ ಪದಾರ್ಥಗಳನ್ನು ತಿಳಿಯಲು ಶಕ್ಯವಾಗುತ್ತದೆ.

ರಾಗ — ಅಭಿಲಾಷಾ ರೂಪವಾದ ಕಾರ್ಯಪ್ರವೃತ್ತಿಯೇ ರಾಗವು. ಇದು ವಿಷಯಪ್ರಿಯಶಕ್ತಿಯು. ಮನುಷ್ಯನು ಕಾರ್ಯಮಾಡುವಲ್ಲಿ ಅವನಿಗೆ ರಾಗ ಅಥವಾ ಇಷ್ಟ ಎಂಬುದು ಅವಶ್ಯವಾಗಿ ಬೇಕು.

ಹೇಳಿದ ಐದು ತತ್ವಗಳಲ್ಲಿ ಕಲಾ, ವಿದ್ಯಾ, ರಾಗ, ಇವು ಪ್ರಧಾನವಾಗಿದ್ದು ಅಂತರಂಗದಲ್ಲಿ ಅವು ತಮ್ಮ ಕ್ರಿಯೆಗಳನ್ನು ಮಾಡುತ್ತವೆ. ಆದರೆ ಕಾಲ ಮತ್ತು ನಿಯತಿಗಳು ಅಪ್ರಧಾನವಾಗಿದ್ದು ಬಹಿರಂಗದಲ್ಲಿ ಇವು ತಮ್ಮ ಕ್ರಿಯೆಗಳನ್ನು ಮಾಡುತ್ತವೆ.

ಪುರುಷ — ಶಿವನ ಚೈತನ್ಯವೇ ಮಾಯಾಶಕ್ತಿಯಲ್ಲಿ ಪ್ರವೇ ಶಿಸಲಾಗಿ ಪುರುಷತತ್ವವೆನಿಸಿಕೊಳ್ಳುವದು. ಇಲ್ಲಿ ಅವನು ಭೋಕ್ತೃವಾಗಿ ಜೀವಿಸುತ್ತಾನೆ. ಆದರೆ ಪುರುಷನು ಜೀವಿಗಳಾಗಿರುತ್ತಾನೆ. ಹೀಗೆ ಆಗಮ ಗ್ರಂಥಗಳಲ್ಲಿ ಪುರುಷ ಎಂಬುದಕ್ಕೆ ಒಂದು ವಿಶೇಷಾರ್ಥವಿದೆ.

[illegible] ಗುತ್ತದೆ.

ಮಾಯೆಯ ತರುವಾಯ ಕಾಲತತ್ತ್ವವು ಇದ್ದು ಈ ಕಾಲತತ್ತ್ವದಿಂದ ಪ್ರಕೃತಿಯ ವರೆಗೆ ಹಲವು ತತ್ತ್ವಗಳು ಮಿಶ್ರತತ್ತ್ವಗಳೆಂದು ಹೇಳಲ್ಪಡುತ್ತವೆ.

ಬುದ್ಧಿ:— ಪದಾರ್ಥಗಳನ್ನು ನಿಶ್ಚಯಿಸುವ ತತ್ತ್ವವೇ ಬುದ್ಧಿತತ್ತ್ವವು. ಇದು ಸತ್ತ್ವರೂಪವಾದ ಜ್ಞಾನಶಕ್ತಿಯು.

ಅಹಂಕಾರ:— ನಾನು ಎಂಬ ಅಭಿಮಾನರೂಪವಾದುದೇ ಅಹಂಕಾರವು. ಇದು ರಜೋಗುಣರೂಪ ಪರಿಣಾಮವುಳ್ಳ ಇಚ್ಛಾಶಕ್ತಿಯಾಗಿರುತ್ತದೆ. ಇದರಲ್ಲಿ ಸಂಗ್ರಾಹಕ ಸ್ವಭಾವವಿರುತ್ತದೆ. ಇದರಲ್ಲಿ ಮನುಷ್ಯನ ವ್ಯಕ್ತಿತ್ವವು ತೋರಿಸಲ್ಪಡುತ್ತದೆ.

ಮನ:— ಇದು ಸಂಕಲ್ಪ ವಿಕಲ್ಪಗಳನ್ನು ಉಂಟುಮಾಡುತ್ತದೆ. ಇದರ ಮೂಲಕವಾಗಿಯೇ ಪದಾರ್ಥಗಳು ಗ್ರಹಿಸಲ್ಪಡುತ್ತವೆ.

ಮನ ಅಹಂಕಾರ ಮತ್ತು ಬುದ್ಧಿ ಇವುಗಳೆಲ್ಲವೂ ಕೂಡಿದಾಗ ಪದಾರ್ಥಗಳ ಜ್ಞಾನವು ಮನುಷ್ಯನಿಗೆ ಉಂಟಾಗುತ್ತದೆ.

ಜ್ಞಾನೇಂದ್ರಿಯಗಳು:— ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ನಾಸಿಕ ಇವುಗಳು ಜ್ಞಾನೇಂದ್ರಿಯಗಳು.

ಕರ್ಮೇಂದ್ರಿಯಗಳು:— ಇವು ವಾಕ್ಕು, ಪಾಣಿ, ಪಾದ, ಪಾಯು ಉಪಸ್ಥಗಳು. ಇವು ಬಾಹ್ಯ ಕ್ರಿಯೆಗಳನ್ನು ನಡೆಸುವಂಥವು. ಇವು ಜ್ಞಾನೇಂದ್ರಿಯಗಳಿಗೆ ಸಹಾಯಕವಾಗಿವೆ.

ತನ್ಮಾತ್ರೆಗಳು:— ಇವು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು. ಇವು ಜ್ಞಾನೇಂದ್ರಿಯಗಳಿಗೆ ವಿಷಯಗಳಾಗಿರುತ್ತವೆ.

ಪಂಚಮಹಾಭೂತಗಳು:— ಆಕಾಶ, ವಾಯು, ತೇಜ, ಅಪ್, ಪೃಥ್ವಿ ಇವು ಪಂಚಮಹಾಭೂತಗಳು. ಇವುಗಳ ಮೂಲತತ್ತ್ವಗಳು ಜಗತ್ತನ್ನು ಹುಟ್ಟಿಸಲಿಕ್ಕೆ ಕಾರಣವಾಗಿರುತ್ತವೆ.

ಕಾಲ:— ಭೂತ, ವರ್ತಮಾನ, ಭವಿಷ್ಯತ್ ಕಾಲಗಳ ರೂಪದಿಂದ ಎಣಿಕೆ ಮಾಡುವ ಜ್ಞಾನವೇ ಇದಾಗಿರುತ್ತದೆ. ಪದಾರ್ಥಗಳ ಉತ್ಪತ್ತಿಗೆ ಇದಾದರೂ ಅವಶ್ಯಕವು.

ನಿಯತಿ:— ಪರಮೇಶ್ವರನ ವ್ಯಾಪಕಶಕ್ತಿಯು ಸಂಕುಚಿತವಾಗಲು ನಿಯತಿಯೆಂದು ಹೇಳಲ್ಪಡುತ್ತದೆ. ಇದರಿಂದ ಎಲ್ಲ ಪದಾರ್ಥಗಳು ವ್ಯವಸ್ಥೆಯನ್ನು ಹೊಂದುತ್ತವೆ. ಮನುಷ್ಯನು ಮಾಡುವ ಕರ್ಮಗಳನ್ನು ಅವನು ಅನುಭವಿಸುವಂತೆಯೂ ಇದು ಮಾಡುತ್ತದೆ.

ಕಲಾ:— ಇದು ಪರಮೇಶ್ವರನ ಕರ್ತೃತ್ವಶಕ್ತಿಯು. ಇದರಿಂದ ಮನುಷ್ಯನ ಉತ್ಕೃಷ್ಟತೆಯು ತೋರಪಡುತ್ತದೆ. ಇದು ಮನುಷ್ಯನಲ್ಲಿಯ ಚೈತನ್ಯ ಶಕ್ತಿಯು.

ವಿದ್ಯಾ:— ಪರಮಾತ್ಮನ ಸರ್ವಜ್ಞತಾ ಶಕ್ತಿಯು ಸಂಕೋಚಿತತ್ವವನ್ನು ಹೊಂದಲು ಅದು ವಿದ್ಯಾತತ್ತ್ವವೆಂದೆನಿಸಿಕೊಳ್ಳುತ್ತದೆ. ಇದರ ಮೂಲಕವಾಗಿಯೇ ಪುರುಷನಲ್ಲಿ ಜ್ಞಾನವು ಉಂಟಾಗುತ್ತದೆ. ಇದರಿಂದ ಪದಾರ್ಥಗಳನ್ನು ತಿಳಿಯಲು ಶಕ್ಯವಾಗುತ್ತದೆ.

ರಾಗ:— ಅಭಿಲಾಷಾ ರೂಪವಾದ ಕಾರ್ಯವೃತ್ತಿಯೇ ರಾಗವು. ಇದು ವಿಷಯಗ್ರಹಣಶಕ್ತಿಯು. ಮನುಷ್ಯನು ಕಾರ್ಯಮಾಡುವಲ್ಲಿ ಅವನಿಗೆ ರಾಗ ಅಥವಾ ಇಚ್ಛೆ ಎಂಬುದು ಅವಶ್ಯವಾಗಿ ಬೇಕು.

ಮೇಲಿನ ಐದು ತತ್ತ್ವಗಳಲ್ಲಿ ಕಲಾ, ವಿದ್ಯಾ, ರಾಗ, ಇವು ಪ್ರಧಾನವಾಗಿದ್ದು ಅಂತರಂಗದಲ್ಲಿ ಅವು ತಮ್ಮ ಕ್ರಿಯೆಗಳನ್ನು ಮಾಡುತ್ತವೆ. ಆದರೆ ಕಾಲ ಮತ್ತು ನಿಯತಿಗಳು ಅಪ್ರಧಾನವಾಗಿದ್ದು ಬಹಿರಂಗದಲ್ಲಿ ಇವು ತಮ್ಮ ಕ್ರಿಯೆಗಳನ್ನು ಮಾಡುತ್ತವೆ.

ಪುರುಷ:— ಶಿವನ ಚೈತನ್ಯವೇ ಮಾಯಾಶಕ್ತಿಯಲ್ಲಿ ಸೇರಲಾಗಿ ಪುರುಷತತ್ತ್ವವೆನಿಸಿಕೊಳ್ಳುವದು. ಇಲ್ಲಿ ಅವನು ಭೋಕ್ತೃವಾಗಿ ಜೀವಿಸುತ್ತಾನೆ. ಆದರೆ ಪುರುಷರು ಜೀವಿಗಳಾಗಿರುತ್ತಾರೆ. ಹೀಗೆ ಆಗಮ ಗ್ರಂಥಗಳಲ್ಲಿ ಪುರುಷ ಎಂಬುದಕ್ಕೆ ಒಂದು ವಿಶೇಷಾರ್ಥವಿದೆ.

ಪ್ರಕೃತಿಃ — ಬುದ್ಧ್ಯಾದಿ ಪೃಥ್ವ್ಯಂತಗಳಾದ ತತ್ತ್ವಗಳಿಗೆ ಪ್ರಕೃತಿಯು ಮೂಲಕಾರಣವಾಗಿರುತ್ತದೆ. ಪ್ರಕೃತಿಯು ಪುರುಷನಿಗೆ ಭೋಗ್ಯವಸ್ತು ವಾಗಿರುತ್ತದೆ.

ಮಾಯೆಯ ತರುವಾಯ ಕಾಲತತ್ತ್ವವು ಇದ್ದು ಈ ಕಾಲತತ್ತ್ವದಿಂದ ಪ್ರಕೃತಿಯ ವರೆಗೆ ಏಳು ತತ್ತ್ವಗಳು ಶುದ್ಧಾಶುದ್ಧಗಳೆಂದು ಹೇಳಲ್ಪಡುತ್ತವೆ.

ಬುದ್ಧಿಃ — ಪದಾರ್ಥಗಳನ್ನು ನಿಶ್ಚಯಿಸುವ ತತ್ತ್ವವೇ ಬುದ್ಧಿತತ್ತ್ವವು. ಇದು ಸತ್ತ್ವರೂಪವಾದ ಜ್ಞಾನಶಕ್ತಿಯು.

ಅಹಂಕಾರಃ — ನಾನು ಎಂಬ ಅಭಿಮಾನರೂಪವಾದುದೇ ಅಹಂಕಾರವು. ಇದು ರಜೋಗುಣರೂಪ ಪರಿಣಾಮವುಳ್ಳ ಇಚ್ಛಾಶಕ್ತಿಯಾಗಿರುತ್ತದೆ. ಇದರಲ್ಲಿ ಸಂಗ್ರಾಹಕ ಸ್ವಭಾವವಿರುತ್ತದೆ. ಇದರಲ್ಲಿ ಮನಸ್ಸಿನ ವ್ಯಕ್ತಿತ್ವವು ತೋರಿಸಲ್ಪಡುತ್ತದೆ.

ಮನಃ — ಇದು ಸಂಕಲ್ಪ ವಿಕಲ್ಪಗಳನ್ನು ಉಂಟುಮಾಡುತ್ತದೆ ಇದರ ಮೂಲಕವಾಗಿಯೇ ಪದಾರ್ಥಗಳು ಗ್ರಹಿಸಲ್ಪಡುತ್ತವೆ.

ಮನ ಅಹಂಕಾರ ಮತ್ತು ಬುದ್ಧಿ ಇವುಗಳೆಲ್ಲವೂ ಕೂಡಿದಾಗ ಪದಾರ್ಥಗಳ ಜ್ಞಾನವು ಮನುಷ್ಯನಿಗೆ ಉಂಟಾಗುತ್ತದೆ.

ಜ್ಞಾನೇಂದ್ರಿಯಗಳು — ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ನಾಸಿ ಇವುಗಳು ಜ್ಞಾನೇಂದ್ರಿಯಗಳು.

ಕರ್ಮೇಂದ್ರಿಯಗಳು — ಇವು ವಾಕ್ಕು, ಪಾಣಿ, ಪಾದ, ಪಾಯು ಉಪಸ್ಥಗಳು. ಇವು ಬಾಹ್ಯ ಕ್ರಿಯೆಗಳನ್ನು ಮಾಡುವಂಥವು. ಇವು ಜ್ಞಾನೇಂದ್ರಿಯಗಳಿಗೆ ಸಹಾಯಕವಾಗಿವೆ.

ತನ್ಮಾತ್ರೆಗಳು — ಇವು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಇವು ಜ್ಞಾನೇಂದ್ರಿಯಗಳಿಗೆ ವಿಷಯಗಳಾಗಿರುತ್ತವೆ.

ಪಂಚಮಹಾಭೂತಗಳು — ಆಕಾಶ, ವಾಯು, ತೇಜ, ಅಪ ಪೃಥ್ವಿ ಇವು ಪಂಚಮಹಾಭೂತಗಳು. ಇವುಗಳು ಮೂಲತತ್ತ್ವಗಳು ಜಗತ್ತನ್ನು ಹುಟ್ಟಿಸಲಿಕ್ಕೆ ಕಾರಣವಾಗಿರುತ್ತವೆ.

ಈ ಮೇರೆಗೆ ೩೬ ತತ್ತ್ವಗಳು ಶಿವಸಿದ್ಧಾಂತ ಗ್ರಂಥಗಳಲ್ಲಿ ಬಹು ವಿಸ್ತಾರವಾಗಿ ನಿರೂಪಿಸಲ್ಪಡುವವುಂಟು. ಅವುಗಳ ಮರ್ಮವನ್ನು ತಿಳಿಯುವದರಿಂದಲೇ ಮನುಷ್ಯನು ಪರಶಿವನಲ್ಲಿ ಬೆರೆಯುತ್ತಾನೆಂದು ಅವುಗಳಲ್ಲಿ ಹೇಳಲ್ಪಟ್ಟಿರುತ್ತದೆ.

ಸಾಂಖ್ಯರು ಮತ್ತು ಶೈವಸಿದ್ಧಾಂತಿಗಳು ಇವರಲ್ಲಿರುವ ಅನೇಕ ವಿಷಯಗಳನ್ನು ವೀರಶೈವರು ತೆಗೆದುಕೊಂಡರೂ ತಮ್ಮ ಷಟ್ಸ್ಥಲ ಮಾರ್ಗಕ್ಕೆ ಅನುಸಾರವಾಗಿ ಅವುಗಳಲ್ಲಿ ಆವಶ್ಯಕ ಬದಲಾವಣೆಗಳನ್ನು ಮಾಡಿ ತಮ್ಮ ೩೬ ತತ್ತ್ವಗಳನ್ನು ಬೇರೆಯಾಗಿ ನಿರೂಪಿಸಿದ್ದಾರೆ. ಮತ್ತು ಈ ತತ್ತ್ವಗಳಿಗೆ ಅನುಸಾರವಾಗಿ ನಡೆದರೆ ಹೇಗೆ ಪರಮಾತ್ಮನಲ್ಲಿ ಐಕ್ಯವು ಪ್ರಾಪ್ತವಾಗುವದೆಂಬದನ್ನು ನಿರ್ದೇಶಿಸಿದ್ದಾರೆ. ಇದು ಈ ಗ್ರಂಥದ ಪುಟ ೪೦-೪೭ರಲ್ಲಿ ಹೇಳಲ್ಪಟ್ಟಿರುತ್ತದೆ.

---

# ಅನುಬಂಧ ೩.

## ಪರಮಾತ್ಮನ ಬಗ್ಗೆ ವಿಚಾರಗಳು.

ದೇವರು ಒಬ್ಬನೇ ಇದ್ದಾನೆ – ವೀರಶೈವರಲ್ಲಿ ದೇವರು ಒಬ್ಬನೇ ಇದ್ದಾನೆಂಬ ಅಭಿಪ್ರಾಯವು ದೃಢವಾಗಿರುತ್ತದೆ. ಈ ಬಗೆಯ ವಿಚಾರಗಳು ಉಪನಿಷದ್ಗ್ರಂಥಗಳಲ್ಲಿಯೂ ಇರುತ್ತವೆ. ಶಿವಾಗಮ ಗ್ರಂಥಗಳಲ್ಲಿಯೂ ಕೂಡ ಇವೇ ವಿಚಾರಗಳು ಕಂಡುಬರುತ್ತವೆ. ಕೆಲವರು ಶಿವಾಗಮಗಳು ಉಪನಿಷತ್ ಗ್ರಂಥಗಳಿಗಿಂತಲೂ ಹಿಂದಿನವೆಂದು ತಿಳಿಯುತ್ತಾರೆ. ಆದರೆ ಆಗಮ ವಾಙ್ಮಯವು ಇನ್ನೂ ಪೂರ್ಣವಾಗಿ ಸಂಶೋಧಿಸಲ್ಪಟ್ಟಿಲ್ಲ. ಅದ್ದರಿಂದ ಈ ವಿಷಯವನ್ನು ಕುರಿತು ಹೀಗೆ ಅಭಿಪ್ರಾಯಪಡಲು ಶಕ್ಯವಿಲ್ಲ. ವೀರಶೈವರಲ್ಲಿ ಪರಮಾತ್ಮನಿಗೆ ಪರಶಿವ, ಶಿವ, ಪರಬ್ರಹ್ಮ, ಶಿವತತ್ವ ಎಂಬ ಶಬ್ದಗಳು ಉಪಯೋಗಿಸಲ್ಪಡುತ್ತವೆ.

ಶೂನ್ಯವೆಂದರೇನು? :— ವಚನಗಳಲ್ಲಿ ಪರಮಾತ್ಮನು ಸರ್ವಶೂನ್ಯ, ಶೂನ್ಯ, ಬಯಲು, ನಿರವಯ ಎಂಬ ಶಬ್ದಗಳಿಂದ ನಿರ್ದೇಶಿಸಲ್ಪಟ್ಟಿರುವುದು ಕಂಡುಬರುತ್ತದೆ. ಈ ಶಬ್ದಗಳ ಮೂಲಕ ವೀರಶೈವರು ಜೈನ, ಬೌದ್ಧರಂತೆ ಶೂನ್ಯವಾದಿಗಳೋ ಹೇಗೆ ಎಂಬ ಸಂಶಯವು ಹುಟ್ಟಬಹುದಾಗಿದೆ. ಆದರೆ ಈ ಶಬ್ದಗಳು ಪರಮಾತ್ಮನು ನಿರಾಕಾರನಾಗಿದ್ದಾನೆಂಬ ಅರ್ಥದಲ್ಲಿ ಮಾತ್ರ ಪ್ರಯೋಗಿಸಲ್ಪಡುವವು. ಪರಮಾತ್ಮನಿಗೆ ಆಕೃತಿಯು ಇಲ್ಲ. ಎಂಬುದನ್ನು ಹೇಳುವದೇ ಈ ಶಬ್ದಗಳನ್ನು ವಚನಕಾರರು ಉಪಯೋಗಿಸುವದರ ಮುಖ್ಯ ಉದ್ದೇಶವಾಗಿರುತ್ತದೆ.

ಮಾಯೆ :— ಮಾಯೆ ಈ ಶಬ್ದವು ವೀರಶೈವ ಗ್ರಂಥಗಳಲ್ಲಿ ಮೇಲಿಂದ ಮೇಲೆ ಬರುತ್ತದೆ. ಆದರೆ ಈ ಶಬ್ದದ ಮೂಲಕ ವೀರಶೈವರು ಶಂಕರಾಚಾರ್ಯನ ಅದ್ವೈತ ಮಾರ್ಗವನ್ನು ಒಪ್ಪಿರುವರೋ ಹೇಗೆ ಎಂಬ ಸಂಶಯವು ಬರಬಹುದಾಗಿದೆ. ಆದರೆ ವೀರಶೈವರು ಶಂಕರಾಚಾರ್ಯನ ಮಾಯಾ ವಾದವನ್ನು ಒಪ್ಪಿರುವದಿಲ್ಲ. ಅವರು ಅವನಂತೆ ಜಗತ್ತು ಸುಳ್ಳೆಂದು ಭಾವಿಸಿಲ್ಲ. ವೀರಶೈವ ಗ್ರಂಥಗಳಲ್ಲಿ ಮಾಯೆ ಇದರ ಅರ್ಥವು ದುಷ್ಕೃತ್ಯಗಳಿಗೆ ಎಳೆಸತಕ್ಕ ಒಂದು ಶಕ್ತಿಯು ಎಂದು ಮಾತ್ರ ಇರುತ್ತದೆ. ಹಾಗೂ ಜಗತ್ತು ಪ್ರಾದುರ್ಭಾವವಾಗುವಲ್ಲಿ ಈ ಮಾಯಾ

# ಅನುಬಂಧ ೫.

## ಕರಣಪಸಿಗೆ.

ಕರಣಪಸಿಗೆಯು ವೀರಶೈವರ ಶಾರೀರಿಕ ಮತ್ತು ಮಾನಸಿಕ ಶಾಸ್ತ್ರವೆಂದು ಹೇಳಬಹುದು. ಇದು ಆಧುನಿಕ ಪಾಶ್ಚಿಮಾತ್ಯ ತತ್ತ್ವಶಾಸ್ತ್ರಿಗಳ ವಿಚಾರಗಳಿಂದ ತೀರ ಭಿನ್ನವಾಗಿ ತೋರಬಹುದು. ಆದರೆ ಇವರ ಮುಖ್ಯ ತತ್ತ್ವಗಳು ಸಾಂಖ್ಯಶಾಸ್ತ್ರದ ಮೇಲೆ ಅವಲಂಬಿಸಿರುತ್ತವೆ. ಶರೀರದ ವ್ಯಾಪಾರಗಳು ಗೋಚರವಾದದ್ದರ ಮೇಲೆ ಅವರ ತತ್ತ್ವಗಳು ನಿಶ್ಚಿತವಾದಷ್ಟಿರುತ್ತವೆ. ಪಂಚೀಕರಣ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟ ವಿಷಯಗಳಿಗೆ ಕರಣಪಸಿಗೆಯು ಸಂಬಂಧಪಡುತ್ತದೆ. ಕರಣಪಸಿಗೆಯ ಮೇಲೆ ಷಟ್‌ಸ್ಥಲದ ವಿಭಾಗಗಳು ಅವಲಂಬಿಸಿರುತ್ತವೆ. ಆದ್ದರಿಂದ ಷಟ್‌ಸ್ಥಲದಲ್ಲಿ ಈ ವಿಷಯವು ಬಹು ಮಹತ್ವದ್ದಾಗಿದೆ ಈ ಗ್ರಂಥದಲ್ಲಿ ನಾವು ಈ ವಿಷಯಕ್ಕೆ ಸಂಬಂಧಪಟ್ಟ ಮುಖ್ಯ ಭಾಗಗಳನ್ನು ಮಾತ್ರ ನಾವು ಆಯ್ದು ಅವುಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಿದ್ದೇವೆ. ಈ ವಿಷಯವನ್ನು ಹೆಚ್ಚಾಗಿ ತಿಳಿಯಬೇಕೆನ್ನುವವರು ವಿಸ್ತೃತಗ್ರಂಥಗಳನ್ನು ಅವಲೋಕಿಸಬೇಕು.

# ಅನುಬಂಧ ೭.

## ಸಕೀಲಗಳು.

ವೀರಶೈವರ ಷಟ್ಸ್ಥಲದಲ್ಲಿ ಬರುವ ವಿಷಯಗಳನ್ನು, ಅವುಗಳ ಉಪಭಾಗಗಳನ್ನು ನೋಡಿದರೆ ಅವುಗಳಲ್ಲಿ ಅಸಂಖ್ಯ ಪಾರಿಭಾಷಿಕ ಶಬ್ದಗಳು ಬರುವದು ಕಂಡುಬರುತ್ತದೆ. ಇಷ್ಟೇ ಅಲ್ಲ ಒಂದೇ ಶಬ್ದದ ಅರ್ಥವು ಬೇರೆ ಬೇರೆ ಸ್ಥಲಗಳಲ್ಲಿ ಬೇರೆ ಬೇರೆಯಾಗಿರುವದೂ ತೋರಿ ಬರುತ್ತದೆ. ಉದಾ:— ಲಿಂಗ, ಸಾದಾಖ್ಯ, ಅಂಗ, ಶಿವಲಿಂಗ, ಪ್ರಸಾದ ಲಿಂಗ ಮುಂತಾದ ಅನೇಕ ಶಬ್ದಗಳು ಅನೇಕರೀತಿಯಾಗಿ ಬೇರೆ ಬೇರೆ ಸ್ಥಲಗಳಲ್ಲಿ ಹೇಳಲ್ಪಟ್ಟಿವೆ. ಈ ಗೊಂದಲವನ್ನು ದೂರಮಾಡುವ ಉದ್ದೇಶ್ಯವಾಗಿ ವಚನಕಾರರು ಸಕೀಲಗಳನ್ನು ನಿರ್ಮಿಸಿದ್ದಾರೆ. ಈ ಸಕೀಲಗಳ ಮೂಲಕ ಯಾವ ಶಬ್ದವು ಅಥವಾ ವಿಷಯವು ಯಾವುದಕ್ಕೆ ಸಂಬಂಧಪಡುತ್ತದೆ, ಅದರ ಭಾವವೇನು, ಎಂಬುದನ್ನು ಸುಲಭವಾಗಿ ಗೊತ್ತುಮಾಡಿಕೊಳ್ಳಬಹುದು. ಕೆಲವು ಸಕೀಲಗಳು ವೀರಶೈವ ಸಿದ್ಧಾಂತವನ್ನು ವಿವರಪಡಿಸುವ ಉದ್ದೇಶ್ಯವಾಗಿ ಮತ್ತು ಬೇರೆ ಕೆಲವು ಆಚಾರ ವಿಷಯಗಳ ಸಂಬಂಧವನ್ನು ತೋರಿಸುವದಕ್ಕಾಗಿ ಮಾಡಲ್ಪಟ್ಟಿರುತ್ತವೆ. ಈ ಸಕೀಲಗಳಮೂಲಕ "ಅರ್ಥ, ಅನ್ವಯ, ಆಕಾಂಕ್ಷೆ, ಸ್ವರೂಪಾರ್ಥ, ಸಂಬಂಧಾರ್ಥ, ನಿಕ್ಷಯಾರ್ಥಗಳಿಂದ ಪಾಲಿಕ್ಕೆ ಮೇಳವಿಯೋಗವಿದುಳ್ಳ ತನ್ನ ಚಿದಂಗ ಸ್ವರೂಪರಾದ ಮರ್ತ್ಯಲೋಕದ ಮಹಾಜ್ಞಾನಿ ಶಿವಶರಣಗಣಂಗಳು ಅರಿದು ಅನುಭವಿಸಿ ಸುಖಿಗಳಾಗುತಿಹರು" ಎಂದು ಒಬ್ಬ ವಚನಕಾರನು ಹೇಳುತ್ತಾನೆ. ಇವು ಷಡ್ವಿಧಸಕೀಲ, ಮೂವತ್ತಾರು ಸಕೀಲ ನಾಲ್ವತ್ತೆಂಟು ಸಕೀಲ, ಐವತ್ತಾರು ಸಕೀಲ, ಅರುವತ್ತಾರು ಸಕೀಲ, ತೊಂಬತ್ತಾರು ಸಕೀಲ, ನೂರೆಂಟು ಸಕೀಲ, ಇನ್ನೂರುಹದಿನಾರು ಸಕೀಲ, ಹೀಗೆ ಇರುತ್ತವೆ. ನಾವು ಈ ಗ್ರಂಥದಲ್ಲಿ ಈ ಎಲ್ಲವುಗಳನ್ನು ಬರೆಯದೆ ಅಷ್ಟವಿಧ ಸಕೀಲ, ನೂರೆಂಟು ಸಕೀಲ ಮತ್ತು ಇನ್ನೂರುಹದಿನಾರು ಸಕೀಲ ಇವುಗಳನ್ನು ಮಾತ್ರ ಬರೆದಿದ್ದೇವೆ. ಅವುಗಳ ಸಹಾಯದಿಂದ ಈ ಗ್ರಂಥದಲ್ಲಿ ಬರುವ ಅನೇಕ ಶಬ್ದಗಳ ಸಂಬಂಧವನ್ನು ಅರಿಯಬಹುದಾಗಿದೆ. ಅಷ್ಟವಿಧ ಸಕೀಲಗಳು

ಹೆಚ್ಚಾಗಿ ಬಹಿರಂಗಕ್ಕೆ ಸಂಬಂಧಪಡುತ್ತವೆ. ನೂರೆಂಟು ಸಕೀಲಗಳು ಅಂತರಂಗಕ್ಕೆ ಸಂಬಂಧಪಡುತ್ತವೆ. ಇನ್ನೂರುಹದಿನಾರು ಸಕೀಲಗಳು ಎಲ್ಲಕ್ಕು ಹೆಚ್ಚಿಗೆ ಸೂಕ್ಷ್ಮವೂ ವ್ಯಾಪಕವೂ ಇರುತ್ತವೆ. ಇವೆಲ್ಲವು ಆಯಾ ವಿಷಯಗಳ ಸ್ವರೂಪನ್ನು ತಿಳಿಯಲಿಕ್ಕೆ ಬಹು ಸಹಾಯಕಾರಿಗಳಾಗಿವೆ. ಆದರೆ ಕೆಲವು ಸಕೀಲಗಳು ಕೇವಲ ಆಚಾರಕ್ಕೆ ಸಂಬಂಧಪಟ್ಟಿರುತ್ತವೆ. ಅವುಗಳನ್ನು ನಾವು ಇಲ್ಲಿ ವಿವರಿಸದೆ ವಚನಶಾಸ್ತ್ರಸಾರ ೩ನೇ ಭಾಗದಲ್ಲಿ ವಿವರಿಸುವೆವು.



# ಅನುಬಂಧ ೯.

## ಏಕೋತ್ತರ ಶತಸ್ಥಲದ ವಿಭಾಗಗಳು.

ಈ ಸ್ಥಲಗಳಲ್ಲಿ ೪೪ ಅಂಗಸ್ಥಲಗಳು ೫೭ ಲಿಂಗಸ್ಥಲಗಳು ಇರು ತ್ತವೆ. ಜಕ್ಕಣಾರ್ಯನು ತನ್ನ ಏಕೋತ್ತರದಲ್ಲಿ ೪೪ ಅಂಗಸ್ಥಲಗಳನ್ನು ಕ್ರಮವಾಗಿ ವಿವರಿಸುತ್ತ ಹೋಗಿ ಮುಂದೆ ೫೭ ಲಿಂಗಸ್ಥಲಗಳನ್ನು ವಿವ ರಿಸುತ್ತಾನೆ. ಆದರೆ ಬೇರೆ ಕೆಲವು ಗ್ರಂಥಕಾರರು ಅಂಗಸ್ಥಲದಲ್ಲಿ ಮೊದಲನೆಯದಾದ ಭಕ್ತಸ್ಥಲ ಮತ್ತು ಅದಕ್ಕೆ ಸಂಬಂಧಿಸಿದ ಆಚಾರ ಲಿಂಗಸ್ಥಲ ಇವುಗಳ ಭಾಗಗಳನ್ನು ಮೊದಲು ವಿವರಿಸಿ ಮುಂದೆ ಒಂದೇ ಒಂದೇ ಸ್ಥಲಗಳ ಅಂಗ ಲಿಂಗ ಸ್ಥಲಗಳನ್ನು ವಿವರಿಸುತ್ತ ಹೋಗುವರು. ಹೀಗೆ ಭಿನ್ನವಾಗಿ ತೋರಿಬಂದರೂ ಇದೇನು ಮಹತ್ವದ ವ್ಯತ್ಯಾಸವಲ್ಲ. ಯಾಕೆಂದರೆ ಹಿರಿಯರು ನೂರೊಂದು ಸ್ಥಲಗಳ ಆಚರಣೆಗಳನ್ನೆಲ್ಲ ಒಕ್ಕೊಟ್ಟಿಗೆ ತಕ್ಕದ್ದಾಗಿದೆ. ಅವೆಲ್ಲವೂ ಅವನಿಗೆ ಏಕಕಾಲದಲ್ಲಿ ಅನ್ವಯಿ ಸಬೇಕು. ಮೊದಲು ಮಾಡತಕ್ಕ ಆಚಾರಗಳು ಮತ್ತು ಅವುಗಳ ತರು ವಾಯ ಮಾಡತಕ್ಕ ಆಚಾರಗಳು ಹೀಗೆ ಭೇದಭಾವವು ಷಟ್‌ಸ್ಥಲಾ ಚರಣೆಯಲ್ಲಿ ಇಲ್ಲ. ನೂರೊಂದು ಸ್ಥಲದ ಎಲ್ಲ ಆಚಾರಗಳೂ ಎಲ್ಲ ಸ್ಥಲಗಳಲ್ಲಿಯೂ ಅನ್ವಯಿಸುತ್ತವೆ. ಇದರಿಂದ ಅವನ ಎಲ್ಲ ಗುಣಗಳೂ ಶಕ್ತಿಗಳೂ ಕ್ರಿಯೆಗಳೂ ಸರಿಯಾಗಿ ಒಗ್ಗಟ್ಟಾಗಿ ಪ್ರಗತಿ ಯನ್ನು ಹೊಂದುತ್ತ ಹೋಗುತ್ತವೆ.

ನೂರೊಂದು ಸ್ಥಲಗಳ ವಿಚಾರಗಳು ಒಂದೇ ಇದ್ದರೂ ಅವುಗ ಳನ್ನು ಬೇರೆ ಬೇರೆ ಗ್ರಂಥಕಾರರು ಅನೇಕ ರೀತಿಯಿಂದ ನಿರೂಪಿಸಿ ದ್ದಾರೆ. ಆದರೆ ಲಿಂಗಸ್ಥಲಗಳಲ್ಲಿ ಒಂದಾದ ಜಂಗಮ ಲಿಂಗಸ್ಥಲದಲ್ಲಿ ಮಾತ್ರ ಭಿನ್ನತೆಯು ಕಂಡುಬರುತ್ತದೆ. ಇದರಲ್ಲಿ ಒಂಭತ್ತು ಸ್ಥಲಗ ಳನ್ನು ಮಾತ್ರ ವಿವರಿಸಿ, ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ ಇವುಗಳನ್ನು ಮುಂದಿನದಾದ ಪ್ರಸಾದಲಿಂಗಸ್ಥಲದಲ್ಲಿ ಕೆಲವು ಗ್ರಂಥಕಾರರು ಸೇರಿಸಿರುವರು. ಬೇರೆ ಕೆಲವರು ಇವುಗಳನ್ನು ಜಂಗಮ ಲಿಂಗದಲ್ಲಿ ಸೇರಿಸಿರುವರು. ನಾವು ವಿಚಾರದಿಂದ ನೋಡಿ ದರೆ ಇವು ಜಂಗಮ ಲಿಂಗಕ್ಕೆ ಸಂಬಂಧಪಡುವವಾದುದರಿಂದ ನಾವು ಅವ

ನ್ನು ಜಂಗಮ ಲಿಂಗಸ್ಥಲದಲ್ಲಿಯೇ ಸೇರಿಸಿದ್ದೇವೆ. ಚನ್ನಬಸವೇಶ್ವರ ವಚನವು ಇದನ್ನು ದೃಢಪಡಿಸುತ್ತದೆ. (ಪುಟ ೪೩೫ ನೋಡಿರಿ.)

ಏಕೋತ್ತರದ ಸ್ಥಲಗಳಲ್ಲಿ ವಿವರಿಸಿದ ಆಚರಣೆಗಳಂತೆ ನಡೆದು ಮನುಷ್ಯನು ಷಟ್‌ಸ್ಥಲಗಳನ್ನು ಸಾಧಿಸಬೇಕು. ಏಕೋತ್ತರದಲ್ಲಿ ಮನುಷ್ಯನು ಹೇಗೆ ಕ್ರಿಯೆಗಳನ್ನು ಮಾಡಬೇಕೆಂಬದು ನಿಶ್ಚಿತಸ್ವರೂಪದಿಂದ ಹೇಳಲ್ಪಡುತ್ತವೆ. ಇವು ಕೇವಲ ಬಾಹ್ಯ ಕ್ರಿಯಾ ಕರ್ಮಗಳಲ್ಲ. ಅಂದರೆ ಆಚಾರಗಳಾಗಲಿ ಇಲ್ಲವೆ ಉಪಾಸನೆಗಳಾಗಲಿ ಅಲ್ಲ. ಇವುಗಳಲ್ಲಿ ಆಚಾರಗಳ ಮರ್ಮಗಳು ಹೇಳಲ್ಪಡುತ್ತವೆ. ಏಕೋತ್ತರವನ್ನು ತಿಳಿದಾಗಲೇ ಮನುಷ್ಯನಿಗೆ ತನ್ನ ಕ್ರಿಯೆಗಳನ್ನು ಹೇಗೆ ಮಾಡಬೇಕೆಂಬುದು ತಿಳಿಯುತ್ತದೆ. ಹಾಗೆ ತಿಳಿದು ಆಚರಿಸಿದಲ್ಲಿ ಷಟ್‌ಸ್ಥಲಗಳು ಅವನಲ್ಲಿ ಅಳವಡುವವು. ಆದ್ದರಿಂದ ಏಕೋತ್ತರ ಶತಸ್ಥಲಗಳಿಗೆ ವೀರಶೈವ ಧರ್ಮದಲ್ಲಿ ಬಹು ಉಚ್ಚಸ್ಥಾನವು ಉಂಟಾಗಿದೆ.

ಏಕೋತ್ತರ ಶತಸ್ಥಲದಲ್ಲಿ ಬರುವ ವಿಭಾಗಗಳಲ್ಲಿ ಅನೇಕ ತರದ ವಚನಗಳು ಹೇಳಲ್ಪಡುವದುಂಟು. ಅವುಗಳನ್ನು ಆಯಾ ವಚನಕಾರರು ಸೂಚನಾತ್ಮಕವಾಗಿ, ಎಷ್ಟೋ ಸಾರೆ ಗೂಢವಾಗಿ, ಹೇಳುವರು. ಆದರೆ ಭಕ್ತಾದಿಗಳು ಅವುಗಳ ಮರ್ಮವನ್ನು ತಿಳಿದುಕೊಂಡು ತಮ್ಮ ಆಚಾರಾದಿಗಳನ್ನು ಸರಿಪಡಿಸಿಕೊಳ್ಳಬೇಕು. ಷಟ್‌ಸ್ಥಲಶಾಸ್ತ್ರದಲ್ಲಿ ಕಠೋರತರವಾದ ಅಲುಗಾಡದಂಥ ನಿರ್ಬಂಧಗಳನ್ನು ವಚನಕಾರರು ಹಾಕದೆ ಆವ ರೀತಿಯಿಂದ ಕ್ರಿಯೆಗಳನ್ನು ಮಾಡಬೇಕೆಂಬುವದನ್ನು ಮಾತ್ರ ಸೂಕ್ಷ್ಮವಾಗಿ ನಿರ್ದೇಶಿಸಿ ಅವುಗಳಂತೆ ನಡೆಯುವದಕ್ಕೋಸ್ಕರ ತಮ್ಮ ತಮ್ಮ ಮಾರ್ಗಗಳನ್ನು ಕಲ್ಪಿಸಿಕೊಳ್ಳಲು ಭಕ್ತರಿಗೆ ಸ್ವತಂತ್ರತೆಯನ್ನು ಕೊಟ್ಟಿರುತ್ತಾರೆ. ಷಟ್‌ಸ್ಥಲದಲ್ಲಿಯೂ ಏಕೋತ್ತರ ಶತಸ್ಥಲದಲ್ಲಿಯೂ ಅಷ್ಟಾವರಣ ಮೊದಲಾದ ಉಪಾಸನಾ ಕಾರ್ಯಗಳಲ್ಲಿಯೂ ಕ್ರಿಯೆಗಳು ಅತ್ಯಲ್ಪವಾಗಿದ್ದರೂ ಅವುಗಳು ಭಾವಗರ್ಭಿತವಾಗಿವೆ. ಇವುಗಳನ್ನು ಮೊದಲು ತಿಳಿದುಕೊಂಡು ಭಕ್ತರು ತಮ್ಮ ಆಚಾರಗಳನ್ನು ಮತ್ತು ಕ್ರಿಯೆಗಳನು ಸರಿಪಡಿಸಿಕೊಳ್ಳಬೇಕೆಂದು ಷಟ್‌ಸ್ಥಲ ಶಾಸ್ತ್ರಕಾರರ ಉದ್ದೇಶವಾಗಿರುತ್ತದೆ.

---

# ಅನುಬಂಧ ೧೦.

## ಶಿವಯೋಗ.

ವೀರಶೈವರು ಯೋಗಶಾಸ್ತ್ರದ ತತ್ವಗಳನ್ನು ಅಂಗೀಕರಿಸಿ ಅವುಗಳನ್ನು ಅವರು ತಮ್ಮ ಷಟ್‌ಸ್ಥಲಾಚರಣೆಯಲ್ಲಿ ಸೇರಿಸಿರುವರು. ಆದ್ದರಿಂದ ಒಟ್ಟಾಗಿ ಈ ಆಚರಣೆಗೆ ಶಿವಾನುಭವ ಅಥವಾ ಶಿವಯೋಗ ಎಂದು ಕರೆಯಬಹುದು. ಆದರೆ ಇದರಲ್ಲಿ ಅವರು ಹಠಯೋಗದ ವಿಚಾರಗಳನ್ನು ಬಿಟ್ಟು ತಮ್ಮ ಲಿಂಗಾಂಗ ಸಾಮರಸ್ಯದ ದೃಷ್ಟಿಯಿಂದ ತಮ್ಮ ವಿಶೇಷ ತರದ ಯೋಗವನ್ನು ನಿರೂಪಿಸಿದ್ದಾರೆ. ಈ ಗ್ರಂಥದ ೧೭೭ ನೇ ಪುಟದಲ್ಲಿ ಕಾಣಿಸಿದ ಚಕ್ರಗಳ ವ್ಯಾಖ್ಯೆಗಳನ್ನು ನೋಡಿದರೆ ಈ ಸಂಗತಿಯು ಗೊತ್ತಾಗದೆ ಇರದು. ಇದರಂತೆಯೇ ವರ್ಣಗಳು ಪುಟ ೧೭೭, ಅಧಿದೇವತೆಗಳು ಪುಟ ೧೫೦, ಆಕೃತಿಗಳು ಪುಟ ೧೯೧, ಷಟ್‌ಚಕ್ರಗಳು ಪುಟ ೧೩೫, ಇವುಗಳನ್ನು ನೋಡಬೇಕು. ವೀರಶೈವರು ಸಿದ್ಧಿಗಳನ್ನು ನಿರಾಕರಿಸಿ ಕಾಯಕ, ಷಟ್‌ಸ್ಥಲಾಚರಣೆ, ಶುದ್ಧವಾದ ಸ್ಥಿರವಾದ ಏಕಾಗ್ರಮನಸ್ಸು, ಇವುಗಳಿಗೆ ಮಹತ್ವಕೊಟ್ಟಿದ್ದಾರೆ. ಇವುಗಳಿಂದ ಮನುಷ್ಯನಲ್ಲಿ ಲಿಂಗಕಳೆಗಳು ಆಯಾಸ್ಥಾನಗಳಲ್ಲಿ ಉದ್ಭವಿಸುತ್ತವೆ. ಅವರಿಗೆ ಕಠೋರವಾದ ಯೋಗಮಾರ್ಗಾಚಾರವು ಅನಾವಶ್ಯಕವು. ಈ ತರದ ಯೋಗಮಾರ್ಗದ ನಿರಾಕರಣೆಯು ಪ್ರಮುಖರ ಕಾಲದಲ್ಲಿ ರಚಿತವಾದ ಬಸವಾದಿ ವಚನಕಾರರ ಉಕ್ತಿಗಳಲ್ಲಿ ತೋರಿಬರುತ್ತವೆ. ಆದರೆ ಇತ್ತೀಚೆಗೆ ರಚಿಸಲ್ಪಟ್ಟ ವಚನಗ್ರಂಥಗಳಲ್ಲಿ ಹಠಯೋಗದ ವಿಚಾರಗಳು ಹೆಚ್ಚಾಗಿ ತೋರಿಬರುತ್ತವೆ. ಆದರೆ ಈ ಬಗೆಯ ಆಚರಣೆಗಳು ಪುರಾತನ ವಚನಕಾರರ ಪದ್ಧತಿಗೆ ಮತ್ತು ವೀರಶೈವಕ್ಕೆ ಅನುಸಾರವಾದುವಲ್ಲ.

ಶಿವಯೋಗದಲ್ಲಿ ಅಷ್ಟಾವರಣಗಳ ರೀತಿಗಳು, ಲಿಂಗಪೂಜೆಯ ಕ್ರಮಗಳು, ಮಂತ್ರಗಳ ಜ್ಞಾನವು, ಈ ಅನೇಕ ವಿಷಯಗಳು ಬರುತ್ತವೆ. ಅವುಗಳು ವಚನಶಾಸ್ತ್ರಸಾರ ೩ನೇ ಭಾಗದಲ್ಲಿ ವಿವರಿಸಲ್ಪಡುವವು.

# ಅನುಬಂಧ ೧೧.

## ಉದ್ಧಾರಣೆಗಳು.

ವೀರಶೈವ ಗ್ರಂಥಕಾರರು ಷಟ್‌ಸ್ಥಲದ ಮಾರ್ಗವನ್ನು ಹೇಗೆ ಸ್ಪಷ್ಟವಾಗಿ ತೋರಿಸುವ ಉದ್ದಿಶ್ಯವಾಗಿ ಉದ್ಧಾರಣೆಗಳನ್ನು ನಿರ್ಮಿಸಿರುವರು. ಇವು ಆಕೃತಿಗಳು ಇದ್ದು, ವಿಷಯಗಳಿಗನುಸಾರವಾಗಿ ಅವುಗಳಲ್ಲಿ ಪ್ರಣವಗಳನ್ನು ಷಟ್‌ಸ್ಥಲ ಸಿದ್ಧಾಂತ ಬೋಧಕ ಶಬ್ದಗಳನ್ನು ಬರೆದು ವಿಷಯಗಳ ಸಂಬಂಧವನ್ನು ತೋರಿಸುತ್ತಾರೆ. ಗ್ರಂಥವಿಸ್ತಾರ ಭಯಕ್ಕಾಗಿ ಅವುಗಳನ್ನೆಲ್ಲ ನಾವು ಇಲ್ಲಿ ಉದಹರಿಸಿಲ್ಲ. ಈ ಉದ್ಧಾರಣೆಗಳು ೩೭ ಇರುತ್ತವೆ. ಇವುಗಳಲ್ಲಿ ಪ್ರಣವೋದ್ಧಾರಣೆ, ಬಾಣಲಿಂಗೋದ್ಧಾರಣೆ, ಷಡ್ಬ್ರಹ್ಮೋದ್ಧಾರಣೆ, ಪಂಚಭೂತಲಿಂಗೋದ್ಧಾರಣೆ, ನವಚಕ್ರೋದ್ಧಾರಣೆ, ತತ್ತ್ವಪಂಚೀಕರಣೋದ್ಧಾರಣೆ, ಮಂತ್ರಪಂಚೀಕರಣೋದ್ಧಾರಣೆ, ಇವು ಈಗಿನ ಗ್ರಂಥದ ವಿಷಯಗಳಿಗೆ ಸಂಬಂಧಪಡುತ್ತವೆ. ಅವುಗಳಿಗೆ ವಾಕ್ಯಗಳೂ ಇರುತ್ತವೆ. ಈ ವಾಕ್ಯಗಳಲ್ಲಿ ಕೆಲವು ಈ ಗ್ರಂಥದಲ್ಲಿ ಉದಹರಿಸಲ್ಪಟ್ಟಿವೆ. ಆದರೆ ಅವುಗಳ ಬಗ್ಗೆ ಮೂಲ ಗ್ರಂಥವನ್ನೇ ನೋಡಬೇಕು.

೩೭ ಉದ್ಧಾರಣೆಗಳು ಮುಖ್ಯವಾದವು. ಅವುಗಳಲ್ಲದೆ ಬೇರೆ ಅವಾಂತರ ಉದ್ಧಾರಣೆಗಳೂ ಉಂಟು. ಸಿದ್ಧಿಗಳನ್ನು ಬಯಸುವ ಭಾವಿಕ ಜನರು ಈ ಉದ್ಧಾರಣೆಗಳನ್ನು ಯಂತ್ರ ತಂತ್ರಗಳಂತೆ ಉಪಯೋಗಿಸುವದುಂಟು. ಆದರೆ ವಚನಕಾರರು ಹೀಗೆ ಎಂದೂ ಉದ್ದೇಶವನ್ನಿಟ್ಟುಕೊಂಡಿಲ್ಲ. ಷಟ್‌ಸ್ಥಲದ ತಾತ್ವಿಕ ಭಾವಾರ್ಥಗಳು ಜನ್ಯ ಜನರಿಗೆ ತಿಳಿಯಬೇಕೆಂದು ಅವರು ಅವುಗಳನ್ನು ಮಾಡಿರುವರು. ಉದ್ಧಾರಣೆಗಳಲ್ಲಿ ದ್ರವ್ಯಗಳ ಚಿತ್ರಗಳಂತೆ ಸುಂದರವಾದ ಬಣ್ಣಗಳನ್ನು ಬೇಸಿ ಬರೆಯುವ ಸಂಪ್ರದಾಯವಿತ್ತು. ಇವುಗಳು ಅಲ್ಲಲ್ಲಿ ಈಗಲೂ ಉಪಲಬ್ಧವಿರುತ್ತವೆ. ಆದರೆ ಭಾವಿಕ ಜನರು ಅವುಗಳನ್ನು ಬಹಳ ಗುಪ್ತವಾಗಿ ಇಟ್ಟಿರುವದು ಕಂಡುಬರುತ್ತದೆ.

———

ಗ್ರಂಥಗಳನ್ನು ನೋಡಿದಲ್ಲಿ ಅವುಗಲ್ಲಿ ಹೇಳಲ್ಪಡುವ ಸಿದ್ಧಾಂತಗಳು ಆಗಮ ಗ್ರಂಥಗಳಲ್ಲಿಯ ವಿಷಯಗಳನ್ನು ಕೆಲಮಟ್ಟಿಗೆ ಸಮರ್ಥಿಸಿದರೂ ಅವು ಪೂರ್ಣವಾಗಿ ವೀರಶೈವಪರ ಭಾಷ್ಯಗಳೆಂದು ಹೇಳಲಿಕ್ಕೆ ಬರಲಾರದು. ಅವುಗಳಲ್ಲಿ ಹೇಳಲ್ಪಟ್ಟ ಅನೇಕ ಆಚಾರಗಳು ಷಟ್‌ಸ್ಥಲಾಚರಣೆಗಳಿಗೆ ಹೊಂದುವದಿಲ್ಲ. ವಚನಕಾರರೂ ತಮ್ಮ ಗ್ರಂಥಗಳಲ್ಲಿ ಅಥವಾ ಉಕ್ತಿಗಳಲ್ಲಿ ಭಾಷ್ಯಗಳನ್ನು ತಮ್ಮ ಆಧಾರಕ್ಕೋಸ್ಕರ ತೆಗೆದುಕೊಂಡದ್ದರ ಉಲ್ಲೇಖಗಳು ಕಂಡುಬರುವದಿಲ್ಲ. ವೀರಶೈವ ತತ್ವಜ್ಞಾನಿಗಳು ದ್ವೈತಾದ್ವೈತವ ಚರ್ಚೆಯಲ್ಲಿ ಹೆಚ್ಚಾಗಿ ಬಿದ್ದಿಲ್ಲ. ಅವರು ಇಂಥ ತಾತ್ವಿಕ ವಿವೇಚನೆಗಳಿಗಿಂತ, ಮನಸ್ಸು, ಕ್ರಿಯೆ, ಆಚರಣೆ, ಶಿವಯೋಗ ಇಂಥ ವಿಷಯಗಳ ಬಗ್ಗೆ ಹೆಚ್ಚಾಗಿ ನಿರೂಪಿಸುವದುಂಟು. ಇವುಗಳನ್ನು ವಿವರಿಸುವ ಗ್ರಂಥಗಳು ಅವರಲ್ಲಿ ಅನೇಕವಾಗಿರುತ್ತವೆ. ಅವರ ಪದ್ಯ ಗ್ರಂಥಗಳಲ್ಲಿಯೂ ಸಂಸ್ಕೃತ ಗ್ರಂಥಗಳಲ್ಲಿಯೂ ಇಂಥ ವಿಷಯಗಳೇ ಹೆಚ್ಚಾಗಿ ಬರುತ್ತವೆ. ಅವರು ಮನುಷ್ಯನ ಧ್ಯೇಯವು ಅದ್ವೈತವೆಂದು ಮಾತ್ರ ಹೇಳಿ, ಅದನ್ನು ಸಾಧಿಸುವ ರೀತಿಗಳನ್ನು ಅನೇಕ ಬಗೆಯಾಗಿ ಹೇಳುತ್ತಾರೆ. ಇದು ವೀರಶೈವ ಧರ್ಮ ಗ್ರಂಥಕಾರರ ವಿಶಿಷ್ಟತೆಯಾಗಿದೆ.

ಒಟ್ಟಿಗೆ ವೀರಶೈವ ಧರ್ಮ ಗ್ರಂಥಕಾರರು ಮೇಲೆ ಹೇಳಿದ ಯಾವ ಗ್ರಂಥವನ್ನೂ ಸಂಪೂರ್ಣವಾಗಿ ತಮ್ಮ ಆಧಾರಗಳೆಂದು ತಿಳಿದಿದ್ದು ಕಂಡುಬರುವದಿಲ್ಲ. ಆದರೆ ಅವರು ತಮ್ಮ ಷಟ್‌ಸ್ಥಲ ಸಿದ್ಧಾಂತಕ್ಕೆ ಅನುಕೂಲವಿರುವ ಅವುಗಳಲ್ಲಿಯ ವಿಷಯಗಳನ್ನು ತಮ್ಮ ಆಧಾರಕ್ಕಾಗಿ ಮಾತ್ರ ಆಗಿಂದಾಗ್ಗೆ ತೆಗೆದುಕೊಳ್ಳುತ್ತಿರುವದು ತೋರಿಬರುತ್ತದೆ.

## ಆಗಮಗಳು.

ಆಗಮಗಳಲ್ಲಿ ಹೇಳಲ್ಪಡುವ ವಿಷಯಗಳಿಗೂ ವೀರಶೈವ ಸಿದ್ಧಾಂತಕ್ಕೂ ಬಹಳ ಸಂಬಂಧವಿರುತ್ತದೆ. ಈ ಸಂಗತಿಯು ನಿರ್ವಿವಾದವಾಗಿದೆ. ಆಗಮ ಮಾರ್ಗಾನುಯಾಯಿಗಳಲ್ಲಿ ವೀರಶೈವ ಮತಸ್ಥರು ಎಣಿಸಲ್ಪಟ್ಟಿರುವರು. ಆದರೂ ಅವರು ಅವುಗಳಲ್ಲಿ ಕಾಣಿಸಿದ ವಿಷಯಗಳನ್ನೆಲ್ಲ ಅಂಧತೆಯಿಂದ ಸ್ವೀಕರಿಸಿರುವದಿಲ್ಲ. ಆಗಮಗಳನ್ನು ಅವರು ಹಿಂಬಾಲಿಸುವಾಗಲೂ ಕೂಡ, ಸಾರಾಸಾರಾ ವಿಚಾರಮಾಡಿ ತಮ್ಮ ಷಟ್‌ಸ್ಥಲ ಮಾರ್ಗಕ್ಕೆ ಹೊಂದಿಕೆಯಾಗಿರುವಂಥ ವಿಷಯಗಳನ್ನು ಮಾತ್ರ

ವರು ಸ್ವೀಕರಿಸುತ್ತಾರೆ. ಉಳಿದವುಗಳನ್ನು ಅವರು ಬಿಟ್ಟುಕೊಟ್ಟಿದ್ದಾರೆ. ಆಗಮಗಳು ವೀರಶೈವರಿಗೆ ಮಹತ್ವವಾದ ಗ್ರಂಥಗಳಿರುವದರಿಂದ ಅವುಗಳ ಬಗ್ಗೆ ಇಲ್ಲಿ ಸ್ವಲ್ಪ ವಿಸ್ತಾರವಾಗಿ ನಿರೂಪಿಸುವದು ವಶ್ಯವಿದೆ.

ಆಗಮ ಗ್ರಂಥಗಳಲ್ಲಿ ಶೈವ, ಶಾಕ್ತ, ವೈಷ್ಣವ ಎಂಬ ಮೂರು ಭಾಗಗಳಿವೆ. ಈ ಕಡೆಯ ಎರಡು ವಿಭಾಗಗಳು ವೀರಶೈವಕ್ಕೆ ಸಂಬಂಧಿಸಿದವಲ್ಲ. ಶಿವಾಗಮಗಳಲ್ಲಿಯೂ ಕೂಡ ಪಾಶುಪತ, ಲಕುಳ, ಸೋಮ, ಸಿದ್ಧಾಂತ ಎಂದು ಕೆಲವು ವಿಭಾಗಗಳಿರುತ್ತವೆ. ಈ ಶೈವಾಗಮಗಳು ಹಿಂದುಸ್ಥಾನದಲ್ಲಿ ಬಹು ಮಹತ್ವದ ಧಾರ್ಮಿಕ ಕ್ರಾಂತಿಯನ್ನು ಮಾಡಿದವು. ದಕ್ಷಿಣ ದೇಶದಲ್ಲಿ ಬೌದ್ಧ ಜೈನ ಮತಗಳು ಹೆಚ್ಚಿದಾಗ ಅವುಗಳ ವರ್ಚಸ್ಸನ್ನು ಇವು ಕಡಿಮೆ ಮಾಡಿರುವವು.

ಆಗಮಗಳು ಒಟ್ಟು ಇಪ್ಪತ್ತೆಂಟು ಇದ್ದು ಅವುಗಳಲ್ಲಿ ಹತ್ತು ಶಿವಾಗಮಗಳೂ ಹದಿನೆಂಟು ರುದ್ರಾಗಮಗಳೂ ಎಂದು ಹೇಳಲ್ಪಡುತ್ತವೆ. ಪ್ರತಿಯೊಂದು ಆಗಮಕ್ಕೆ ಅನೇಕ ಉಪಾಗಮಗಳೂ ಉಂಟು. ಈ ಯಾವತ್ತು ಗ್ರಂಥಗಳಲ್ಲಿರುವ ಉಕ್ತಿಗಳು ಲಕ್ಷ ಅಥವಾ ಕೋಟಿಗಟ್ಟಲೆ ಇರುತ್ತವೆಂದು ಹೇಳುತ್ತಾರೆ. ಇಷ್ಟು ಸಂಖ್ಯೆಯಿಂದ ಈಗ ಉಪಲಬ್ಧವಿರದಿದ್ದರೂ ಈ ವಾಙ್ಮಯವು ಬಹು ದೊಡ್ಡದಿರುತ್ತದೆಂಬುದು ನಿಸ್ಸಂದೇಹವಾದದ್ದು.

ಶಿವಾಗಮಗಳಲ್ಲಿ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ, ಜ್ಞಾನಪಾದ ಎಂದು ನಾಲ್ಕು ಮುಖ್ಯ ವಿಭಾಗಗಳು ಇರುತ್ತವೆ.

ಕ್ರಿಯಾಪಾದ:— ಇದರಲ್ಲಿ ಆಚಾರ್ಯರ ನಿತ್ಯ ಕ್ರಿಯೆಗಳೂ ದೇವಾಲಯಗಳನ್ನು ಕಟ್ಟುವ ಪದ್ಧತಿಗಳೂ ಮೂರ್ತಿಗಳ ರಚನೆಯೂ ಮೂರ್ತಿಗಳಲ್ಲಿರುವ ಭಾಗಗಳ ವಿವರಣೆಗಳೂ ಲಿಂಗಸ್ಥಾಪನೆಯೂ ಅಲ್ಲದೆ ನಗರರಚನೆಯೂ ಇಂಥ ವಿಷಯಗಳು ಹೇಳಲ್ಪಡುತ್ತವೆ. ಆದರೆ ಈ ವಿಷಯಗಳು ವೀರಶೈವರಿಗೆ ಸಂಬಂಧಪಟ್ಟವಿರುವದಿಲ್ಲ.

ಚರ್ಯಾಪಾದ:— ಇದರಲ್ಲಿ ಸ್ನಾನ ಅರ್ಚನಾದಿ ವಿಧಿಗಳು, ಅಗ್ನಿಕುಂಡದ ರಚನೆ, ಅಗ್ನಿ ಕಾರ್ಯಗಳು, ಹೋಮ ಹವನಾದಿಗಳು,

ಹೋಮದ ಕಾಲದಲ್ಲಿ ಉಪಯೋಗಿಸತಕ್ಕ ಶಿವ ಮಂತ್ರಗಳು, ದೇವಾಲಯಗಳಲ್ಲಿ ಜರಗಿಸತಕ್ಕ ನಿತ್ಯೋತ್ಸವಗಳು, ಮಹೋತ್ಸವಗಳು, ಇಂಥ ಅನೇಕ ವಿಷಯಗಳು ಬರುತ್ತವೆ. ಇಲ್ಲಿ ವರ್ಣಾಶ್ರಮ ಧರ್ಮಗಳ ವಿಚಾರಗಳೂ ಬರುತ್ತವೆ. ಅಲ್ಲದೆ ಷೋಡಶ ಸಂಸ್ಕಾರಗಳು, ಅಷ್ಟವಿಧ ವಿವಾಹಗಳು, ದಹನ ವಿಧಿಗಳು, ಸಮಾಧಿಯ ಕ್ರಿಯೆಗಳು, ಪಿತೃಯಜ್ಞಗಳು, ಪಿಂಡೀ ಕರಣವು, ದೀಕ್ಷಾ ವಿಧಿಗಳು ಈ ಮೊದಲಾದ ನಿತ್ಯ ನೈಮಿತ್ತಿಕಾಚಾರಗಳೂ ಹೇಳಲ್ಪಡುತ್ತವೆ ಇವುಗಳ ಮೇಲಿಂದ ಇಲ್ಲಿ ಪೂರ್ಣ ಶೈವ ಮತ್ತು ಬ್ರಾಹ್ಮಣ ಕರ್ಮಗಳ ಮಿಶ್ರಣವು ಇರುವದು ಸ್ಪಷ್ಟವಾಗಿದೆ. ಆದರೆ ವೀರಶೈವರು ಇಂಥ ಕರ್ಮಗಳನ್ನು ತ್ಯಜಿಸಿ ಷಟ್‌ಸ್ಥಲ, ಅಷ್ಟಾವರಣ ಶಿವಯೋಗ ಇವುಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಮಾತ್ರ ಸ್ವೀಕರಿಸಿದ್ದಾರೆ.

ಯೋಗಪಾದ:— ಇದರಲ್ಲಿ ಚಕ್ರಗಳ ವಿವರಣೆ, ಯಮ, ನಿಯಮ, ಮೊದಲಾದ ಅಷ್ಟಾಂಗ ಯೋಗವು ಹೇಳಲ್ಪಡುತ್ತದೆ. ವೀರಶೈವರು ಹಠಯೋಗದ ಸಾಧನೆಗಳನ್ನು ನಿರಾಕರಿಸಿರುವರು. ಆದರೆ ಯೋಗಮಾರ್ಗದಲ್ಲಿರುವ ಮಹತ್ವದ ತತ್ವಗಳನ್ನು ಮಾತ್ರ ಸ್ವೀಕರಿಸಿ ಅವುಗಳನ್ನು ತಮ್ಮ ಶಿವಯೋಗದಲ್ಲಿ ಸೇರಿಸಿಕೊಂಡಿರುವರು.

ಜ್ಞಾನಪಾದ:— ಈ ಪಾದದಲ್ಲಿ ಪತಿ, ಪಶು, ಪಾಶ ಇವುಗಳ ವಿವರಣೆಯು ಬರುತ್ತದೆ. ಪದಾರ್ಥಗಳು ಮತ್ತು ಶಕ್ತಿ ತತ್ವಗಳು ಇವುಗಳ ವಿವರಣೆಯೂ ಹೇಳಲ್ಪಡುತ್ತದೆ. ಇವುಗಳ ಪರಸ್ಪರ ಸಂಬಂಧ ಅಂದರೆ ಶಿವ ಶಕ್ತಿ, ಪತಿ ಪದಾರ್ಥ, ಪಶು ಪದಾರ್ಥ, ಪಾಶ ಪದಾರ್ಥ, ಈ ವಿಷಯಗಳ ವಿವೇಚನೆಯೂ ಬರುತ್ತದೆ. ಇವುಗಳೊಡನೆ ಮೂವತ್ತಾರು ತತ್ವಗಳ ವಿವೇಚನೆಯೂ ರುದ್ರಾಧ್ವ, ಮಂತ್ರಾಧ್ವ, ಅರುಣಾಧ್ವಗಳ ವಿವರಣೆಯೂ ಬರುತ್ತದೆ. ಮೃಗೇಂದ್ರ, ಮತ್ತು ಪೌಷ್ಕರಾಗಮಗಳು ೩೬ ತತ್ವಗಳಿಗೆ ಮಹತ್ವಕೊಡುತ್ತವೆ. ಸುಪ್ರಭೇದವು ಅಧ್ವಗಳ ವಿವೇಚನೆಗೆ ಮಹತ್ವ ಕೊಡುತ್ತದೆ ಮತ್ತು ೩೬ ತತ್ವಗಳು ಅಧ್ವಗಳ ಭಾಗಗಳೆಂದು ಇಲ್ಲಿ ಹೇಳಲ್ಪಡುತ್ತವೆ. ಕಾಮಿಕ ಮತ್ತು ಸುಪ್ರಭೇದಗಳು ಅದ್ವೈತವನ್ನು ಪ್ರತಿಪಾದಿಸುತ್ತವೆ. ಸರ್ವ ಜ್ಞಾನೋತ್ತರವಾದರೂ ಅದ್ವೈತವನ್ನು ಬೋಧಿಸುತ್ತದೆ. ಆದರೆ ಪೌಷ್ಕರಾಗಮವು

...ತಾದ್ವೈತನಾಗಿರುತ್ತವೆ. ಹೀಗೆ ಆಗಮಗಳಲ್ಲಿ ನಾನಾ ವಿಧವಾಗಿ
ತ್ವಗಳ ವಿವೇಚನೆಗಳೂ ವಿಚಾರಗಳೂ ಕಂಡುಬರುತ್ತವೆ. ಬಹುಶಃ
ಲ್ಲ ಆಗಮಗಳಲ್ಲಿ ಶಕ್ತಿಗಳ ಪ್ರತಿಪಾದನೆಯೂ ಕೆಲವುಗಳಲ್ಲಿ ನಾದಾ
ಗಳ ವಿವರಣೆಗಳೂ ಬಂದಿರುತ್ತವೆ.

ಕರ್ನಾಟಕ ದೇಶದಲ್ಲಿ ಈಚೆಗೆ ಪ್ರಕಟವಾಗಿರುವ ವಾತುಳ, ಪಾರ
ಮೇಶ್ವರ ಮತ್ತು ಸೂಕ್ಷ್ಮಾಗಮಗಳು ಸಹ ಒಂದೇ ವಿಧವಾಗಿಲ್ಲ.
ರಮೇಶ್ವರಾಗಮದಲ್ಲಿ ಬ್ರಾಹ್ಮಣ ಕರ್ಮಗಳು ಹೆಚ್ಚಾಗಿ ಸೇರಿರು
ವೆ. ಆದರೆ ಸೂಕ್ಷ್ಮಾಗಮದಲ್ಲಿ ವಚನಶಾಸ್ತ್ರದ ವಿಚಾರಗಳು ಪೂರ್ಣ
ವಾಗಿ ಬಂದಿರುತ್ತವೆ. ಕೆಲವು ಆಗಮಗಳಲ್ಲಿ ಅನೇಕ ವಿಧ ಮಂತ್ರಗಳ
ಮತ್ತು ಮುದ್ರೆಗಳ ವಿಚಾರಗಳು ಬಂದಿರುತ್ತವೆ. ಆದರೆ ಇವು ಶಾಕ್ತರ
ರೀತಿಯಂತೆ ಇವೆ.

ಈ ಎಲ್ಲ ಸಂಗತಿಗಳನ್ನು ನಾವು ನೋಡಿದಲ್ಲಿ ಶಿವಾಗಮಗಳು
ಅಸಂಖ್ಯವಾಗಿದ್ದು ಅವುಗಳ ವಿವೇಚನೆಯಲ್ಲಿ ಅನೇಕ ರೀತಿಯ ವಿಷ
ಯಗಳು ಬಂದಿರುವವಲ್ಲದೆ ಅವುಗಳಲ್ಲಿ ಭಿನ್ನಾಭಿಪ್ರಾಯಗಳೂ ಬಹಳ
ಇರುತ್ತವೆ. ಆದರೆ ವೀರಶೈವ ಧರ್ಮಕ್ಕೆ ಹೊಂದಿಕೆಯಾಗಿರುವ ಅಸಂಖ್ಯ
ವಿಷಯಗಳೂ ಕೂಡ ಇವುಗಳಲ್ಲಿ ಬಂದಿವೆ. ಇಂಥವುಗಳನ್ನು ಮಾತ್ರ ವೀರ
ಶೈವರು ತಮ್ಮ ಶಾಸ್ತ್ರದಲ್ಲಿ ತೆಗೆದುಕೊಂಡಿರುವರು. ಒಟ್ಟಿನಿಂದ ನೋಡಿದಲ್ಲಿ
ಶಿವಾಗಮಗಳಲ್ಲಿ ಹೇಳಿದ ಸಂಗತಿಗಳನ್ನು ವೀರಶೈವರು ಮಾನ್ಯವೆಂದು
ಅಂಧತೆಯಿಂದ ಸ್ವೀಕರಿಸಿರುವದಿಲ್ಲೆಂದು ಕಂಡುಬರುತ್ತದೆ.

ವಚನ ಗ್ರಂಥಗಳು:— ಮೇಲಿನ ವಿವರಣೆಗಳಿಂದ ವೀರಶೈವರಿಗೆ
ಅತ್ಯಂತ ಮಹತ್ವದ ಗ್ರಂಥಗಳೆಂದರೆ ವಚನ ಗ್ರಂಥಗಳೇ ಎಂದು ಹೇಳ
ಬೇಕಾಗುತ್ತದೆ. ವಚನಗಳು ಕೇವಲ ಶುದ್ಧ ವೀರಶೈವ ಮಾರ್ಗವನ್ನೇ
ಅನೇಕ ರೀತಿಯಿಂದ ಬೋಧಿಸುತ್ತವೆ. ಈ ಸಂಗತಿಯು ಈಗಿನ ಈ
ಗ್ರಂಥದಲ್ಲಿ ವಿವರಿಸಲ್ಪಟ್ಟ ಅಸಂಖ್ಯ ವಚನಗಳಿಂದ ವಾಚಕರಿಗೆ ಕೂಡಲೇ
ತಿಳಿಯಬರದೆ ಇರಲಾರದು.

ವಚನಕಾರರು ವಿವರಿಸುವ ವೀರಶೈವ ಮಾರ್ಗದಲ್ಲಿ ಭಿನ್ನಭಿನ್ನ
ಮತಗಳಿರುವದಿಲ್ಲ. ಎಲ್ಲ ವಚನಗಳು ಒಂದೇ ವಿಧ ಸಿದ್ಧಾಂತವನ್ನು

ವರಿಸುತ್ತವೆ. ಅವುಗಳು ನೈತಿಕಾಚಾರಕ್ಕೂ ವಿಚಾರಕ್ಕೂ ಹೊಂದಿಕೆಯಾಗುವಂಥವು ಇವೆ. ಅವುಗಳ ವಿವೇಚನೆಯಲ್ಲಿ ಸುವ್ಯವಸ್ಥೆಯು ಇದೆ. ಮತ್ತು ಅವುಗಳಲ್ಲಿ ಉಪನಿಷತ್ತುಗಳು, ಆಗಮಗಳು, ಸಾಂಖ್ಯ, ಯೋಗ, ಪುರಾಣಗಳು, ಇವುಗಳಲ್ಲಿಯ ಉಚ್ಚ ತತ್ವಗಳೂ ಬಂದಿವೆ. ಇವುಗಳನ್ನೆಲ್ಲ ಒಳಕೊಂಡು ಷಟ್‌ಸ್ಥಲ ಮಾರ್ಗವು ಸುಬೋಧವಾಗಿ ವಚನ ಗ್ರಂಥಗಳಲ್ಲಿ ವಿವರಿಸಲ್ಪಟ್ಟಿದ್ದು ಕಂಡುಬರುತ್ತದೆ.

ಆದರೆ ವಚನಕಾರರ ಸಿದ್ಧಾಂತಗಳೆಲ್ಲವನ್ನು ಒಂದೆಡೆಗೆ ತಂದು ನಿರೂಪಿಸಿದ ಗ್ರಂಥವು ಅಥವಾ ಗ್ರಂಥಗಳು ನಮಗೆ ಇನ್ನೂ ದೊರೆತಿಲ್ಲ. ಆದರೆ ನಾವು ಹೆಚ್ಚಾಗಿ ಶೋಧಿಸಿದಲ್ಲಿ ಅವು ದೊರೆಯಬಹುದೆಂದು ನಮಗೆ ತೋರುತ್ತದೆ. ನಮಗೆ ಇಂದು ದೊರೆತ ವಚನ ಗ್ರಂಥಗಳನ್ನಷ್ಟೇ ನಾವು ಪರಿಶೋಧಿಸಿದಲ್ಲಿ ಅವುಗಳಲ್ಲಿ ಒಂದು ಅತ್ಯುತ್ತಮ ತರದ ವ್ಯವಸ್ಥೆಯೂ ಒಂದು ಮಹತ್ತರ ಸಿದ್ಧಾಂತವೂ ಇರುವದು ಕಂಡುಬರುತ್ತದೆ. ಇವುಗಳನ್ನು ನಾನಾ ವಿಧವಾಗಿ ವಿವರಿಸುವಂಥ ಸಂಸ್ಕೃತ, ಕನ್ನಡ, ತೆಲುಗು, ತಮಿಳ ಗ್ರಂಥಗಳೂ ಕೆಲವು ಉಪಲಬ್ಧವಿರುತ್ತವೆ. ಇಂಥ ಗ್ರಂಥಗಳು ನಮಗೆ ಆಧಾರ ಗ್ರಂಥಗಳಾಗಿವೆ. ಇವುಗಳಲ್ಲಿ ಕಂಡುಬಂದ ತತ್ವಗಳನ್ನು ನಾವು ಸಂಗ್ರಹಿಸಿ ವಚನಗಳ ದ್ವಾರಾ ಈ ಗ್ರಂಥದಲ್ಲಿ ನಿರೂಪಿಸಿದ್ದೇವೆ.

ವೀರಶೈವ ಪರವೆಂದು ತೋರುವ ಬೇರೆ ಕೆಲವು ಗ್ರಂಥಗಳು ಉಪಲಬ್ಧವಿರುತ್ತವೆ. ಆದರೆ ಅವುಗಳಲ್ಲಿ ಬ್ರಾಹ್ಮಣರ ಕರ್ಮ ಮಾರ್ಗವನ್ನು ಸಮರ್ಥಿಸುವ ವಿಷಯಗಳೂ ಇರುತ್ತವೆ. ಇವುಗಳಲ್ಲಿ ಶೈವ ಮತ್ತು ಬ್ರಾಹ್ಮಣ ಪದ್ಧತಿಗಳೊಡನೆ ವೀರಶೈವರ ಪದ್ಧತಿಗಳೂ ಮಿಶ್ರವಾಗಿರುತ್ತವೆ. ಆದರೆ ಇಂಥವುಗಳು ಆಧಾರವೆಂದು ಹೇಳಲಿಕ್ಕೆ ಬರಲಾರದು. ಇವು ಆಗಮಗಳ ಆರಂಭದ ಪಾದಗಳಾದ ಕ್ರಿಯಾ ಚರ್ಯಾಪಾದಗಳನ್ನು ಅನುಸರಿಸಿದಂತೆ ನಮಗೆ ತೋರುತ್ತದೆ.

# ಅನುಬಂಧ ೧೩.

## ಶೈವ ವೀರಶೈವ ಭೇದಗಳು.

ಶೈವರು ಆಗಮೋಕ್ತ ಧರ್ಮವನ್ನು ಪ್ರತಿಪಾಲಿಸುವವರು ಇರುತ್ತಾರೆ. ಆದರೆ ಇವರಲ್ಲಿ ಅನೇಕ ತರದ ಭೇದಗಳು ಪೂರ್ವಕಾಲದಿಂದಲೂ ಉಂಟಾದದ್ದು ಕಂಡುಬರುತ್ತದೆ. ಸೂಕ್ಷ್ಮಾಗಮದಲ್ಲಿ ಹೇಳಲ್ಪಡುವ ಭೇದಗಳು ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತ್ಯಶೈವ ಎಂದು ಇವೆ. ಇವುಗಳಲ್ಲಿ ಅನೇಕವು ಬೇರೆ ಬೇರೆ ಜಾತಿಯ ಜನರಿಗೆ ಶೈವದೀಕ್ಷೆಗಳನ್ನು ಕೊಟ್ಟದ್ದರಿಂದ ಉಂಟಾಗಿರುವಂತೆ ಕಂಡುಬರುತ್ತದೆ. ಆಚಾರಭೇದದಿಂದಲೂ ಶೈವರಲ್ಲಿ ಕೆಲವು ಭೇದಗಳು ಮಾಡಲ್ಪಟ್ಟಿವೆ. ಅವು ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವ. ಈ ಶೈವರಲ್ಲಿಯ ಕೆಲವು ಪಂಗಡಗಳಲ್ಲಿ ಆಗಮೋಕ್ತ ಕರ್ಮಗಳೊಡನೆ ಬ್ರಾಹ್ಮಣ ಕರ್ಮಗಳೂ ಮಿಶ್ರವಾಗಿರುವವು. ವೀರಶೈವರಲ್ಲಿ ಸಾಮಾನ್ಯ, ವಿಶೇಷ, ನಿರಾಭಾರಿ ಎಂದು ವರ್ಗಗಳು ಮಾಡಲ್ಪಡುವದುಂಟು. ಇವು ಆಚಾರ ಭೇದದಿಂದ ಆಗಿರುತ್ತವೆ.

ಪಾರಮೇಶ್ವರಾಗಮದಲ್ಲಿ ಆಚಾರ ಭೇದದಿಂದ ಶುದ್ಧ, ಮಿಶ್ರ, ಮಾರ್ಗ, ವೀರ, ಅವಾಂತರ ಎಂಬ ಪಂಚವಿಧಗಳು ಮಾಡಲ್ಪಟ್ಟಿವೆ. ಅಲ್ಲದೆ ಸಾಮಾನ್ಯ, ಮಿಶ್ರ, ಶುದ್ಧ, ವೀರವೆಂಬ ಭೇದಗಳೂ ಉಂಟು. ಇದೇ ಗ್ರಂಥದ ಬೇರೊಂದು ಪ್ರಕರಣದಲ್ಲಿ ವೀರಶೈವ, ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ ಎಂತಲೂ ಭಾಗ ಮಾಡಲ್ಪಟ್ಟಿದೆ. ಅಲ್ಲದೆ ಗಾಣಪತ್ಯ, ವೈರಭದ್ರೀಯ, ಭೈರವ, ಶಾರದ, ನಾಂದಿಕೇಶ, ಕೌಮಾರ, ಶೈವಾಚ ಎಂತಲೂ ಭೇದಗಳು ಮಾಡಲ್ಪಟ್ಟಿವೆ. ಈ ಶೈವರೆಲ್ಲರೂ ತಮಗೆ ಯುಕ್ತತೋರಿದ ಪ್ರಕಾರ ಆಗಮಗಳಲ್ಲಿಯ ಆಚಾರಗಳನ್ನು ಅನುವರ್ತಿಸುವವರಾಗಿರುವರು. ಪಾರಮೇಶ್ವರಾಗಮದಲ್ಲಿ ಸಾಮಾನ್ಯ, ವಿಶೇಷ, ನಿರಾಭಾರಿ ಎಂಬ ಭೇದಗಳೂ ವೀರಶೈವರಲ್ಲಿ ಇದ್ದುದು ವಿವರಿಸಲ್ಪಟ್ಟಿರುತ್ತವೆ.

ನಿಜಗುಣ ಶಿವಯೋಗಿಯು ಹೇಳುವ ಭೇದಗಳು ವಾಮ, ದಕ್ಷಿಣ,
ಶ್ರ, ಸಿದ್ಧಾಂತ ಎಂದು ಇರುತ್ತವೆ. ಮತ್ತು ಈ ಶೈವ ಧರ್ಮಗ
ಲ್ಲಿ ಮುಖ್ಯವಾದವುಗಳು ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ,
ರಶೈವ ಇವು ಇರುತ್ತವೆ. ನಿಜಗುಣ ಶಿವಯೋಗಿಯು ವೀರಶೈವ
ಲ್ಲಿ ಕ್ರಿಯಾಭೇದದಿಂದ ಸಾಮಾನ್ಯ, ವಿಶೇಷ, ನಿರಾಭಾರಿ ಎಂತಲೂ
ಾಗಗಳನ್ನು ಮಾಡಿರುವನು.

ಮೇಲಿನ ಸಂಗತಿಗಳಿಂದ ಪುರಾತನ ಕಾಲದಲ್ಲಿ ಸಹ ಆಗಮ
ಮಾರ್ಗ ಪ್ರತಿಪಾಲಕರಾದ ಶೈವರಲ್ಲಿ ಎಷ್ಟು ಭಿನ್ನತೆಗಳಿದ್ದುವೆಂಬುದು
ಂಡುಬರುತ್ತದೆ. ಈ ಭಿನ್ನತೆಗಳ ವಿವರವನ್ನು ತಿಳಿಯಬೇಕಾದರೆ
ಆ ಮೂಲ ಗ್ರಂಥಗಳನ್ನೇ ನೋಡಬೇಕೆಂದು ವಾಚಕರಿಗೆ ನಾವು ಸೂಚಿ
ಸುತ್ತೇವೆ. ನಾವು ಇವುಗಳನ್ನೆಲ್ಲ ಉಲ್ಲೇಖಿಸುವ ಉದ್ದೇಶವು ಆಗಮ
ಮಾರ್ಗವನ್ನು ಅನುಸರಿಸಿದ ಪಂಥಗಳಲ್ಲಿ ಐಕ್ಯಮತವಿರಲಿಲ್ಲ. ಅವುಗ
ಳಲ್ಲಿ ಅನೇಕ ಬಗೆಯ ಮತಾಂತರಗಳು ಉತ್ಪನ್ನವಾಗಿದ್ದುವು. ಎಂಬು
ದನ್ನು ತಿಳಿಯಪಡಿಸುವದೇ ಮುಖ್ಯವಾಗಿದೆ.

ಮುಂದೆ ೧೧-೧೨ನೆಯ ಶತಮಾನಗಳಲ್ಲಿ ಕರ್ನಾಟಕದಲ್ಲಿ ಶೈವ
ಧರ್ಮದಲ್ಲಿ ಇದೇ ಬಗೆಯ ಸ್ಥಿತಿಯು ಇರುವದು ಕಂಡುಬರುತ್ತದೆ.
ಆಗ ಕಾಳಾಮುಖರು ಲಕುಲೀಶರೂ ಆಗಮ ಧರ್ಮಾನುಯಾಯಿ
ಗಳಲ್ಲಿ ಹೆಚ್ಚಾಗಿ ಪ್ರಬಲರಾದದ್ದು ಶಿಲಾಲೇಖಗಳಿಂದ ತಿಳಿದುಬರುತ್ತದೆ.
ಅಲ್ಲದೆ ಮಾಹೇಶ್ವರರು, ಶೈವರು ಎಂಬ ಹೆಸರಿನವರೂ ಸಹ ಇದ್ದದ್ದು
ತಿಳಿದುಬರುತ್ತದೆ. ಕಾಶ್ಮೀರ, ಗುರ್ಜರ ದೇಶಗಳಿಂದಲೂ ಬಹು ಜನ
ಶೈವರು ಕರ್ನಾಟಕಕ್ಕೆ ಈ ಕಾಲದಲ್ಲಿ ಬಂದು ಇಲ್ಲಿ ವಾಸವಾಗಿದ
ರೆಂದು ತಿಳಿಯಲೂ ಬಲವತ್ತರ ಕಾರಣಗಳಿವೆ. ಹಾಗೆಯೇ ಅನೇಕ
ಬಗೆಯ ಶಾಕ್ತರೂ ಕಾಪಾಲಿಕರೂ ಕೂಡ ಅಲ್ಲಲ್ಲಿ ವಾಸವಾಗಿದ್ದರು.

ಮೇಲ್ಕಂಡ ವಿವರಣೆಗಳ ಮೇಲಿಂದ ಹಿಂದಿನ ಕಾಲದಲ್ಲಿ ಶೈವ
ಮತಗಳಲ್ಲಿ ಭಿನ್ನಭಿನ್ನ ಸಮಾಜಗಳು ಉಂಟಾಗಿದ್ದುದೂ ಅವುಗಳಲ್ಲಿ
ಅನೇಕ ಬಗೆಯಾಗಿ ಆಗಮಗಳ ಆಚಾರಗಳು ರೂಢವಾಗಿದ್ದುದೂ
ಕಂಡುಬರುತ್ತದೆ.

ಆದರೆ ಸಾಂಪ್ರತಕಾಲದಲ್ಲಿ ಶೈವ ಸಮಾಜಗಳಲ್ಲಿ ಬಹುಮಟ್ಟಿಗೆ ಸುವ್ಯವಸ್ಥೆಯುಂಟಾಗಿದೆ ಎಂದು ಹೇಳಲಿಕ್ಕೆ ಪ್ರತ್ಯವಾಯವಿಲ್ಲ. ದಕ್ಷಿಣ ದೇಶದಲ್ಲಿ ಶಿವಸಿದ್ಧಾಂತಿಗಳೂ ಕರ್ನಾಟಕ ಮತ್ತು ಅದರ ನೆರೆ ಪ್ರಾಂತಗಳಲ್ಲಿ ವೀರಶೈವರೂ ಈಗ ಮಹತ್ವದ ಸಮಾಜಗಳಾಗಿವೆ. ಆದರೆ ತೆಲಗು ದೇಶದ ಉತ್ತರಭಾಗಗಳಲ್ಲಿಯೂ ಕೆಲವು ಶೈವ ಪಂಗಡಗಳಿವೆ. ಇವುಗಳ ಅನುಯಾಯಿಗಳಲ್ಲಿ ವೀರಶೈವರೂ ಆರಾಧ್ಯರೂ ಮುಖ್ಯರಾಗಿರುವರು. ಕಾಶ್ಮೀರ ದೇಶದಲ್ಲಿ ಶೈವರು ಇದ್ದರೂ ಅವರು ಈಗ ಅಲ್ಲಿ ದುರ್ಬಲ ಸಮಾಜವಾಗಿರುವರು. ಈ ಮೂವತ್ತು ಸಮಾಜಗಳು ಸ್ಥೂಲವಾಗಿ ಆಗಮಮಾರ್ಗವನ್ನು ಅನುಸರಿಸುವಂಥವಾಗಿವೆ.

ಕಾಶ್ಮೀರದೇಶದಲ್ಲಿ ರೂಢವಾಗಿರುವ ಆಗಮ ಧರ್ಮಕ್ಕೆ ತ್ರಿಕ ಅಥವಾ ಪ್ರತ್ಯಭಿಜ್ಞ ಎಂಬ ಹೆಸರು ಇರುತ್ತದೆ. ಇವರು ಅದ್ವೈತಿಗಳು. ಆದರೆ ಅವರು ಜಗತ್ತು ಮಾಯೆಯೆಂದು ತಿಳಿಯುವದಿಲ್ಲ. ಶಕ್ತಿಯು ಅಸ್ತಿತ್ವವನ್ನು ಒಪ್ಪುತ್ತಾರೆ. ಅವರ ಸಿದ್ಧಾಂತದಲ್ಲಿ ಪತಿ, ಪಾಶ, ಪಶು ಇವುಗಳಿಗೆ ಮಹತ್ವದ ಸ್ಥಾನವಿದೆ. ಇದಕ್ಕೋಸ್ಕರವೇ ಅವರ ಸಿದ್ಧಾಂತಕ್ಕೆ 'ತ್ರಿಕ' ಎಂಬ ಹೆಸರು ಬಂದಿದೆ.

ಶಿವಸಿದ್ಧಾಂತಿಗಳು ತಮಿಳುದೇಶದಲ್ಲಿ ಹೆಚ್ಚಾಗಿ ಇರುತ್ತಾರೆ. ಅವರು ಪೂರ್ಣ ಶಿವೋಪಾಸಕರಾಗಿರುತ್ತಾರೆ. ಪುರಾತನ ಕಾಲದಲ್ಲಿ ಅವರು ಅದ್ವೈತಿಗಳಿರಲಿಲ್ಲ. ಆದರೆ ಮುಂದೆ ಅವರು ಕ್ರಮೇಣ ಅದ್ವೈತ ಮಾರ್ಗವನ್ನು ಅನುಸರಿಸುತ್ತ ಬಂದರು.

ವೀರಶೈವರು ಕರ್ನಾಟಕದಲ್ಲಿ ಬಹು ದೊಡ್ಡ ಸಮಾಜವಾಗಿದೆ. ಅವರು ಅದ್ವೈತಿಗಳಾಗಿದ್ದಾರೆ. ಪರಶಿವನಲ್ಲಿ ಸಾಮರಸ್ಯವನ್ನು ಹೊಂದುವದೇ ಅವರ ಧ್ಯೇಯವಾಗಿದೆ. ಇದನ್ನು ಹೊಂದಲು ಒಂದು ಸಾಧನೆಯನ್ನು ಅವರು ಕಲ್ಪಿಸಿಕೊಂಡಿದ್ದು, ಅದೇ ಷಟ್‌ಸ್ಥಲ ಸಿದ್ಧಾಂತವಾಗಿರುತ್ತದೆ. ಈ ವೀರಶೈವ ಸಿದ್ಧಾಂತವು ಒಂದೇಯಾಗಿದ್ದು ಅದರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಅದು ನಿಶ್ಚಿತ ಸ್ವರೂಪವುಳ್ಳದ್ದಾಗಿದೆ. ಆದರೆ ವೀರಶೈವ ಸಿದ್ಧಾಂತವನ್ನು ನಿರೂಪಿಸುವ ಷಟ್‌ಸ್ಥಲ ಗ್ರಂಥಗಳನ್ನು ಪರಿಶೀಲಿಸುವದು ಕಡಿಮೆಯಾದ ಕಾಲಗಳಲ್ಲಿ ಅದಕ್ಕೆ ಒಪ್ಪಿಗೆಯಾಗದಂತಹ ಆಚಾರ ವಿಚಾರಗಳು ಅದರಲ್ಲಿ ಸೇರಿಕೊಂಡಿದ್ದು ಕಂಡುಬರುತ್ತವೆ. ಹಾಗೆಯೇ

ವೀರಶೈವರು ಅಲ್ಪ ಸಂಖ್ಯಾಕರಿದ್ದೆಡೆಗಳಲ್ಲಿ ವೀರಶೈವಕ್ಕೆ ಹೊರತಾದ ಆಚಾರಗಳು ಸೇರಿಕೊಂಡಿವೆ. ಮತ್ತು ವೇದಾಂತ ಮಾರ್ಗದಲ್ಲಿರುವ ಬ್ರಾಹ್ಮಣರ ಕರ್ಮಗಳನ್ನೂ ಆಗಮ ಮಾರ್ಗದಲ್ಲಿರುವ ಕ್ರಿಯಾಚರ್ಯಾಪಾದದೊಳಗಿನ ಆಚಾರಗಳನ್ನೂ ವೀರಶೈವ ಧರ್ಮದಲ್ಲಿ ಸೇರಿಸುವ ಪ್ರಯತ್ನಗಳೂ ಒಂದೊಂದು ಕಾಲದಲ್ಲಿ ನಡೆದವು. ಇಂಥ ಪ್ರಯತ್ನಗಳು ತೆಲಗು ಪ್ರಾಂತದಲ್ಲಿಯೂ ನಡೆದುದು ತೋರಿಬರುತ್ತದೆ. ಈಚೆಗೆ ವೀರಶೈವ ಧರ್ಮ ಗುರುಗಳು ಕೆಲವು ಪ್ರಾಂತಗಳಲ್ಲಿ ಇತರ ಸಮಾಜಗಳಲ್ಲಿಯವರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ವೀರಶೈವರನ್ನಾಗಿ ಮಾಡಿದ್ದಾರೆ. ಇದು ದ್ರಾವಿಡ ಮತ್ತು ಮಲಯಾಳ ಪ್ರಾಂತಗಳಲ್ಲಿ ಹೆಚ್ಚಾಗಿ ತೋರಿಬರುತ್ತದೆ. ಕರ್ನಾಟಕದಲ್ಲಿಯೂ ಕೂಡ ಇದು ತೋರಿಬರುತ್ತದೆ. ಹೀಗೆ ಕೂಡಿಸಲ್ಪಟ್ಟ ಸಮಾಜಗಳಲ್ಲಿ ವೀರಶೈವಕ್ಕೆ ಹೊರತಾದ ಮಿಶ್ರ ಪದ್ಧತಿಗಳು ತಲೆದೋರಿವೆ. ಇದರಂತೆಯೇ ಕೆಲವೊಂದು ಕಾಲದಲ್ಲಿ ವೀರಶೈವರಲ್ಲಿಯ ಕೆಲವು ಪಂಗಡಗಳು ಕರ್ಮಠತನಕ್ಕೆ ಒಲಿದು "ಶೀಲ"ಗಳನ್ನು ನಿರ್ಮಿಸಿಕೊಂಡು ಆಚರಿಸುತ್ತ ಬಂದವು. ಈ ಶೀಲಗಳನ್ನು ವಚನಕಾರರು ಆಗಿಂದಾಗ್ಗೆ ನಿಷೇಧಿಸುತ್ತ ಬಂದಿದ್ದಾರೆ. ಮುಂದೆ ಕೆಳದಿಯ ರಾಜರ ಕಾಲದಲ್ಲಿ ಸಹ ಅನೇಕ ಧರ್ಮ ಗ್ರಂಥಗಳು ರಚಿಸಲ್ಪಟ್ಟಿವೆ. ಆ ಕಾಲದಲ್ಲಿಯೂ ಮಿಶ್ರವಾದ ಹೊಸ ಪದ್ಧತಿಗಳನ್ನು ವೀರಶೈವ ಧರ್ಮದಲ್ಲಿ ಸೇರಿಸುವ ಪ್ರಯತ್ನಗಳೂ ನಡೆದವು. ಇವುಗಳನ್ನು ಪ್ರತಿಪಾದಿಸುವ ಗ್ರಂಥಗಳೂ ಆಗ ಕೆಲವು ಹುಟ್ಟಿದವು. ಹೀಗೆ ಅನೇಕ ಕಾರಣಗಳ ಮೂಲಕ ಬೇರೆ ಬೇರೆ ಕಡೆಗೆ ಇರುವ ವೀರಶೈವ ಸಮಾಜದಲ್ಲಿ ರೀತಿ, ನಡತೆ, ಆಚಾರಗಳು ಭಿನ್ನಭಿನ್ನ ತೆರನಾಗಿರುತ್ತವೆ. ಆದರೆ ಅವು ನಿಜವಾದ ವೀರಶೈವ ಧರ್ಮಕ್ಕೆ ಅನುಸಾರವಾದವುಗಳಲ್ಲ. ಮತ್ತು ಅವುಗಳನ್ನು ಪುರಸ್ಕರಿಸುವ ಗ್ರಂಥಗಳೂ ವೀರಶೈವರಿಗೆ ಗ್ರಾಹ್ಯವಾದವುಗಳಲ್ಲ.

ಆದರೆ ೧೨ನೇ ಶತಮಾನದಿಂದ ೧೫ನೇ ಶತಮಾನಗಳ ವರೆಗೆ ಉತ್ಪನ್ನವಾದ ವಚನ ವಾಙ್ಮಯದಲ್ಲಿ ಇಂಥ ಮಿಶ್ರಣಗಳು ಕಂಡು ಬರುವದಿಲ್ಲ. ಅವು ಷಟ್ಸ್ಥಲ ಮಾರ್ಗವನ್ನು ಸಂಪೂರ್ಣವಾಗಿ ಹೊಂದಿಕೊಂಡಂಥವೂ ಉಚ್ಚ ವಿಚಾರವುಳ್ಳವೂ ಇವೆ. ಇವು ವೀರಶೈವರಿಗೆ ಮುಖ್ಯ ಆಧಾರ ಗ್ರಂಥಗಳಾಗಿವೆ. ಅವುಗಳ ತತ್ವಗಳನ್ನು ವಿಶದಪಡಿ

ಸುವಂಥ ಅನೇಕ ಬಗೆಯ ವಚನ ಸಂಗ್ರಹಗಳೂ ಇತರ ಗ್ರಂಥ
ಗಳೂ ಕಾಲಕಾಲಕ್ಕೆ ಉಂಟಾದವು. ಅದರಂತೆಯೇ ಈ ವಾಙ್ಮಯದ
ಲ್ಲಿಯ ತತ್ವಗಳನ್ನು ಪ್ರತಿಪಾದಿಸುವಂಥ ಅನೇಕ ಸಂಸ್ಕೃತ ಗ್ರಂಥಗಳೂ
ಕೂಡ ಹೊರಟಿವೆ. ಮುಂದೆ ಜನರಿಗೋಸ್ಕರ ಅನೇಕ ಪಂಡಿತರು ಶಿವ
ಶರಣರ ಪುರಾಣಗಳನ್ನು ರಚಿಸಿ ಅವುಗಳ ಮೂಲಕ ವೀರಶೈವ ಮತ
ತತ್ವಗಳನ್ನು ನಿರೂಪಿಸಿದ್ದಾರೆ. ಹಾಗೆಯೇ ಅನೇಕ ರಗಳೆಗಳೂ, ತ್ರಿಪದಿ
ಗಳೂ, ಷಟ್ಪದಿಗಳೂ, ಸಾಧುವರ್ಯರ ಪದಗಳೂ ಉಂಟಾಗಿವೆ.
ಹೀಗೆ ಪುರಾತನ ಪರಂಪರೆಯುಳ್ಳ ಒಂದು ಸುಸೂತ್ರವಾದ ವೀರಶೈವ
ವಾಙ್ಮಯವು ಅಸ್ತಿತ್ವದಲ್ಲಿ ಬಂದಿದೆ. ಇವೆಲ್ಲವುಗಳು ವೀರಶೈವರಿಗೆ ಮಾನ್ಯ
ವಾದ ಗ್ರಂಥಗಳಾಗಿವೆ.

ಪ್ರಬಲವಾಗಿ ನಡೆಯಿತು. ಆಗ ಅಸಂಖ್ಯ ಶಿವಶರಣರು ಕರ್ನಾಟಕಾಂಧ್ರ ತಮಿಳುದೇಶಗಳಲ್ಲಿ ಉತ್ಪನ್ನರಾದರು. ಇವರಿಂದಲೇ ವೀರಶೈವ ಧರ್ಮ ತತ್ವಗಳು ಇಲ್ಲಿ ಪ್ರಸಾರಹೊಂದಿದವು. ಇವರಲ್ಲಿ ಪಲವರು ವೀರಶೈವ ಪುರ್ನಸ್ಥಾಪನಾಚಾರ್ಯವರ್ಯ ಎಂದು ಕರೆಯಲ್ಪಟ್ಟರೂ ಅವರು ಧರ್ಮಪ್ರವರ್ತಕರೇ ಹೊರತು ಧರ್ಮಸ್ಥಾಪಕರೆಂದು ಹೇಳಲಿಕ್ಕೆ ಬರಲಾರದು. ಹೀಗೆ ಈ ಅವಧಿಯಲ್ಲಿ ವೀರಶೈವ ಧರ್ಮವು ಪ್ರಬಲವಾಗಿ ಬೆಳೆದರೂ ಅದಕ್ಕೆ ಪೂರ್ವದಲ್ಲಿಯೇ ಅದರ ಉಗಮವು ಉಂಟಾಗಿತ್ತು. ಆಗ ಅದರ ಸ್ವರೂಪ ಯಾವ ತರನಿತ್ತೆಂಬುದು ಇನ್ನೂ ಸಂಶೋಧನಕ್ಕಿರತಕ್ಕ ವಿಷಯವಾಗಿದೆ.

---